# ಬೆಂಗಳೂರಿನ ವರ್ತಕ ಸಮುದಾಯಗಳು: ವಸಾಹತು ಕಾಲಘಟ್ಟದ ಅಧ್ಯಯನ (೧೭೯೯-೧೯೪೭)

(ಪಿಎಚ್.ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು

ಯಶೋದ ಪಿ.

ಮಾರ್ಗದರ್ಶಕರು

ಡಾ. ಕೆ. ಮೋಹನ್‌ಕೃಷ್ಣ ರೈ

ಪ್ರಾಧ್ಯಾಪಕರು





ಚರಿತ್ರೆ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೧೬

# ಬೆಂಗಳೂರಿನ ವರ್ತಕ ಸಮುದಾಯಗಳು: ವಸಾಹತು ಕಾಲಘಟ್ಟದ ಅಧ್ಯಯನ(೧೭೯೯-೧೯೪೭)

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ)



ಸಂಶೋಧಕರು

**ಯಶೋದ ಪಿ.**

ಮಾರ್ಗದರ್ಶಕರು

**ಡಾ. ಕೆ. ಮೋಹನ್‌ಕೃಷ್ಣ ರೈ**

ಪ್ರಾಧ್ಯಾಪಕರು



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

೨೦೧೬

# ಮಾರ್ಗದರ್ಶಕರ ದೃಢೀಕರಣ ಪತ್ರ

**ಯಶೋದ ಪಿ.** ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಬೆಂಗಳೂರಿನ ವರ್ತಕ ಸಮುದಾಯಗಳು: ವಸಾಹತು ಕಾಲಘಟ್ಟದ ಅಧ್ಯಯನ(೧೭೫೯-೧೯೪೭)** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಚರಿತ್ರೆ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ. ಕೆ. ಮೋಹನ್‌ಕೃಷ್ಣ ರೈ**
ಮಾರ್ಗದರ್ಶಕರು
**ಚರಿತ್ರೆ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**ಸ್ಥಳ:** ವಿದ್ಯಾರಣ್ಯ
**ದಿನಾಂಕ:** ೨೧.೧೨.೨೦೧೬

## ಸಂಶೋಧಕರ ಘೋಷಣಾ ಪತ್ರ

**ಬೆಂಗಳೂರಿನ ವರ್ತಕ ಸಮುದಾಯಗಳು: ವಸಾಹತು ಕಾಲಘಟ್ಟದ ಅಧ್ಯಯನ(೧೮೭೯–೧೯೪೭)** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, ಚರಿತ್ರೆ ವಿಭಾಗದ, ಪ್ರಾಧ್ಯಾಪಕರಾದ **ಡಾ. ಕೆ. ಮೋಹನ್‌ಕೃಷ್ಣ ರೈ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

Yashoda P

**ಯಶೋದ ಪಿ.**
ಪಿಎಚ್.ಡಿ.ಸಂಶೋಧನ ವಿದ್ಯಾರ್ಥಿನಿ
**ಚರಿತ್ರೆ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

**ಸ್ಥಳ** : ವಿದ್ಯಾರಣ್ಯ
**ದಿನಾಂಕ** : ೨೧, ೧೨, ೨೦೦೬

# ಪರಿವಿಡಿ

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ, ಸಮೀಕ್ಷೆ ಮತ್ತು ಸ್ವರೂಪ

## ಪ್ರಸ್ತಾವನೆ

ಇಂದು ಜಗತ್ತಿನಾದ್ಯಂತ ಕಂಡುಬರುವ ಎಲ್ಲ ರಾಷ್ಟ್ರಗಳನ್ನು ಅಭಿವೃದ್ಧಿ ಹೊಂದಿದ ರಾಷ್ಟ್ರಗಳು, ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳು ಮತ್ತು ಅಭಿವೃದ್ಧಿ ಹೊಂದದ ರಾಷ್ಟ್ರಗಳು ಎಂದು ಗುರುತಿಸುವುದು ಸಾಮಾನ್ಯವಾದ ವಾಡಿಕೆಯಾಗಿದೆ. ಇವುಗಳ ಅಭಿವೃದ್ಧಿಯನ್ನು ಆ ರಾಷ್ಟ್ರದ ಆರ್ಥಿಕಾಂಶಗಳ ಮಾನದಂಡದಿಂದ ಅಳೆಯಲಾಗುತ್ತಿದೆ. ಈ ದಿಸೆಯಲ್ಲಿ ಆರ್ಥಿಕಾಭಿವೃದ್ಧಿಗೂ ಮತ್ತು ಚರಿತ್ರೆಯ ಘಟನಾವಳಿಗೂ ಹತ್ತಿರದ ಸಂಬಂಧವಿರುವುದನ್ನು ಗುರುತಿಸಬಹುದು. ಇಲ್ಲಿ ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳು ಎಂದು ಗುರುತಿಸಲ್ಪಟ್ಟಿರುವ ರಾಷ್ಟ್ರಗಳೆಲ್ಲವು ಇಂದಿನ ಬಂಡವಾಳಶಾಹಿ ರಾಷ್ಟ್ರಗಳು ಮತ್ತು ೧೭ ರಿಂದ ೨೦ನೇ ಶತಮಾನದ ಸಂದರ್ಭದಲ್ಲಿ ಒಂದಲ್ಲ ಒಂದು ರಾಷ್ಟ್ರವನ್ನು ವಸಾಹತುವನ್ನಾಗಿ ಹೊಂದಿದ್ದವು. ಹಾಗೆಯೇ ಇಂದು ಅಭಿವೃದ್ಧಿ ಹೊಂದುತ್ತಿರುವ ಅಥವಾ ಅಭಿವೃದ್ಧಿ ಹೊಂದದ ರಾಷ್ಟ್ರಗಳು ಎಂದು ಗುರುತಿಸಲ್ಪಡುವ ರಾಷ್ಟ್ರಗಳೆಲ್ಲವು ಮೇಲಿನ ರಾಷ್ಟ್ರಗಳ ಅಡಿಯಲ್ಲಿ ವಸಾಹತುಗಳಾಗಿದ್ದವು. ಸಾಮಾನ್ಯವಾಗಿ ಈ ರಾಷ್ಟ್ರಗಳೆಲ್ಲವು ಇಂದಿನ ಏಷ್ಯ, ಆಫ್ರಿಕ, ದಕ್ಷಿಣ ಅಮೇರಿಕ ಖಂಡದಲ್ಲಿ ಕಂಡುಬರುತ್ತವೆ ಎಂಬುದು ಗಮನಾರ್ಹ. ಇದೆಲ್ಲವು ಆರ್ಥಿಕ ಅಭಿವೃದ್ಧಿ ಮತ್ತು ಚಾರಿತ್ರಿಕ ಪಲ್ಲಟಗಳಿಗೂ ನಡುವೆ ಇರುವ ಸಂಬಂಧಕ್ಕೆ ಸಾಕ್ಷಿಯಾಗಿವೆ. ಈ ನಿಟ್ಟಿನಲ್ಲಿ ವಸಾಹತು ಕಾಲವು ಆರ್ಥಿಕ ಕ್ಷೇತ್ರದಲ್ಲಿ ಉಂಟಾದ ಬದಲಾವಣೆಯ ಪರ್ವಕಾಲವಾಗಿದೆ. ಈ ಅವಧಿಯಲ್ಲಿ ವಸಾಹತುವಾಗಿ ಪರಿವರ್ತಿತವಾದ ರಾಷ್ಟ್ರ ಹಾಗೂ ವಸಾಹತುಗಳನ್ನು ಹೊಂದಿದ ರಾಷ್ಟ್ರಗಳೆರಡರಲ್ಲಿಯೂ ಆರ್ಥಿಕ ಮತ್ತು ರಾಜಕೀಯ ನೀತಿಗಳು ಅಲ್ಲಿನ ಸಮಾಜದ ಉತ್ಪಾದನಾ ಶಕ್ತಿಗಳ ನಿಯಂತ್ರಣದೊಂದಿಗೆ, ಅವುಗಳನ್ನು ಹಲವು ಒತ್ತಡಕ್ಕೆ ಸಿಲುಕಿಸಿದ ಫಲವಾಗಿ ರೂಪಗೊಂಡಿವೆ.

ಈ ರೀತಿಯ ಪರಿಸ್ಥಿತಿಗಳು ಒಂದು ಹೊಸ ಬಗೆಯ ಆರ್ಥಿಕ ಸ್ಥಾನಪಲ್ಲಟ ಪ್ರಪಂಚದಾದ್ಯಂತ ರಾಜಕೀಯ, ಸಾಮಾಜಿಕ ಬದಲಾವಣೆಗೆ ಎಡೆಮಾಡಿತು.[೧]

ವಾಣಿಜ್ಯವಾದದ ಹಿನ್ನೆಲೆಯಲ್ಲಿ ವಸಾಹತುಶಾಹಿ ನೀತಿಯ ಆರಂಭ ಕಾಣಿಸಿಕೊಂಡಿತು. ನಂತರದಲ್ಲಿ ಈ ನೀತಿಯೇ ಬಂಡವಾಳಶಾಹಿ ನೀತಿಯಾಗಿ, ತದನಂತರ ಸಾಮ್ರಾಜ್ಯಶಾಹಿ ನೀತಿಯಾಗಿ ಪರಿವರ್ತನೆಗೊಂಡಿದ್ದನ್ನು ಕಾಣಬಹುದಾಗಿದೆ. ಇಂತಹ ಪರಿವರ್ತನೆ ಪ್ರಪಂಚದ ಎಲ್ಲೆಡೆ ಕಾಣಿಸಿತು. ಈ ಪರಿವರ್ತನೆಗಳು ಪ್ರಪಂಚದೆಲ್ಲೆಡೆ ಕಂಡುಬಂದರೂ ಇದು ಒಂದೇ ತೆರನಾಗಿ ಇರದೆ, ದೇಶದಿಂದ ದೇಶಕ್ಕೆ ಭಿನ್ನವಾಗಿದೆ. ಈ ಬದಲಾವಣೆಗಳು ಪಾಶ್ಚಿಮಾತ್ಯ ದೇಶಗಳಿಗಿಂತ ಪೌರ್ವಾತ್ಯ ದೇಶಗಳ ಸಾಮಾಜಿಕ, ಆರ್ಥಿಕ ವ್ಯವಸ್ಥೆಯ ಬದಲಾವಣೆಯ ಮೇಲೆ ಅತ್ಯಂತ ಪರಿಣಾಮಕಾರಿಯಾಗಿ ಪ್ರಭಾವ ಬೀರಿತು. ಈ ದಿಸೆಯಲ್ಲಿ ಕಂಡುಬಂದ ಒಂದು ಪ್ರಮುಖ ಲಕ್ಷಣವೆಂದರೆ ವಸಾಹತುವಾಗಿ ಪರಿವರ್ತಿತವಾದ ರಾಷ್ಟ್ರಗಳಲ್ಲಿ ಯುರೋಪಿನ ಮಾದರಿಯ ನಾಗರಿಕತೆಯನ್ನು ಹಲವಾರು ರೂಪದಲ್ಲಿ ಹೇರಿದ್ದು. ವಸಾಹತು ರಾಷ್ಟ್ರಗಳ ಆಳ್ವಿಕೆಯನ್ನು ಮಾಡುತ್ತಿದ್ದ ಯುರೋಪಿನ ರಾಷ್ಟ್ರಗಳಿಗೆ ಇಲ್ಲಿಯ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ನೀತಿಗಳ ಪರಿಚಯವಿರಲಿಲ್ಲ. ಇವೆಲ್ಲವೂ ಅವರಿಗೆ ವಿಚಿತ್ರವಾಗಿ ಕಾಣುತ್ತಿತ್ತು. ಹಾಗೆಯೇ ಯುರೋಪಿನ ರಾಷ್ಟ್ರಗಳು ಇಷ್ಟು ವಿಶಾಲವಾದ ರಾಷ್ಟ್ರಗಳನ್ನು ನಿಯಂತ್ರಣಕ್ಕೆ ತೆಗೆದುಕೊಳ್ಳಲು ಸಾಧ್ಯವಾಗಿದ್ದು, ಯುರೋಪಿನ ರಾಷ್ಟ್ರಗಳಲ್ಲಿ ಜ್ಞಾನೋದಯ ಯುಗದಲ್ಲಾದ ಸಾಂಸ್ಕೃತಿಕ ಬದಲಾವಣೆಗಳಿಂದಾಗಿತ್ತು. ಈ ತಿಳುವಳಿಕೆಯು ಯುರೋಪಿನ್ನರಿಗಿತ್ತು. ಹಾಗಾಗಿ ಅವರು ತಮ್ಮ ನಾಗರಿಕತೆ ಇತರ ಎಲ್ಲ ನಾಗರಿಕತೆಗಳಿಗಿಂತ ಶ್ರೇಷ್ಠರೆಂದು ಭಾವಿಸಿದ್ದರು. ಇದೇ ಬಿಳಿಯರ ಜವಾಬ್ದಾರಿಯ ವಿವಿಧ ರೂಪಾಂತರಗಳಿಗೂ ನೆಲೆಯಾಗಿರುವುದನ್ನು ಕಾಣಬಹುದು. ಇದೇ ಅಂಶಗಳೆ ಮುಖ್ಯ ಕಾರಣವಾಗಿ ವಸಾಹತು ಪ್ರದೇಶಗಳ ನಾಗರಿಕತೆಯೊಂದಿಗಿನ ಎಲ್ಲ ಅಂಶಗಳು ಅನಾಗರಿಕ, ಬರ್ಬರವಾಗಿ ಕಂಡವು. ಯುರೋಪಿನ ಮಾದರಿಯ ದೇಶಗಳಾಗದಿರುವುದೇ ಈ ದೇಶಗಳ ಅಧಃಪತನಕ್ಕೆ ಕಾರಣವೆಂದು ಸಾರಿದರು ಸಹ. ಯುರೋಪಿನ ರಾಷ್ಟ್ರಗಳು ೧೬ನೇ ಶತಮಾನದ ಏರುಮುಖದ ಬೆಳವಣಿಗೆಯನ್ನು ಕಂಡರೆ ಏಷ್ಯಾ, ಆಫ್ರಿಕಾದ ರಾಷ್ಟ್ರಗಳು ಇಳಿಮುಖ ಬೆಳವಣಿಗೆಯನ್ನು ಕಂಡವು. ಈ ಸ್ಥಾನಪಲ್ಲಟಗಳು ಅಂತ್ಯವಿಲ್ಲದ ನಿರಂತರ ಪ್ರಕ್ರಿಯೆಯಾಗಿದೆ. ಇದು ಇಂದಿಗೂ ಮುಂದುವರಿಯುತ್ತಿರುವ ಪ್ರಕ್ರಿಯೆಯಾಗಿದೆ. ಇದೆಲ್ಲದರ ಪರಿಣಾಮವಾಗಿ ಆಧುನಿಕ ಅಥವಾ ಹೊಸ ಕಾಲವೆಂದು ಜನರ ಜೀವನದಲ್ಲಿ ಹಾಸುಹೊಕ್ಕು ಆಧುನಿಕರಣದ ಪರಿಕಲ್ಪನೆಯ ಚಿಂತನಾ ಲಹರಿಯನ್ನು ಉಪ ಉತ್ಪನ್ನವನ್ನಾಗಿ ಹುಟ್ಟುಹಾಕಿತು. ಇಂದು ವಸಾಹತು ಕಾಲ ಕೊನೆಗೊಂಡಿದ್ದು, ಜಾಗತೀಕರಣದ ಕಾಲದಲ್ಲಿದ್ದೇವೆ. ಅಂದು ಹುಟ್ಟಿಕೊಂಡ ಆಧುನಿಕ ಪರಿಕಲ್ಪನೆಯು ಇಂದಿಗೂ ಸಹ ಹೊಸ ಆಧುನಿಕತೆ (ಅಡ್ವಾನ್ಸ್‌ಡ್ ಮಾಡರ್ನಿಟಿ) ಆಗಿ ಮುಂದುವರೆದಿದೆ. ಇವೆಲ್ಲದರ

ಫಲವಾಗಿ ಮಾನವರ ನಿತ್ಯ ಜೀವನದ ಸಾಂಸ್ಕೃತಿಕ ಪ್ರಕ್ರಿಯೆಗಳು ಸ್ಥಾನಪಲ್ಲಟಗೊಂಡಿತ್ತು ಮತ್ತು ಸ್ಥಾನಪಲ್ಲಟಗಳಿಗೆ ಒಳಗಾಗುತ್ತಲೇ ಇವೆ. ಈ ಸ್ಥಾನಪಲ್ಲಟಗಳನ್ನು ನಗರ ವ್ಯವಸ್ಥೆಯ ಮೂಲಕ ಜನರ ಜೀವನದ ಶೈಲಿಯ ಮಾನದಂಡದ ರೂಪದಲ್ಲಿ ಪ್ರಪಂಚದ ಎಲ್ಲೆಡೆ ಅಳೆಯಲಾಗುತ್ತದೆ. ಪ್ರಸ್ತುತ ಇದರ ನೆಲೆಯಲ್ಲಿ ನಗರ ವ್ಯವಸ್ಥೆಯ ಅಧ್ಯಯನಗಳು ಪ್ರಮುಖವೆನಿಸಿಕೊಂಡು ವಿದ್ವಾಂಸರನ್ನು ಸೆಳೆಯುತ್ತಿದೆ.

ಈ ಎಲ್ಲ ವಿಚಾರಗಳು, ಘಟನೆಗಳು ಮತ್ತು ಪರಿಕಲ್ಪನೆಗಳು ಅಂದಿನ ಮತ್ತು ಇಂದಿನ ಸಮಾಜದ ಪ್ರತಿಬಿಂಬವಾಗಿವೆ. ಅಷ್ಟೇ ಅಲ್ಲದೆ ಪೂರಕ ಸಂಬಂಧವನ್ನು ಹೊಂದಿದೆ ಹಾಗೂ ಮಾನವರ ಚಿಂತನಾ ಲಹರಿಯು ಸಹ ಆಗಿದೆ. ಇದರಿಂದಾಗಿ ವಸಾಹತು ಕಾಲಘಟ್ಟದಲ್ಲಿ ಮತ್ತು ನಂತರದಲ್ಲಿ ವಿವಿಧ ಬಗೆಗೆ ಹಲವು ರಾಜಕೀಯ ಮತ್ತು ಆರ್ಥಿಕ ಚಿಂತನೆಗಳು, ಸಿದ್ಧಾಂತಗಳು ಹುಟ್ಟಿಕೊಂಡವು. ಈ ತೆರನಾದ ಬೆಳವಣಿಗೆಗಳಿಗೆ ಕಾರಣ ಬೌದ್ಧಿಕ ಯಜಮಾನಿಕೆಯ ಮೂಲಕ ಆರ್ಥಿಕ-ರಾಜಕೀಯ ಯಜಮಾನಿಕೆಯನ್ನು ಸಾಧಿಸುವುದೇ ಆಗಿತ್ತು. ಈ ದಿಸೆಯಲ್ಲಿ ಜಗತ್ತಿನ ಚರಿತ್ರೆಯಲ್ಲಿ ವಸಾಹತು ಕಾಲವು ಒಂದು ಪ್ರಮುಖ ಅಧ್ಯಯನದ ವಿಷಯವಾಗಿ ಪ್ರಾಮುಖ್ಯತೆಯನ್ನು ಸಾಧಿಸಿತು. ಈ ಸಾಂಸ್ಕೃತಿಕ ಯಜಮಾನಿಕೆಯನ್ನು ಇಂದಿನ ವಿದ್ವಾಂಸರು ಪ್ರಶ್ನಿಸುತ್ತಿರುವುದು ವಸಾಹತು ಕಾಲಘಟ್ಟದ ಅಧ್ಯಯನಗಳಲ್ಲಿ ವಾದ ವಿವಾದಗಳನ್ನು ಸೃಷ್ಟಿಸಿತು. ಇದಕ್ಕೆ ಕಾರಣ ತಮ್ಮದೇ ಚೌಕಟ್ಟಿನಲ್ಲಿ ಅಧ್ಯಯನವನ್ನು ಮಾಡಿ ವಾಸ್ತವಿಕ ಅಥವಾ ಪ್ರಸ್ತುತ ವಿಚಾರಗಳಿಗೆ ಸಹ ಸಂಬಂಧದ ಮೂಲಕ ತಮ್ಮ ಸಮಸ್ಯೆಗಳಿಗೆ ಉತ್ತರವನ್ನು ಕಂಡುಕೊಳ್ಳಲು ಪ್ರಯತ್ನಿಸಿರುವುದು. ವಸಾಹತುಗಳಿಂದ ನೋಡುವ ಪರಿಪಾಠವು ಸಹ ಬೆಳೆಯಿತು. ಅದು ಮಾನವರ ಸಹಜಗುಣವೂ ಹೌದು. ಇವುಗಳ ಅಧ್ಯಯನದ ದಿಶೆಯು ಸಹ ಆಯಾ ಕಾಲಕ್ಕೆ ತಕ್ಕಂತೆ ಹೊಸ ಹೊಸ ಆಯಾಮಗಳ ಮೂಲಕ ಮಾಡಲಾಯಿತು. ಒಟ್ಟಿನಲ್ಲಿ ಆಧುನಿಕೋತ್ತರ ಅಧ್ಯಯನಗಳು ಈಗಾಗಲೇ ಮೇಲೆ ಚರ್ಚಿಸಿದಂತೆ ಯುರೋಪಿನ ರಾಷ್ಟ್ರಗಳ ಸಾಂಸ್ಕೃತಿಕ ಯಜಮಾನಿಕೆಯನ್ನು ಪ್ರಶ್ನಿಸುತ್ತಿವೆ.

* * *

ಭಾರತವು ಸಹ ಈ ವಸಾಹತು ಕಾಲಘಟ್ಟದಲ್ಲಿ ಬೃಹತ್ ಪಲ್ಲಟಕ್ಕೆ ಒಳಗಾಯಿತು. ಈ ಕಾಲಘಟ್ಟದಲ್ಲಿ ಭಾರತದ ಬಹುಭಾಗವು ಬ್ರಿಟಿಶರ ವಸಾಹತುವಾಯಿತು. ಜೊತೆಗೆ ಕೆಲವು ಭಾಗಗಳು ಫ್ರೆಂಚರು ಮತ್ತು ಪೋರ್ಚುಗೀಸರ ವಸಾಹತುವಾಗಿತ್ತು. ಈ ವಸಾಹತು ಕಾಲದಲ್ಲಿ ಭಾರತದಾದ್ಯಂತ ಆರ್ಥಿಕತೆ, ರಾಜಕೀಯ ಮತ್ತು ಸಾಮಾಜಿಕ ಪಲ್ಲಟಗಳು ಕಂಡುಬಂದವು. ಈ ಕಾಲಘಟ್ಟದ ಅಧ್ಯಯವನ್ನು ಕೇಂದ್ರವಾಗಿಟ್ಟುಕೊಂಡು ನಡೆಸಿದ ಮೊದಲಿಗರು ವಸಾಹತುಶಾಹಿ ವಿದ್ವಾಂಸರು, ಮುಂದೆ ಸಾಮ್ರಾಜ್ಯಶಾಹಿ ಚಿಂತಕರು. ಈ ಈರ್ವರ ಚಿಂತನೆಗಳಲ್ಲಿ ಅನೇಕ ಸಾಮ್ಯತೆಗಳಿವೆ.

ಈರ್ವರೂ ವಸಾಹತು ರಾಷ್ಟ್ರದ ಹಿತಕ್ಕಿಂತ ಮಾತೃ ದೇಶದ ಹಿತಕ್ಕಾಗಿ ಹೆಚ್ಚು ಒತ್ತು ಕೊಟ್ಟವರು. ಅವರು ಆ ಸಂದರ್ಭದ ಅಧಿಕಾರಿಗಳು ಸಹ ಆಗಿದ್ದು, ಚರಿತ್ರಕಾರಾಗಿದ್ದರು ಎಂಬುದು ಗಮನಾರ್ಹ. ಹಾಗಾಗಿ ಈ ವರ್ಗ ಒಂದು ತೆರನಾದ ಚೌಕಟ್ಟಿನಲ್ಲಿ ವಸಾಹತು ಕಾಲವನ್ನು ಅಧ್ಯಯನ ಮಾಡಿ ಬ್ರಿಟಿಶ್ ಭಾರತದ ಚರಿತ್ರೆಯ ಮಾದರಿಯನ್ನು ನಿರೂಪಿಸಿದರು.[೨] ಇವರ ಬರಹಗಳಲ್ಲಿ ಬ್ರಿಟಿಶ್ ಪ್ರಭುತ್ವ ಮತ್ತು ಅವರ ನೀತಿಗಳ ಪರಿಚಯವು ಭಾರತದಲ್ಲಿ ಅಭಿವೃದ್ಧಿಯ ಬೆಳವಣಿಗೆಗೆ ನಾಂದಿ ಹಾಡಿತು ಎಂಬ ಚಿಂತನೆಗಳನ್ನು ಅವರ ಬರಹಗಳಲ್ಲಿ ಕಾಣಬಹುದಾಗಿದೆ. ಅದೇ ಮಾದರಿಯನ್ನು ಹಿಡಿದು ಉದಯಿಸಿದ ರಾಷ್ಟ್ರೀಯವಾದಿ ಚಿಂತಕರ ಬರಹಗಳಲ್ಲಿ ಭಾರತದ ಆರ್ಥಿಕತೆಯು ಬ್ರಿಟಿಶ್ ಪ್ರಭುತ್ವದಿಂದ ಪ್ರಭಾವಿಸಿದೆ ಮತ್ತು ಅದರಿಂದ ಅವನತಿಯ ಹಾದಿಯನ್ನು ಹಿಡಿದಿದೆ ಎಂಬ ನಿಟ್ಟಿನ ಚಿಂತನೆಗಳನ್ನು ಅವರ ಬರಹಗಳಲ್ಲಿ ಕಾಣಬಹುದಾಗಿದೆ. ಹೀಗೆ ವಸಾಹತು ಕಾಲಘಟ್ಟದಲ್ಲಿ ನಡೆದ ಅಧ್ಯಯನಗಳು ಆರಂಭದ ಹಂತದಲ್ಲಿ ಸಾಮ್ರಾಜ್ಯಶಾಹಿ ಮತ್ತು ರಾಷ್ಟ್ರೀಯವಾದಿ ಚಿಂತಕರು ಮತ್ತು ಅವರ ಚಿಂತನಾ ಲಹರಿಯು ವಾದ ಮತ್ತು ಪ್ರತಿವಾದವನ್ನು ಹುಟ್ಟುಹಾಕಿತು.

ವಸಾಹತು ಕಾಲಘಟ್ಟದ ಕುರಿತ ಆರಂಭಿಕ ಅಧ್ಯಯನಗಳು ಮತ್ತು ಅದರ ಚಿಂತಕರು ಮೇಲೆ ಚರ್ಚಿಸಿದಂತೆ ಒಂದು ಸೀಮಿತ ಚೌಕಟ್ಟಿಗೆ ಒಳಪಟ್ಟಿದ್ದವು. ಈ ಚರಿತ್ರಕಾರರು ವಸಾಹತು ಅಧ್ಯಯನವನ್ನು ಕೆಳಹಂತದಿಂದ ಮತ್ತು ಅಂತಾರಾಷ್ಟ್ರೀಯ ವಿದ್ಯಮಾನಗಳೊಂದಿಗೆ ಗುರುತಿಸಿಲ್ಲ. ಬದಲಿಗೆ ತಮ್ಮ ಹಿತಾಸಕ್ತಿಗೆ ಅನುಗುಣವಾಗಿ ರಚನೆ ಮಾಡಿದರು. ಇದರಿಂದಾಗಿ ಚರಿತ್ರೆಯು ವಸ್ತುನಿಷ್ಠತೆಯಿಂದ ಕೂಡಿರದೇ ಪೂರ್ವಾಗ್ರಹದಿಂದ ಕೂಡಿತ್ತು. ಹಾಗಾಗಿ ಈ ಚರಿತ್ರೆಗಳು ಅಂದಿನ ಪರಿವರ್ತನೆ ಮತ್ತು ಬದಲಾವಣೆಗಳಿಗೆ ಕಾರಣವನ್ನು ಆಮೂಲಾಗ್ರವಾಗಿ ನೋಡುವಲ್ಲಿ ಹಾಗೂ ಸಮಸ್ಯೀಕರಣದ ಹಂತದಲ್ಲಿ ವಿಫಲಗೊಂಡಿತು. ಹಾಗೆಯೇ ಅಖಂಡ ಭಾರತದ ಚರಿತ್ರೆಯ ಅಧ್ಯಯನವು ಈ ಹಂತದಲ್ಲಿ ಪೂರ್ಣವಾಗಿ ರಾಜಕೀಯ ಚರಿತ್ರೆಯಯಾಗಿದ್ದು ಸಹ ಒಂದು ದೊಡ್ಡ ಮಿತಿಯಾಯಿತು. ಜೊತೆಗೆ ಭಾರತದ ಸಮಗ್ರವಾದ ಅಧ್ಯಯನಗಳು ನಡೆಯಲಿಲ್ಲ. ಇವು ಮುಂದೆ ಆರ್ಥಿಕ ಚರಿತ್ರೆಯ ಅಧ್ಯಯನಗಳಿಗೆ ಅವಕಾಶವನ್ನು ಮಾಡಿಕೊಟ್ಟಿತ್ತು.

ರಾಜಕೀಯ ಚರಿತ್ರೆಯ ಅಧ್ಯಯನದ ಸಾಂಪ್ರದಾಯವು ಶಿಖರತೆಯಲ್ಲಿರುವ ಸಂದರ್ಭದಲ್ಲಿಯೇ ಅಂದರೆ ೧೯ನೇ ಶತಮಾನದ ಕೊನೆಯ ವೇಳೆಗೆ ಹೊಸ ಬಗೆಯ ಚಿಂತನೆಗಳು ಕಂಡುಬರತೊಡಗಿದವು. ಈ ಚಿಂತನೆಗಳು ಚರಿತ್ರೆಯನ್ನು ಐತಿಹಾಸಿಕ ಮತ್ತು ಆರ್ಥಿಕ ನೆಲೆಗಟ್ಟಿನಲ್ಲಿ ವಸ್ತುನಿಷ್ಠವಾಗಿ ಅಧ್ಯಯನ ಮಾಡುವ ಪರಿಪಾಠ ಹೊಂದಿತ್ತು. ಮುಂದೆ ಇದು ಆರ್ಥಿಕ ಚರಿತ್ರೆಯ ಚಿಂತನೆಗೆ ರೂಪ ಕೊಟ್ಟಿತು. ಈ ತೆರನಾದ ಚಿಂತನೆಯನ್ನು ಆರಂಭಿಸಿದವರು ಮಹಾದೇವ ಗೋವಿಂದ ರಾನಡೆ ಮತ್ತು ರಾಮೇಶ್ ಚಂದ್ರ ದತ್ತ್‌ರವರು. ಭಾರತದ ಆರ್ಥಿಕ ಚರಿತ್ರೆಯು ಇವರ ಚಿಂತನಾ ಲಹರಿಯಿಂದಾಗಿ ಮುಂದಿನ

ವಿದ್ವಾಂಸರಿಗೆ ಒಂದು ಹೊಸ ಹುರುಪನ್ನು ನೀಡಿತು. ಇದೇ ನಿಟ್ಟಿನಲ್ಲಿ ಇನ್ನೂ ಸುಧಾರಿತ ವ್ಯವಸ್ಥೆಯ ಚೌಕಟ್ಟಿನಲ್ಲಿ ಇರ್ಫಾನ್ ಹಬೀಬ್‌ರವರು ಮೊಗಲ್ ಸಾಮ್ರಾಜ್ಯದಿಂದ ಹಿಡಿದು ಅಮಿಯ ಕುಮಾರ್ ಬಾಗ್ಚಿಯವರ ವಸಾಹತು ಆರ್ಥಿಕತೆವರೆಗೆ ಹಲವು ಅಧ್ಯಯನಗಳನ್ನು ನಡೆಸಿದರು.[೩]

ಭಾರತದ ಆರ್ಥಿಕ ಚರಿತ್ರೆಯ ಅಧ್ಯಯನಗಳಲ್ಲಿ ಕಳೆದ ಶತಮಾನದ ಆರಂಭದ ಕುರಿತಂತೆ ಪ್ರಸನ್ನ ಪಾರ್ಥಸಾರಥಿಯವರು ಮೂರು ಪ್ರಮುಖ ಹಂತಗಳನ್ನು ಗುರುತಿಸಿರುತ್ತಾರೆ. ಮೊದಲನೆಯದು ರಾನಡೆ ಮತ್ತು ದತ್ ಅವರು ಪ್ರಾರಂಭಿಸಿದ ರಾಷ್ಟ್ರೀಯತಾವಾದಿ ಸಿದ್ಧಾಂತವಾಗಿದೆ. ಈ ಚಿಂತಕರು ಭಾರತದ ಅರ್ಥಶಾಸ್ತ್ರದ ಹಿನ್ನೆಲೆಯಲ್ಲಿ ಭಾರತದ ಚರಿತ್ರೆಯನ್ನು ಕಟ್ಟಲು ಪ್ರಯತ್ನಿಸಿದರು. ಆದರೆ ಮುಂದೆ ಸ್ವಲ್ಪ ಕಾಲ ಈ ತೆರನಾದ ಅಧ್ಯಯನಗಳು ಅಷ್ಟಾಗಿ ನಡೆಯಲಿಲ್ಲ. ೧೯೫೦ರ ದಶಕದ ವೇಳೆಯಲ್ಲಿ ಆರ್ಥಿಕ ಚಿಂತಕರು ಮತ್ತು ಚರಿತ್ರೆಯ ಚಿಂತಕರನ್ನು ಮಾರ್ಕ್ಸ್‌ನ ಸಿದ್ಧಾಂತಗಳು ಪ್ರಭಾವಿಸಿದ್ದು, ಇದರಿಂದಾಗಿ ಆರ್ಥಿಕ ಚರಿತ್ರೆಯು ಒಂದು ಹೊಸ ಚೈತನ್ಯದಿಂದ ಹೊರ ಹೊಮ್ಮಿತು. ಅದೇ ಮಾರ್ಕ್ಸ್‌ವಾದಿ ಚಿಂತನೆಯಾಗಿದೆ. ಎ. ಅಪ್ಪದೊರೈ, ಕೆ. ಎನ್. ಸಿನ್ಹ, ಹರ್ಬನ್ ಮುಖಿಯ, ಡಿ.ಡಿ ಕೊಸಾಂಬಿ, ಇರ್ಫಾನ್ ಹಬೀಬ್, ಜೈರಸ್ ಬನಜಿ ಮೊದಲಾದವರು ಈ ದಿಸೆಯ ಪ್ರಮುಖ ವಿದ್ವಾಂಸರು. ಈ ಚಿಂತನಾ ಲಹರಿಯು ಉತ್ಪಾದನಾ ವಿಧಾನದ ಚರ್ಚೆ ಎಂದು ಹೆಸರಾಯಿತು. ೧೯೬೦ರ ನಂತರದ ದಶಕಗಳಲ್ಲಿ ಆರ್ಥಿಕ ಚರಿತ್ರೆಯು ಪುನರುಜ್ಜೀವನದ ಮಟ್ಟವನ್ನು ತಲುಪಿತು. ಈ ಸಂದರ್ಭದ ಅರ್ಥಶಾಸ್ತ್ರಜ್ಞರು ಮತ್ತು ಆರ್ಥಿಕ ಚರಿತ್ರಕಾರರು ಬಹುಶಿಸ್ತಿನ ಚೌಕಟ್ಟಿನ ಮೂಲಕ ವಸಾಹತು ಕಾಲಘಟ್ಟದ ಬಗೆಗೆ ಅಧ್ಯಯನಗಳನ್ನು ಮಾಡಿದರು. ಇವರನ್ನು 'ದೆಲ್ಲಿ ಸ್ಕೂಲ್ ಆಫ್ ಎಕನಾಮಿಕ್ಸ್' ಎಂದು ಕರೆಯಲಾಗಿದೆ. ೧೯೬೦-೭೦ರ ದಶಕದಲ್ಲಿ ಭಾರತದ ಆರ್ಥಿಕ ಚರಿತ್ರೆ ಪ್ರವರ್ಧಮಾನಕ್ಕೆ ಬಂದಿತು.[೪] ಧರ್ಮ ಕುಮಾರ್, ತಪನ್ ರಾಯ್‌ಚೌಧರಿ, ಅಮರ್ತ್ಯ ಸೇನ್, ರಣಜಿತ್ ಗುಹಾ, ಆರ್. ಎಸ್. ಶರ್ಮಾ, ಆರ್. ಡಿ. ಗಾಡ್ಗೀಳ್ ಸಮಗ್ರ ಅರ್ಥಶಾಸ್ತ್ರದ ಹಿನ್ನೆಲೆಯ ಆರ್ಥಿಕ ಚರಿತ್ರೆಗಾರರಾಗಿದ್ದು ಈ ಶಾಲೆಗೆ ಸೇರಿದ ಪ್ರಮುಖ ವಿದ್ವಾಂಸರು. ಈ ಎಲ್ಲ ಚರಿತ್ರೆಯ ಅಧ್ಯಯನ ಮಾದರಿಗಳು ತಮ್ಮದೇ ಆದ ಮಿತಿಗಳನ್ನು ಹೊಂದಿರುವುದನ್ನು ನೋಡಬಹುದು. ಮುಂದೆ ೧೯೮೦ರ ದಶಕದಲ್ಲಿ ಬೆಳವಣಿಗೆಯನ್ನು ಪಡೆದ ಸಬಾಲ್ಟ್ರರ್ನ್ ಪಂಥವು ಆರ್ಥಿಕ ಚರಿತ್ರೆಗೆ ಹೊಸ ತಿರುವನ್ನು ನೀಡಿತು. ಈ ಸಂದರ್ಭದಲ್ಲಿ ವಸಾಹತು ಕಾಲಘಟ್ಟದ ಬಗೆಗೆ ಕೆಳಹಂತದಿಂದ ಅಧ್ಯಯನಗಳು ಆರಂಭವಾದವು. ಈ ದಿಸೆಯಲ್ಲಿ ರಣಜಿತ್ ಗುಹಾ, ಸುಮಿತ್ ಸರ್ಕಾರ್, ಗ್ಯಾನೇಂದ್ರ ಪಾಂಡೆ, ಗಾಯಿತ್ರಿ ಚಕ್ರವರ್ತಿ ಸ್ಪಿವಿಕ್, ಡೆವಿಡ್ ಅರ್ನಾಲ್ಡ್, ದೀಪೇಶ್ ಚಕ್ರವರ್ತಿ ಮತ್ತು ಪಾರ್ಥಸಾರಥಿ ಮೊದಲಾದ ವಿದ್ವಾಂಸರನ್ನು ಪ್ರಮುಖವಾಗಿ ಗುರುತಿಸಬಹುದು.

ನಗರ ಚರಿತ್ರೆಯು ಹತ್ತೊಂಬತ್ತನೆಯ ಶತಮಾನದ ದ್ವಿತೀಯಾರ್ಧದಲ್ಲಿ ಸಮಾಜಶಾಸ್ತ್ರದ ಅಧ್ಯಯನದ ಚೌಕಟ್ಟಿನಲ್ಲಿ ಹುಟ್ಟಿಕೊಂಡಿತ್ತು. ಸಮಾಜಶಾಸ್ತ್ರಜ್ಞರು ನಗರ ಪ್ರದೇಶಗಳಲ್ಲಿನ ಜನರ ಜೀವನದ ಸಂಕೀರ್ಣತೆ ಹಾಗೂ ಬಹುರೂಪಿ ಲಕ್ಷಣಗಳು ಚರಿತ್ರೆಯ ರಚನೆಯಲ್ಲಿ ಪ್ರಮುಖ ಪಾತ್ರವಹಿಸುತ್ತದೆ ಎಂದು ಪ್ರತಿಪಾದಿಸಿದರು. ಈ ದಿಸೆಯಲ್ಲಿ ನಗರಗಳ ಅಧ್ಯಯನವನ್ನು ಆರಂಭಿಸಿದರು. ಯಾವುದೇ ಪ್ರದೇಶವು ಗ್ರಾಮದಿಂದ ನಗರವಾಗಿ ಹೊರಹೊಮ್ಮುವ ಪ್ರಕ್ರಿಯೆಯಲ್ಲಿ ಹೆಚ್ಚುವರಿ ಉತ್ಪಾದನೆ, ಜನಸಂಖ್ಯೆಯ ಹೆಚ್ಚಳ, ಕುಶಲಕರ್ಮಿಗಳು, ವ್ಯಾಪಾರ–ವಾಣಿಜ್ಯ, ವರ್ತಕ ಸಂಘಗಳು, ಧರ್ಮ, ಶಿಕ್ಷಣ, ಆಡಳಿತ, ಜಮೀನ್ದಾರರು, ಭೌಗೋಳಿಕ ಸನ್ನಿವೇಶ ಮುಂತಾದವು ಪ್ರಮುಖ ಪಾತ್ರ ವಹಿಸುತ್ತದೆ.[೫] ಜೊತೆಗೆ ನಗರೀಕರಣದ ಪ್ರಕ್ರಿಯೆಯಲ್ಲಿ ಪ್ರಮುಖವಾಗಿ ಎರಡು ನಿರ್ಣಾಯಕ ಅಂಶಗಳು ನಿರ್ಧರಿಸುತ್ತದೆ. ಒಂದನೆಯದಾಗಿ, ನಗರದ ವ್ಯಾಪ್ತಿಯ ಬೆಳವಣಿಗೆ ಹೊರ ನೋಟದ ಅಧ್ಯಯನವಾಗಿದೆ. ಎರಡನೆಯದಾಗಿ ಅಲ್ಲಿಯ ಜನರ ಜೀವನ ಶೈಲಿಯು ನಗರೀಕರಣ ಪ್ರಕ್ರಿಯೆಯ ಒಳ ನೋಟದ ನಿರ್ಧಾರಕಾಂಶವಾಗಿದೆ. ಇವುಗಳು ಒಂದಕ್ಕೊಂದು ಪೂರಕವಾಗಿ ಕಾರ್ಯವೆಸಗಿದಾಗ ಮಾತ್ರ ನಗರೀಕರಣದ ಪ್ರಕ್ರಿಯೆಯು ಚುರುಕುಗೊಳ್ಳುತ್ತದೆ.[೬] ಭಾರತದ ನಗರ ಚರಿತ್ರೆಯ ಅಧ್ಯಯನವನ್ನು ವಸಾಹತು ಪೂರ್ವ ಮತ್ತು ವಸಾಹತು ಕಾಲದ ಎಂದು ವಿಂಗಡಿಸಬಹುದಾಗಿದೆ. ವಸಾಹತು ಪೂರ್ವದ ನಗರಗಳು ಬಹುತೇಕ ರಾಜಧಾನಿ, ಧಾರ್ಮಿಕ ನೆಲೆಯ ನಗರಗಳಾಗಿ ರೂಪಗೊಂಡಿತ್ತು. ಅವು ಕಾಲಾಂತರದಲ್ಲಿ ಬಹುಪಾಲು ಅವನತಿ ಹೊಂದಿರುವುದನ್ನು ಕಾಣಬಹುದಾಗಿದೆ. ಆದರೆ ವಸಾಹತು ಕಾಲದಲ್ಲಿ ರೂಪುಗೊಂಡ ನಗರಗಳು ಸಾರಿಗೆ–ಸಂಪರ್ಕ, ವ್ಯಾಪಾರ–ವಾಣಿಜ್ಯದ ಹಿನ್ನೆಲೆಯಲ್ಲಿ ರೂಪುಗೊಂಡ ನಗರಗಳಾಗಿದ್ದು, ಅದರಲ್ಲಿ ಬಹುತೇಕ ನಗರಗಳು ಇಂದಿಗೂ ಸಹ ನಗರೀಕರಣದ ಹಿನ್ನೆಲೆಯಲ್ಲಿ ತಮ್ಮ ಸ್ಥಾನವನ್ನು ಉಳಿಸಿಕೊಂಡು ಬೆಳೆಯುತ್ತಲೇ ಇವೆ.[೭]

ಇಂದಿನ ಶೈಕ್ಷಣಿಕ ಅಧ್ಯಯನಗಳಲ್ಲಿ ನಗರ ಚರಿತ್ರೆಯು ಆರ್ಥಿಕ ಚರಿತ್ರೆಯ ಅಂತರ್ ಶಿಸ್ತಿನ ಒಂದು ಭಾಗವಾಗಿದೆ. ಇದು ಇಪ್ಪತ್ತನೆಯ ಶತಮಾನದ ಜನಪ್ರಿಯವಾದ ಶೈಕ್ಷಣಿಕ ಶಿಸ್ತುಗಳಲ್ಲೊಂದಾಗಿದೆ. ನಗರ ಚರಿತ್ರೆಯಲ್ಲಿಯೇ ವಾಸ್ತುಶಿಲ್ಪದ ಇತಿಹಾಸ, ನಗರದ ಸಮಾಜಶಾಸ್ತ್ರ, ನಗರ ಭೂಗೋಳ ಶಾಸ್ತ್ರ, ವಾಣಿಜ್ಯದ ಇತಿಹಾಸ ಮೊದಲಾದವುಗಳ ಅಧ್ಯಯನವನ್ನು ಕಾಣಬಹುದು. ಹೀಗೆ ನಗರ ಚರಿತ್ರೆಯು ಸಾಮಾನ್ಯವಾಗಿ ಬಹುಶಿಸ್ತಿನ ಅಧ್ಯಯನವಾಗಿದೆ. ಇತ್ತೀಚಿನ ವಿದ್ವಾಂಸರು ಸಾಮಾಜಿಕ–ಆರ್ಥಿಕ ಬದಲಾವಣೆಗಳ ಪರಿಣಾಮಗಳು ರಾಜಕೀಯ ಬೆಳವಣಿಗೆಯ ಮೇಲೆ ಪ್ರಭಾವಿಸುತ್ತದೆ ಎಂದು ಗುರುತಿಸಿರುವರು.[೮] ಜೊತೆಗೆ ಪುರಾತತ್ವ, ತಂತ್ರಜ್ಞಾನ ಮತ್ತು ಮಾನವಶಾಸ್ತ್ರೀಯ ಅಧ್ಯಯನದೊಂದಿಗೆ ಬದಲಾವಣೆ ಮತ್ತು ನಿರಂತರತೆಯ ಅಂಶಗಳನ್ನು ಗಮನಿಸಿದರು. ಆಧುನೀಕರಣದ ಒಂದು ಸೂಚ್ಯಂಕದ ಮಾದರಿಯಾಗಿ ನಗರೀಕರಣ ಮತ್ತು ಕೈಗಾರಿಕೀಕರಣ

ಪ್ರಭಾವದ ಹಿನ್ನೆಲೆಯಲ್ಲಿ ನಗರ ಚರಿತ್ರೆಯು ಚುರುಕುಗೊಂಡಿತು. ೧೯೭೦ರ ದಶಕ ನಂತರದಲ್ಲಿ ಹಾರ್ವರ್ಡ್ ವಿಶ್ವವಿದ್ಯಾಲಯವು ಇದರ ಬಗೆಗೆ ಹೆಚ್ಚು ಅಧ್ಯಯನಗಳನ್ನು ನಡೆಸಿದೆ. ಪ್ರಮುಖ ನಗರದ ಇತಿಹಾಸ ಪ್ರಸ್ತುತ ಅಧ್ಯಯನಕ್ಕೆ ಒಳಗಾಗುತ್ತಿರುವ ಬಹು ಜನಪ್ರಿಯ ಶೈಕ್ಷಣಿಕ ಪ್ರವೃತ್ತಿಯಾಗಿದೆ.[5] ಅಶಿನ್ ದಾಸ್ ಗುಪ್ತ, ರಾಧಕಮಲ್ ಮುಖರ್ಜಿ, ಸಂಜಯ್ ಸುಬ್ರಮಣ್ಯಂ, ರಾಯ್ ಚೌಧರಿ, ಪ್ರಸನ್ನ ಪಾರ್ಥಸಾರಥಿ, ಎ. ಘೋಷ್ ಮೊದಲಾದವರು ಈ ಪಂಥದ ಪ್ರಮುಖ ಚಿಂತಕರೆನಿಸಿರುವರು. ಭಾರತದ ನಗರಗಳನ್ನು ತುಲನಾತ್ಮಕ ಅರ್ಥಶಾಸ್ತ್ರ ಮತ್ತು ಜನಸಂಖ್ಯಾಶಾಸ್ತ್ರ, ಆರ್ಥಿಕ ಮತ್ತು ಸಾಮಾಜಿಕ ಪರಿಸರಗಳ ಅಧ್ಯಯನಗಳನ್ನು ಒಳಪಡಿಸಿ ಅದರ ಪ್ರಾಮುಖ್ಯತೆಯನ್ನು ತೋರಿಸಿಕೊಟ್ಟರು.

* * *

ಭಾರತದ ಇನ್ನಿತರ ನಗರಗಳಂತೆ ಬೆಂಗಳೂರು ನಗರ ಇರದೇ ಬೆಂಗಳೂರು ಪ್ರದೇಶವು ವಿಶೇಷವಾಗಿದೆ. ಈ ಪ್ರದೇಶವು ವಸಾಹತು ಪೂರ್ವದಲ್ಲಿ ಅಂದರೆ ೧೬ನೇ ಶತಮಾನದಲ್ಲಿ ಕೆಂಪೇಗೌಡರ ಆಡಳಿತದಲ್ಲಿ ಒಂದು ಸಣ್ಣ ಪ್ರಭುತ್ವದ ರಾಜಧಾನಿಯಾಗಿತ್ತು. ಮುಂದೆ ರಾಜಕೀಯ ಪಲ್ಲಟಗಳಲ್ಲಿ ಒಡೆಯರ ಕಾಲದಲ್ಲಿ ರಾಜಧಾನಿ ಪಟ್ಟದಿಂದ ಸೈನಿಕ ನೆಲೆಯಾಗಿ ಪರಿವರ್ತನೆಯನ್ನು ಹೊಂದಿತು. ನಂತರ ಟಿಪ್ಪುವಿನ ಕಾಲಕ್ಕೆ ಪ್ರಬಲ ವ್ಯಾಪಾರ ಕೇಂದ್ರವಾದ ನಗರವಾಗಿ ಸ್ವರೂಪವನ್ನು ಪಡೆದು ರೂಪಾಂತರಗೊಂಡಿತು. ವಸಾಹತು ಕಾಲದಲ್ಲಿ ದಕ್ಷಿಣ ಭಾರತದಲ್ಲಿ ಮದ್ರಾಸನ್ನು ಹೊರತುಪಡಿಸಿ ನಂತರದ ಪ್ರಬಲ ದಂಡು ಪ್ರದೇಶವಾಗಿ ಬೆಳೆಯಿತು. ಜೊತೆಗೆ ವಿನಿಮಯ ವ್ಯಾಪಾರಿ ಕೇಂದ್ರವಾಗಿ, ಕೈಗಾರಿಕಾ ಕೇಂದ್ರವಾಗಿ ಬೆಳವಣಿಗೆಯ ಸ್ವರೂಪವನ್ನು ಪಡೆಯಿತು. ಇಂದಿಗೂ ಸಹ ನಗರೀಕರಣದ ಪ್ರಕ್ರಿಯೆಯಲ್ಲಿ ದಕ್ಷಿಣ ಭಾರತದಲ್ಲಿ ಮುಂಚೂಣಿಯ ಸ್ಥಾನವನ್ನು ಪಡೆದ ನಗರಗಳಲ್ಲಿ ಒಂದಾಗಿದೆ. ಹೀಗೆ ಬೆಂಗಳೂರು ಪ್ರದೇಶದ ನಗರೀಕರಣದ ಪ್ರಕ್ರಿಯೆಯು ನಿರಂತರ ಪ್ರಕ್ರಿಯೆಯಾಗಿದೆ. ಕಾಲಕ್ಕೆ ತಕ್ಕಂತೆ ಹೊಸ ಹೊಸ ಸ್ವರೂಪದಲ್ಲಿ ಮತ್ತು ಕಾಲಾಂತರದಲ್ಲಿ ರೂಪಾಂತರಗೊಂಡು ವಿಭಿನ್ನ ಆಯಾಮಗಳಲ್ಲಿ ನಗರೀಕರಣದ ಪ್ರಕ್ರಿಯೆಯು ಸಾಗುತ್ತಲೇ ಇದೆ. ಇದರ ಹಿನ್ನೆಲೆಯಲ್ಲಿ ಬೆಂಗಳೂರು ಪ್ರದೇಶದ ಹೆಸರುಗಳನ್ನು ಸಹ ಗಮನಿಸಬಹುದಾಗಿದೆ. ಉದಾಹರಣೆಗೆ., ಕಲ್ಯಾಣ ನಗರ, ಪೆನ್ಷನರಸ್ ಪ್ಯಾರಡೈಸ್, ಗಾರ್ಡನ್ ಸಿಟಿ, ಸಿಲಿಕಾನ್ ಸಿಟಿ, ಐಟಿ–ಬಿಟಿ ಸಿಟಿ, ಕಾಸ್ಮೋಪಾಲಿಟನ್ ಸಿಟಿ, ಮೊಟ್ರೋಪಾಲಿಟನ್ ಸಿಟಿ, ಎಲೆಕ್ಟ್ರಾನಿಕ್ ಸಿಟಿ ಮೊದಲಾದವು. ಇವೆಲ್ಲದರ ಫಲವಾಗಿ ಬೆಂಗಳೂರು ಇಂದು ಅಂತಾರಾಷ್ಟ್ರೀಯ ಮಟ್ಟದಲ್ಲಿ ತನ್ನದೇ ಆದ ಸ್ಥಾನವನ್ನು ಪಡೆದಿದೆ.

ಹೀಗೆ ಬೆಂಗಳೂರು ಪ್ರದೇಶವು ಕಾಲದಿಂದ ಕಾಲಕ್ಕೆ ನಗರ ವ್ಯವಸ್ಥೆಯಲ್ಲಿ ತನ್ನದೇ ಮಹತ್ವದ ಪಾತ್ರವನ್ನು ವಹಿಸಿದೆ. ಇದಕ್ಕೆ ಪ್ರಮುಖ ಕಾರಣ ವಸಾಹತುಶಾಹಿ ಪ್ರಭುತ್ವ ಮತ್ತು ಸಾಮ್ರಾಜ್ಯಶಾಹಿ

ಆರ್ಥಿಕ ನೀತಿಗಳು ನಗರೀಕರಣದ ಪ್ರಕ್ರಿಯೆಯಲ್ಲಿ ನಿರ್ಣಾಯಕ ಪಾತ್ರವನ್ನು ನಿರ್ವಹಿಸಿರುವುದು. ಇದರ ಫಲವಾಗಿ ಬೆಂಗಳೂರು ಪ್ರದೇಶದಲ್ಲಿ ಹೊಸ ಹೊಸ ನಗರ ಪ್ರದೇಶಗಳು ಉದಯಿಸಿದವು. ಬೆಂಗಳೂರು ಪ್ರದೇಶದ ನಗರದ ಗಡಿಗಳು ಸಹ ವಿಸ್ತರಣೆಗೊಂಡು ಅದರ ವ್ಯಾಪ್ತಿಯು ಬೆಂಗಳೂರು ಗ್ರಾಮಾಂತರ ಪ್ರದೇಶಗಳನ್ನು ಒಳಗೊಂಡಂತೆ ನಗರ ಪ್ರದೇಶವು ಬೆಳೆಯುತ್ತಾ ಹೋಯಿತು ಮತ್ತು ಇಂದಿಗೂ ಸಹ ಬೆಳೆಯುತ್ತಿದೆ. ಪ್ರತಿ ಹಂತದ ಬೆಳವಣಿಗೆಯಲ್ಲಿಯೂ ಸಹ ವರ್ತಕರು ಮತ್ತು ವ್ಯಾಪಾರ, ಕೈಗಾರಿಕೆ ಮತ್ತು ಕುಶಲಕರ್ಮಿಗಳು ಹಾಗೂ ವರ್ತಕ ಸಂಘಗಳು ಎನ್ನುವ ನಾಲ್ಕು ಅಂಶಗಳು ಪ್ರಮುಖ ಪಾತ್ರವನ್ನು ವಹಿಸುತ್ತದೆ. ಅದರಿಂದಾಗಿ ಈ ನಾಲ್ಕು ಅಂಶಗಳನ್ನು ಇಟ್ಟುಕೊಂಡು ಅಧ್ಯಯನವನ್ನು ಮಾಡುವ ಪ್ರಯತ್ನವನ್ನು ಮಾಡಲಾಗಿದೆ.

## ಅಧ್ಯಯನದ ಉದ್ದೇಶ

ಇತಿಹಾಸದ ಅಧ್ಯಯನವು ಇಂದು ವೈಚಾರಿಕ ಮತ್ತು ವೈಜ್ಞಾನಿಕ ದೃಷ್ಟಿಕೋನದತ್ತ ಸಾಗಿದೆ. ವಸಾಹತು ಕಾಲಘಟ್ಟವು ಒಂದು ಸಂಕ್ರಮಣ ಕಾಲಘಟ್ಟವಾಗಿತ್ತು. ಇಂತಹ ಕಾಲಘಟ್ಟದ ವಿವಿಧ ಮಗ್ಗಲುಗಳಾದ ಬ್ರಿಟಿಶ್ ನೀತಿಗಳು, ಆರ್ಥಿಕತೆ, ರಾಜಕೀಯ ಸಂಘರ್ಷಗಳ ಬಗೆಗೆ ಅಧ್ಯಯನಗಳು ಇಂದು ಹೆಚ್ಚು ಹೆಚ್ಚು ನಡೆದಿವೆ ಹಾಗೂ ನಡೆಯುತ್ತಲಿವೆ. ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿ ನೀತಿಗಳಿಂದ ನಗರೀಕರಣದ ಪ್ರಕ್ರಿಯೆ ದಾಪುಗಾಲು ಹಾಕಿತು. ಇದು ಪ್ರದೇಶದಿಂದ ಪ್ರದೇಶಕ್ಕೆ ಒಂದೇ ತೆರನಾಗಿ ಕಂಡುಬರುವುದಿಲ್ಲ. ಹಾಗೇ ಅದೇ ಸಂದರ್ಭದಲ್ಲಿ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ ಕ್ಷೇತ್ರಗಳಲ್ಲಿ ಬದಲಾವಣೆಗಳು ಕಾಣಿಸಿಕೊಂಡವು. ಇವೆಲ್ಲವೂ ನಗರೀಕರಣ ಪ್ರಕ್ರಿಯೆಯ ಮೇಲೆ ಬೀರುವ ಪ್ರಭಾವ ಅಪಾರವಾದುದು. ಜೊತೆಗೆ ವರ್ತಕರು, ವರ್ತಕ ಸಮುದಾಯಗಳ ಪಾತ್ರವು ಸಹ ಮಹತ್ವದಾಗಿದೆ. ಪ್ರಾಚೀನ ಕಾಲದಿಂದ ಪ್ರಸ್ತುತದವರೆಗೆ ನಗರೀಕರಣ ಪ್ರಕ್ರಿಯೆ ಮತ್ತು ಪ್ರಭುತ್ವದೊಡನೆ ವಿಶೇಷವಾದ ಸಂಬಂಧವನ್ನು ಇವು ಹೊಂದಿರುವುದನ್ನು ಗುರುತಿಸಬಹುದು. ವರ್ತಕ ಮತ್ತು ವರ್ತಕ ಸಂಘಗಳು ವಸಾಹತು ಕಾಲದಲ್ಲಿಯೂ ಇದು ಮುಂದುವರಿದರೂ ಹಿಂದಿಗಿಂತ ಭಿನ್ನವಾಗಿ ಕಂಡುಬರುತ್ತದೆ. ಏಕೆಂದರೆ ವಸಾಹತು ಕಾಲದ ಸೃಷ್ಟಿಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದು ಕೂಡ ವಾಣಿಜ್ಯ ಕಂಪನಿಗಳೇ ಆಗಿದೆ. ವ್ಯಾಪಾರಿಗಳೇ ಪೂರ್ಣ ರೂಪದಲ್ಲಿ ಪ್ರಭುಗಳಾಗಿ ಸ್ಥಳೀಯ ವ್ಯಾಪಾರಿಗಳೊಡನೆ ಹೊಂದಿದ್ದ ಸಂಬಂಧಗಳು, ಆಡಳಿತ ಮತ್ತು ಆರ್ಥಿಕ ನೀತಿಯು ಅನೇಕ ಹೊಸ ನಗರಗಳ ಬೆಳವಣಿಗೆಗೆ, ಕೆಲವೊಮ್ಮೆ ಹಿಂದೆಯೇ ಇದ್ದ ನಗರಗಳ ಬೆಳವಣಿಗೆಯಲ್ಲಿಯೂ ಪ್ರಮುಖ ಪಾತ್ರ ನಿರ್ವಹಿಸಿತು.

ಬೆಂಗಳೂರು ಪ್ರದೇಶವು ಕಂಪನಿಯ ಆಡಳಿತಕ್ಕೆ ಒಳಪಡುವ ಮೊದಲೇ ಪ್ರಮುಖ ನಗರವಾಗಿತ್ತು. ಇವರ ಆಳ್ವಿಕೆಯಲ್ಲಿಯೂ ಇದು ಮುಂದುವರಿಯುತ್ತ ಹಲವಾರು ರೂಪಾಂತರಗಳಿಗೆ

ಸಾಕ್ಷಿಯಾಯಿತು. ಇವು ವಸಾಹತು ಕಾಲದ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಪರಿಣಾಮಗಳಿಗೆ ಹಿಡಿದ ಕನ್ನಡಿಯಾಗಿದೆ. ಇದೆಲ್ಲದರೊಡನೆ ಬೆಂಗಳೂರು ಪ್ರದೇಶವು ಮದ್ರಾಸ್ ಅಥವಾ ಮಂಗಳೂರಿನಂತೆ ಸಮುದ್ರ ತೀರದ ನಗರವಾಗಿರದೆ ಒಳ ನಾಡಿನಲ್ಲಿ ಕಂಡುಬರುವ ಪ್ರದೇಶವಾಗಿದೆ. ಒಳ ನಾಡ ನಗರಗಳ ಬೆಳವಣಿಗೆ ಸಮುದ್ರ ತೀರ ಹೊಂದಿರುವ ಪ್ರದೇಶಕ್ಕಿಂತ ಭಿನ್ನ ರೀತಿಯಲ್ಲಿ ಕಂಡುಬರುವುದು. ಇಂತಹ ಪ್ರದೇಶಗಳು ಒಳನಾಡಿನ ಇತರ ಕೇಂದ್ರಗಳಿಗೆ ಕೊಂಡಿಯಾಗಿ ಮತ್ತು ಪ್ರಮುಖವಾದ ದಂಡುಪ್ರದೇಶವಾಗಿ ಹಾಗೂ ರಾಜಕೀಯವಾಗಿಯೂ ಪ್ರಮುಖ ಸ್ಥಾನಗಳನ್ನು ಹೊಂದಿರುತ್ತದೆ. ಈ ಬೆಳವಣಿಗೆಯಲ್ಲಿ ಸ್ಥಳೀಯ ಮತ್ತು ಹೊರಗಿನಿಂದ ಬಂದ ಎರಡೂ ಬಗೆಯ ವರ್ತಕ ಸಮುದಾಯಗಳ ಕೊಡುಗೆ ಅಪಾರವಾಗಿದೆ. ಈ ಹಿನ್ನೆಲೆಯಲ್ಲಿ ಪ್ರಸ್ತುತ ವಿಷಯದ ಕುರಿತ ಅಧ್ಯಯನವು ಅತ್ಯಗತ್ಯವಾಗಿದ್ದು, ವಸಾಹತು ನೀತಿಯ ಪ್ರಭಾವ ಮತ್ತು ಪರಿಣಾಮಗಳನ್ನು ತೆರೆದಿಡುತ್ತದೆ.

ಬೆಂಗಳೂರಿನ ನಗರೀಕರಣದ ಪ್ರಕ್ರಿಯೆಯಲ್ಲಿ ಸ್ಥಳೀಯ ವರ್ತಕರಲ್ಲದೆ, ಬೇರೆ ರಾಜ್ಯಗಳಿಂದ ವಲಸೆ ಬಂದ ವರ್ತಕರು ವ್ಯಾಪಾರ–ವಾಣಿಜ್ಯದಲ್ಲಿ ಪ್ರಮುಖವಾಗಿ ಕಂಡುಬರುತ್ತಾರೆ. ಉದಾಹರಣೆಗೆ, ಗುಜರಾತಿ ಹಾಗೂ ರಾಜಸ್ಥಾನಿ ಮುಂತಾದ ಅನೇಕ ಪ್ರಮುಖ ವರ್ತಕ ಸಮುದಾಯಗಳನ್ನು ಗುರುತಿಸಬಹುದು. ಇಂತಹ ವರ್ತಕ ಸಮುದಾಯಗಳು ವಲಸೆ ಬಂದ ಚಾರಿತ್ರಿಕ ಹಿನ್ನೆಲೆ, ಸಂದರ್ಭ ಹಾಗೂ ಕಾರಣಗಳನ್ನು ಈ ಅಧ್ಯಯದಲ್ಲಿ ಚರ್ಚಿಸುವ ಪ್ರಯತ್ನ ಮಾಡಲಾಗಿದೆ. ಹೊರಗಿನಿಂದ ಬಂದ ವರ್ತಕ ಮತ್ತು ಸ್ಥಳೀಯ ವರ್ತಕ ಸಮುದಾಯಗಳ ಮುಖಾಮುಖಿಯ ಫಲವಾಗಿ ಹಲವು ಸ್ವರೂಪದ ಸಂಘ–ಸಂಸ್ಥೆಗಳು ಉಗಮವಾಗಿ, ನಗರದ ವ್ಯಾಪ್ತಿಯು ವಿಸ್ತರಣೆಗೊಳ್ಳುತ್ತದೆ. ಈ ಸಂದರ್ಭದ ನಗರೀಕರಣದ ಪ್ರಕ್ರಿಯೆ, ವರ್ತಕ ಸಮುದಾಯಗಳು ಪ್ರಭುತ್ವದೊಂದಿಗೆ ಹೊಂದಿದ್ದ ಸಂಬಂಧಗಳು ಹಾಗೂ ನಗರಾಭಿವೃದ್ಧಿಗೆ ಇವುಗಳು ನೀಡಿದ ಕೊಡುಗೆಗಳನ್ನು ಚರ್ಚಿಸಿ ವಿಶ್ಲೇಷಿಸಲಾಗಿದೆ. ಜೊತೆಗೆ ಅದರ ಪರಿಣಾಮಗಳನ್ನು ಚರ್ಚಿಸುವುದು ಸಹ ಈ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

## ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಪ್ರಬಂಧವು ಕಾಲದ ಮತ್ತು ಪ್ರದೇಶದ ಚೌಕಟ್ಟಿಗೆ ಒಳಪಟ್ಟಿದೆ. (ಪ್ರಸ್ತುತ ಮಹಾ ಪ್ರಬಂಧವನ್ನು ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿ ಕಾಲವೆಂದು ಪರಿಗಣಿಸಲ್ಪಡುವ ಕ್ರಿ.ಶ ೧೭೯೯ ರಿಂದ ೧೯೪೭ರವರೆಗೆ ಸೀಮಿತಗೊಳಿಸಲಾಗಿದೆ) ದಕ್ಷಿಣ ಭಾರತದ ಬಹುಭಾಗವು ಟಿಪ್ಪುವಿನ ಮರಣದ ನಂತರ ನೇರವಾಗಿ ವಸಾಹತುಶಾಹಿಯೊಂದಿಗೆ ಮುಖಾಮುಖಿಯಾಯಿತು. ಹಾಗಾಗಿ ೧೭೯೯ ದಕ್ಷಿಣ ಭಾರತದಲ್ಲಿ ವಸಾಹತುಶಾಹಿ ಆರಂಭವಾದ ಪ್ರಮುಖ ಘಟ್ಟವಾಗಿ ಪರಿಗಣಿಸುವುದು ಜನಪ್ರಿಯವಾಗಿ ಕಂಡುಬರುವ ವಾಡಿಕೆ ಆಗಿದೆ. ೧೭೯೯ರ ಯುದ್ಧದಲ್ಲಿ ಟಿಪ್ಪು ಸಾವಿನ ನಂತರ ದಕ್ಷಿಣ ಭಾರತದ ಬಹುಭಾಗ ನೇರವಾಗಿ ಅಥವಾ ಪರೋಕ್ಷವಾಗಿ ಬ್ರಿಟಿಶ್ ಈಸ್ಟ್ ಇಂಡಿಯ

ಕಂಪನಿಯ ಆಡಳಿತಕ್ಕೆ ಒಳಪಟ್ಟಿತು. ಈ ಸಂದರ್ಭದಲ್ಲಿ ಗೆದ್ದ ಪ್ರದೇಶದ ಆರ್ಥಿಕ ಮತ್ತು ಸಾಮಾಜಿಕ ವಿವರಗಳನ್ನು ಒಳಗೊಳ್ಳುವುದು ವಿದೇಶಿ ಪ್ರಭುವಾಗಿದ್ದ ಕಂಪನಿಗೆ ಅನಿವಾರ್ಯವಾಗಿತ್ತು. ಇದರ ಪರಿಣಾಮವಾಗಿ ಗೆದ್ದ ಪ್ರದೇಶಗಳ ಆರ್ಥಿಕ, ಸಾಮಾಜಿಕ ಅಂಶಗಳ ಬಗೆಗಿನ ಮಾಹಿತಿ ಸಂಗ್ರಹಣೆಗಾಗಿ ಸಮಿತಿಗಳನ್ನು ನೇಮಿಸಿತು. ಇಂತಹ ಒಂದು ಸಮಿತಿಯನ್ನು ಮೈಸೂರು ರಾಜ್ಯದ ಕುರಿತು ವರದಿ ನೀಡಲು ಬುಕನಾನ್ ಕೆಳಗೆ ರಚಿಸಿತು. ಈ ವರದಿಯು ಬುಕನಾನ್ ವರದಿಯೆಂದೇ ಪ್ರಸಿದ್ಧವಾಗಿದೆ. ಈ ವರದಿಯನ್ನು ಬುಕನಾನ್ ೧೮೦೭ರಲ್ಲಿ ಸರ್ಕಾರಕ್ಕೆ ಸಲ್ಲಿಸಿದರೂ ಇದು ಮುಖ್ಯವಾಗಿ ಟಿಪ್ಪು ಕಾಲದ ಆರ್ಥಿಕ ಆಯಕಟ್ಟಿನ ಪ್ರದೇಶಗಳು, ಕೇಂದ್ರಗಳು, ಸ್ಥಳೀಯರ ಉತ್ಪಾದನಾ ಕೌಶಲ್ಯ ಅವರ ಸಂಸ್ಕೃತಿ ಕುರಿತಂತೆ ಮಾಹಿತಿ ನೀಡುವುದು. ಈ ವರದಿಯ ಮೂರು ಸಂಪುಟಗಳು ಮೂರು ಮುಖ್ಯವಾದ ವ್ಯಾಪಾರಿ ರಸ್ತೆಗಳಾಗಿವೆ ಎಂಬುದು ಗಮನಾರ್ಹ. ಈ ಮಾರ್ಗಗಳಲ್ಲಿ ಅನೇಕ ಹಳೆಯ ಮತ್ತು ಅಂದಿನ ಪಟ್ಟಣಗಳು, ನಗರಗಳು, ಗಣಿಗಳು, ಉತ್ಪಾದನಾ ಕೇಂದ್ರಗಳ ಕುರಿತ ವಿವರವಾದ ವಿವರಣೆ ಇದೆ. ಈ ವರದಿಯಲ್ಲಿ ಶ್ರೀರಂಗಪಟ್ಟಣ ಮತ್ತು ಬೆಂಗಳೂರಿನ ಕುರಿತು ಪ್ರತ್ಯೇಕ ಅಧ್ಯಾಯಗಳಿವೆ ಎಂಬುದು ವಿಶೇಷವಾಗಿದೆ. ಶ್ರೀರಂಗಪಟ್ಟಣ ಟಿಪ್ಪುವಿನ ರಾಜಧಾನಿಯಾಗಿದ್ದರಿಂದ ಈ ಸ್ಥಾನ ಗಳಿಸುವುದು ಸಹಜವಾಗಿತ್ತು. ಬೆಂಗಳೂರಿಗೆ ಅದೇ ಸ್ಥಾನ ದೊರೆತಿರುವುದು ಟಿಪ್ಪುವಿನ ಕಾಲದಲ್ಲಿಯೇ ಬೆಂಗಳೂರು ಪ್ರವರ್ಧಮಾನಕ್ಕೆ ಬರುತ್ತಿದ್ದ ಮತ್ತು ರಾಜಧಾನಿಯ ನಂತರದಲ್ಲಿ ಅತ್ಯಂತ ಪ್ರಮುಖ ನಗರವಾಗಿತ್ತು ಎಂಬುದನ್ನು ಸೂಚಿಸುತ್ತದೆ.

ಸಾಮಾನ್ಯವಾಗಿ ಬೆಂಗಳೂರು ನಗರೀಕರಣ ಪ್ರಕ್ರಿಯೆಯನ್ನು ಬ್ರಿಟಿಶ್ ಈಸ್ಟ್ ಇಂಡಿಯ ಕಂಪನಿಯ ಆಡಳಿತದ ಆರಂಭದ ನಂತರದಲ್ಲಿ ಮುಖ್ಯವಾಗಿ ಗುರುತಿಸಲಾಗುತ್ತದೆ. ಯಾವುದೇ ಪ್ರದೇಶವು ಕೇವಲ ೬–೮ ವರ್ಷಗಳಲ್ಲಿ ದೊಡ್ಡ ನಗರವಾಗಿ ಬದಲಾಗುವುದು ಸಾಧ್ಯವಿಲ್ಲ. ಅಂದರೆ, ಟಿಪ್ಪುವಿನ ಕಾಲದಲ್ಲೇ ಬೆಂಗಳೂರು ಪ್ರಮುಖ ನಗರವಾಗಿ ಬೆಳವಣಿಗೆಯನ್ನು ಕಂಡಿತ್ತು. ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿಯ ಕಾಲದಲ್ಲಿಯೂ ಈ ನಗರದ ಬೆಳವಣಿಗೆ ವಿವಿಧ ಸ್ವರೂಪಗಳಲ್ಲಿ ಮುಂದುವರೆಯಿತು. ಈ ದಿಸೆಯಲ್ಲಿ ಹಲವಾರು ಕಾರಣಗಳನ್ನು ಗುರುತಿಸಬಹುದು. ರಾಜಕೀಯ, ಸೈನಿಕ, ಆರ್ಥಿಕ, ಭೌಗೋಳಿಕ ಆಯಕಟ್ಟು ಇತ್ಯಾದಿ. ಈ ಅಧ್ಯಯನದಲ್ಲಿ ಆರ್ಥಿಕತೆಯ ನೆಲೆಯಲ್ಲಿ ವ್ಯಾಪಾರ ವಾಣಿಜ್ಯ ನಗರದ ಬೆಳವಣಿಗೆಗೆ ಕೊಟ್ಟ ಕೊಡುಗೆಗಳನ್ನು ೧೯೪೭ರವರೆಗೆ ವಿವಿಧ ಹಂತಗಳಲ್ಲಿ ಅಧ್ಯಯನ ಮಾಡಲಾಗಿದೆ. ವಸಾಹತುಶಾಹಿ, ಸಾಮ್ರಾಜ್ಯಶಾಹಿ ಮತ್ತು ಇವುಗಳೊಡನೆ ಸಂಬಂಧ ಹೊಂದಿರುವ ಮುಕ್ತವ್ಯಾಪಾರ ನೀತಿಗಳೆಲ್ಲವೂ ಜಾಗತಿಕ ಆಯಾಮಗಳನ್ನು ಹೊಂದಿರುವಂತದ್ದು. ಬೆಂಗಳೂರಿನಲ್ಲಿ ಕಂಡುಬರುವ ಪ್ರಕ್ರಿಯೆಯನ್ನು ಅಧ್ಯಯನ ಮಾಡುವಾಗ ಈ ಜಾಗತಿಕ ಆಯಾಮಗಳನ್ನು, ಅವುಗಳಿಂದ ಆದ ಬದಲಾವಣೆಗಳನ್ನು ಗಮನಿಸುವುದು ಅಗತ್ಯ. ಇದರೊಂದಿಗೆ

ಈ ವಿಚಾರಗಳಿಗೆ ಆ ಸಂದರ್ಭದಲ್ಲಿ ಬ್ರಿಟಿಶ್ ಆಡಳಿತಕ್ಕೆ ಒಳಪಟ್ಟ ಭಾರತದ ಇತರ ಪ್ರದೇಶಗಳ ಪ್ರತಿಕ್ರಿಯೆ ಮತ್ತು ಕಂಡುಬಂದ ಬೆಳವಣಿಗೆಗಳನ್ನು ತುಲನಾತ್ಮಕವಾಗಿ ನೋಡುವ ಪ್ರಯತ್ನ ಮಾಡಲಾಗಿದೆ. ಮುಖ್ಯವಾಗಿ ಈ ಸಂಪ್ರಬಂಧವು ಬೆಂಗಳೂರು ಪ್ರದೇಶದಲ್ಲಿ ನೆಲೆಸಿರುವ ವರ್ತಕ ಸಮುದಾಯಗಳ ಅಧ್ಯಯನವಾಗಿದ್ದು, ಇಂದಿನ ಬೆಂಗಳೂರು ನಗರ ವ್ಯಾಪ್ತಿಗೆ ಸೀಮಿತಗೊಳಿಸುವುದು ಭೌಗೊಳಿಕ ವ್ಯಾಪ್ತಿಯಾಗಿದೆ. ಆದರೆ ಗಮನಿಸಬೇಕಾದ ಮತ್ತೊಂದು ಪ್ರಮುಖ ಅಂಶವೆಂದರೆ ಯಾವ ಕಾಲದಲ್ಲಿಯೂ ವರ್ತಕ ಸಮುದಾಯ ಒಂದು ಭೌಗೊಳಿಕ ಚೌಕಟ್ಟಿನ ಒಳಗೆ ಸೀಮಿತಗೊಳ್ಳುವುದಿಲ್ಲ. ಆದರೆ ಭೌಗೋಳಿಕ ಪ್ರದೇಶವು ನಗರವಾಗಲೂ ವರ್ತಕ ಸಮುದಾಯಗಳು ಪ್ರಮುಖ ಪಾತ್ರವಹಿಸುತ್ತದೆ.

## ಅಧ್ಯಯನದ ವಿಧಾನ

ಯಾವುದೇ ಸಂಶೋಧನೆಯನ್ನು ಕೈಗೊಳ್ಳುವಾಗ ಅದರ ಅಧ್ಯಯನದ ವಿಧಾನವು ಸಂಶೋಧನೆಯ ಸ್ವರೂಪವನ್ನು ನಿರ್ಧರಿಸುವಲ್ಲಿ ಪ್ರಮುಖವಾಗುತ್ತದೆ. ಈ ನಿಟ್ಟಿನಲ್ಲಿ ಚರಿತ್ರೆಯ ಗ್ರಹಿಕೆಗಳನ್ನು ಗಮನಿಸುವುದು ಮುಖ್ಯವಾಗಿದೆ. ಇಂದು ಚರಿತ್ರೆಯನ್ನು ರಾಜಕೀಯ ದೃಷ್ಟಿಯಿಂದ ನೋಡುವ ಪರಿಪಾಠವನ್ನು ಬಿಟ್ಟು ಸಾಮಾಜಿಕ, ಆರ್ಥಿಕ ಸ್ಥಿತಿ–ಗತಿಗಳ ಅಧ್ಯಯನವು ಪ್ರಾಮುಖ್ಯತೆ ಗಳಿಸಿದೆ. ಸಾಮಾಜಿಕ–ಆರ್ಥಿಕ ಚರಿತ್ರೆಯ ಅಧ್ಯಯನ ಕ್ರಮಗಳಲ್ಲಿ ನಗರ ಚರಿತ್ರೆಯು ಒಂದು ಬಗೆಯಾಗಿದೆ. ನಗರಗಳು ಅಸ್ತಿತ್ವಕ್ಕೆ ಬಂದ ಬಗೆ, ಅವುಗಳ ಬೆಳವಣಿಗೆ, ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆ, ನಗರ ಪ್ರದೇಶದಲ್ಲಾದ ಆರ್ಥಿಕ ಮತ್ತು ಸಾಮಾಜಿಕ ಸ್ಥಾನಪಲ್ಲಟಗಳು, ನಗರ ಸಿದ್ಧಾಂತಗಳ ಬಗೆಗೆ ಅನೇಕ ವಿದ್ವಾಂಸರು ಚರ್ಚೆ ನಡೆಸಿದ್ದಾರೆ. ನಗರ ಸಿದ್ಧಾಂತ ಮತ್ತು ನಗರಗಳ ಅಧ್ಯಯನಕ್ಕೆ ಸಂಬಂಧಿಸಿದಂತೆ ಅಧ್ಯಯನ ನಡೆಸಿದವರಲ್ಲಿ ಪ್ರಮುಖರಾದವರು ಗೋರ್ಡನ್ ಚೈಲ್ಡ್, ಮ್ಯಾಕ್ಸ್ ವೇಬರ್, ಬಿ. ಬಿ. ದತ್ತ, ಅಮಿತ್‌ರಾಮ್, ವಿಜಯಕುಮಾರ್ ಟಾಕೂರ್, ಇಂದು ಬಂಗಾ, ಚಂಪಕ ಲಕ್ಷ್ಮಿ, ಪ್ರಸನ್ನ ಪಾರ್ಥಸಾರಥಿ, ಸಂಜಯ ಸುಬ್ರಹ್ಮಣ್ಯಂ, ಕೆ.ಮೋಹನ್‌ಕೃಷ್ಣ ರೈ ಮೊದಲಾದ ವಿದ್ವಾಂಸರು ಪ್ರಮುಖರಾಗಿ ಕಂಡುಬರುವರು. ಇವರೆಲ್ಲರ ಚಿಂತನೆಗಳು ನಗರ ಚರಿತ್ರೆಯ ಅಧ್ಯಯನದಲ್ಲಿ ನಗರದಲ್ಲಿನ ವರ್ತಕ ಸಮುದಾಯ ಮತ್ತು ವರ್ತಕ ಸಂಘಗಳ ಅಧ್ಯಯನಗಳ ಮೂಲಕ ಸಮಾಜದ ಸಾಮಾಜಿಕ, ಆರ್ಥಿಕ ಸ್ಥಿತಿ–ಗತಿಗಳನ್ನು ಅರ್ಥೈಸಿಕೊಳ್ಳುವ ಬಗೆಯ ಮೇಲೆ ಒತ್ತನ್ನು ನೀಡಿರುವರು. ಕಾಲಾಂತರದಲ್ಲಿ ಚರಿತ್ರೆಯನ್ನು ಕಟ್ಟುವ ಮತ್ತು ನೋಡುವಲ್ಲಿ ಬದಲಾದ ವೈಧಾನಿಕತೆ, ಸೈದ್ಧಾಂತಿಕತೆಯನ್ನು ಈ ಮಹಾಪ್ರಬಂಧದಲ್ಲಿ ಬಳಸಿಕೊಳ್ಳಲಾಗಿದೆ.

ಸಮಾಜವು ಚಲನಶೀಲವಾಗಿದ್ದು ಪ್ರತಿ ಘಟನೆಯ ಹಿಂದೆ ಅದಕ್ಕೆ ಪೂರಕವಾಗಿ ಹಲವು ಅಂಶಗಳ ಪ್ರೇರಣೆ ಇರುವುದನ್ನು ಗುರುತಿಸಬಹುದು. ಈ ಘಟನೆಗಳು ಬಿಡಿಬಿಡಿಯಾಗಿ ಕಂಡುಬಂದರೂ

ಒಂದಕ್ಕೊಂದು ಸಂಬಂಧವನ್ನು ಹೊಂದಿರುತ್ತದೆ. ಯಾವುದೇ ಪ್ರಬಲವಾದ ಪ್ರಭುತ್ವದ ಉಗಮ, ಬೆಳವಣಿಗೆ ಮತ್ತು ಅವನತಿಗೆ ವರ್ತಕ ಸಮುದಾಯಗಳು ಬಹುಮುಖದಲ್ಲಿ ಪಾತ್ರವಹಿಸಿರುತ್ತದೆ. ಆದರೆ ರಾಜಕೀಯ ಚರಿತ್ರೆಯಲ್ಲಿ ವರ್ತಕರು, ವರ್ತಕ ಸಮುದಾಯಗಳ ಪಾತ್ರ ನಿರ್ಲಕ್ಷ್ಯಕ್ಕೆ ಒಳಗಾಗಿದೆ. ಇಲ್ಲಿ ನಿರ್ಲಕ್ಷ್ಯಕ್ಕೆ ಒಳಗಾದ ವರ್ತಕ ಸಮುದಾಯಗಳ ಸಾಮಾಜಿಕ ಮತ್ತು ಆರ್ಥಿಕ ಜೀವನವನ್ನು ಜನಮುಖಿ ನೆಲೆಯಲ್ಲಿ ಚರ್ಚಿಸುವ ಪ್ರಯತ್ನವನ್ನು ಮಾಡಲಾಗಿದೆ. ಈ ಮೂಲಕ ವಸಾಹತು ಶಾಹಿ, ಅದರ ಹಿಂದೆಯೇ ರೂಪುಗೊಂಡ ಸಾಮ್ರಾಜ್ಯಶಾಹಿಯ ವಿವಿಧ ಮಗ್ಗುಲುಗಳನ್ನು ಬೆಂಗಳೂರು ಪ್ರದೇಶದ ಚೌಕಟ್ಟಿನಲ್ಲಿ ಚರ್ಚಿಸಲಾಗಿದೆ. ಹಾಗೆ ಬೆಂಗಳೂರಿನ ವರ್ತಕ ಸಮುದಾಯಗಳ ಚರಿತ್ರೆಯನ್ನು ಆರ್ಥಿಕ ಚರಿತ್ರೆಯಾಗಿ ಮತ್ತು ನಗರ ಚರಿತ್ರೆಯಾಗಿ ಅಧ್ಯಯನ ಮಾಡಲಾಗಿದೆ.

ಬೆಂಗಳೂರಿನ ವರ್ತಕ ಸಮುದಾಯಗಳನ್ನು ಬಹುಮುಖಿ ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಅಂದರೆ ಆ ಸಂದರ್ಭದ ಮಧ್ಯವರ್ತಿಗಳು, ಬ್ಯಾಂಕಿಂಗ್, ಉತ್ಪನ್ನ, ಕೈಗಾರಿಕೆ, ಕೃಷಿ ಹೀಗೆ ವಿವಿಧ ಆಯಾಮಗಳನ್ನು ಜನಕೇಂದ್ರಿತವಾದ ಸಮಾಜಮುಖಿ ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ವರ್ತಕ ಸಮುದಾಯಗಳ ಸಂಘ–ಸಂಸ್ಥೆಗಳ ರಚನೆ, ಸಂಘಗಳ ಪಾತ್ರ, ಬಹುಮುಖಿ ಸೇವಾ ಚಟುವಟಿಕೆಗಳ ಕುರಿತು ಚರ್ಚಿಸಲಾಗಿದೆ. ಈ ದಿಶೆಯಲ್ಲಿ ಕ್ಷೇತ್ರಕಾರ್ಯಗಳ ಮಾಹಿತಿಯನ್ನು ಹೇರಳವಾಗಿ ಬಳಸಿಕೊಳ್ಳಲಾಗಿದೆ. ಚರಿತ್ರೆ ರಚನೆಗೆ ನೆರವಾಗುವ ಪ್ರಾಥಮಿಕ ಹಾಗೂ ಆನುಷಂಗಿಕ ವರದಿಗಳನ್ನು, ಅಧ್ಯಯನಗಳನ್ನು ಪರಿಶೀಲಿಸಿ, ಆಕರಗಳನ್ನು ಸಂದರ್ಭಾನುಸಾರ ಬಳಸಿಕೊಂಡು ಪ್ರಸ್ತುತ ಅಧ್ಯಯನವನ್ನು ಕಟ್ಟುವ ಪ್ರಯತ್ನ ಮಾಡಲಾಗಿದೆ.

## ಅಧ್ಯಯನಗಳ ಸಮೀಕ್ಷೆ

ವಸಾಹತು ಕಾಲದ ಬೆಂಗಳೂರು ಪ್ರದೇಶದ ಮತ್ತು ಅದರ ಬೆಳವಣಿಗೆಯ ಬಗೆಗೆ ಸಾಕಷ್ಟು ಅಧ್ಯಯನಗಳು ನಡೆದಿವೆ. ಆ ಅಧ್ಯಯನಗಳ ಸಮೀಕ್ಷೆಯು ಯಾವುದೇ ಒಂದು ಅಧ್ಯಯನದಲ್ಲಿ ಪ್ರಮುಖವಾಗಿರುತ್ತದೆ. ಈ ಕೆಳಗೆ ಅಂತಹ ಪ್ರಮುಖ ಅಧ್ಯಯನಗಳ ಕುರಿತು ಚರ್ಚಿಸಲು ಪ್ರಯತ್ನಿಸಲಾಗಿದೆ. ಈ ಅಧ್ಯಯನಗಳೇ ವಿವಿಧ ಬಗೆಯ ಆಕರಗಳು ಸಹ ಆಗಿವೆ ಎಂಬುದು ಗಮನಾರ್ಹ. ಈ ಆಕರಗಳಲ್ಲಿ ಸರ್ಕಾರದ ದಾಖಲೆಗಳು ಮತ್ತು ವಿವಿಧ ಬಗೆಯ ಅಧ್ಯಯಗಳನ್ನು ಕಾಣಬಹುದು. ಪ್ರಸ್ತುತ ಅಧ್ಯಯನಕ್ಕೆ ಅಂದಿನ ಜನಗಣತಿಯ ವರದಿಗಳು, ಮೈಸೂರು ರಾಜ್ಯದ ಆಡಳಿತ ವರದಿಗಳು ಮತ್ತು ದಾಖಲೆಗಳು ಪ್ರಮುಖವಾದ ಪ್ರಾಥಮಿಕ ಆಕರಗಳಾಗಿವೆ. ಇದರೊಂದಿಗೆ ಬೆಂಗಳೂರು ಪ್ರದೇಶದ ಕುರಿತ ವಿವಿಧ ಬಗೆಯ ಅಧ್ಯಯನಗಳಲ್ಲಿ ಪಿಎಚ್.ಡಿ ಮಹಾಪ್ರಬಂಧಗಳು, ಕೃತಿಗಳು, ಸ್ಮರಣ ಸಂಚಿಕೆಗಳು, ಪತ್ರಿಕಾ ವರದಿಗಳು, ಲೇಖನಗಳು ಮತ್ತು ಅಂತರ್‌ಜಾಲಗಳಲ್ಲಿರುವ ದಾಖಲೆಗಳು ಮುಖ್ಯವಾದ ಆಕರಗಳೇ ಆಗಿವೆ. ಇವುಗಳನ್ನು ಪ್ರಸ್ತುತ ಸಂಶೋಧನೆಗೆ ಬಳಸಿಕೊಳ್ಳಲಾಗಿದೆ.

ಅಂತೆಯೇ, ಕ್ಷೇತ್ರ ಕಾರ್ಯವನ್ನು ಪ್ರಶ್ನಾವಳಿ ಮತ್ತು ಸಂದರ್ಶನದ ಮುಖಾಂತರ ಮಾಡಲಾಗಿದೆ. ಕ್ಷೇತ್ರ ಕಾರ್ಯದ ಮೂಲಕ ಸಂಗ್ರಹಿಸಲಾದ ಮಾಹಿತಿಯನ್ನು ಈ ನಿಬಂಧದ ರಚನೆಯಲ್ಲಿ ಬಳಸಲಾಗಿದೆ. ಹೀಗೆ, ಲಭ್ಯವಿರುವ ಎಲ್ಲ ಬಗೆಯ ದಾಖಲೆಗಳ ಬಳಕೆ ಮಾಡಲಾಗಿದ್ದು, ಮಹಾಪ್ರಬಂಧವನ್ನು ವಸ್ತುನಿಷ್ಠವಾಗಿ ರೂಪಿಸಲಾಗಿದೆ.

ದಕ್ಷಿಣ ಭಾರತದ ವರ್ತಕರು, ವ್ಯಾಪಾರ ಮತ್ತು ವರ್ತಕ ಸಂಘ ಸಂಸ್ಥೆಗಳ ಬಗೆಗೆ ಅಧ್ಯಯನಗಳು ಹೆಚ್ಚಾಗಿ ಕಂಡುಬರುವುದಿಲ್ಲ. ಈ ನಿಟ್ಟಿನಲ್ಲಿ ಕಂಡುಬರುವ ಅಧ್ಯಯನಗಳಲ್ಲಿ ಪ್ರಮುಖವಾಗಿ ಎ. ಅಪ್ಪಾದೊರೈ ಅವರ 'ಎಕನಾಮಿಕ್ ಕಂಡೀಶನ್ಸ್ ಇನ್ ಸೌತ್ ಇಂಡಿಯ', ಕೆ. ಆರ್. ವೆಂಕಟರಾಮನಾಯ್ಯರವರ 'ಮಿಡೀವಲ್ ಟ್ರೇಡ್ ಕ್ರಾಫ್ಟ್ ಆಂಡ್ ಮರ್ಚೆಂಟ್ ಗಿಲ್ಡ್ಸ್ ಇನ್ ಸೌತ್ ಇಂಡಿಯ', ಕ್ಯೆನ್ನೆತ್ ಹಾಲ್‌ರವರ 'ಟ್ರೇಡ್ ಆಂಡ್ ಸ್ಟೇಟ್ ಕ್ರಾಫ್ಟ್ ಇನ್ ದಿ ಏಜ್ ಆಫ್ ದಿ ಚೋಳಾಸ್' ಮುಖ್ಯವಾಗಿವೆ. ಈ ಅಧ್ಯಯನಗಳು ದಕ್ಷಿಣ ಭಾರತದ ಹೆಸರಿನಲ್ಲಿ ಕಂಡುಬಂದರೂ ಕರ್ನಾಟಕವನ್ನು ಹೆಚ್ಚು ಕೇಂದ್ರೀಕರಿಸಿಲ್ಲ. ಕರ್ನಾಟಕಕ್ಕೆ ಸಂಬಂಧಿಸಿದಂತೆ ವರ್ತಕ ಸಮುದಾಯಗಳ ಕುರಿತು ಅಧ್ಯಯನಗಳು ಅಲ್ಪ ಪ್ರಮಾಣದಲ್ಲಿ ನಡೆದಿದೆ. ಈ ನಿಟ್ಟಿನಲ್ಲಿ ಆರ್. ಬಿ. ಹೀರೆಮಠರವರ 'ಶಾಸನಗಳಲ್ಲಿ ಕರ್ನಾಟಕದ ವರ್ತಕರು', ಎಂ. ಚಿದಾನಂದಮೂರ್ತಿಯವರ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ', ಶಿವಣ್ಣರವರ 'ಎಕನಾಮಿಕ್ ಕಂಡಿಶನ್ಸ್ ಡ್ಯೂರಿಂಗ್ ದಿ ವಿಜಯನಗರ ಟೈಮ್' ಮತ್ತು ಜಿ. ಎಸ್. ದಿಕ್ಷೀತ್‌ರವರ 'ಲೋಕಲ್ ಸೆಲ್ಫ್ ಗವರ್ನ್‌ಮೆಂಟ್ ಇನ್ ಮೆಡೀವಲ್ ಕರ್ನಾಟಕ' ಮುಂತಾದ ಕೃತಿಗಳು ಮುಖ್ಯವಾಗಿ ಕಂಡುಬರುವುದು. ಈ ಅಧ್ಯಯನಗಳೆಲ್ಲವೂ ವಸಾಹತು ಪೂರ್ವ ಘಟ್ಟವನ್ನೇ ಹೆಚ್ಚು ಕೇಂದ್ರೀಕರಿಸಿವೆ. ವಸಾಹತು ಕಾಲದ ಅಧ್ಯಯನಗಳು ಉತ್ತರ ಭಾರತದ ನಗರ ಪ್ರದೇಶಗಳು, ವರ್ತಕ ಸಮುದಾಯಗಳು ಮತ್ತು ಸಂಘ–ಸಂಸ್ಥೆಗಳ ಬಗೆಗೆ ಹೆಚ್ಚಿನ ಅಧ್ಯಯನಗಳು ನಡೆದಿವೆ. ಈ ನಿಟ್ಟಿನಲ್ಲಿ ಕೆ.ಮೋಹನ್‌ಕೃಷ್ಣ ರೈ ಅವರ ವಸಾಹತುಶಾಹಿ ಮತ್ತು ನಗರೀಕರಣ, ಜನತೆ ಮತ್ತು ಪ್ರಭುತ್ವ, ವಸಾಹತು ಕಾಲಘಟ್ಟದ ಬಗ್ಗೆ ಅಧ್ಯಯನ ನಡೆಸಲಾಗಿದೆ. ಆದರೂ ಸಹ ದಕ್ಷಿಣ ಭಾರತದ ನಗರ ಪ್ರದೇಶಗಳು, ವರ್ತಕ ಸಮುದಾಯಗಳು ಹಾಗೂ ವ್ಯಾಪಾರ–ವಾಣಿಜ್ಯದ ಬಗೆಗೆ ನಡೆದಿರುವ ಅಧ್ಯಯನಗಳು ಅತ್ಯಲ್ಪವಾಗಿವೆ. ಈ ನಿಟ್ಟಿನಲ್ಲಿ ವಸಾಹತು ಕಾಲದ ದಕ್ಷಿಣ ಭಾರತದ ಸಮಗ್ರ ಅಧ್ಯಯನಗಳ ಅವಶ್ಯಕತೆಯಿದೆ.

ದಕ್ಷಿಣ ಭಾರತದ ಅಧ್ಯಯನಗಳನ್ನು ಗಮನಿಸುವುದಾದರೆ ಪ್ರೆಸಿಡೆನ್ಸಿ ಮತ್ತು ಬಂದರು ನಗರಗಳ ಬಗೆಗೆ ಅಧ್ಯಯನಗಳು ಸಾಕಷ್ಟು ಕಂಡುಬರುತ್ತವೆ. ಆದರೆ ಮೈಸೂರು ರಾಜ್ಯಕ್ಕೆ ಒಳಪಟ್ಟ ಪ್ರದೇಶಗಳ ನಗರದ ಬಗೆಗೆ ಅಧ್ಯಯನಗಳು ಅಷ್ಟಾಗಿ ನಡೆದಿಲ್ಲ. ಇಂದು ಕರ್ನಾಟಕವೆಂದು ಕರೆಯುವ ಪ್ರದೇಶಗಳು ಟಿಪ್ಪುವಿನ ಮರಣದ ನಂತರದಲ್ಲಿ ಹರಿದು ಹಂಚಿಹೋಗಿದ್ದವು. ಹಾಗಾಗಿ ನಿರ್ಲಕ್ಷ್ಯಕ್ಕೆ ಒಳಗಾದವು.

ಈ ತೆರನಾದ ಅಧ್ಯಯನದ ಅಲಕ್ಷ್ಯತೆಗೆ ಪ್ರಮುಖ ಕಾರಣ ಟಿಪ್ಪುವಿನ ಕಾಲದಲ್ಲಿದ್ದ ಮೈಸೂರು ರಾಜ್ಯದ ಹಲವು ಭಾಗಗಳು ಮದ್ರಾಸ್ ಪ್ರೆಸ್ಸಿಡೆನ್ಸಿ, ಹೈದರಾಬಾದ್, ಮರಾಠ ರಾಜ್ಯಗಳಿಗೆ ಹಂಚಿಕೆಯಾಗಿದ್ದವು. ಕರ್ನಾಟಕ ರಾಜ್ಯವು ಉದಯಿಸಿದ್ದು ೧೯೫೬ರಲ್ಲಿ ಮತ್ತು ಮರುನಾಮಕರಣ ಗೊಂಡಿದ್ದು ೧೯೭೩ರಲ್ಲಿ. ಅದ್ದರಿಂದಾಗಿ ಕರ್ನಾಟಕಕ್ಕೆ ರಾಜಕೀಯ ಚರಿತ್ರೆಯನ್ನು ಕಟ್ಟುವ ಪರಿಪಾಠವೇ ಇನ್ನೂ ಸಂಪೂರ್ಣವಾಗಿ ನಡೆಯುತ್ತಿಲ್ಲ. ಯಜಮಾನಿಕೆಯನ್ನು ಹೊಂದಿದ್ದ ಕೆಲವು ರಾಜ್ಯ ಮತ್ತು ರಾಜಮನೆತನಗಳನ್ನು ಮಾತ್ರ ಅಧ್ಯಯನಕ್ಕೆ ಒಳಪಡಿಸಲಾಗಿತ್ತು. ಇತ್ತೀಚಿನ ದಿನಗಳಲ್ಲಿ ಕೆಳಸ್ತರದ ಆಳರಸರನ್ನು ಕುರಿತ ಅಧ್ಯಯನಗಳು ನಡೆಯುತ್ತಿವೆ. ಜೊತೆಗೆ ಈ ಪ್ರದೇಶಗಳು ಒಳನಾಡಾಗಿರುವುದು ಸಹ ಕಾರಣವಾಗಿದೆ. ಇದರೊಡನೆ ಈ ನಗರಗಳು ವಸಾಹತು ಕಾಲದಲ್ಲಿ ಎರಡನೆಯ ದರ್ಜೆಯ ಅಂದರೆ ಪ್ರೆಸಿಡೆನ್ಸಿ ನಗರದ ನಂತರದ ಸ್ಥಾನಮಾನವನ್ನು ಹೊಂದಿದ್ದವು. ಇದು ಸಹ ಈ ದಿಸೆಯಲ್ಲಿ ಅಧ್ಯಯನ ಹೆಚ್ಚಾಗಿ ಕಂಡುಬರದಿರಲು ಪ್ರಮುಖ ಕಾರಣಗಳಲ್ಲೊಂದಾಗಿದೆ. ಹಾಗೆ ವಸಾಹತು ಕಾಲದಲ್ಲಿ ಕಂಡುಬರುವ ಪ್ರಮುಖ ನಗರಗಳನ್ನಾಗಿ ಮೈಸೂರು ರಾಜ್ಯದಲ್ಲಿ ಶ್ರೀರಂಗಪಟ್ಟಣ, ಮೈಸೂರು ಮತ್ತು ಬೆಂಗಳೂರು ನಗರ ಪ್ರದೇಶಗಳನ್ನು ಗುರುತಿಸಬಹುದು. ಇವುಗಳಲ್ಲಿ ಶ್ರೀರಂಗಪಟ್ಟಣ ಹಳೆಯ ರಾಜಧಾನಿಯಾಗಿದ್ದು ಪತನದ ಹಾದಿಯಲ್ಲಿದ್ದ ಪ್ರದೇಶವಾಗಿ ಗೋಚರಿಸುವುದು. ಈ ಸಂದರ್ಭದಲ್ಲಿ ರಾಜಧಾನಿಯ ಹಿನ್ನೆಲೆಯಲ್ಲಿ ಅಭಿವೃದ್ಧಿಗೊಂಡ ನಗರಗಳಾಗಿ ಮೈಸೂರು ಮತ್ತು ಬೆಂಗಳೂರು ನಗರ ಪ್ರದೇಶಗಳನ್ನು ಕಾಣಬಹುದು. ಕಮಿಷನರ್‌ಗಳ ಆಳ್ವಿಕೆಯ ಕಾಲದಲ್ಲಿ ಬೆಂಗಳೂರು ಪ್ರದೇಶವು ಕೆಲವು ಕಾಲ ರಾಜಧಾನಿ ಪಟ್ಟವನ್ನು ಅಲಂಕರಿಸಿತ್ತು. ಪ್ರಸ್ತುತ ಜಾಗತಿಕವಾಗಿ ಬೆಂಗಳೂರು ಪ್ರದೇಶ ಪ್ರಮುಖ ಸ್ಥಾನಮಾನ ಪಡೆದ ನಂತರ ಈ ಪ್ರದೇಶದ ಬಗೆಗೆ ಅಧ್ಯಯನಗಳು ನಡೆಯುತ್ತಿವೆಯಾದರೂ ಸಹ ಅವು ರಾಜಕೀಯ ಅಥವಾ ಮೇಲ್ವರ್ಗದ ನಗರ ಚರಿತ್ರೆಯ ಅಧ್ಯಯನಗಳಾಗಿ ಹೆಚ್ಚಾಗಿ ಕಾಣಸಿಗುತ್ತದೆ. ಈ ಅಧ್ಯಯನಗಳು ಕೆಳಹಂತದ ನಗರ ಚರಿತ್ರೆಯ ಕುರಿತ ಅಧ್ಯಯನಗಳಾಗಿಲ್ಲ ಎಂಬುದು ಗಮನಾರ್ಹವಾಗಿದೆ. ಇನ್ನು ಶ್ರೀರಂಗಪಟ್ಟಣ ಮತ್ತು ಮೈಸೂರು ನಗರ ಪ್ರದೇಶದ ಚರಿತ್ರೆಯಂತೂ ಇದಕ್ಕಿಂತಲೂ ಹೆಚ್ಚು ನಿರ್ಲಕ್ಷ್ಯಕ್ಕೆ ಒಳಗಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಕರ್ನಾಟಕ ರಾಜ್ಯದ ಪ್ರಮುಖ ನಗರ ಪ್ರದೇಶಗಳ ಆರ್ಥಿಕ ಚರಿತ್ರೆಯ ಅಧ್ಯಯನಗಳು ತೀರ ನಿರ್ಲಕ್ಷ್ಯತೆಗೆ ಒಳಗಾಗಿದೆ. ಇವುಗಳ ಕುರಿತ ಅಧ್ಯಯನದ ಅವಶ್ಯಕತೆಯಿದೆ.

ಬೆಂಗಳೂರು ಪ್ರದೇಶಕ್ಕೆ ಸಂಬಂಧಿಸಿದಂತೆ ಅನೇಕ ಅಧ್ಯಯನಗಳು ನಡೆದಿದೆ ಮತ್ತು ನಡೆಯುತ್ತಲಿದೆ. ಅದರಲ್ಲಿ ವಸಾಹತು ಕಾಲದಲ್ಲಿ ರಚನೆಗೊಂಡಿದ್ದ ಪ್ರಮುಖ ಕೃತಿಗಳು ಬೆಂಗಳೂರಿನ ನಗರ ಮತ್ತು ವರ್ತಕರು ಮತ್ತು ವ್ಯಾಪಾರದ ಬಗೆಗಿನ ವಿಚಾರಗಳನ್ನು ಅಲ್ಪ ಪ್ರಮಾಣದಲ್ಲಿ ಗಮನಿಸಿದೆ. ಈ ದಿಸೆಯಲ್ಲಿ ಕಂಡುಬರುವ ಪ್ರಮುಖವಾದ ದಾಖಲೆಗಳು ಮತ್ತು ಕೃತಿಗಳನ್ನು ಈ ಕೆಳಗೆ ಚರ್ಚಿಸಲು ಪ್ರಯತ್ನಿಸಿದೆ.

### ಪ್ರಾಥಮಿಕ ಆಕರಗಳು

ಇವುಗಳಲ್ಲಿ ಜನಗಣತಿಯು ಪ್ರಧಾನ ಆಕರವಾಗಿ ಕಂಡುಬರುವುದು. ಇದು ಬೆಂಗಳೂರು ಪ್ರದೇಶದ ವರ್ತಕ ಸಮುದಾಯಗಳು ಹಾಗೂ ಅವರ ಅಂಕಿ-ಸಂಖ್ಯೆಗಳನ್ನು ದಾಖಲಿಸಿದೆ. ಇದು ಪ್ರಮುಖವಾದ ವರ್ತಕ ಸಮುದಾಯಗಳನ್ನು, ಅವರ ಪಾತ್ರವನ್ನು ಗುರುತಿಸಲು ಸಹಾಯಕವಾಗಿದೆ. ಆದರೆ ಎಲ್ಲ ಜನಗಣತಿಗಳಲ್ಲಿಯೂ ಭಿನ್ನತೆಗಳಿರುವುದು ವಿಶೇಷವಾಗಿದೆ. ಅಂದರೆ ಒಂದು ಅವಧಿಯಿಂದ ಮುಂದಿನ ಅವಧಿಯ ಜನಗಣತಿಯಲ್ಲಿ ಹಿಂದೆ ಉಲ್ಲೇಖಿಸಿದ ಹಲವಾರು ವರ್ತಕ ಸಮುದಾಯಗಳು ಕಣ್ಮರೆಗೊಂಡಿರುತ್ತವೆ ಅಥವಾ ಸಮುದಾಯಗಳ ಹೆಸರು ಬದಲಾವಣೆಗೊಂಡಿದೆ ಎಂದು ನಮೂದಾಗಿರುತ್ತದೆ. ಈ ಬದಲಾವಣೆಗಳಿಗೆ ಸ್ಪಷ್ಟ ಮಾಹಿತಿಯ ಕೊರತೆಯು ಕಾಣಸಿಗುತ್ತದೆ. ಉದಾಹರಣೆಗೆ, ಬುಕಾನನ್ ಉಲ್ಲೇಖಿಸಿರುವ ರಂಗಿಗರು, ನೀಲಿಗರು ಮೊದಲಾದ ಸಮುದಾಯಗಳ ಉಲ್ಲೇಖಗಳು ಇವುಗಳಲ್ಲಿ ಸಿಗುವುದಿಲ್ಲ. ಬೆಂಗಳೂರು ಪ್ರದೇಶದ ಪೇಟೆ ಮತ್ತು ದಂಡು ಪ್ರದೇಶದ ಕೆಲವು ಪ್ರಬಲ ವರ್ತಕರು ಮತ್ತು ವರ್ತಕ ಸಂಘಗಳ ಬಗೆಗೆ ಮೈಸೂರು ಲೇಜಿಸ್ಲೇಟಿವ್‌ನಿಂದ ಪ್ರಕಟಗೊಂಡ **ಹು ಈಸ್ ಹೂ** ಎಂಬ ದಾಖಲೆಯು ಪ್ರಮುಖ ಆಕರವಾಗಿದೆ. ಇದು ಮೈಸೂರು ರಾಜ್ಯದಲ್ಲಿದ್ದ ಪ್ರಬಲ ವರ್ತಕ ಸಮುದಾಯಗಳ ಬಗೆಗಿನ ಮಾಹಿತಿಯನ್ನು ವೈಯಕ್ತಿಕವಾಗಿ ಅತ್ಯಲ್ಪ ಪ್ರಮಾಣದಲ್ಲಿ ನೀಡುತ್ತದೆ. ಮುಜರಾಯಿ ಇಲಾಖೆಯ ದಾಖಲೆಗಳು ಬೆಂಗಳೂರು ಪೇಟೆ ಮತ್ತು ಇನ್ನಿತರ ಪ್ರದೇಶದ ವರ್ತಕ ಸಮುದಾಯಗಳು ಧಾರ್ಮಿಕ ಉದ್ದೇಶಗಳಿಗಾಗಿ ನೀಡಿದ ದಾನ-ದತ್ತಿಗಳ ಬಗೆಗೆ ಮಾಹಿತಿಯನ್ನು ನೀಡುತ್ತವೆ. ಮೈಸೂರು ಅರಸರು ಮತ್ತು ದಿವಾನರುಗಳ ಭಾಷಣಗಳ ಕೃತಿಗಳಲ್ಲಿಯೂ ಸ್ವಲ್ಪ ಪ್ರಮಾಣದಲ್ಲಿ ಬೆಂಗಳೂರು ವರ್ತಕ ಸಮುದಾಯಗಳು ಮತ್ತು ಅವರು ಕೊಟ್ಟ ಕೊಡುಗೆಗಳ ಬಗೆಗೆ ಉಲ್ಲೇಖಗಳನ್ನು ನೋಡಬಹುದು. ಜೊತೆಗೆ ಇದು ಮೈಸೂರು ರಾಜ್ಯದ ಪ್ರಭುತ್ವ ಹಾಗೂ ವರ್ತಕ ಸಮುದಾಯಗಳ ನಡುವಿನ ಸಂಬಂಧದ ಸ್ವರೂಪದ ಮೇಲೆ ಬೆಳಕನ್ನು ಚೆಲ್ಲುತ್ತದೆ. ಇನ್ನುಳಿದ ಆಡಳಿತ ವರದಿ, ಇನ್ನಿತರ ದಾಖಲೆ, ಕಡತಗಳಲ್ಲಿ ವರ್ತಕರು ಮತ್ತು ವರ್ತಕ ಸಮುದಾಯಗಳ ಬಗೆಗೆ ಮಾಹಿತಿಗಳು ಸಿಗುವುದು ಅತಿ ವಿರಳವಾಗಿದೆ.

### ಆನುಷಂಗಿಕ ಆಕರಗಳು

ಇವುಗಳಲ್ಲಿ ಪ್ರಮುಖವಾಗಿ, ಬುಕಾನನಿನ "ಎ ಜರ್ನಿ ಫ್ರಮ್ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಕೆನರ ಆಂಡ್ ಮಲಬಾರ್"ನ (೧೮೦೭) ೩ ಸಂಪುಟಗಳು ಮುಖ್ಯವಾಗಿದೆ. ಬುಕನಾನ್ ಆ ಪ್ರದೇಶಗಳನ್ನು ಸಂದರ್ಶಿಸಿದ ಸಂದರ್ಭದಲ್ಲಿ ಸಾಮಾನ್ಯ ಜನರ ಜೀವನದ ಹಲವಾರು ಮಗ್ಗುಲುಗಳಾದ ಉತ್ಪಾದನೆ, ವ್ಯಾಪಾರ, ವೃತ್ತಿ, ನಾಣ್ಯಗಳು, ಆಮದು ಮತ್ತು ರಫ್ತು, ಸ್ಥಳೀಯ ಸಸ್ಯವರ್ಗ ಮತ್ತು ಪ್ರಾಣಿವರ್ಗಗಳ ವಿವರಗಳನ್ನು ದಾಖಲಿಸಿರುವನು. ಜೊತೆಗೆ ಸಮಾಜದ ವಿವಿಧ ವರ್ಗ ಸಮುದಾಯಗಳ

ವಿವರಣೆ ಮತ್ತು ಧಾರ್ಮಿಕ ಅಂಶಗಳನ್ನು ವಿವರಿಸಲಾಗಿದೆ. ಈ ಪ್ರದೇಶಗಳ ಆರ್ಥಿಕ ಸ್ಥಿತಿ ಗತಿಗಳು, ನೈಸರ್ಗಿಕ ಸಂಪನ್ಮೂಲಗಳ ಬಗೆಗೆ ಮಾಹಿತಿ ದಾಖಲಾತಿ ಮುಖ್ಯ ಉದ್ದೇಶವಾಗಿದೆ. ಬೆಂಗಳೂರು ನಗರೀಕರಣ ಮತ್ತು ವರ್ತಕ ಸಮುದಾಯದ ಕುರಿತ ಮತ್ತೊಂದು ಪ್ರಮುಖ ಕೃತಿ ಮಾರ್ಕ್ಸ್ ವಿಲ್ಕ್ಸ್‌ರವರ "ಹಿಸ್ಟೋರಿಕಲ್ ಸ್ಕೆಚ್ಸ್ ಆಫ್ ದಿ ಸೌತ್ ಆಫ್ ಇಂಡಿಯ ಇನ್ ಆನ್ ಅಟೆಮ್ಪ್ಟ್ ಟು ಟ್ರೇಸ್ ದಿ ಹಿಸ್ಟರಿ ಆಫ್ ಮೈಸೂರು"(೧೮೧೦) ಆಗಿದೆ. ಈ ಗ್ರಂಥವು ೧೮೦೦ರವರೆಗಿನ ಬೆಂಗಳೂರು ಪ್ರದೇಶದ ಬಗೆಗೆ ಹಲವು ಒಳನೋಟಗಳನ್ನು ಮುಂದಿಡುವುದು. ಹಾಗೆ ಎಲ್. ಬಿ, ಬೌರಿಂಗರವರ "ಈಸ್ಟ್ರನ್ ಎಕ್ಸ್‌ಪೀರಿಯನ್ಸ್" ಒಂದು ಪ್ರವಾಸಿ ಕಥನವಾಗಿದೆ. ಇದು ಅಂದಿನ ಬೆಂಗಳೂರಿನ ಪರಿಸರ, ಸ್ವಲ್ಪ ಮಟ್ಟಿಗೆ ಬೆಂಗಳೂರು ದಂಡು ಮತ್ತು ಬೆಂಗಳೂರು ಪೇಟೆಯ ಜನರ ಸಾಮಾಜಿಕ ಸ್ಥಿತಿಗತಿಯ ಮೇಲೆ ಬೆಳಕು ಚೆಲ್ಲುವುದು. ಇದರೊಡನೆ ಬಿ. ಎಲ್. ರೈಸ್‌ರವರ ಮೈಸೂರು ಗೆಜೆಟಿಯರಿನ ಎರಡು ಸಂಪುಟಗಳು, ಹಯವದನ ರಾವ್ ಅವರ ಮೈಸೂರು ಗೆಜೆಟಿಯರಿನ ಐದು ಸಂಪುಟಗಳು ಬೆಂಗಳೂರು ಪ್ರದೇಶದ ಭೌಗೋಳಿಕ, ರಾಜಕೀಯ, ಸಾಮಾಜಿಕ, ಆರ್ಥಿಕ ವಿಚಾರಗಳ ಬಗೆಗೆ ಮಾಹಿತಿಯನ್ನು ನೀಡುತ್ತದೆ. ವಸಾಹತು ಕಾಲಘಟ್ಟದಲ್ಲಿ ರಚನೆಗೊಂಡ ಈ ಕೃತಿಗಳು ಪ್ರಭುತ್ವದ ಉದ್ದೇಶ ಮತ್ತು ನೀತಿಗಳಿಗನುಗುಣವಾಗಿಯೇ ರಚನೆಗೊಂಡಿದೆ. ಹಲವಾರು ಮಿತಿಗಳನ್ನು ಒಳಗೊಂಡಿದೆ. ಈ ಮಿತಿಗಳೇ ವಸಾಹತು ನೀತಿಯ ವಿವಿಧ ಸ್ವರೂಪದ ಬಗೆಗೆ ಪರೋಕ್ಷವಾಗಿ ಬೆಳಕು ಚೆಲ್ಲುವುದು. ಜೊತೆಗೆ ವಸಾಹತು ಮತ್ತು ಸಾಮ್ರಾಜ್ಯಶಾಹಿ ಪ್ರಭುತ್ವದ ಒಟ್ಟಾರೆ ಚಿತ್ರಣವನ್ನು ಈ ಕೃತಿಗಳು ನೀಡುವುದಿಲ್ಲ. ಈ ಕೃತಿಯು ಒಂದು ನಿರ್ದಿಷ್ಟ ಅವಧಿಯೊಳಗೆ ರಚನೆಗೊಂಡಿದ್ದು ಅದರ ಸೀಮಿತತೆಗೆ ಒಳಪಟ್ಟಿದೆ.

ಎಂ. ಫಜಲ್ ಹಸನ್‌ರವರ "ಬೆಂಗಳೂರ್ ಥ್ರೂ ದಿ ಸೆಂಚುರಿ" (೧೯೭೦) ಎಂಬ ಕೃತಿಯು ಕೆಂಪೇಗೌಡರಿಂದ ಸ್ಥಾಪಿಸಲ್ಪಟ್ಟ ಬೆಂಗಳೂರಿನಿಂದ ಹಿಡಿದು ಚಿಕ್ಕದೇವರಾಜ ಒಡೆಯರ್, ಹೈದರಾಲಿ ಕಾಲದ ರಾಜಕೀಯ ಬೆಳವಣಿಗೆಗಳನ್ನು ಮತ್ತು ಬೆಂಗಳೂರು ಪ್ರದೇಶದಲ್ಲಾದ ನಿರ್ಣಾಯಕ ಕದನಗಳ ಬಗೆಗೆ ವಿವರಿಸುತ್ತದೆ. ಅದಷ್ಟೇ ಅಲ್ಲದೆ, ಬೆಂಗಳೂರು ದಂಡು ಪ್ರದೇಶದ ಸ್ಥಾಪನೆ ಮತ್ತು ಪುನರ್ ದಾನದೊಂದಿಗೆ ಬೆಂಗಳೂರು ಪ್ರದೇಶದ ವಿವಿಧ ಕ್ಷೇತ್ರದ ಬೆಳವಣಿಗೆಗಳನ್ನು ವಿಶ್ಲೇಷಣೆಯನ್ನು ಮಾಡಲಾಗಿದೆ. ಟಿ. ಪಿ. ಐಸಾಕ್ ರವರ "ದಿ ಸಿಟಿ ಬ್ಯೂಟಿಫುಲ್" (೧೯೮೮) ಕೃತಿಯು ಬೆಂಗಳೂರು ಪ್ರದೇಶದ ವಾಸ್ತುಶಿಲ್ಪ ಕಟ್ಟಡಗಳ ವಿವರಣೆಯನ್ನು ನೀಡುವುದು. ಈ ಕೃತಿಯಲ್ಲಿ ಚರ್ಚ್, ಹಿಂದೂ ಧಾರ್ಮಿಕ ಕಟ್ಟಡ, ಸಾರ್ವಜನಿಕ ಕಟ್ಟಡ, ಖಾಸಗಿ ಕಟ್ಟಡಗಳು, ಮಾರುಕಟ್ಟೆಗಳನ್ನು ಚಿತ್ರಿಸಲಾಗಿದೆ. ಈ ಸ್ಮಾರಕಗಳ ಶೈಲಿಯ ಮೂಲಕ ಬೆಂಗಳೂರು ನಗರದ ಸಾಂಸ್ಕೃತಿಕ ಪರಂಪರೆಗಳನ್ನು ಕಟ್ಟಿಕೊಟ್ಟಿದ್ದಾರೆ. ವಿನೋದ್ ವ್ಯಾಸಲು ಮತ್ತು ಅಮೂಲ್ಯ ಕುಮಾರ್ ಅವರ "ಎಸ್ಸೇಸ್ ಆನ್ ಬ್ಯಾಂಗಲೂರ್" ಎಂಬ

೪ ಸಂಪುಟಗಳ ಕೃತಿಯು ಮುಖ್ಯವಾಗಿದೆ. ಈ ಸಂಪುಟಗಳಲ್ಲಿ ಬ್ರಿಟಿಶರ ಕಾಲದಲ್ಲಿ ಬೆಂಗಳೂರು ಪ್ರದೇಶದ ಬೆಳವಣಿಗೆ ಮತ್ತು ನಂತರದಲ್ಲಿ ಕಾಣಿಸಿಕೊಂಡ ಸಮಸ್ಯೆಗಳನ್ನು ಗುರುತಿಸಲಾಗಿದೆ. ಅಲ್ಲದೆ, ಆ ಸಮಸ್ಯೆಗಳನ್ನು ಸಮಸ್ಯೀಕರಿಸಿ ವಿಶ್ಲೇಷಿಸಲಾಗಿದೆ. ಮೊದಲನೆಯ ಸಂಪುಟವು ಕ್ರಿ. ಶ ೧೮೦೦ರಿಂದ ೧೯೦೦ರವರೆಗಿನ ಬೆಂಗಳೂರು ಪ್ರದೇಶದ ವಸಾಹತು ನೀತಿಯ ಆರ್ಥಿಕ ಧೋರಣೆ ಮತ್ತು ಬೆಂಗಳೂರು ಪ್ರದೇಶದ ಕೈಗಾರಿಕೆಗಳ ಬೆಳವಣಿಗೆಗಳನ್ನು ವಿವರಿಸುವುದು. ಸಂಪುಟ ಎರಡರಲ್ಲಿ ಬೆಂಗಳೂರು ಪ್ರದೇಶದ ಭೌಗೋಳಿಕ ಅಂಶಗಳು ಮತ್ತು ಬೆಂಗಳೂರು ಪ್ರದೇಶ ಕಾರ್ಪೊರೇಷನ್ ಬೆಳವಣಿಗೆಯ ಕುರಿತು ಮಾಹಿತಿ ನೀಡುತ್ತದೆ. ಸಂಪುಟ ಮೂರರಲ್ಲಿ ಸಾರಿಗೆ ಸಂಪರ್ಕ ಮತ್ತು ವಿದ್ಯುತೀಕರಣಗೊಂಡ ಬೆಂಗಳೂರಿನ ಸಮಸ್ಯೆಗಳ ಕುರಿತು ಚರ್ಚಿಸಲಾಗಿದೆ. ಸಂಪುಟ ನಾಲ್ಕರಲ್ಲಿ, ಶಿಕ್ಷಣ, ನೀರಿನ ಸೌಲಭ್ಯ, ಆಹಾರೋತ್ಪನ್ನಗಳ ಬೆಳವಣಿಗೆಗಳ ವಿವರಣೆ ನೀಡುತ್ತದೆ.

ಮಾಯ ಜಯಪಾಲ್‌ರವರ "ಬೆಂಗಳೂರ್ ಸಿಟಿ" (೧೯೯೭) ಕೃತಿಯು ಕೆಂಪೇಗೌಡನಿಂದ ಸ್ಥಾಪಿತಗೊಂಡ ಬೆಂಗಳೂರು ನಗರದಿಂದ ಅದು ಕಾಸ್ಮೋಪಾಲಿಟನ್ ನಗರವಾಗಿ ಬೆಳೆದ ವಿವಿಧ ಹಂತಗಳ ನೆಲೆಗಳನ್ನು ವಿಶ್ಲೇಷಿಸುತ್ತದೆ. ಅದಷ್ಟೆ ಅಲ್ಲದೆ, ಬೆಂಗಳೂರು ನಗರಕ್ಕೆ ವಲಸೆ ಬಂದ ಸಮುದಾಯಗಳ ಮೂಲಕ ನಗರ ಜೀವನದ ಮತ್ತು ನಗರದ ಬೆಳವಣಿಗೆಗಳನ್ನು ಪರಿಶೋಧಿಸುತ್ತಾ ಹೇಗೆ ಹೊಸ ರೂಪವನ್ನು ಪಡೆಯಿತು ಎಂಬ ವಿಚಾರಗಳನ್ನು ಸಮರ್ಥವಾಗಿ ವಿಮರ್ಶಿಸಿದೆ. ಜಾನಕಿ ನಾಯರ್‌ರವರ "ದಿ ಪ್ರಾಮಿಸ್ ಆಫ್ ದಿ ಮೆಟ್ರೋಪಾಲಿಟನ್–ಬ್ಯಾಂಗಳೂರ್ಸ್ ಟ್ವೆಂಟಿಯಥ್ ಸೆಂಚುರಿ" (೨೦೦೫) ಎಂಬ ಗ್ರಂಥವು ಬೆಂಗಳೂರು ನಗರ ಹೇಗೆ ಮೆಟ್ರೋಪಾಲಿಟನ್ ಸ್ವರೂಪವನ್ನು ಪಡೆಯಿತು ಎಂಬುದರ ಬಗೆಗೆ ಸಾಮಾಜಿಕ ನೆಲೆಗಟ್ಟಿನಲ್ಲಿ ಚರ್ಚಿಸಿದೆ. ಪ್ರಜಾಪ್ರಭುತ್ವ ಮತ್ತು ನಾಗರಿಕರ ಪರಿಕಲ್ಪನೆಗಳನ್ನು ನಗರ ಬೆಳವಣಿಗೆಯ ಹಂತದಲ್ಲಿ ಯೋಜಿತ ಮತ್ತು ತಂತ್ರಜ್ಞಾನದ ಪ್ರವೇಶವನ್ನು ಹೊಸ ಆಯಾಮಗಳಿಂದ ನೋಡಲಾಗಿದೆ.

**ಮಹಾಪ್ರಬಂಧಗಳು**

ಬೆಂಗಳೂರು ನಗರೀಕರಣ, ವರ್ತಕ ಸಮುದಾಯಗಳ ನೆಲೆಯಲ್ಲಿ ಅನೇಕ ಅಧ್ಯಯನಗಳಾಗಿರುವುದು. ಈ ದಿಸೆಯಲ್ಲಿ ಕಂಡುಬರುವ ಪ್ರಮುಖ ಮಹಾಪ್ರಬಂಧಗಳನ್ನು ಇಲ್ಲಿ ಅವಲೋಕಿಸುವ ಪ್ರಯತ್ನ ಮಾಡಲಾಗಿದೆ. ಜೆ. ವಿ ಗಾಯಿತ್ರಿ ಅವರ "ಹಿಸ್ಟರಿ ಆಫ್ ಬ್ಯಾಂಗಲೂರ್: ದಿ ಸಿಟಿಸ್ ಗ್ರೋಥ್ ಎಸ್ ಎ ಮಾರ್ಡ್ರನ್ ಮೆಟ್ರೋಪಾಲಿಸ್ ೧೭೯೯–೧೯೪೭", ಎಚ್. ಬಿ. ರಮೇಶ ಅವರ "ಹಿಸ್ಟರಿ ಆಫ್ ಟ್ರೇಡ್ ಅಂಡ್ ಕಾಮರ್ಸ್ ಇನ್ ಪ್ರಿನ್ಸ್‌ಲಿ ಮೈಸೂರು (೧೮೩೧–೧೯೪೭)", ಎಂ. ಎನ್. ಉಮೇಶರವರ "ಅಡ್‌ಮಿನಿಸ್ಟ್ರೇಟಿವ್ ಅಂಡ್ ಸೋಷಿಯಲ್ ಹಿಸ್ಟರಿ ಆಫ್ ಮೈಸೂರು

ಅಂಡರ್ ದಿ ಒಡೆಯರ್ಸ್ (೧೬೦೦-೧೮೦೦)", ಬಿ. ಎಸ್. ಪುಷ್ಪ ಕುಮಾರಿ ಅವರ "ಕಲೋನಿಯ ಲಿಸಂ ಅಂಡ್ ದಿ ಪಾರ್ಟಿಷಿಯನ್ ಆಫ್ ಮೈಸೂರು (೧೮೮೧-೧೯೪೭)", ಸಿ. ಎಸ್. ಶಾಮಲಾಂಬಿಕ ಅವರ "ಸೋಷಿಯೋ-ಎಕಾನಾಮಿಕ್ ಕಂಡಿಶನ್ ಆಫ್ ಕರ್ನಾಟಕ ಫ್ರಮ್ ೧೭೦೧ ಟು ೧೮೮೧ (೧೯೯೦)", ಬಿ. ಸಿ. ವೀರಪ್ಪ ಅವರ "ಬೆಂಗಳೂರು ನಗರದ ವೀರಶೈವ ಮಠಗಳು-ಒಂದು ಸಾಂಸ್ಕೃತಿಕ ಅಧ್ಯಯನ" (೨೦೦೧) ಮೊದಲಾದ ಮಹಾಪ್ರಬಂಧಗಳನ್ನು ಕಾಣಬಹುದು. ಇದರಲ್ಲಿ ಬಿ.ಸಿ. ವೀರಪ್ಪ ಅವರ ಮಹಾಪ್ರಬಂಧವು ವಸಾಹತು ಕಾಲದ ವೀರಶೈವ ಮಠಗಳ ಪಾತ್ರ ಮತ್ತು ಅಂದಿನ ಧಾರ್ಮಿಕ ವಿಚಾರಗಳನ್ನು ಚರ್ಚಿಸುವುದು. ಮಠಗಳು ಆರ್ಥಿಕ ಚಟುವಟಿಕೆಯ ಕೇಂದ್ರವಾಗಿದ್ದ ವಿಚಾರದೆಡೆಗೆ ಬೆಳಕು ಬೀರುವುದು. ವಸಾಹತು ಕಾಲದ ಮೈಸೂರು ರಾಜ್ಯ ಮತ್ತು ಬೆಂಗಳೂರು ಪ್ರದೇಶದ ಬಗೆಗೆ ಹಲವು ಮಹಾಪ್ರಬಂಧಗಳನ್ನು ಕಾಣಬಹುದು. ಅವುಗಳಲ್ಲಿ ಕೆಲವು ಪುಸ್ತಕ ರೂಪದಲ್ಲಿಯೂ ಪ್ರಕಟವಾಗಿದೆ. ಆದರೆ ನಗರ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸುವ ವರ್ತಕರು, ವ್ಯಾಪಾರ, ವರ್ತಕ ಸಂಘಗಳ ಬಗೆಗೆ ಈ ಅಧ್ಯಯನಗಳು ಗಮನಹರಿಸಿಲ್ಲ. ಆದ್ದರಿಂದಾಗಿ ಈ ಪ್ರಬಂಧದಲ್ಲಿ ಬೆಂಗಳೂರು ಪ್ರದೇಶದ ವರ್ತಕರು, ವ್ಯಾಪಾರ, ವರ್ತಕ ಸಂಘಗಳು ಮತ್ತು ನಗರ ವ್ಯವಸ್ಥೆಯಲ್ಲಿ ಆದ ಬದಲಾವಣೆಗಳನ್ನು ಅಂತಾರಾಷ್ಟ್ರೀಯ ಘಟನಾವಳಿಗಳ ಹಿನ್ನೆಲೆಯಲ್ಲಿ ಅಧ್ಯಯನ ನಡೆಸಲಾಗಿದೆ.

## ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನವು ಬೆಂಗಳೂರಿನ ಪ್ರದೇಶದಲ್ಲಿ ನೆಲೆಸಿರುವ ವರ್ತಕ ಸಮುದಾಯಗಳ ಹಾಗೂ ಅವರ ಕಾರ್ಯಚಟುವಟಿಕೆಗಳ ಕುರಿತದ್ದಾಗಿದೆ. ಈ ಮಹಾಪ್ರಬಂಧವನ್ನು ಅಧ್ಯಯನದ ಉದ್ದೇಶದಿಂದ ಎಂಟು ಅಧ್ಯಾಯಗಳಾಗಿ ವಿಭಾಗಿಸಲಾಗಿದೆ. ಮೊದಲನೆಯ ಅಧ್ಯಾಯವು ಪ್ರವೇಶಿಕೆಯ ರೂಪದಲ್ಲಿದೆ. ಇದು ಅಧ್ಯಯನದ ಉದ್ದೇಶ, ವ್ಯಾಪ್ತಿ, ಆಕರ ಸಾಮಗ್ರಿಗಳು, ಅಧ್ಯಯನದ ವಿಧಾನ, ಈವರೆಗಿನ ಅಧ್ಯಯನಗಳ ಸಮೀಕ್ಷೆಯನ್ನು ಚರ್ಚಿಸುತ್ತದೆ. ಜೊತೆಗೆ ಪ್ರಸ್ತುತ ಅಧ್ಯಯನದ ಸ್ವರೂಪವನ್ನು ಇಲ್ಲಿ ವಿವರಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಬೆಂಗಳೂರು ಪ್ರದೇಶದ ಚಾರಿತ್ರಿಕ ಹಿನ್ನೆಲೆಯನ್ನು ಮುಖ್ಯವಾಗಿ ಚರ್ಚಿಸಲು ಪ್ರಯತ್ನ ಮಾಡಲಾಗಿದೆ. ಈ ಅಧ್ಯಾಯದಲ್ಲಿ ಬೆಂಗಳೂರು ಪ್ರದೇಶದ ಭೌಗೋಳಿಕ ಲಕ್ಷಣ ಮತ್ತು ಸ್ಥಳೀಯ ಸಂಪತ್ತುಗಳು ಹೇಗೆ ಬೆಂಗಳೂರು ಪ್ರದೇಶವನ್ನು ಟಿಪ್ಪು ಮತ್ತು ವಸಾಹತು ಕಾಲದಲ್ಲಿ ಒಂದು ವಾಣಿಜ್ಯ ಕೇಂದ್ರವನ್ನಾಗಿಸುವಲ್ಲಿ ವಹಿಸಿತ್ತೆಂಬುದನ್ನು ಚರ್ಚಿಸಲಾಗಿದೆ. ಇದರ ನೆಲೆಯಲ್ಲಿಯೇ ಈ ಪ್ರದೇಶದಲ್ಲಿ ಇತಿಹಾಸ ಪೂರ್ವಕಾಲದ ಮಾನವನ ಜೀವನಕ್ಕೆ ಸಂಬಂಧಿಸಿದ

ಕುರುಹುಗಳ ಬಗೆಗೆ ಅವಲೋಕಿಸಲು ಯತ್ನಿಸಲಾಗಿದೆ. ನಂತರದ ಕಾಲಾವಧಿಯಲ್ಲಿ ಕಂಡುಬರುವ ಅನೇಕ ರಾಜ ಮನೆತನಗಳಾದ ಮೌರ್ಯರು, ಶಾತವಾಹನರು, ಗಂಗರು, ಚಾಲುಕ್ಯರು, ರಾಷ್ಟ್ರಕೂಟರು, ಚೋಳರು, ಹೊಯ್ಸಳರು, ವಿಜಯನಗರ, ಯಲಹಂಕ ನಾಡಪ್ರಭುಗಳು, ಮರಾಠರು, ಹೈದರ್ ಮತ್ತು ಟಿಪ್ಪುವಿನ ಕಾಲದಲ್ಲಾದ ರಾಜಕೀಯ-ಆರ್ಥಿಕ ಸ್ಥಾನಪಲ್ಲಟಗಳ ನೆಲೆಯಲ್ಲಿ ವಿವಿಧ ವರ್ತಕ ಸಮುದಾಯಗಳನ್ನು ಮತ್ತು ಅವರ ಸ್ಥಾನಮಾನಗಳನ್ನು ಕುರಿತು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಬ್ರಿಟಿಶ್ ವಸಾಹತುಶಾಹಿ ನೀತಿಯ ಸೈದ್ಧಾಂತಿಕ ನೆಲೆಗಳು, ಚಾರ್ಟರ್ ಕಾಯ್ದೆಗಳನ್ನು ಚರ್ಚಿಸಲಾಗಿದೆ. ಸಾಮ್ರಾಜ್ಯಶಾಹಿ ನೀತಿಗೆ ಪೂರಕವಾಗಿ ವಸಾಹತು ನೀತಿಯ ಹಿನ್ನೆಲೆಯಲ್ಲಿ ಉದಯವಾದ ಹಲವು ಸಿದ್ಧಾಂತಗಳಲ್ಲಿ ಉದಾರೀಕರಣ, ಮುಕ್ತವ್ಯಾಪಾರ ಮತ್ತು ಕೃಷಿ ವಾಣಿಜ್ಯೀಕರಣಗಳು ಮುಖ್ಯವಾಗಿವೆ. ಇಲ್ಲಿ ಈ ಸೈದ್ಧಾಂತಿಕ ನೆಲೆಗಳನ್ನು ವಿಮರ್ಶಿಸುತ್ತಾ ಬೆಂಗಳೂರು ಪ್ರದೇಶದಲ್ಲಿ ಕಂಡುಬರುವ ನಗರೀಕರಣ ಪ್ರಕ್ರಿಯೆಯಲ್ಲಿ ಇವುಗಳ ಪಾತ್ರವನ್ನು ಕುರಿತು ವಿಮರ್ಶಿಸಲು ಪ್ರಯತ್ನಿಸಲಾಗಿದೆ.

ಅಧ್ಯಾಯ ನಾಲ್ಕರಲ್ಲಿ ಬೆಂಗಳೂರು ಪ್ರದೇಶದಲ್ಲಿ ನೆಲೆಸಿರುವ ಪ್ರಮುಖ ವರ್ತಕ ಸಮುದಾಯಗಳ ಕುರಿತು ಚರ್ಚಿಸಲಾಗಿದೆ. ಸ್ಥಳೀಯ ವರ್ತಕರು ಹಾಗೂ ವಲಸೆ ಬಂದ ವರ್ತಕ ಸಮುದಾಯಗಳ ಚಾರಿತ್ರಿಕ ಹಿನ್ನೆಲೆಯನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ವರ್ತಕ ಸಮುದಾಯಗಳ ವಸತಿ ನೆಲೆಗಳು, ಪಂಗಡಗಳು ಹಾಗೂ ವೃತ್ತಿಯ ಕುರಿತು ವಿಶ್ಲೇಷಿಸಲಾಗಿದೆ. ಜೊತೆ ಆ ಸಂದರ್ಭದಲ್ಲಿ ಇದ್ದ ಪ್ರಭುತ್ವವು ಈ ವರ್ತಕ ಸಮುದಾಯಗಳಿಗೆ ನೀಡಿದ ಪ್ರೋತ್ಸಾಹ, ಧನ ಸಹಾಯ ಹಾಗೂ ಬೆಂಬಲಗಳನ್ನು ಸ್ಥೂಲವಾಗಿ ಚರ್ಚಿಸಲಾಗಿದೆ.

ಅಧ್ಯಾಯ ಐದರಲ್ಲಿ ಬೆಂಗಳೂರು ಪ್ರದೇಶದಲ್ಲಿ ವರ್ತಕ ಸಮುದಾಯಗಳು ತಮ್ಮ ಹಿತಾಸಕ್ತಿಗಳ ರಕ್ಷಣೆಗಾಗಿ ಪ್ರಭುತ್ವದಿಂದ ನೋಂದಾಯಿಸಲ್ಪಟ್ಟ ಮತ್ತು ಪಡೆದ ಸಾಮಾಜಿಕ, ಧಾರ್ಮಿಕ ಸಂಘ-ಸಂಸ್ಥೆಗಳನ್ನು ವಿಮರ್ಶಿಸಲು ಪ್ರಯತ್ನಿಸಲಾಗಿದೆ. ಇವುಗಳ ಅಸ್ತಿತ್ವಕ್ಕೆ ಕಾರಣ, ಹುಟ್ಟು ಮತ್ತು ಕಾರ್ಯ ಚಟುವಟಿಕೆಗಳ ಬಗೆಗೆ ಚರ್ಚಿಸಲಾಗಿದೆ. ವರ್ತಕ ಸಮುದಾಯಗಳು ಸಂಘಗಳ ಮೂಲಕ ಪ್ರಭುತ್ವದೊಂದಿಗೆ ಹೊಂದಿದ್ದ ಸಂಬಂಧದ ಸ್ವರೂಪ ಮತ್ತು ಸಂಘ-ಸಂಸ್ಥೆಗಳು ಬೆಂಗಳೂರು ಪ್ರದೇಶದ ಬೆಳೆವಣಿಗೆಗೆ ಪೂರಕವಾಗಿ ವರ್ತಿಸಿದ ವಿಚಾರಗಳನ್ನು ಚರ್ಚಿಸಲು ಪ್ರಯತ್ನಿಸಲಾಗಿದೆ.

ಅಧ್ಯಾಯ ಆರರಲ್ಲಿ ಬೆಂಗಳೂರು ನಗರಾಭಿವೃದ್ಧಿಗೆ ಪೂರಕ ಅಂಶಗಳಾದ ವ್ಯಾಪಾರ-ವಾಣಿಜ್ಯದಲ್ಲಿ ಮೂಡಿಬಂದ ಹೊಸ ಬಗೆಯ ಆಧುನಿಕ ಪರಿಕಲ್ಪನೆಗಳನ್ನು ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ. ಈ ದಿಸೆಯಲ್ಲಿ ಬ್ಯಾಂಕಿಂಗ್ ವ್ಯವಸ್ಥೆ ಮತ್ತು ಉತ್ಪನ್ನಗಳ ಉತ್ಪಾದನೆಯಲ್ಲಾದ ಬೆಳವಣಿಗೆಯನ್ನು ವಿಮರ್ಶಿಸಲಾಗಿದೆ. ಅಂದು ಮಧ್ಯವರ್ತಿಗಳೆಂಬ ವರ್ತಕ ಸಮುದಾಯಗಳು

ಬ್ರಿಟಿಶ್ ಆರ್ಥಿಕ ಚಟುವಟಿಕೆಯಲ್ಲಿ ಮಹತ್ವದ ಪಾತ್ರವನ್ನು ವಹಿಸುತ್ತಿದ್ದವು. ಬೃಹತ್‌ಯಂತ್ರ ಕೈಗಾರಿಕೆಗಳು ಮತ್ತು ಸಾರಿಗೆ ಸಂಪರ್ಕವು ಬೆಂಗಳೂರು ನಗರದ ಅಭಿವೃದ್ಧಿಗೆ ಪೂರಕವಾದ ಬಗೆ ಮತ್ತು ಅದರ ಬೆಳವಣಿಗೆಯ ಹಂತಗಳನ್ನು ವಿಮರ್ಶಾತ್ಮಕವಾಗಿ ನೋಡಲಾಗಿದೆ. ಇದೆಲ್ಲದರ ಪರಿಣಾಮವಾಗಿ ಬೆಂಗಳೂರು ಪ್ರದೇಶದ ಜನರ ಜೀವನಶೈಲಿಯಲ್ಲಿ ಮೂಡಿದ ಸಾಂಸ್ಕೃತಿಕ ಬದಲಾವಣೆಗಳನ್ನು ಚರ್ಚಿಸಲಾಗಿದೆ. ಈ ಎಲ್ಲ ಅಂಶಗಳು ವರ್ತಕ ಸಮುದಾಯಗಳ ಅಭಿವೃದ್ಧಿಗೆ ಹಾಗೂ ಆ ಮೂಲಕ ನಗರದ ಅಭಿವೃದ್ಧಿಗೆ ಹೇಗೆ ಪೂರಕವಾದವು ಎನ್ನುವುದರ ಕುರಿತು ಚರ್ಚಿಸಲಾಗಿದೆ.

ಅಧ್ಯಾಯ ಏಳರಲ್ಲಿ ಬೆಂಗಳೂರು ಪ್ರದೇಶದಲ್ಲಿನ ವರ್ತಕ ಸಮುದಾಯಗಳು ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡು, ನಗರದ ಬೆಳವಣಿಗೆಗೆ ಕಾರಣವಾದ ಬಗೆಯನ್ನು ಚರ್ಚಿಸಲಾಗಿದೆ. ಈ ವರ್ತಕ ಸಮುದಾಯಗಳು ತಾವು ವಾಸಿಸುವ ಪ್ರದೇಶದಲ್ಲಿ, ತಮ್ಮ ಸಮುದಾಯಕ್ಕೆ ಸಂಬಂಧಿಸಿದಂತೆ ಶಿಕ್ಷಣ ಸಂಸ್ಥೆಗಳನ್ನು, ಸಾಮಾಜಿಕ ಮತ್ತು ಧಾರ್ಮಿಕ ಸಂಸ್ಥೆಗಳನ್ನು ಹಾಗೂ ಆರೋಗ್ಯ ಸಂಸ್ಥೆಗಳನ್ನು ಸ್ಥಾಪಿಸಿಕೊಂಡಿರುತ್ತವೆ. ಇವುಗಳ ಮೂಲಕ ಈ ಸಮುದಾಯಗಳು ನಗರದ ಬೆಳವಣಿಗೆಗೆ ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಕಾರಣರಾಗಿರುತ್ತವೆ. ಅದಷ್ಟೇ ಅಲ್ಲದೆ ಸ್ವಾತಂತ್ರ್ಯ ಹೋರಾಟದಲ್ಲಿಯೂ ಸಹ ಗಣನೀಯ ಪಾತ್ರವನ್ನು ವಹಿಸಿರುವುದು. ಈ ಎಲ್ಲಾ ಅಂಶಗಳನ್ನು ಬೆಂಗಳೂರು ಪ್ರದೇಶದ ಬೆಳವಣಿಗೆಗೆ ವರ್ತಕ ಸಮುದಾಯಗಳ ಬಹುಮುಖಿ ಸೇವಾ ಚಟುವಟಿಕೆಗಳನ್ನು ಈ ಅಧ್ಯಾಯದಲ್ಲಿ ಕೂಲಂಕುಷವಾಗಿ ಚರ್ಚಿಸಲಾಗಿದೆ.

ಕೊನೆಯ ಅಧ್ಯಾಯದಲ್ಲಿ ಒಟ್ಟಾರೆ ಅಧ್ಯಯನದ ಫಲಿತಗಳನ್ನು ನೀಡುವ ಪ್ರಯತ್ನ ಮಾಡಲಾಗಿದೆ. ಇಂದಿನ ವಿದ್ಯಮಾನಗಳು, ಅದರ ವಿವಿಧ ಆಯಾಮಗಳು ಹಾಗೂ ಅವುಗಳ ಪರಿಣಾಮಗಳ ಬಗೆಗೆ ಚರ್ಚಿಸುತ್ತಾ, ಈ ಬದಲಾವಣೆಯ ಹಿಂದೆ ಇರುವ ವಸಾಹತುಶಾಹಿ ಪ್ರಭುತ್ವ, ಅದರ ನೀತಿಗಳು, ವರ್ತಕರು, ವ್ಯಾಪಾರ–ವಾಣಿಜ್ಯ ಎಷ್ಟರ ಮಟ್ಟಿಗೆ ಪ್ರಭಾವಿಸಿದೆ ಎಂಬುದರ ಬಗ್ಗೆಯು ಸಹ ಪರಿಶೀಲಿಸಲಾಗಿದೆ. ವಸಾಹತುಶಾಹಿಯ ಇಂದಿನ ರೂಪ ಮತ್ತು ಅವುಗಳಿಂದ ನಗರೀಕರಣದ ಪ್ರಕ್ರಿಯೆ ಮೇಲಿನ ಪ್ರಭಾವವನ್ನು ಸಹ ಒಟ್ಟಾರೆ ಅಧ್ಯಯನದ ಫಲಿತಗಳ ನೆಲೆಯಲ್ಲಿ ಚರ್ಚಿಸಲಾಗಿದೆ.

**ಕೊನೆಟಿಪ್ಪಣಿಗಳು**

೧. ನಾಥನ್ ನುಣ್ಣ್, ೨೦೦೯, **ದಿ ಇಂಪಾರ್ಟೆನ್ಸ್ ಆಫ್ ಹಿಸ್ಟರಿ ಫಾರ್ ಎಕನಾಮಿಕ್ ಡೆವಲಪ್ಮೆಂಟ್, ಅನ್ಯುಯಲ್ ರಿವ್ಯೂ.** ೨೦೦೯.೧ :೬೫–೯೨, ಪು.೬೭. arjournals.annualreviews.org by Stanford University.

೨. ಜಿ. ವಿಜಯಲಕ್ಷ್ಮಮ್ಮ, ೨೦೧೫, **ಮೈಸೂರು ಒಡೆಯರ ಚರಿತ್ರೆ, ಚರಿತ್ರೆಲೇಖನಶಾಸ್ತ್ರದ ಹಿನ್ನೆಲೆಯಲ್ಲಿ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೫–೬.

೩. ಪ್ರಸನ್ನ ಪಾರ್ಥಸಾರಥಿ, ಮೇ ೨೦೧೨, **ದಿ ಹಿಸ್ಟರಿ ಆಫ್ ಇಂಡಿಯನ್ ಎಕನಾಮಿಕ್ ಹಿಸ್ಟರಿ**, ಪು.೨. www.lse.ac.uk/**economicHistory**/.../The-**History-of-Indian-Economic-History**.docx,

೪. ಅದೇ, ಪು.೩.

೫. ಮೋಹನ್‌ಕೃಷ್ಣ ರೈ ಕೆ., ೨೦೦೪, **ಪ್ರಭುತ್ವ ಮತ್ತು ಜನತೆ,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೮೬.

೬. ಅದೇ, ಪು.೧೦೪

೭. ಮೋಹನ್‌ಕೃಷ್ಣ ರೈ ಕೆ., ೨೦೦೭, **ವಸಾಹತುಶಾಹಿ ಮತ್ತು ನಗರೀಕರಣ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧

೮. ಮಲ್ಲಿಕಾರ್ಜುನ ರೆಡ್ಡಿ ವಿ., ಫೆಬ್ರವರಿ ೨೦೦೪, ವಾಲ್ಯೂಮ್ :೩, ಇಶ್ಯೂ :೨, **ಅರ್ಬನೈಜೇಶನ್ ಡ್ಯೂರಿಂಗ್ ಕಲೋನಿಯಲ್ ರೂಲ್ ಅಂಡ್ ಹಿಸ್ಟೋರಿಯೋಗ್ರಫಿ : ಪ್ರಾಸ್ಪೆಕ್ಟಿವ್ ಅಂಡ್ ಪ್ರಾಬ್ಲಮ್ಸ್,** ಇಂಡಿಯನ್ ಜರ್ನಲ್ ಆಫ್ ರಿಸರ್ಚ್.

೯. https://en.wikipedia.org/wiki/Urban_history.

## ಅಧ್ಯಾಯ ಎರಡು

# ಬೆಂಗಳೂರು ಪ್ರದೇಶದ ಭೌಗೋಳಿಕ ಹಾಗೂ ಚಾರಿತ್ರಿಕ ಹಿನ್ನೆಲೆ

ಮನುಷ್ಯ ನಿಸರ್ಗದ ಸೃಷ್ಟಿ. ಅದರಿಂದಾಗಿ ಮಾನವರಿಗೂ ಪರಿಸರಕ್ಕೂ ಅವಿರತವಾದ ಸಂಬಂಧವಿದೆ. ಆದರೆ ಮನುಷ್ಯ ಎಲ್ಲಾ ಸ್ಥಳಗಳಲ್ಲಿ ವಾಸಿಸಲು ಸಾಧ್ಯವಿಲ್ಲ, ಅದಕ್ಕೆ ಉತ್ತಮ ವಾತಾವರಣದ ಅಗತ್ಯವಿದೆ. ಪರಿಸರದಲ್ಲಾದ ಬದಲಾವಣೆಯು ಮಾನವರನ್ನು ಮಹತ್ವದ ಸಂಶೋಧನೆ ನಡೆಸುವಂತೆ ಪ್ರೇರೇಪಣೆ ನೀಡಿತು. ಇದರ ಫಲವಾಗಿ ಉಳುಮೆ ಮತ್ತು ತಿರುಗುವ ಚಕ್ರವನ್ನು ಕಂಡುಕೊಂಡರು. ಇದು ಬಡಗಿ, ಕುಂಬಾರ, ಕಮ್ಮಾರ ಹೀಗೆ ವಿವಿಧ ಕಸಬುಗಳು ಉತ್ಪಾದಿತ-ವಿನಿಮಯ ವರ್ತಕ ಸಮುದಾಯಗಳು ಕೃಷಿಯ ಚಟುವಟಿಕೆಗೆ ಪೂರಕವಾದ ಉತ್ಪನ್ನಗಳನ್ನು ಪೂರೈಸುತ್ತಿದ್ದರು. ಆ ಮೂಲಕ ಕೃಷಿಯನ್ನು ವೃದ್ಧಿಸಲು ಕಾರಣವಾಗಿ ಸಾರಿಗೆ ವ್ಯವಸ್ಥೆಯ ಸ್ವರೂಪದಲ್ಲಿ ಬದಲಾವಣೆಗಳನ್ನು ತಂದಿತು. ನಂತರದ ಹಂತದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಸರಕು ಉತ್ಪನ್ನಗಳ ವಿನಿಮಯವು ಪ್ರಾಮುಖ್ಯತೆಯನ್ನು ಪಡೆದು ನಗರ ಪ್ರದೇಶವಾಗಿ ಪರಿವರ್ತನೆಗೊಳ್ಳಲು ಕಾರಣವಾಯಿತು. ಈ ಪ್ರಕ್ರಿಯೆ ಸರಳವಾದದ್ದಲ್ಲ, ಇದೊಂದು ಸಂಕೀರ್ಣ ಪ್ರಕ್ರಿಯೆ. ಇದಕ್ಕೆ ಭೌಗೋಳಿಕ ಸನ್ನಿವೇಶಗಳು, ಕೃಷಿ ಕ್ಷೇತ್ರದಲ್ಲಿನ ಹೆಚ್ಚುವರಿ ಉತ್ಪಾದನೆ, ರಾಜಕೀಯ ವ್ಯವಸ್ಥೆ, ಕೃಷಿಯೇತರ ಚಟುವಟಿಕೆಗಳಲ್ಲಿ ತೊಡಗಿದ್ದ ಕರಕುಶಲಕರ್ಮಿಗಳ ಉತ್ಪಾದನೆ, ವಿನಿಮಯ ವರ್ತಕರ ಪಾತ್ರ, ಧರ್ಮ ಇತ್ಯಾದಿ ಸಾಮಾಜಿಕ, ಆರ್ಥಿಕ, ರಾಜಕೀಯ ಅಂಶಗಳು ನಗರೀಕರಣಕ್ಕೆ ಪೂರಕವಾದವು.[೧] ಈ ಅಧ್ಯಾಯದಲ್ಲಿ ಬೆಂಗಳೂರು ಪ್ರದೇಶದ ಭೌಗೋಳಿಕ ಮತ್ತು ಚಾರಿತ್ರಿಕ ನೆಲೆಗಳನ್ನು ಪ್ರತ್ಯೇಕವಾಗಿ ಅಧ್ಯಯನ ಮಾಡಲಾಗಿದೆ.

ಇಂದು ಅಂತಾರಾಷ್ಟ್ರೀಯ ಮಟ್ಟದಲ್ಲಿ ಪ್ರಮುಖ ನಗರವಾಗಿ ಗುರುತಿಸಿಕೊಂಡಿರುವ ಬೆಂಗಳೂರು ನಗರ ಹಂತ ಹಂತವಾಗಿ ಬೆಳವಣಿಗೆ ಹೊಂದಿದೆ. ಭೂವೈಜ್ಞಾನಿಕ ಲಕ್ಷಣಗಳು ಮತ್ತು ಪ್ರದೇಶದ ಆಹ್ಲಾದಕರ ವಾತಾವರಣ ಇದಕ್ಕೆ ಕಾರಣವಾಗಿರುವುದು. ಇದರ ಹಿನ್ನೆಲೆಯಲ್ಲಿ ಅಂದಿನ ಆರ್ಥಿಕ-ರಾಜಕೀಯ ಚಟುವಟಿಕೆಯ ಹೆಜ್ಜೆ ಗುರುತು ಕಾಣಿಸಿಕೊಳ್ಳುತ್ತದೆ. ಈ ನಿಟ್ಟಿನಲ್ಲೇ ಒಂದು ಪ್ರದೇಶದ

ನಗರ ವ್ಯವಸ್ಥೆಯ ಅಧ್ಯಯನದಲ್ಲಿ ಭೌಗೋಳಿಕ ಹಿನ್ನೆಲೆ ಮಹತ್ವವೆನಿಸುತ್ತದೆ.

## ಪ್ರಸ್ಥಭೂಮಿ

ಬೆಂಗಳೂರು ದಕ್ಷಿಣ ಪ್ರಸ್ಥಭೂಮಿಯ ಒಂದು ಭಾಗ. ನಗರದ ಕೇಂದ್ರ ಭಾಗವು ಸಮುದ್ರ ಮಟ್ಟದಿಂದ ಸುಮಾರು ೯೧೦–೯೩೩ಮೀಟರ್ ಎತ್ತರದಲ್ಲಿದೆ. ಆದರೆ ನಗರದ ಕೆಲ ನಿವೇಶನಗಳು ೯೫೩ಮೀ ಎತ್ತರದಲ್ಲಿದ್ದರೆ ಕೆಲ ನಿವೇಶನಗಳು ೮೭೪ ಮೀಟರ್ ಎತ್ತರದಲ್ಲಿವೆ. ಅಂದರೆ ಬೆಂಗಳೂರು ನಗರ ಪ್ರದೇಶ ಸುತ್ತಲಿನ ಪ್ರದೇಶಕ್ಕಿಂತ ಹೆಚ್ಚಿನ ಔನ್ನತ್ಯವನ್ನು ಹೊಂದಿದೆ. ಇದರಂತೆಯೇ ರೇಖಾಂಶ ೭೭೦ ೩೫ ಉತ್ತರದಲ್ಲಿ ಯಲಹಂಕದಿಂದ ದಕ್ಷಿಣಕ್ಕೆ ಚುಂಚನಕಟ್ಟೆಯವರೆಗೆ ಕಂಡುಬರುವ ಭೂಮೇಲ್ಮೈ ದಕ್ಷಿಣಕ್ಕೆ ಗಮನಿಸಿದಾಗ ಯಲಹಂಕದ ಬಳಿ ಭೂಮಟ್ಟದ ಎತ್ತರ ಸುಮಾರು ೯೦೦ಮೀಟರ್ ಇದ್ದು ದಕ್ಷಿಣಕ್ಕೆ ಹೋದಂತೆಲ್ಲಾ ಭೂಮಟ್ಟ ಏರುತ್ತಾ ಹೋಗಿ ಬೆಂಗಳೂರಿನಲ್ಲಿ ೯೫೩ ಮೀಟರ್ ಎತ್ತರವನ್ನು ತಲುಪಿದೆ. ನಂತರ ಭೂಮಟ್ಟ ಇಳಿಯುತ್ತಾ ದಕ್ಷಿಣದಲ್ಲಿ ೯೦೦ಮೀಟರ್ ಎತ್ತರವು ಜರಗನಹಳ್ಳಿ ಮತ್ತು ಚುಂಚನಕಟ್ಟೆ ಪ್ರದೇಶದಲ್ಲಿ ತಲುಪುತ್ತದೆ. ಅಂದರೆ ಉತ್ತರ ಮತ್ತು ದಕ್ಷಿಣದಲ್ಲಿರುವ ನೆಲೆಗಳಿಗಿಂತ ಬೆಂಗಳೂರಿನ ಮಧ್ಯಭಾಗ ಹೆಚ್ಚಿನ ಎತ್ತರದಲ್ಲಿದೆ ಎಂದಂತಾಯಿತು. ಇದರಿಂದಾಗಿ ಮಳೆನೀರು ಸಣ್ಣಹಳ್ಳಗಳ ಮೂಲಕ ಎಲ್ಲಾ ದಿಕ್ಕುಗಳಿಗೂ ಹರಿದು ಹೋಗುವುದನ್ನು ಸ್ಪಷ್ಟವಾಗಿ ಗುರುತಿಸಬಹುದು. ಈ ನೈಸರ್ಗಿಕ ಜಲ ಹರಿಯುವಿಕೆಯನ್ನು ಚದುರುವ ಸಸ್ಯಾಂಕನದ ಜಲಚರಂಡಿ ಮಾದರಿ ಎಂದು (Radiating dendritic drainage pattern) ಕರೆಯಲಾಗಿದೆ. ಈ ಅಂಶವು ಕೆರೆಗಳ ನಿವೇಶನದ ಆಯ್ಕೆ ಮತ್ತು ಅಂತರ್ಜಲದ ಲಭ್ಯತೆಯನ್ನು ನಿರ್ಧರಿಸುತ್ತದೆ. ಜೊತೆಗೆ ಹಿತಕರ ವಾತಾವರಣಕ್ಕೆ ಕಾರಣವಾಗಿದೆ.[೨]

## ಹವಾಗುಣ

ಬೆಂಗಳೂರು ಉತ್ತಮ ಹವಾಗುಣವನ್ನು ಹೊಂದಿದ್ದು, ನಗರಾಭಿವೃದ್ಧಿಗೆ ಪೂರಕವಾಗಿದೆ. ಬೆಂಗಳೂರಿನ ಹವಾಮಾನ ಕೇಂದ್ರವು ದೇಶದ ಅತ್ಯಂತ ಹಳೆಯ ಕೇಂದ್ರಗಳಲ್ಲಿ ಒಂದು. ಇಲ್ಲಿ ಸುಮಾರು ೧೦೦ ವರ್ಷಗಳ ದಾಖಲೆಗಳಿವೆ. ಇವುಗಳನ್ನು ಆಧರಿಸಿ ಬೆಂಗಳೂರಿನಲ್ಲಿ ವಾರ್ಷಿಕ ಸರಾಸರಿ ೯೭೦ ಮಿಲಿ ಮೀಟರ್ ಮಳೆ ಬೀಳುತ್ತದೆ ಎಂಬುದಾಗಿ ತಿಳಿಯಲಾಗಿದೆ. ವರ್ಷದಲ್ಲಿ ಸರಾಸರಿ ೩೦ ಮಳೆಯ ದಿನಗಳಾಗಿವೆ. ಜುಲೈ, ಆಗಸ್ಟ್, ಸೆಪ್ಟೆಂಬರ್ ಮತ್ತು ಅಕ್ಟೋಬರ್ ತಿಂಗಳುಗಳಲ್ಲಿ ಅನುಕ್ರಮವಾಗಿ ೧೧೦.೨, ೧೩೭.೦, ೧೯೪.೮ ಮತ್ತು ೧೮೦.೪ ಮಿ.ಮೀ ಮಳೆ ಬೀಳುತ್ತದೆ. ವಾಯುಗುಣದ ಉಷ್ಣತೆ ಗರಿಷ್ಠ ೩೨.೭ಸೆಂ ಮತ್ತು ಕನಿಷ್ಠ ೨೧.೨ ಸೆಂ ಇರುತ್ತದೆ. ಸಪ್ಟೆಂಬರ್ ತಿಂಗಳು ವರ್ಷದ ಅತಿ ಕಡಿಮೆ ಉಷ್ಣಾಂಶ ಇರುವ ತಿಂಗಳು. ಇದರಂತೆಯೇ ಸಾಪೇಕ್ಷ ತೇವಾಂಶ

ಮಳೆಗಾಲದ ತಿಂಗಳುಗಳಲ್ಲಿ ಸರಾಸರಿ ಶೇಕಡಾ ೮೫ ರಷ್ಟು ಇದ್ದರೆ ಡಿಸೆಂಬರ್ ಮತ್ತು ಜನವರಿ ತಿಂಗಳುಗಳಲ್ಲಿ ಶೇಕಡಾ ೫೦ರಷ್ಟು ಇರುತ್ತದೆ. ಈ ಮೇಲಿನ ಅಂಶಗಳನ್ನು ಗಮನಿಸಿದರೆ ಬೆಂಗಳೂರಿನ ಹವಾಗುಣ ಅತಿ ಉಷ್ಣವೂ ಅಲ್ಲ, ಅತಿ ತಂಪೂ ಅಲ್ಲ ಎಂಬುದು ತಿಳಿಯುತ್ತದೆ. ಇಂತಹ ಹಿತಕರ ಹವಾಗುಣಕ್ಕೆ ನಗರದ ಭೂಮಟ್ಟದ ಎತ್ತರವೇ ಕಾರಣ.[೩]

## ಮಣ್ಣು ಮತ್ತು ಜಲಸಂಪತ್ತು

ಭೂಮಿಯ ಮೇಲೆ ಜೀವ ಜಗತ್ತಿಗೆ ಆಧಾರ ಮಣ್ಣು. ಮಣ್ಣಿನ ಜೊತೆಗೆ ನೀರು, ಕಲ್ಲು ಇತ್ಯಾದಿಗಳು ಅವಶ್ಯಕ. ಮರಳು ಮಿಶ್ರಿತ ಕೆಂಪುಮಣ್ಣು ಬೆಂಗಳೂರಿನಲ್ಲಿ ಪ್ರಮುಖವಾಗಿ ಕಂಡುಬರುತ್ತದೆ. ಆದರೆ ಕೆಲವೆಡೆ ಮರಳಿನ ಪ್ರಮಾಣ ಕಡಿಮೆಯಾಗಿ ಜೇಡಿ ಮಣ್ಣು ಹೆಚ್ಚಾಗಿದೆ. ಇಲ್ಲಿ ಅದನ್ನು ಜೇಡು ಮಿಶ್ರತ ಕೆಂಪುಮಣ್ಣು ಎಂದು ಕರೆಯಲಾಗುತ್ತದೆ. ಈ ಎರಡು ಬಗೆಯ ಮಣ್ಣು ಸಸ್ಯ ಸಂಪತ್ತಿನ ಉತ್ಕೃಷ್ಟ ಬೆಳವಣಿಗೆಗೆ ಕಾರಣಗಳಾಗಿವೆ. ಮರಳು ಮಿಶ್ರಿತ ಮಣ್ಣು ಇರುವ ಪ್ರದೇಶದಲ್ಲಿ ಮಳೆನೀರು ಭೂಮಿಯೊಳಕ್ಕೆ ಬೇಗನೆ ಇಂಗಿ ಹೋಗುವುದರಿಂದ ಅಂತರ್ಜಲ ಸಂಗ್ರಹಕ್ಕೆ ಅನುಕೂಲಕರ, ಜೇಡು ಮಿಶ್ರಿತ ಕೆಮ್ಮಣ್ಣು ತೇವಾಂಶವನ್ನು ಹೆಚ್ಚು ಕಾಲ ಹಿಡಿದಿಡುವುದರಿಂದ ಸಸ್ಯದ ಬೆಳವಣಿಗೆಗೆ ಅನುಕೂಲಕರ. ಬೆಂಗಳೂರು ನಗರದ ಪಶ್ಚಿಮ ಭಾಗದಲ್ಲಿ ಸಿಗುವ ಮಣ್ಣು ಮರಳು ಮಿಶ್ರಿತ ಇರುವುದರಿಂದ, ಈ ಭಾಗದಲ್ಲಿ ಅಂತರ್ಜಲದ ಸಮೃದ್ಧಿಗೆ ಕಾರಣವಾಗಿದೆ.[೪]

ಆದರೆ, ಬೆಂಗಳೂರಿಗೆ ಹೊಂದಿಕೊಂಡಂತೆ ಯಾವುದೇ ದೊಡ್ಡ ನದಿಗಳಾಗಲಿ, ತೊರೆಗಳಾಗಲಿ ಇಲ್ಲ. ಶಾಸನದಲ್ಲಿ ಅರ್ಕಾವತಿ, ವೃಷಭಾವತಿ ನದಿಯನ್ನು ಉಲ್ಲೇಖಿಸಿರುವುದನ್ನು ಗಮನಿಸಬಹುದು. ಪ್ರಸ್ತುತ ಅವುಗಳನ್ನು ಗುರುತಿಸುವುದು ಕಷ್ಟಕರ. ಆ ನದಿಗಳು ಕ್ರಮೇಣ ನಗರೀಕರಣ ಪ್ರಕ್ರಿಯೆಯಲ್ಲಿ ಕಣ್ಮರೆಯಾದಂತೆ ಚರ್ಚಿಸುವುದನ್ನು ಕಾಣಬಹುದು. ಆದರೆ ಇವನ್ನು ದೊಡ್ಡ ನದಿಗಳ ರೂಪದಲ್ಲಿ ಕಾಣುವುದಕ್ಕಿಂತ ಬಸವನಗುಡಿ ಮತ್ತು ದೊಡ್ಡ ಬಸವಣ್ಣ ಪ್ರದೇಶದಲ್ಲಿರುವ ಹೆಬ್ಬಂಡೆಗಳ ಬಿರುಕಿನಲ್ಲಿ ಹರಿಯುತ್ತಿದ್ದ ಶುದ್ಧನೀರಿನ ಸಣ್ಣ ತೊರೆಗಳೆಂದು ತಿಳಿಯಬಹುದು.[೫] ಈಗಲೂ ಕಣ್ವ, ಕುಮುದ್ವನಿ, ಪಿನಾಕಿನಿ ನದಿಗಳು ಹರಿಯುತ್ತವೆ. ಈ ರೀತಿಯ ಭೌಗೋಳಿಕ ಅಂಶಗಳು ಜನವಸತಿಗೆ ಯೋಗ್ಯವಾದ ಉತ್ತಮ ವಾತಾವರಣವನ್ನು ಸೃಷ್ಟಿಸಿವೆ.

## ಚಾರಿತ್ರಿಕ ಹಿನ್ನೆಲೆ

ನಗರೀಕರಣ ಪ್ರಕ್ರಿಯೆಯಲ್ಲಿ ಚಾರಿತ್ರಿಕ ತಿರುವುಗಳು ಮುಖ್ಯ ಪಾತ್ರ ನಿರ್ವಹಿಸುತ್ತವೆ. ಚರಿತ್ರೆಯ ವಿವಿಧ ಹಂತಗಳಲ್ಲಿ ಬೆಂಗಳೂರು ಪ್ರದೇಶದಲ್ಲಿ ಕಂಡುಬಂದ ಬೆಳವಣಿಗೆಗಳು ಹಾಗೂ ಅವುಗಳ ಸ್ವರೂಪವನ್ನು ಚರ್ಚಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ಬೆಂಗಳೂರು ಪ್ರದೇಶದ ನಗರೀಕರಣ ಪ್ರಕ್ರಿಯೆಯ

ಹಂತಗಳನ್ನು ಕಟ್ಟಿಕೊಡುವುದು, ಅಲ್ಲದೇ ನಗರೀಕರಣ ಪ್ರಕ್ರಿಯೆಯ ಪ್ರಮುಖ ತಿರುವುಗಳನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

**ಸೂಕ್ಷ್ಮ ಶಿಲಾಯುಗ**

ಬೆಂಗಳೂರು ಪ್ರದೇಶದ ಅನೇಕ ತಾಣಗಳಲ್ಲಿ ಮಾನವನ ನೆಲೆಯ ಕುರುಹುಗಳನ್ನು ಸೂಕ್ಷ್ಮ ಶಿಲಾಯುಗದಲ್ಲಿಯೇ ಗುರುತಿಸಬಹುದು. ಈ ದಿಸೆಯಲ್ಲಿ ಕಂಡುಬರುವ ತಾಣಗಳೆಂದರೆ ಇಂದಿನ ರೇಸ್‌ಕೋರ್ಸ್, ಎಚ್.ಎ.ಎಲ್, ಜಾಲಹಳ್ಳಿ ಮತ್ತು ಚೌಡಸಂದ್ರಗಳಾಗಿವೆ. ಈ ನಾಲ್ಕು ಪ್ರದೇಶಗಳು ಇಂದು ಬೆಂಗಳೂರಿನ ಒಂದೊಂದು ಮೂಲೆಯಲ್ಲಿ ಕಾಣಬಹುದು. ಹೆಚ್ಚು ಕಡಿಮೆ ಇವು ೧೦ ರಿಂದ ೧೫ ಕಿ.ಮೀ ದೂರದಲ್ಲಿವೆ. ಈ ಪ್ರದೇಶಗಳಲ್ಲಿ ನಡೆಸಿದ ಉತ್ಖನನದಲ್ಲಿ ಬೆಣಚುಗಲ್ಲಿನ ವಿವಿಧ ಆಕಾರದ ಆಯುಧಗಳು ಪತ್ತೆಯಾಗಿದೆ. ಈ ಆಯುಧಗಳನ್ನು ಕ್ರಿ.ಪೂ ೬ ಸಾವಿರ ವರ್ಷಗಳಿಗಿಂತ ಹಳೆಯದೆಂದು ತಜ್ಞರು ಅಭಿಪ್ರಾಯ ಪಟ್ಟಿದ್ದಾರೆ. ಇವೆಲ್ಲವು ಬೆಂಗಳೂರು ಪ್ರದೇಶದಲ್ಲಿ ಮಾನವ ವಸತಿಯನ್ನು ಕ್ರಿ.ಪೂ. ೬೦೦೦ಕ್ಕಿಂತ ಹಿಂದಕ್ಕೆ ಒಯ್ಯುತ್ತದೆ.

**ನವಶಿಲಾಯುಗ**

ನವಶಿಲಾಯುಗದ ತಾಣಗಳನ್ನು ಇನ್ನೂ ವಿಸ್ತೃತವಾಗಿ ಬೆಂಗಳೂರು ಪ್ರದೇಶದಲ್ಲಿ ಗುರುತಿಸಬಹುದಾಗಿದೆ. ಈ ತಾಣಗಳ ಅವಧಿಯು ಕ್ರಿಪೂ ನಾಲ್ಕು ಸಾವಿರದ ಐದುನೂರು ವರ್ಷಗಳಷ್ಟು ಪ್ರಾಚೀನವಾದದ್ದಾಗಿದೆ. ನವಶಿಲಾಯುಗದ ನೆಲೆಗಳನ್ನು ಕೆಂಗೇರಿ, ಬೆಂಗಳೂರು ವಿಶ್ವವಿದ್ಯಾಲಯದ ಜ್ಞಾನಭಾರತಿ ಕ್ಯಾಂಪಸ್‌ನ ಕಣಿವೆ, ಬನ್ನೇರುಘಟ್ಟ ಮತ್ತು ಇಂದಿನ ಸಬ್ ಅರ್ಬನ್ ಪ್ರದೇಶವಾದ ಅನೇಕಲ್ ತಾಲ್ಲೂಕಿನ ದಕ್ಷಿಣಭಾಗವಾದ ಬೂದಿಹೊಲದಲ್ಲಿ ನೋಡಬಹುದು.[೬] ಈ ಪ್ರದೇಶಗಳು ಸೂಕ್ಷ್ಮ ಶಿಲಾಯುಗ ದೊರೆತಿರುವುದಕ್ಕಿಂತ ಭಿನ್ನವಾದ ಪ್ರದೇಶಗಳಾಗಿವೆ. ಈ ಪ್ರದೇಶಗಳು ಜಲಾನಯನ ಪ್ರದೇಶಗಳಾಗಿರುವುದನ್ನು ಗಮನಿಸಬಹುದು. ಇವುಗಳಿಂದ ಬೆಂಗಳೂರು ಪ್ರದೇಶದಲ್ಲಿ ಜನವಸತಿ ಹಂತ ಹಂತವಾಗಿ ವಿಸ್ತೃತವಾಗಿರುವುದನ್ನು ಕಾಣಬಹುದು.

**ಬೃಹತ್ ಶಿಲಾಯುಗ**

ಬೃಹತ್ ಶಿಲಾಯುಗದ ಹೊತ್ತಿಗೆ ಬೆಂಗಳೂರು ಪ್ರದೇಶದ ಅನೇಕ ಭಾಗಗಳು ಜನವಸತಿ ಕೇಂದ್ರಗಳಾಗಿ ಬದಲಾಗಿದ್ದವು. ಅವುಗಳೆಂದರೆ, ಬಾಣಸವಾಡಿ, ಕಣ್ಣೂರು, ಜಾಲಹಳ್ಳಿ, ಬೈರಸಂದ್ರ, ಬೇಗೂರು, ಚಿಕ್ಕಜಾಲ, ಕೋರಮಂಗಲ, ದೊಡ್ಡಜಾಲ, ಕೆಂಗೇರಿಯ ಚಿನ್ನಕುರ್ಚಿ, ಬೆಳ್ಳಂದೂರು, ಹುಳಿಮಾವು ಹಾಗೂ ಇಂದಿನ ನಗರ ಪರಿಸರದ ಬನ್ನೇರುಘಟ್ಟ, ಮಾಗೊಂಡನಹಳ್ಳಿ, ಲಿಂಗರಾಜಪುರಂ, ಚೌಡಸಂದ್ರ, ಬೂದಿಹೊಲ ಹಾಗೂ ಜಡಿಗೇನಹಳ್ಳಿ. ಅಲ್ಲದೆ ಕಣ್ಣೂರು, ಚಿಕ್ಕಜಾಲಗಳಲ್ಲಿ ಈ

ಕಾಲಘಟ್ಟದ ಕಬ್ಬಿಣದ ವಸ್ತುಗಳು, ಮಡಿಕೆ–ಕುಡಿಕೆಗಳು ದೊರೆತಿರುವುದು ಈ ಸ್ಥಳಗಳನ್ನು ಬೃಹತ್ ಶಿಲಾಯುಗದ ಕಾಲದೊಂದಿಗೆ ಗುರುತಿಸಲು ಸಹಕಾರಿಯಾಗಿದೆ. ಸೂಕ್ಷ್ಮ ಶಿಲಾಯುಗ ಮತ್ತು ನವ ಶಿಲಾಯುಗದ ತಾಣಗಳನ್ನು ಒಳಗೊಂಡು ಜನವಸತಿ ಈ ಹಂತದಲ್ಲಿ ವಿಸ್ತಾರವಾಗಿರುವುದನ್ನು ಗುರುತಿಸಬಹುದು.

ಬೆಂಗಳೂರು ಮತ್ತು ಅದರ ಸುತ್ತಮುತ್ತಲಿನ ದೊಡ್ಡಬಳ್ಳಾಪುರ, ರಾಮನಗರ, ಆನೇಕಲ್ಲು ಮತ್ತು ದೇವನಹಳ್ಳಿ ಪ್ರದೇಶಗಳು ಮನುಷ್ಯ ನಿರಂತರವಾಗಿ ನೆಲೆನಿಂತ ಪ್ರದೇಶಗಳಾಗಿವೆ. ಮನುಷ್ಯ ಇಲ್ಲಿ ಸುಮಾರು ಮೂರುಸಾವಿರ ವರ್ಷಗಳಿಂದ ಕೃಷಿ ಚಟುವಟಿಕೆಯಲ್ಲಿ ತೊಡಗಿದ್ದು, ಗ್ರಾಮೀಣ ಜೀವನ ನಡೆಸುತ್ತಿದ್ದರೆಂದು ತಿಳಿದುಬರುತ್ತದೆ.[2] ಈ ನಿಟ್ಟಿನಲ್ಲಿ ಬೆಂಗಳೂರಿನ ಪ್ರದೇಶದಲ್ಲಿ ಆರಂಭಿಕ ಹಲವು ನೆಲೆಗಳು ದೊರೆತಿದ್ದು, ಇವುಗಳೆಲ್ಲವೂ ಸುತ್ತಮುತ್ತಲ ಪ್ರದೇಶಗಳೊಂದಿಗೆ ಆರ್ಥಿಕ ಸಂಪರ್ಕವಾದ ಕೊಡು–ಕೊಳ್ಳುವ ಚಟುವಟಿಕೆಯಲ್ಲಿ ತೊಡಗಿಕೊಂಡಿದ್ದವು. ಇದಕ್ಕೆ ಸಾಕ್ಷಿಯಾಗಿ ಚಿಕ್ಕಜಾಲದ ಉತ್ಖನನದಲ್ಲಿ ದೊರೆತ ಕಬ್ಬಿಣದ ವಸ್ತುಗಳು, ಕಣ್ಣೂರಿನಲ್ಲಿನ ಉತ್ಖನನದಲ್ಲಿ ದೊರೆತಿರುವ ಕಪ್ಪು ಮತ್ತು ಕೆಂಪು ಮಿಶ್ರಿತ ಮಡಿಕೆಗಳನ್ನು ನೋಡಬಹುದು.

ಕೋಲಾರ ಪ್ರದೇಶದಲ್ಲಿ ನಿಯೋಲಿಥಿಕ್ ಕಾಲದ ಜನಜೀವನದ ಕುರುಹುಗಳು ಉತ್ಖನನದಿಂದ ಪತ್ತೆಯಾಗಿವೆ. ಇಲ್ಲಿ ಸೂಕ್ಷ್ಮ ಶಿಲಾಯುಗ, ನವ ಶಿಲಾಯುಗ, ಬೃಹತ್ ಶಿಲಾಯುಗದ ಜನವಸತಿಗಳು ಪತ್ತೆಯಾಗಿವೆ. ಈ ಪ್ರದೇಶಗಳಲ್ಲಿನ ಎಲ್ಲ ತಾಣಗಳು ಒಂದೇ ವೇಗದಲ್ಲಿ ಅಭಿವೃದ್ಧಿಯನ್ನು ಹೊಂದಲಿಲ್ಲ. ಕೆಲವು ಪ್ರದೇಶಗಳು ಮಾತ್ರ ಮೂರು ಹಂತದ ಬೆಳವಣಿಗೆಗೆ ಸಾಕ್ಷಿಯಾಗಿವೆ. ಇವುಗಳಲ್ಲಿ ಜನವಸತಿ, ಪಶುಪಾಲನೆ ಮತ್ತು ಪ್ರಾಥಮಿಕ–ಕೃಷಿ ವ್ಯವಸ್ಥೆಯು ನಿಧಾನಗತಿಯಲ್ಲಿ ವೃದ್ಧಿಗೊಂಡಿತು. ಈ ಹಂತವು ಕೃಷಿಗೆ ಪೂರಕವಾದ ಹಲವು ಉತ್ಪಾದನಾ ವರ್ಗಗಳ ಸೃಷ್ಟಿಗೆ ಅವಕಾಶ ನೀಡುತ್ತಾ ಒಂದು ಹೊಸ ವರ್ಗ ಸಮಾಜವನ್ನು ರೂಪಿಸಿತು. ಈ ಹಂತದಲ್ಲಿಯೇ ಉತ್ಪಾದಕ ವರ್ತಕ ವರ್ಗಕ್ಕೆ ಸಂಬಂಧಿಸಿದಂತೆ ವಿನಿಮಯ ವರ್ತಕ ಚಟುವಟಿಕೆಗಳು ಕಾಣಿಸಿಕೊಳ್ಳುತ್ತಾ ಹೋದವು. ಅದರ ಬೆನ್ನಲ್ಲೇ ಆರ್ಥಿಕ ವ್ಯವಸ್ಥೆಯ ಲಾಭಪಡೆಯುವ–ನಿಯಂತ್ರಿಸುವ ಹಂತವಾಗಿ ಪ್ರಭುತ್ವದ ಹಸ್ತಕ್ಷೇಪವು ಆರಂಭವಾಯಿತು. ಬೆಂಗಳೂರಿನ ಸಮೀಪದ ಕೋಲಾರದಲ್ಲಿ ಕಂಡುಬರುವ ಈ ಬೆಳವಣಿಗೆಗಳು ಅಲ್ಲಿಗಷ್ಟೇ ಸೀಮಿತವಾಗಲಿಲ್ಲ. ಈ ಲಕ್ಷಣಗಳನ್ನು ನೆರೆಯ ಬೆಂಗಳೂರಿನಲ್ಲಿಯೂ ಕಾಣಬಹುದು. ಈ ಘಟ್ಟದಲ್ಲಿ ಪ್ರಭುತ್ವ ಮತ್ತು ವರ್ತಕ ಸಮುದಾಯಗಳ ಕಾರ್ಯಚಟುವಟಿಕೆಗಳು ಆರಂಭವಾದವು. ಇದು ಇಂದಿನ ಬೆಂಗಳೂರಿನ ಸ್ಥಾಪನೆಗೆ ಪೂರಕವಾಗಿ ಪರಿಣಮಿಸಿತು.

### ಮೌರ್ಯರು

ಮೌರ್ಯರು ಭಾರತವನ್ನು ಆಳಿದ ಮೊದಲ ಸಾಮ್ರಾಟರು. ದಕ್ಷಿಣ ಕರ್ನಾಟಕವು ಅವರ ಆಳ್ವಿಕೆಗೆ ಒಳಪಡದೆ ಇದ್ದರೂ ಸಹ ಅವರ ಕಾಲದಲ್ಲಿ ಜೈನ ಧರ್ಮ ಮತ್ತು ಬೌದ್ಧ ಧರ್ಮ

ದಕ್ಷಿಣಕ್ಕೆ ಪಸರಿಸಿತ್ತು ಎಂಬ ಅಂಶವು ಗಮನಾರ್ಹ. ಧರ್ಮದ ಬೆನ್ನಲ್ಲೇ ವ್ಯಾಪಾರದ ಛಾಯೆಯನ್ನು ಬೌದ್ಧ ಧರ್ಮದ ಜಾತಕ ಕಥೆಗಳು ಆಂತರಿಕ ಮತ್ತು ಬಾಹ್ಯ ವ್ಯಾಪಾರದ ಬಗೆಗೆ ಹಲವು ಸುಳಿವುಗಳನ್ನು ನೀಡುತ್ತವೆ. ಅಶೋಕನ ಶಾಸನಗಳ ಮೂಲಕ ಕರ್ನಾಟಕದ ಚಿತ್ರದುರ್ಗದವರೆಗೂ ರಾಜ್ಯ ವಿಸ್ತರಿಸಿದ್ದಕ್ಕೆ ಸಾಕ್ಷಿ ದೊರೆಯುತ್ತದೆ. ಬ್ರಹ್ಮಗಿರಿ ಮತ್ತು ಜಟಿಂಗ ರಾಮೇಶ್ವರದಲ್ಲಿನ ಶಾಸನಗಳ ಪ್ರಕಾರ ಇವುಗಳ ಮೇಲ್ವಿಚಾರಣೆಗಾಗಿ ಮಹಾಮಾತ್ರರನ್ನು ನೇಮಿಸಲಾಗಿತ್ತು. ಮಹಾವಂಶದಲ್ಲಿ ಮಹಾಥೇರಾದ (ಸ್ಥವಿರ) ಥೇರ ರಕ್ಷಿತ ಮತ್ತು ಥೇರ ಮಹಾದೇವರು ಧರ್ಮಪ್ರಚಾರಕ್ಕಾಗಿ ವನವಾಸಿ ಮತ್ತು ಮಹಿಷಮಂಡಲಕ್ಕೆ ಬಂದರು. ನಂತರ ಅಲ್ಲಿಂದ ಥೇರ ಚಂದ್ರಗುಪ್ತನ ನೇತೃತ್ವದಲ್ಲಿ ಸಾವಿರಗಟ್ಟಲೆ ಬೌದ್ಧ ಭಿಕ್ಷುಗಳು ಶ್ರೀಲಂಕಾದ ಅನುರಾಧಪುರಕ್ಕೆ ಧರ್ಮ ಪ್ರಚಾರಕ್ಕಾಗಿ ತೆರಳಿದರು ಎಂಬ ವಿವರವಿದೆ.[೮] ಹಾಗೆ ಅಶೋಕನ ಶಾಸನವೊಂದು ಪ್ರಯಾಣಿಕರಿಗಾಗಿ ರಸ್ತೆಗಳ ನಿರ್ಮಾಣ ಮಾಡಿದ ಬಗೆಗೆ ತಿಳಿಸುತ್ತದೆ. ಅಶೋಕ ತನ್ನ ರಾಜ್ಯದಲ್ಲಿ ಸಾಲು ಮರಗಳನ್ನು ನೆಡಿಸುವಲ್ಲಿ ಗಮನಹರಿಸಿದ ವಿಚಾರವು ಆಡಳಿತ ಮತ್ತು ವ್ಯಾಪಾರದ ಹಿನ್ನೆಲೆಯ ಮಹತ್ವ ಹೊಂದಿರುವುದನ್ನು ಮರೆಯುವಂತಿಲ್ಲ. ಭೂ ಮಾರ್ಗವಾಗಿ ವ್ಯಾಪಾರ ಮಾಡುತ್ತಿದ್ದ ವರ್ತಕರೊಂದಿಗೆ ಬೌದ್ಧ ಭಿಕ್ಕುಗಳಿಗೆ ಸಂಬಂಧವಿತ್ತು. ಅವರೇ ವರ್ತಕರ ಪ್ರಮುಖ ಗ್ರಾಹಕರಾಗಿದ್ದರು ಮತ್ತು ಮೌರ್ಯರ ಕಾಲದಲ್ಲಿ ವರ್ತಕ ಸಂಘಗಳ ಹುಟ್ಟನ್ನು ಪಡೆಯಿತು ಎಂದು ಮೋತಿಚಂದ್ರರವರು ಸ್ಪಷ್ಟಪಡಿಸಿದ್ದಾರೆ. ಮುಂದೆ ತಮ್ಮ ವಾದದಲ್ಲಿ ಸಾರ್ಥವ ಎಂಬ ಸಂಚಾರಿ ವರ್ತಕ ಗುಂಪು ಭಾರತದ ವಿವಿಧ ಭಾಗಗಳಲ್ಲಿ ವ್ಯಾಪಾರಿ ಚಟುವಟಿಕೆಯಲ್ಲಿ ತೊಡಗಿದ್ದರೆಂದು ಧೃಢಪಡುತ್ತದೆ.[೯] ಮಸ್ಕಿ, ಕೊಪ್ಪಳ, ನಿಟ್ಟೂರು, ಬ್ರಹ್ಮಗಿರಿಗಳಲ್ಲಿ ದೊರೆತ ಅಶೋಕನ ಕಿರುಬಂಡೆ ಶಾಸನಗಳು ಅವನ ಧರ್ಮ ಪ್ರಚಾರದ ಬಗೆಗೆ ಹೆಚ್ಚು ಬೆಳಕು ಚೆಲ್ಲುವುದರ ಜೊತೆಗೆ ಪ್ರಮುಖ ವ್ಯಾಪಾರಿ ಪಟ್ಟಣಗಳಾಗಿದ್ದಕ್ಕೂ ಸಾಕ್ಷಿಯಾಗಿವೆ. ಬಹುತೇಕವಾಗಿ ಈ ಎಲ್ಲ ಶಾಸನಗಳನ್ನು ಜನಸಾಂದ್ರತೆಯ ಸ್ಥಳಗಳಲ್ಲಿ ಹಾಕಿಸಲಾಗುತಿತ್ತು. ಬೃಹತ್ ಶಿಲಾಯುಗದಲ್ಲಿ ಜನವಸತಿಯು ಬೆಟ್ಟಗುಡ್ಡಗಳ ಮೇಲೆ ಹೆಚ್ಚಾಗಿದ್ದು ಕ್ರಮೇಣ ನದಿ ತೀರಗಳಿಗೆ ಇಳಿದು ಬಂದರು ಎಂಬುದು ಈಗಾಗಲೇ ಒಪ್ಪಿತವಾದ ಅಂಶವಾಗಿದೆ. ಈ ವಾದವು ಸಮಕಾಲೀನವಾಗಿ ಅಶೋಕನ ಶಾಸನಗಳು ದೊರೆತ ಪ್ರದೇಶಗಳು ಜನಸಾಂದ್ರತೆಯ ಸ್ಥಳಗಳಾಗಿದ್ದವು ಎಂಬುದಕ್ಕೆ ಪೂರಕವಾಗಿದೆ. ದಕ್ಷಿಣ ಕರ್ನಾಟಕದಿಂದ ಸಾಂಬಾರು ಪದಾರ್ಥ, ಬೆಲೆಬಾಳುವ ಲೋಹಗಳು, ಪಚ್ಚೆ ಇತ್ಯಾದಿ ವಸ್ತುಗಳು ಮೌರ್ಯರ ಸಾಮ್ರಾಜ್ಯಕ್ಕೆ ರಫ್ತಾಗುತ್ತಿದ್ದವು. ಈ ಸಂದರ್ಭದಲ್ಲಿ ದಕ್ಷಿಣ ಕರ್ನಾಟಕ ಪ್ರದೇಶ ಬುಡಕಟ್ಟು ಅರಸರ ಆಳ್ವಿಕೆಗೆ ಒಳಪಟ್ಟಿದ್ದು, ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಮೌರ್ಯರು, ಪಲ್ಲವ, ಚೇರ, ಪುನ್ನಾಟರ ಆಳ್ವಿಕೆಯಲ್ಲಿ ವ್ಯಾಪಾರಿ ಚಟುವಟಿಕೆಗಳು ನಡೆಯುತ್ತಿದ್ದವು.[೧೦]

## ಮೌರ್ಯೋತ್ತರ ಕಾಲ

ಮೌರ್ಯರ ನಂತರದಲ್ಲಿ ಶಕರು, ಕುಶಾನರು, ಗುಪ್ತರು ಹಾಗೂ ಶಾತವಾಹನರು ಮುಖ್ಯವಾಗಿ ಕಂಡುಬರುವ ರಾಜಮನೆತನಗಳು. ಇವರ ಕಾಲದಲ್ಲಿ ಬೌದ್ಧಧರ್ಮ ಏರುಮುಖ ಬೆಳವಣಿಗೆಯನ್ನು ಕಂಡಿತು. ಗುಪ್ತರ ಕಾಲದಲ್ಲಿ ಬೌದ್ಧ ಧರ್ಮ ಹಿನ್ನಡೆಯನ್ನು ಆರಂಭಿಸಿತು ಮತ್ತು ಬ್ರಾಹ್ಮಣ ಧರ್ಮ ಪ್ರಬಲಗೊಳ್ಳುವುದು ಆರಂಭಗೊಂಡಿತು. ಉತ್ತರ ಭಾರತದಲ್ಲಿ ನಾಗರಿಕ ನೆಲೆಯನ್ನು ಈಗಾಗಲೇ ಕಂಡುಕೊಂಡಿತ್ತು. ಆದರೆ ಕರ್ನಾಟಕದಲ್ಲಿ ಇದು ಮೊದಲನೆಯ ನಾಗರಿಕತೆಯ ಆರಂಭಿಕ ಕಾಲವಾಗಿತ್ತು. ಈ ಹಂತದಲ್ಲಿ ಶಾತವಾಹನರು ಮೌರ್ಯರ ನಂತರ ದಕ್ಷಿಣ ಭಾರತದಲ್ಲಿ ಕಂಡುಬರುವ ಪ್ರಮುಖ ಅರಸು ಮನೆತನ. ಕರ್ನಾಟಕದ ಹಲವು ಭಾಗ ಇವರ ಆಳ್ವಿಕೆಗೆ ಒಳಪಟ್ಟಿತು. ಶಾತವಾಹನರ ಸಮಾಜವು ವರ್ಣಾಶ್ರಮ ಧರ್ಮದ ಆಧಾರದ ಮೇಲೆ ಶ್ರಮವಿಭಜನೆಯಲ್ಲಿ ರಚಿತಗೊಂಡಿದ್ದು, ಬ್ರಾಹ್ಮಣ ಮತ್ತು ಬುಡಕಟ್ಟುಗಳ (ಬೃಹತ್ ಶಿಲಾಸಮಾಧಿಯ ಜನರ) ನಡುವೆ ಪರಸ್ಪರ ಸಂಸ್ಕೃತಿಯ ಸಂಕ್ರಮಣದ ಕಾಲವಾಗಿತು. ಅರಸರ ದಾನ–ದತ್ತಿಗಳು ಮತ್ತು ಶಾತವಾಹನರ ಸೇನಾ ವ್ಯವಸ್ಥೆಯಲ್ಲಿ ಗುಲ್ಮ ಸೇನಾ ಪಡೆಯು ಊಳಿಗಮಾನ್ಯ ವ್ಯವಸ್ಥೆಯನ್ನು ಸೃಷ್ಟಿಸಿತು.[೧೧] ಇದು ಊಳಿಗಮಾನ್ಯ ವ್ಯವಸ್ಥೆಯ ಆರಂಭದ ಮೊದಲ ಕಾಲಘಟ್ಟವಾಗಿದೆ. ಶಾತವಾಹನರು ಕರ್ನಾಟಕದಲ್ಲಿ ಕಬ್ಬಿಣದ ನೇಗಿಲನ್ನು ಪರಿಚಯಿಸಿದ್ದು ಇದಕ್ಕೆ ಮುಖ್ಯ ಕಾರಣ. ಇವರ ಕಾಲದಲ್ಲೇ ಉತ್ತರ ಕರ್ನಾಟಕದಲ್ಲಿ ಒಂದು ಪ್ರಬಲ ಸರಕು ಉತ್ಪಾದಕರ ಸಮಾಜ (ಕಸಬುದಾರರ) ಹುಟ್ಟಿಕೊಂಡಿತು ಮತ್ತು ಕುಶಲಕರ್ಮಿಗಳು ಉಗಮ ಕಂಡಿತು ಹಾಗೂ ತಮ್ಮ ತಮ್ಮ ವೃತ್ತಿಸಂಘಗಳ ಸ್ಥಾಪನೆ ಮಾಡಿಕೊಂಡರು. ಇದು ಈ ಪ್ರದೇಶದ ಜನರು ನಾಗರಿಕ ಸಂಸ್ಕೃತಿಯನ್ನು ಮೈಗೂಡಿಸಿಕೊಳ್ಳುವುದಕ್ಕೆ ಮುಂದಾದರು ಈ ತೆರನಾದ ಸಮಾಜವು ಪ್ರತ್ಯೇಕವಾಗಿ ಕೃಷಿಯೇತರ ಉತ್ಪಾದಿತ ಉತ್ಪನ್ನಗಳ ನಿರ್ವಹಣೆಯ ಕಾರ್ಯವನ್ನು ನೋಡಿಕೊಳ್ಳುವಂತೆ ವರ್ಗವೊಂದನ್ನು ರೂಪಿಸಿತು. ಇದರಿಂದಾಗಿ ಪ್ರಬಲ ವಿನಿಮಯ ವರ್ತಕರ ಶ್ರೇಣಿಯು ಸಮಾಜದ ಮುಖ್ಯವಾಹಿನಿಗೆ ಬಂದವು. ಇವರ ಧಾರ್ಮಿಕ ಸಂಸ್ಥೆಗಳಿಗೆ ದಾನಗಳನ್ನು ಕೊಟ್ಟಿರುವ ವಿವರಣೆಗಳು ಹೆಚ್ಚಾಗಿ ದೊರೆಯುತ್ತವೆ. ಉದಾಹರಣೆ, ಕಾರ್ಲೆ. ದಕ್ಷಿಣದಲ್ಲಿ ಎರಡನೇ ಶತಮಾನದ ಮೊದಲೇ ಬೌದ್ಧಧರ್ಮದ ಕೇಂದ್ರವಾಗಿ ನಾಗಾರ್ಜುನಕೊಂಡ ಮತ್ತು ಕಂಚಿ ಗುರುತಿಸಿಕೊಂಡವು. ಬಂಡವಾಳವನ್ನು ಶೇಖರಿಸುತ್ತಿದ್ದ ಹಾಗೂ ಪೂರೈಸುತ್ತಿದ್ದ ಈ ವಿಹಾರಗಳು ನಾಗರಿಕ ಬೆಳವಣಿಗೆಯ ಜೊತೆ ಹೊರನಾಡ ವಾಣಿಜ್ಯವನ್ನು ಅಭಿವೃದ್ಧಿಪಡಿಸಿತ್ತು.[೧೨] ಈ ಕಾಲದಲ್ಲಿ ಉತ್ತರ ಮತ್ತು ದಕ್ಷಿಣ ಭಾರತದ ನಡುವೆ ಆಡಳಿತ, ಧರ್ಮಪ್ರಚಾರದ ನೆಲೆಯಲ್ಲಿ ರಸ್ತೆಗಳು ನಿರ್ಮಿತವಾಗಿತ್ತು. ಈ ಮಾರ್ಗಗಳ ಮೂಲಕ ವ್ಯಾಪಾರಿ ಚಟುವಟಿಕೆಗಳು ಮುಂದುವರೆದದ್ದನ್ನು ಸಂದೇಹದ ದೃಷ್ಟಿಯಿಂದ ನೋಡುವ ಅಗತ್ಯವಿಲ್ಲ. ಇದು ಬೆಂಗಳೂರು ಪ್ರದೇಶಕ್ಕೂ ಅನ್ವಯಿಸುತ್ತದೆ.

ಕ್ರಿ.ಪೂ ಒಂದನೆಯ ಶತಮಾನದಿಂದ ಕ್ರಿ.ಶ ಒಂದನೆಯ ಶತಮಾನದ ರೋಮನ್ ದೊರೆಗಳಾದ ಅಗಸ್ಟಸ್, ಟೈಬೀರಿಯಸ್, ಕಾಕಿಗುಲ ಅರಸರ ಕಾಲದ ನಾಣ್ಯಗಳು ಬೆಂಗಳೂರಿನ ಯಶವಂತಪುರದ ಬಳಿ ಕ್ರಿ.ಶ ೧೯೮೧ರಲ್ಲಿ ದೊರೆತಿದೆ. ೧೬೩ ಬೆಳ್ಳಿ ನಾಣ್ಯಗಳು ಮಣ್ಣಿನ ಮಡಿಕೆಯೊಳಗಿತ್ತು. ಹಾಗೇ ೧೯೬೫ರಲ್ಲಿ ಏರ್‌ಪೋರ್ಟ್‌ನ ಬಳಿ ಇದೇ ಕಾಲಕ್ಕೆ ಸೇರಿದ ೨೫೬ ರೋಮನ್ ನಾಣ್ಯಗಳು ದೊರೆತಿವೆ.[೧೩] ಇವು ಉದ್ದನೆಯ ಕೆಂಪು ಬೂದು ಬಣ್ಣದ ಮೇಲೆ ಬಿಳಿ ಬಣ್ಣದ ಲೇಪವನ್ನು ಹೊಂದಿದ ಮಣ್ಣಿನ ಮಡಿಕೆಯಲ್ಲಿ ದೊರೆತಿವೆ. ಇದೇ ರೀತಿಯಲ್ಲಿ ಭಾರಿ ಪ್ರಮಾಣದ ರೋಮನ್ನರ ನಾಣ್ಯಗಳು, ಮಡಿಕೆಗಳು ಪಾಂಡಿಚೇರಿ ಬಳಿಯ ಅರಿಕಮೆಡು, ಚಂದ್ರವಳ್ಳಿ, ಧಾರವಾಡ[೧೪] ಹಾಗೂ ಬಿಜಾಪುರದ ಕತ್ರಲ್‌ಗಳಲ್ಲಿ ದೊರೆತಿವೆ.[೧೫] ಈ ಪ್ರದೇಶಗಳ ಮೂಲಕ ಉತ್ತರ ಭಾರತದೊಂದಿಗೆ ವ್ಯಾಪಾರ ನಡೆಯುವ ಭೂ ಮಾರ್ಗವಿತ್ತೆಂದು ಸ್ಪಷ್ಟವಾಗುತ್ತದೆ. ಬೃಹತ್ ಶಿಲಾಯುಗದಲ್ಲಿ ಈ ಪ್ರದೇಶಗಳು ಅರಿಕಮೇಡುವಿನಿಂದ ಬಿಜಾಪುರ ಕತ್ರಲ್‌ವರೆಗಿನ ವ್ಯಾಪಾರಿ ಮಾರ್ಗವೊಂದನ್ನು ಈ ಉತ್ಖನನಗಳು ಅನಾವರಣಗೊಳಿಸಿವೆ. ಈ ಮಾರ್ಗದಲ್ಲಿ ಪ್ರಸ್ತುತ ಬೆಂಗಳೂರಿನ ಪ್ರದೇಶದಲ್ಲಿ ದೊರೆತಿರುವ ನಾಣ್ಯಗಳು ಬೆಂಗಳೂರು ನಿರ್ಮಾಣ ಪೂರ್ವದ ವ್ಯಾಪಾರಿ ನೆಲೆಯನ್ನು ತೆರೆದಿಡುತ್ತವೆ. ಈ ಪ್ರದೇಶದ ಜನರು ಬೃಹತ್ ಶಿಲಾಯುಗದಲ್ಲಿ ಅಂತಾರಾಷ್ಟ್ರೀಯ ಮಟ್ಟದ ವ್ಯಾಪಾರ ಸಂಬಂಧವನ್ನು ಹೊಂದಿದ್ದರು ಎಂದು ಊಹಿಸಬಹುದು. ಇದಕ್ಕೆ ಪೂರಕವಾಗಿ ಪಲ್ಲವರು ಮತ್ತು ಶಾತವಾಹನರು ರೋಮ್‌ನೊಂದಿಗೆ ವ್ಯಾಪಾರ ಸಂಬಂಧ ಹೊಂದಿದ್ದರು ಎಂಬುದಕ್ಕೆ ಸ್ಪಷ್ಟ ದಾಖಲೆಗಳು ಮತ್ತು ನಾಣ್ಯಗಳು ಈಗಾಗಲೇ ಸಿಕ್ಕಿವೆ.[೧೬] ಅಷ್ಟೇ ಅಲ್ಲದೆ ಎರಡು ಮತ್ತು ಮೂರನೆಯ ಶತಮಾನಕ್ಕೆ ಸೇರಿದ ಬೌದ್ಧ ಅವಶೇಷಗಳು ಬೆಂಗಳೂರಿನ ಪ್ರದೇಶಗಳಾದ ಕಲ್ಯ, ದೊಡ್ಡಬಳ್ಳಾಪುರದ ಬಳಿ ದೊರೆತಿವೆ. ದೊಡ್ಡಬಳ್ಳಾಪುರದ ರಾಜಘಟ್ಟದ ಬಳಿ ಇರುವ ಬೌದ್ಧ ಚೈತ್ಯಾಲಯವೊಂದರ ಅವಶೇಷಗಳಲ್ಲಿ ಮುನ್ನೂರಕ್ಕೂ ಹೆಚ್ಚಿನ ಮಣ್ಣಿನ ಹರಕೆ ಸ್ತೂಪ ಮುದ್ರೆ ಸಿಕ್ಕಿದೆ. ಇವುಗಳ ಮೇಲೆ 'ಯೇ ಧಮಾ ಹೇತುಪ್ಪಭವಾ ತೇಸ ಹೇರು ತಥಾಗತೋ ಆ ಹೇತೇಸಚಯೋ ನಿರೋಧೋ ಏವವಾದೀ ಮಹಾಸಮಣೋ' ಎಂದಿದೆ.[೧೭] ಸಾಮಾನ್ಯವಾಗಿ ಪ್ರಾಚೀನ ಕಾಲದಲ್ಲಿ ಬಸದಿಗಳನ್ನು ಸಂಚಾರಿ ಮಾರ್ಗಕ್ಕೆ ಸಮೀಪವಾಗಿ ಅಥವಾ ಸಾರ್ವಜನಿಕರಿಂದ ಕೂಡಿದ ವ್ಯಾಪಾರಿ ಸ್ಥಳಗಳ ಬದಿಯಲ್ಲಿ ನಿರ್ಮಿಸುತ್ತಿದ್ದರು. ಈ ಮೇಲಿನ ವಿಚಾರಗಳು ಎರಡು ವಿಚಾರಗಳೆಡೆಗೆ ಗಮನ ಸೆಳೆಯುತ್ತದೆ. ಒಂದನೆಯದಾಗಿ, ಬೆಂಗಳೂರು ಸುತ್ತಮುತ್ತಲಿನ ಪ್ರದೇಶ ನಿರಂತರ ಜನವಸತಿಯ ನೆಲೆಯಾಗಿತ್ತು ಹಾಗೂ ಹರಕೆ ಸ್ತೂಪಗಳು ಉತ್ಪಾದನಾ ವರ್ತಕರಾದ ಕುಂಬಾರ ವೃತ್ತಿಯ ಕೌಶಲ್ಯತೆಯನ್ನು ಪರಿಚಯಿಸುತ್ತದೆ. ಇದರ ಅರ್ಥ ವ್ಯವಸ್ಥಿತವಾದ ಜನ ಸಮುದಾಯವೊಂದು ಆ ಹೊತ್ತಿಗಾಗಲೇ ರೂಪುಗೊಂಡಿತ್ತು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಮೌರ್ಯರ ಕಾಲದಲ್ಲಿ ಬೆಂಗಳೂರು ಸುತ್ತಮುತ್ತಲ

ಪ್ರದೇಶಗಳಲ್ಲಿ ಮೇಲಿನ ಲಕ್ಷಣಗಳು ಕಂಡುಬಂದಿದ್ದರೆ, ಶಾತವಾಹನರ ಕಾಲದಲ್ಲಿ ಬೆಂಗಳೂರು ಪ್ರದೇಶದೊಳಗೆ ಕಂಡುಬರುತ್ತದೆ. ಎರಡನೆಯದಾಗಿ, ಜೈನ ಮತ್ತು ಬೌದ್ಧ ಧರ್ಮಿಯರು ಧರ್ಮ ಪ್ರಚಾರದ ಜೊತೆಯಲ್ಲಿಯೇ ವ್ಯಾಪಾರ ನಿರತ ಸಮುದಾಯಗಳಾಗಿದ್ದವು ಎಂಬುದು ಗಮನಾರ್ಹ. ಈ ಹಿನ್ನೆಲೆಯಲ್ಲಿ ಬೆಂಗಳೂರು ಪ್ರದೇಶವು ಮುಖ್ಯವಾದ ವ್ಯಾಪಾರಿ ಮಾರ್ಗವಾಗಿತ್ತು ಅಥವಾ ಈ ಪ್ರದೇಶದ ಜನರು ರೋಮನ್ನರೊಂದಿಗೆ ವ್ಯಾಪಾರ ಸಂಬಂಧ ಹೊಂದಿದ್ದರು ಎಂದು ಹೇಳಬಹುದು.

ಶಾತವಾಹನರ ನಂತರದಲ್ಲಿ ಈ ಪ್ರದೇಶದಲ್ಲಿದ್ದ ಕೆಳವರ್ಗದ ಬುಡಕಟ್ಟು ನಾಯಕರು (ಬೃಹತ್ ಶಿಲಾಯುಗ) ಸ್ಥಿರವಾದ ನೆಲೆಗಳನ್ನು ಸ್ಥಾಪಿಸಿಕೊಂಡರು. ಪ್ರಬಲವಾದ ಸ್ಥಳೀಯ ಪ್ರಭುತ್ವಗಳಾಗಿ ಈ ವರ್ಗಗಳು ಬೆಳೆದುಬಂದದ್ದು ಕೃಷಿಕ ವ್ಯವಸ್ಥೆಯ ಬೆಳವಣಿಗೆಯ ಮೂಲಕವೇ ಆಗಿದೆ. ಗುಪ್ತರ ನಂತರ ಪ್ರಾಂತೀಯ ರಾಜ್ಯಗಳು ಹುಟ್ಟಿಕೊಂಡವು. ಇವು ಚಾತುರ್ವರ್ಣ್ಯಕ್ಕೆ ಅನುಸಾರವಾಗಿದ್ದರೂ ಸ್ಥಳೀಯ ಅಗತ್ಯಗಳಿಗೆ ಅನುಸಾರವಾಗಿ ಶ್ರೇಣೀಕರಣಗಳಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡವು. ಅವು ಹಿಂದಿನ ಅರಸು ಮನೆತನಗಳಿಗಿಂತ ಹೆಚ್ಚು ವಿಸ್ತಾರವಾಗಿ ಜಾತಿ ಸಮುದಾಯಗಳ ಒಳಗಿಂದ ಮೂಡಿಬಂದವುಗಳು. ಹಾಗಾಗಿ ಅವುಗಳಿಗೆ ಒಂದು ಬಗೆಯ ಸಾಮಾಜಿಕ ಬಲ ಪ್ರಾಪ್ತವಾಯಿತು. ಈ ತೆರನಾದ ಸಾಮಾಜಿಕ ಪರಿಸ್ಥಿತಿಯು ಕೆಲವು ಜನಸಮುದಾಯಗಳ ಉತ್ಪಾದಕತೆಯ ಅಭಿವೃದ್ಧಿಯನ್ನು ಹೆಚ್ಚಿಸಿತು. ಆ ಸಂದರ್ಭದಲ್ಲಿ ಕೆಲವು ಶೂದ್ರ ವರ್ಗಗಳು ಸಮಾಜದಲ್ಲಿ ಮೇಲ್ಮುಖ ಬೆಳವಣಿಗೆಯನ್ನು ಕಂಡವು. ಇದು ಕೆಳಹಂತದ ಆಳುವ ವರ್ಗಗಳ ಸ್ವಯಂ ಪ್ರತಿಪಾದನೆಯನ್ನೂ ಸೂಚಿಸುತ್ತದೆ.[೧೮] ಮುಂದೆ ಕರ್ನಾಟಕವನ್ನು ಆಳಿದ ಕದಂಬ, ಗಂಗ, ರಾಷ್ಟ್ರಕೂಟ, ಚಾಲುಕ್ಯ ಮೊದಲಾದ ರಾಜ ಸಂತತಿಗಳ ಮೂಲದ ಕುರಿತ ಕಥೆಗಳು ಇದಕ್ಕೆ ಪೂರಕವಾಗಿವೆ. ಈ ಆಧಾರದ ಮೇಲೆ ಕರ್ನಾಟಕವನ್ನು ಆಳಿದ ರಾಜಸಂತತಿಯ ಮೂಲ ಪುರುಷರು ಉತ್ಪಾದಿತ ವರ್ಗವಾಗಿದ್ದು ಮೌರ್ಯ, ಶಾತವಾಹನರ ಕಾಲದಲ್ಲಿ ಕೆಳಹಂತದ ಅಧಿಕಾರಿಗಳಾಗಿದ್ದರು ಎನ್ನಬಹುದು. ಇವರೇ ನಂತರದ ಕಾಲದಲ್ಲಿ ಕರ್ನಾಟಕದ ಪ್ರಮುಖ ಅರಸು ಮನೆತನಗಳಾಗಿ ಕಾಣಿಸಿಕೊಂಡರು.

* * *

ಬೆಂಗಳೂರು ಪ್ರದೇಶದಲ್ಲಿ ಗಂಗರ ಕಾಲದವರೆಗೆ ಅಧಿಕೃತವಾದ ಯಾವ ಆಧಾರಗಳೂ ನಮಗೆ ಬೆಂಗಳೂರು ಪ್ರದೇಶದಲ್ಲಿ ಲಭ್ಯವಿಲ್ಲ. ಗಂಗರ ಕಾಲದಿಂದಲೇ ಬೆಂಗಳೂರು ಪ್ರದೇಶದಲ್ಲಿ ಶಾಸನಗಳು ದೊರೆಯುತ್ತದೆ. ಅಲ್ಲಿಂದೀಚೆಗೆ ಶಾಸನಗಳು ಬೆಂಗಳೂರು ನಗರ ಬೆಳವಣಿಗೆಯ ಮೇಲೆ ಬೆಳಕು ಚೆಲ್ಲುತ್ತವೆ. ಆರ್ಥಿಕತೆಯ ಬೆನ್ನೆಲುಬಾದ ಭೂ ಹಿಡುವಳಿ ಮತ್ತು ವಾಣಿಜ್ಯ ನಿಧಾನಗತಿಯಲ್ಲಿ ವೃದ್ಧಿಯಾದಂತೆ ರಾಜಕೀಯ ಪ್ರಭುತ್ವದ ಹಸ್ತಕ್ಷೇಪ ಕಂಡುಬರುತ್ತದೆ. ತೆರಿಗೆ ಮತ್ತು ಇನ್ನಿತರ ಆರ್ಥಿಕ ಚಟುವಟಿಕೆಗಳನ್ನು ನೋಡಿಕೊಳ್ಳುವ ಉದ್ದೇಶದಿಂದ ಅರಸರು ಊಳಿಗಮಾನ್ಯ

ಮುಖ್ಯಸ್ಥನನ್ನೋ ಅಥವಾ ಸ್ಥಳೀಯ ಪ್ರಮುಖ ವ್ಯಾಪಾರಸ್ಥರನ್ನೋ ಆ ಪ್ರದೇಶದಲ್ಲಿ ನೇಮಿಸುವುದನ್ನು ಕಾಣಬಹುದು. ಈ ವರ್ಗ ಸಮುದಾಯಗಳು ಪ್ರಬಲವಾದಂತೆ ದೇವಾಲಯಗಳಿಗೆ, ಅಗ್ರಹಾರಗಳಿಗೆ ದಾನ–ದತ್ತಿಗಳನ್ನು ಮತ್ತು ಕೆರೆ–ಕಟ್ಟೆಗಳನ್ನು ನಿರ್ಮಿಸುವ ಪ್ರವೃತ್ತಿ ಹೆಚ್ಚಳಗೊಂಡಿರುವುದನ್ನು ಶಾಸನಗಳು ಸ್ಪಷ್ಟಪಡಿಸುತ್ತವೆ. ಈ ದಾನ–ದತ್ತಿಗಳನ್ನು ನೀಡುವ ಮೂಲಕ ಪ್ರಭುತ್ವ ಮತ್ತು ವ್ಯಾಪಾರಸ್ಥರು ತಮ್ಮ ಅಸ್ತಿತ್ವವನ್ನು ದೃಢಪಡಿಸಿಕೊಳ್ಳಲು ಪ್ರಯತ್ನಿಸುತ್ತಿರುವುದು ಶಾಸನಗಳಲ್ಲಿ ಅನಾವರಣಗೊಳ್ಳುತ್ತದೆ. ಇಲ್ಲಿ ವಿವಿಧ ರಾಜ ಸಂತತಿಗಳು ವಿವಿಧ ಕಾಲಘಟ್ಟಗಳಲ್ಲಿ ಹಾಕಿಸಿದ ಶಾಸನಗಳ ಮೂಲಕ ಬೆಂಗಳೂರು ಪ್ರದೇಶದ ರಾಜಕೀಯ ಮತ್ತು ಆರ್ಥಿಕ ಚಟುವಟಿಕೆಗಳನ್ನು ಚರ್ಚಿಸಲಾಗಿದೆ.

## ಗಂಗರ ಆಳ್ವಿಕೆ

ಗಂಗರು ೪ನೇ ಶತಮಾನದಿಂದ ೧೦ನೇ ಶತಮಾನದವರೆಗೆ ಆಳ್ವಿಕೆ ನಡೆಸಿದ್ದು, ಅವರ ಆಳ್ವಿಕೆಯಲ್ಲಿ ಬೆಂಗಳೂರು ಗಂಗವಾಡಿ ೯೬,೦೦೦ದ ಭಾಗವಾಗಿತ್ತು. ಇವರ ರಾಜಧಾನಿಗಳಲ್ಲಿ ಒಂದಾದ ಮಣ್ಣೆ ಇಂದು ಬೆಂಗಳೂರಿನ ನೆಲಮಂಗಲ ತಾಲೂಕಿನಲ್ಲಿದೆ. ಮಣ್ಣೆಯನ್ನು ತಮ್ಮ ರಾಜಧಾನಿಯಾಗಿಸಿ ಬೆಂಗಳೂರು ಪ್ರದೇಶವನ್ನು ಒಳಗೊಂಡಂತೆ ಒಂದನೆಯ ಮಾಧವ, ಹರಿವರ್ಮ, ವಿಷ್ಣುಗೋಪ, ಎರಡನೆಯ ಮಾಧವ, ಶ್ರೀಕೃಷ್ಣವರ್ಮ, ಅವನೀತ, ದುರ್ವಿನೀತ, ಮುಷ್ಕರ, ಶ್ರೀ ವಿಕ್ರಮ, ಭೂವಿಕ್ರಮ, ಒಂದನೇ ಶಿವಮಾರ, ಶ್ರೀಪುರುಷ, ಎರಡನೇ ಶಿವಮಾರ ಮುಂತಾದ ರಾಜರು ಆಳ್ವಿಕೆ ನಡೆಸಿದ ವಿಚಾರವನ್ನು ದೃಢಪಡಿಸುವ ಹಲವು ಶಾಸನಗಳು ಈ ಪ್ರದೇಶದಲ್ಲಿ ದೊರೆತಿವೆ.[೧೯] ಮೂಲತಃ ಗಂಗ ಅರಸರು ಜೈನ ಧರ್ಮೀಯರಾಗಿದ್ದರು. ಹೊಸಕೋಟೆಯಲ್ಲಿ ದೊರೆತ ಶಾಸನವೊಂದರಲ್ಲಿ ಪಲ್ಲವರಾಜ ಸಿಂಹವಿಷ್ಣುವಿನ ಮಡದಿಯು ಇಮ್ಮಡಿ ಸಿಂಹವರ್ಮನ ತಾಯಿಯೂ ಆದ ಜನನ್ಯಾ ಪುಲಿಯೂರಲ್ಲಿ ಒಂದು ಬಸದಿಯನ್ನು ನಿರ್ಮಿಸಿದ ವಿಚಾರವಿದೆ.[೨೦] ಈ ಅಂಶವು ಜೈನ ಧರ್ಮೀಯರು ಬೆಂಗಳೂರು ಪ್ರದೇಶದಲ್ಲಿ ನೆಲೆಸಿದ್ದರು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಇದು ಜೈನರು ವ್ಯಾಪಾರದೊಂದಿಗೆ ಧರ್ಮ ಪ್ರಚಾರದ ಕಾರ್ಯವನ್ನು ಜೊತೆ ಜೊತೆಯಾಗಿ ನಿರ್ವಹಿಸುತ್ತಿದ್ದರು ಎಂಬುದನ್ನು ಸ್ಪಷ್ಟಪಡಿಸುತ್ತದೆ.

ಈ ಕಾಲದಲ್ಲಿ ಕೃಷಿ ಚಟುವಟಿಕೆಗಳು, ಗುಡಿ ಕೈಗಾರಿಕೆಗಳು, ವ್ಯಾಪಾರ ಸಂಘಗಳು ವ್ಯಾಪಾರ–ವಾಣಿಜ್ಯಗಳಿಗೆ ಪೂರಕವಾಗಿತ್ತು ಎಂಬ ವಿಚಾರಗಳು ಹಲವು ಶಾಸಗಳಿಂದ ತಿಳಿಯುತ್ತದೆ. ಶಾಸನಗಳಲ್ಲಿ ದೊರೆತ ಆರ್ಥಿಕ ವಿಚಾರಗಳನ್ನು ಮುಂದೆ ವಿಶ್ಲೇಷಿಸಲಾಗಿದೆ. ಆರನೆಯ ಶತಮಾನದ ನಂತರ ಕರ್ನಾಟಕದ ಬಹು ಪ್ರದೇಶಗಳಲ್ಲಿ ಜೈನ ಧರ್ಮವು ಹೆಚ್ಚು ಪ್ರಬಲವಾಗಿತ್ತು. ಈ ಸಂದರ್ಭದಲ್ಲಿಯೇ ವ್ಯಾಪಾರ–ವಾಣಿಜ್ಯವು ವಿಶಾಲವಾಗಿ ಬೆಳೆದಿರುವುದನ್ನು ಗಮನಿಸಬಹುದು. ಗಂಗರ ಒಂದನೆಯ

ರಾಚಮಲ್ಲನ ಕಾಲದಲ್ಲಿ ಶ್ರೀ ಶಿವಭೀಮದೇವರನ್ನು ಕ್ರಿ.ಶ.೮೨೦ರಲ್ಲಿ ಪ್ರತಿಷ್ಠಾಪನೆ ಮಾಡಿರುವುದನ್ನು ನಾಗೊಂಡನ ಶಾಸನವು ಉಲ್ಲೇಖಿಸುತ್ತದೆ. ಅದರಲ್ಲಿ ೬೨ ಗಣ್ಯರು ಹಾಗೂ ಊರ ಸಮುದಾಯದವರ ಸಮ್ಮುಖದಲ್ಲಿ ಈ ಪ್ರತಿಷ್ಠಾಪನೆ ನೆರವೇರಿತು ಎಂದು ತಿಳಿಸುತ್ತದೆ. ಅಂದರೆ ಈ ಹೊತ್ತಿಗಾಗಲೆ ಬೆಂಗಳೂರು ಒಂದು ಪ್ರಮುಖ ಊರಾಗಿ ಗುರುತಿಸಿಕೊಂಡಿತ್ತು ಎಂಬುದಕ್ಕೆ ದಾಖಲೆಯಾಗಿದೆ.[೨೧] ಮುಂದೆ ರಾಷ್ಟ್ರಕೂಟರು ಮತ್ತು ಗಂಗರ ನಡುವೆ ಉತ್ತಮ ಸಂಬಂಧವೇರ್ಪಟ್ಟಿತು. ನೀತಿಮಾರ್ಗನ ಕಾಲದಲ್ಲಿ ಬೆಂಪೂರು-೧೨ ಎನ್ನುವ ೧೨ ಗ್ರಾಮಗಳು ನಾಗತ್ತರ ಎನ್ನುವ ಅಧಿಕಾರಿಯ ಕೈಸೇರಿತು. ಈತ ಸುವ್ಯವಸ್ಥಿತ ರೀತಿಯಲ್ಲಿ ಆಡಳಿತ ನಡೆಸಿದ್ದನೆಂದು ತಿಳಿದುಬರುತ್ತದೆ. ಈತನ ಅಧಿಕಾರಿ ಸಿರಿಯಮಯ್ಯ ಎಂಬುವವನು ಎಬ್ಬಲೂರಿನ ಮುಖ್ಯಸ್ಥನಾಗಿದ್ದನು. ಅಗರದಲ್ಲಿದ್ದ ಎರಡು ಕೆರೆಗಳಿಗೆ ತೂಬುಗಳನ್ನು ಮಾಡಿಸಿ ನೀರಾವರಿ ಅನುಕೂಲವನ್ನು ಒದಗಿಸಿದನು. ಹಾಗೇ ಇನ್ನೊಂದು ಕೆರೆಯನ್ನು ನಿರ್ಮಿಸಿದನು ಎಂಬುದು ತಿಳಿದುಬರುತ್ತದೆ. ನಾಗತ್ತರ ಸಹ ಬೇಗೂರಿನಲ್ಲಿ ನಾಗೇಶ್ವರ ದೇವಾಲಯವನ್ನು ನಿರ್ಮಿಸಿದ್ದಲ್ಲದೆ ಒಂದು ಕೆರೆಯನ್ನು ನಿರ್ಮಿಸಿದನು.[೨೨] ಇದು ಕೃಷಿ ಚಟುವಟಿಕೆಯನ್ನು ವಿಸ್ತರಿಸಲು ಕಾರಣವಾಯಿತಲ್ಲದೇ ಅಧಿಕ ಇಳುವರಿಯು ವ್ಯಾಪಾರ ವಹಿವಾಟುಗಳನ್ನು ವೃದ್ಧಿಸುವ ಮೂಲಕ ಪ್ರಗತಿಯನ್ನು ಹೊಂದಿತು. ಭತ್ತ, ಹತ್ತಿ, ಕಬ್ಬು, ಜೋಳ, ಎಣ್ಣೆಬೀಜಗಳು, ಅಡಿಕೆ, ತೆಂಗು, ಹುಣಸೆ, ಮೆಣಸಿನಕಾಯಿ, ಏಲಕ್ಕಿ, ಶುಂಠಿ, ಮೆಣಸು ಮೊದಲಾದ ಆರ್ಥಿಕ ಬೆಳೆಗಳನ್ನು ಬೆಳೆಯಲಾಗುತ್ತಿತ್ತು. ಇದರೊಂದಿಗೆ ದಟ್ಟ ಕಾಡಿಗೆ ಹೊಂದಿಕೊಂಡಿದ್ದ ಗಂಗವಾಡಿ ನಿಸರ್ಗ ಸಂಪತ್ತನ್ನು ಸಹಜವಾಗಿ ಹೊಂದಿತ್ತು. ಅರಣ್ಯಗಳಿಂದ ಜೇನು, ಮೇಣ ಇತ್ಯಾದಿಗಳು ವ್ಯಾಪಾರದ ಉತ್ಪನ್ನಗಳಾಗಿದ್ದವು. ಗಂಗರ ಶಾಸನಗಳು ಈ ವಸ್ತುಗಳ ಮೇಲೆ ಹಲವು ವಿಧದ ತೆರಿಗೆಗಳನ್ನು ಹೇರಿದ ವಿಚಾರವನ್ನು ಗಮನಿಸಬಹುದು. ಗಂಗವಾಡಿಯು ಒಳನಾಡ ಪ್ರದೇಶವಾಗಿದ್ದು ತಲಕಾಡು, ಕೋಲಾರ, ಕಂಚಿ, ಧರ್ಮಪುರಿ, ಬಾದಾಮಿ, ಬನವಾಸಿ ಇತ್ಯಾದಿ ಸ್ಥಳಗಳಿಗೆ ಸಂಪರ್ಕ ಮಾರ್ಗವನ್ನು ಹೊಂದಿತ್ತು.[೨೩] ಸಹಜವಾಗಿಯೇ ಈ ಪ್ರದೇಶದ ಮೇಲಿನ ಹಿಡಿತಕ್ಕಾಗಿ ನಡೆದ ಪೈಪೋಟಿ ಹಲವು ಕದನಗಳಿಗೆ ಕಾರಣವಾಯಿತು. ಅಂತಹ ಸಂದರ್ಭದಲ್ಲಿ ಸ್ಥಳೀಯ ಅಧಿಕಾರಿಗಳಾದ ಪ್ರಮುಖ ವರ್ತಕರು ತಮ್ಮ ಪ್ರದೇಶವನ್ನು ಉಳಿಸಿಕೊಳ್ಳಲು ಅರಸರ ಪರವಾಗಿ ಹೋರಾಟ ಮಾಡಿರುವುದು ಕಂಡುಬರುತ್ತದೆ.

ಬೆಂಗಳೂರು ಎಂಬ ಗ್ರಾಮದ ಉಲ್ಲೇಖ ಕಂಡುಬರುವ ಮೊದಲ ಶಾಸನ ಕ್ರಿ.ಶ ೯೧೦ರ ಬೇಗೂರು ಗ್ರಾಮದಲ್ಲಿ ದೊರಕಿದೆ. ಈ ಶಾಸನವು ನಾಗತ್ತರನ ಸೇವಕ (ಮನೆಮಗ) ತಿರಪೆರ್ಮ್ಮ್ಯಣಶೆಟ್ಟಿ ಮತ್ತು ನಾಗತ್ತರನ ಮಗ ಬುಟ್ಟಣಶೆಟ್ಟಿ ಎಂಬ ವರ್ತಕರು ಬೆಂಗಳೂರು ಕದನದಲ್ಲಿ ಮರಣಹೊಂದಿದ ಕುರಿತು ಮಾಹಿತಿ ನೀಡುತ್ತದೆ.[೨೪] ಬೇಗೂರಿನ ವೀರಗಲ್ಲು ಶಾಸನ ನಂತರದ ಕದನದಲ್ಲಿ ನಾಗತ್ತರನು

ಹೋರಾಡಿ ಮಡಿದನೆಂದು ತಿಳಿಸುತ್ತದೆ. ಅಂದರೆ ನಾಗತ್ತರನು ನಾಗೇಶ್ವರ ದೇವಾಲಯವನ್ನು ನಿರ್ಮಿಸಿದ ಎಂಬ ಅಂಶವನ್ನು ಆಧರಿಸಿ ಇವರು ನಖರರಾಗಿದ್ದರು ಎಂಬ ಸ್ಪಷ್ಟ ಅಭಿಪ್ರಾಯಕ್ಕೆ ಬರಬಹುದಾಗಿದೆ. ನಖರರು ಗಂಗರ ಕಾಲದಲ್ಲಿ ರಾಜಾಶ್ರಯ ಪಡೆದ ಪ್ರಬಲ ವರ್ತಕರಾಗಿದ್ದರು. ಜೊತೆಗೆ ಸ್ಥಳೀಯ ಅಧಿಕಾರಿಗಳಾಗಿ, ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸರಕುಗಳನ್ನು ಸಾಗಿಸುವ ಸೈನ್ಯದ ಮುಖಂಡತ್ವವಹಿಸಿ ಹೋರಾಟ ಮಾಡಿ ಮಡಿದ ವಿಚಾರವು ವರ್ತಕರು ಮತ್ತು ಪ್ರಭುತ್ವದ ನಡುವೆ ಇದ್ದ ಸಂಬಂಧವನ್ನು ತೆರೆದಿಡುತ್ತದೆ. ಅಂದಿನ ಬೆಂಗಳೂರಿನ ಗಡಿಗಳನ್ನು ಗುರುತಿಸುವುದು ಕಷ್ಟವಾದರೂ, ಯಾವುದೇ ಒಂದು ಊರು ಅಥವಾ ಗ್ರಾಮ ನಗರವಾಗುವ ಪ್ರಕ್ರಿಯೆಯಲ್ಲಿ ಅದರ ಸುತ್ತಮುತ್ತಲಿನ ಪ್ರದೇಶಗಳ ಪಾತ್ರ ಹಿರಿದಾಗಿರುತ್ತದೆ ಎಂಬುದನ್ನು ಗಮನಿಸಬೇಕು. ಈ ಹಂತದಲ್ಲಿ ಬೇಗೂರು ನಖರರು (ನಗರ್ತರೇ ?)[೨೬] ಮತ್ತು ಜೈನರ ಕೇಂದ್ರವಾಗಿ,[೨೭] ಒಂದು ಪ್ರಮುಖ ಪಟ್ಟಣವಾಗಿ ರೂಪ ಪಡೆದಿತ್ತೆಂದು ತೋರುತ್ತದೆ.

ಆರಂಭಿಕ ಹಂತದಲ್ಲಿ ಇಂದಿನ ಬೆಂಗಳೂರು ಪ್ರದೇಶದಲ್ಲಿ ಪಟ್ಟಣ-ನಗರ ಪ್ರದೇಶಗಳಾಗಿ ದೊಡ್ಡಬಳ್ಳಾಪುರ, ಬೇಗೂರು, ಅಗರ ಪ್ರದೇಶಗಳ ಬೆಳವಣಿಗೆ ಕಂಡುಬರುವುದನ್ನು ಗುರುತಿಸಬಹುದು. ಕಾಲಾನಂತರದಲ್ಲಿ ಪ್ರಭುತ್ವ, ಪರಿಸರ, ಆರ್ಥಿಕ ಚಟುವಟಿಕೆಗಳು ಅನೇಕ ಬದಲಾವಣೆಗಳಿಗೆ ಕಾರಣವಾದವು. ಕಾಲಾಂತರದಲ್ಲಿ ಈ ಮೇಲಿನ ಪ್ರದೇಶಗಳು ಬೆಂಗಳೂರು ನಗರದ ಉಪ-ಪಟ್ಟಣ ಪ್ರದೇಶಗಳಾಗಿ ಪರಿವರ್ತನೆ ಹೊಂದಿರುವುದನ್ನು ಗುರುತಿಸಬಹುದು. ನಗರೀಕರಣ ಈ ಪ್ರಕ್ರಿಯೆಯಲ್ಲಿ ಪ್ರಮುಖ ಪಾತ್ರವಹಿಸುವುದು ಇಲ್ಲಿ ಗಮನಿಸಬೇಕಾದ ವಿಚಾರವಾಗಿದೆ.

ಒಟ್ಟಿನಲ್ಲಿ ಗಂಗರ ಆಳ್ವಿಕೆಗೆ ಒಳಪಟ್ಟ ಬೆಂಗಳೂರಿನ ಪ್ರದೇಶಗಳಾದ ದಾಸರಹಳ್ಳಿ, ಖಾಜಿಹೊಸಹಳ್ಳಿ, ವರ್ತೂರು, ಮೋಡಹಳ್ಳಿ, ಮಾರೇನಹಳ್ಳಿ, ನಾಗೊಂಡಳ್ಳಿ, ಕಂಮಸಂದ್ರ, ಕೃಷ್ಣರಾಜಪುರ, ಆನೇಕಲ್, ರಾಜಾಪುರ, ಜಿಗಣಿ, ಬೊಮ್ಮಂಡಳ್ಳಿ, ಮರಸೂರು ಮಡಿವಾಳ, ಅಗರ, ಬೇಗೂರುಗಳಲ್ಲಿ ಶಾಸನಗಳು ದೊರೆಯುತ್ತವೆ. ಇವುಗಳಲ್ಲಿ ದಾಸನಪುರ, ಯಲಹಂಕ, ಯಶವಂತಪುರ, ಬಾಣಾವರ, ಐಗಂಡಪುರ, ವಸಂತನಹಳ್ಳಿ, ಬ್ಯಾಡರಹಳ್ಳಿ, ಹಲಗೇವಡೇರಹಳ್ಳಿ, ರಾಮಸಮುದ್ರ, ಗವಿಪುರ, ರಾಮನಗರ, ಮಾಗಡಿ, ನೆಲಮಂಗಲ ತಾಲೂಕಿನ ಹಲವು ಗ್ರಾಮಗಳು ಆಡಳಿತ ಘಟಕಗಳಾಗಿ ಇದ್ದ ಉಲ್ಲೇಖಗಳು ಕಂಡುಬಂದಿವೆ.[೨೮] ಆದರೆ ಈ ಪ್ರದೇಶಗಳಲ್ಲಿ ಕೆರೆ-ಕಟ್ಟೆಗಳ ಬಗೆಗೆ, ಕೃಷಿ ಚಟುವಟಿಕೆಗಳ ಬಗೆಗೆ ಶಾಸನ ಆಧಾರಗಳು ದೊರೆತಿಲ್ಲ. ಅದಾಗಿಯೂ ಸರಳವಾಗಿ ಗಮನಿಸಬೇಕಾದ ವಿಷಯವೆಂದರೆ, ಆರ್ಥಿಕತೆಯು ರಾಜಕೀಯ ಚಟುವಟಿಕೆಯನ್ನು ನಿರ್ಧರಿಸುವುದು.

ಗಂಗರ ಕಾಲದಲ್ಲಿ ವ್ಯಾಪಾರಿಗಳ ಪೈಕಿ ಸಂಚಾರಿ ವ್ಯಾಪಾರಸ್ಥರಾದ ನಖರರ ಬಗೆಗೆ ಮಾತ್ರ ಈ ಪ್ರದೇಶದ ಶಾಸನಗಳಲ್ಲಿ ತಿಳಿಯುವುದು. ಮಣ್ಣೆಯಲ್ಲಿ ದೊರೆತ ಕ್ರಿ.ಶ ಸು.೧೦ನೇ ಶತಮಾನಕ್ಕೆ

ಸೇರಿದ ಶೆಟ್ಟಿಗುತ್ತರ ಶಾಸನ ಮುಖ್ಯವಾಗಿದೆ.[೨೯] ಈ ಶಾಸನವು ಹದಿನೆಂಟು ಪಟ್ಟಣದ ಶೆಟ್ಟಿಗುತ್ತರು ಸೇರಿ ಗವರೆಗಳು ಮತ್ತು ಗಾತ್ರಿಗರ ವಾರ್ಷಿಕ ತೆರಿಗೆಯನ್ನು ನಿರ್ಧರಿಸಿದ ಮಾಹಿತಿ ನೀಡಿದೆ. ಅವರ ವ್ಯಾಪಾರದ ಮೇರೆಗಳು ನಿಗದಿತಗೊಳ್ಳುತ್ತಿದ್ದ ಬಗೆಗಿನ ವಿಚಾರವನ್ನು ಪ್ರಸ್ತಾಪಿಸಲಾಗಿದೆ. ಅಂದಿನ ಸಂದರ್ಭದಲ್ಲಿ ಮಣ್ಣೆ ಪ್ರಮುಖ ವ್ಯಾಪಾರಿ ಪಟ್ಟಣವಾಗಿತ್ತು ಎಂಬ ವಿಚಾರದೊಂದಿಗೆ ಶ್ರೇಷ್ಠಿ ಗಣದ ಸಂಘದ ಅಸ್ತಿತ್ವದ ಪರಿಚಯವು ಇದೆ. ಮುಂದೆ ಇನ್ನಿತರ ವಿನಿಮಯ ವರ್ತಕರ ಮೇಲೆ ಹೊಂದಿದ್ದ ಅಧಿಕಾರದ ಹಿಡಿತ, ಸಂತೆ ಮತ್ತು ತೆರಿಗೆ ನಿಗದಿಪಡಿಸುವುದರ ಬಗೆಗೆ ಅಧಿಕಾರವನ್ನು ಹೊಂದಿದ್ದರು ಎಂದು ತಿಳಿಯುವುದು. ತಮ್ಮ ತಮ್ಮಲ್ಲಿ ಉದ್ಭವಿಸುತ್ತಿದ್ದ ಸಮಸ್ಯೆಯನ್ನು ಶೆಟ್ಟಿ ಸಮುದಾಯ ಪರಿಹರಿಸುತ್ತಿದ್ದದ್ದು ಇತರ ವರ್ತಕರ ಮೇಲೆ ಅಧಿಕಾರ ಮೊದಲಾದ ಅಂಶಗಳನ್ನು ಗಮನಿಸಿದಾಗ ಗಂಗರ ಕಾಲಕ್ಕೆ ನಕರರು, ಶೆಟ್ಟಿಗುತ್ತರು, ಗಾಣಿಗರು ಮತ್ತು ಪಂಚಾಳ ಕುಲದ ಶ್ರೇಣಿಗಳಿಂದ ಆಯ್ಕೆಗೊಂಡ ವ್ಯಾಪಾರಿ ಸಮುದಾಯದವರೇ ಪಟ್ಟಣ ಸ್ವಾಮಿಗಳಾಗಿದ್ದರು ಎಂದು ಗುರುತಿಸ ಬಹುದಾಗಿದೆ. ಇವರು ಪ್ರಬಲ ವರ್ತಕ ಸಮುದಾಯಗಳಾಗಿದ್ದವು ಎಂಬುದು ಶಾಸನಗಳಿಂದ ಖಚಿತಗೊಳ್ಳುವುದು. ಈ ಅವಧಿಯಲ್ಲಿ ಬೆಂಗಳೂರು ಪ್ರದೇಶವು ಉಪನಗರದ ಸ್ವರೂಪವನ್ನು ಹೊಂದಿದ್ದು ಪ್ರಮುಖ ಪಟ್ಟಣಕ್ಕೆ ಪೂರಕವಾಗಿ ಕಾರ್ಯನಿರ್ವಹಿಸುತಿತ್ತು ಎಂದು ಹೇಳಬಹುದಾಗಿದೆ. ಈ ಸಂದರ್ಭದಲ್ಲಿ ಬೆಂಗಳೂರಿನ ಪ್ರದೇಶದಲ್ಲಿ ಹಲವು ಕದನಗಳು ನೊಳಂಬ, ರಾಷ್ಟ್ರಕೂಟ ಮತ್ತು ಗಂಗರ ನಡುವೆ ನಡೆಯುತ್ತಿದ್ದುದ್ದು ಗಮನಾರ್ಹ. ಇದು ಬೆಂಗಳೂರು ಹೊಂದಿದ್ದ ಫಲವತ್ತಾದ ಭೂಮಿಯ ಪ್ರಾಮುಖ್ಯತೆಯನ್ನು ಸ್ಪಷ್ಟಪಡಿಸುತ್ತದೆ.

ಆರ್.ಎಸ್. ಶರ್ಮಾ ಮತ್ತು ಅವರ ಪಂಥದವರು ವಾದಿಸುವಂತೆ, "ಕ್ರಿ.ಶ ೬೦೦–೧೦೦೦ರವರೆಗೆ ಭಾರತದಲ್ಲಿ ಊಳಿಗಮಾನ್ಯ ಆರ್ಥಿಕತೆಯನ್ನು ಕಾಣಬಹುದಾಗಿದೆ. ಈ ನೆಲೆಯಲ್ಲಿ ವ್ಯಾಪಾರ–ವಾಣಿಜ್ಯವು ಅವನತಿಯ ಹಾದಿಯನ್ನು ಹಿಡಿಯಿತು. ಅದರಲ್ಲೂ ಮುಖ್ಯವಾಗಿ ದೂರದ ವ್ಯಾಪಾರ ವ್ಯವಹಾರ ಕೆನೆಪದರದಲ್ಲಿ ನಡೆಯತೊಡಗಿತು. ಈ ಹಂತದಲ್ಲಿ ಗ್ರಾಮಗಳಲ್ಲಿ ಸ್ವಯಂ ಅವಲಂಬನೆ ಮತ್ತು ಮುಚ್ಚಿದ ಆರ್ಥಿಕತೆಯನ್ನು ಗಂಗ–ಯಮುನಾ ದೋಆಬ್, ಗುರ್ಜರ ಪ್ರತಿಹಾರರ ಅಡಿಯಲ್ಲಿ ರಾಜಸ್ತಾನ್, ಪಾಲರ ಅಡಿಯಲ್ಲಿ ಬಂಗಾಳ, ಬಿಹಾರ್‌ನಲ್ಲಿ ಮತ್ತು ರಾಷ್ಟ್ರಕೂಟರ ಅಡಿಯಲ್ಲಿದ್ದ ದಖ್ಖನ್‌ನ ಪ್ರದೇಶಗಳಲ್ಲಿ ಪ್ರಮುಖವಾಗಿ ಕಾಣಬಹುದಾಗಿದೆ. ಆರಂಭಿಕ ಮಧ್ಯಕಾಲದಲ್ಲಿ ಬೆಲೆಬಾಳುವ ಲೋಹಗಳ ಕೊರತೆಯುಂಟಾಗಿತ್ತು. ಪರ್ಯಾಯವಾಗಿ ಸರಕು ವಿನಿಮಯ ಪದ್ಧತಿ ಮತ್ತು ಕವಡೆಗಳನ್ನು ನಾಣ್ಯಗಳ ರೂಪದಲ್ಲಿ ಬಳಸಲಾಗುತಿತ್ತು ಎಂಬ ವಾದವನ್ನು ಮಂಡಿಸಿರುವರು. ರಣಬೀರ್ ಚಕ್ರವರ್ತಿ, ವಿ.ಕೆ. ಜೈನ್ ಮತ್ತು ಆರ್. ಚಂಪಕಲಕ್ಷ್ಮಿ, ಎ. ಅಪ್ಪದೊರೈರವರು ಗುಜರಾತ್ ಮತ್ತು ದಕ್ಷಿಣ ಭಾರತದ ವ್ಯಾಪಾರ ವಾಣಿಜ್ಯದ ಬಗೆಗೆ ಅಧ್ಯಯನ ನಡೆಸಿದ ಪ್ರಮುಖರು. ಇವರು ತಿಳಿಸುವಂತೆ ನಾನಾದೇಶಿಯರು, ಐಹೊಳೆ ಐನೂರ್‌ವರ್, ಮಣಿಗ್ರಾಮಂಗಳು ಪ್ರಮುಖ ವರ್ತಕ

ಸಂಘಗಳಾಗಿದ್ದವು. ಜೊತೆಗೆ ಉತ್ತರ ಭಾರತಕ್ಕೆ ವಿರುದ್ಧವಾಗಿ ದಕ್ಷಿಣ ಭಾರತದಲ್ಲಿ ವ್ಯಾಪಾರ ವಾಣಿಜ್ಯ ಉತ್ತಮವಾಗಿತ್ತು ಎಂದು ಸ್ಪಷ್ಟಪಡಿಸುವರು.[೩೦] ಇದು ಆರ್.ಎಸ್. ಶರ್ಮ ಅವರ ಆರ್ಥಿಕವಾದ ದಕ್ಷಿಣ ಭಾಗದಲ್ಲಿ ಕಂಡುಬರುವುದಿಲ್ಲ ಎಂದು ಸ್ಪಷ್ಟಪಡಿಸುವುದು. ಬೆಂಗಳೂರು ಪ್ರದೇಶದಲ್ಲಿ ಕ್ರಿ.ಶ ೬೦೦-೧೦೦೦ರ ಅವಧಿಯಲ್ಲಿ ವಾಣಿಜ್ಯಕ್ಕೆ ಸಂಬಂಧಿಸಿದ ಶಾಸನಗಳ ಸಂಖ್ಯೆ ಪ್ರಮಾಣ ಕಡಿಮೆ ಇದೆ. ಅಂದರೆ ವರ್ತಕ ಸಮುದಾಯಗಳು ಇರಲಿಲ್ಲ ಎಂದರ್ಥವಲ್ಲ. ಕೃಷಿ ಚಟುವಟಿಕೆ ವೃದ್ಧಿ ಆಗಬೇಕಾದರೆ ಅದಕ್ಕೆ ಪೂರಕವಾಗಿ ಕರಕುಶಲಕರ್ಮಿಗಳು, ಉತ್ಪಾದಿತ-ವರ್ತಕರು, ಸಣ್ಣ ಗುಡಿ ಕೈಗಾರಿಕೆಗಳ ಪಾತ್ರ ಹಿರಿದಾಗಿರುತ್ತದೆ. ಆದರೆ ಇವರು ರಾಜಕೀಯ, ಸಾಮಾಜಿಕ, ಆರ್ಥಿಕ ರಂಗದ ಮುಖ್ಯವಾಹಿನಿಗೆ ಬರದೆ ಇರುವುದು ಗಮನಿಸಬೇಕಾದ ಅಂಶವಾಗಿದೆ. ಮುಂದೆ ಗಂಗ ದೊರೆಗಳು ಬಾದಾಮಿ ಚಾಳುಕ್ಯರು ಮತ್ತು ರಾಷ್ಟ್ರಕೂಟರೊಂದಿಗೆ ಹೊಂದಿದ್ದ ಶಾಂತಿ ಸಂಬಂಧವನ್ನು ಕಲ್ಯಾಣಿ ಚಾಳುಕ್ಯರೊಂದಿಗೆ ಉಳಿಸಿಕೊಳ್ಳಲಾಗಲಿಲ್ಲ.[೩೧] ಹೀಗಾಗಿ ನಾಲ್ಕನೆಯ ರಾಚಮಲ್ಲನು ಚೋಳರೊಂದಿಗೆ ಸೋತನು. ಗಂಗವಾಡಿ ಚೋಳರ ವಶವಾದಾಗ ಬೆಂಗಳೂರು ಪ್ರದೇಶವು ಅವರ ಆಡಳಿತಕ್ಕೆ ಒಳಗಾಯಿತು.

ಬೆಂಗಳೂರು ನಗರ ಪ್ರದೇಶದ ಬೆಳವಣಿಗೆಯ ಅಂಶಗಳಿಗೆ ಪೂರಕವಾಗಿ ಆರ್.ಎನ್. ನಂದಿ ಅವರ ಊಳಿಗಮಾನ್ಯವಾದ ಮುಖ್ಯವಾಗಿದೆ. ಕರ್ನಾಟಕದಲ್ಲಿ ಊಳಿಗಮಾನ್ಯ ಪದ್ಧತಿಯ ಎರಡನೆಯ ಘಟ್ಟವು ನಾಲ್ಕನೆಯ ಶತಮಾನದಿಂದ ೧೨ನೆಯ ಶತಮಾನದವರೆಗಿನ ಅವಧಿಯಾಗಿದೆ. ಇದರ ಮೊದಲಾರ್ಧದ ಅವಧಿಯಾದ ನಾಲ್ಕರಿಂದ ಏಳನೆಯ ಶತಮಾನಗಳ ನಡುವಿನ ಕಾಲವು ನಗರಗಳು ಮತ್ತು ವಾಣಿಜ್ಯೋದ್ಯಮ ಗರಿಗೆದರಿದ ಕಾಲವೆಂದು ಗುರುತಿಸಿದ್ದಾರೆ. ಪೂರ್ವಾರ್ಧ ಅವಧಿಯಾದ ೮ ರಿಂದ ೧೦ನೆಯ ಶತಮಾನದಲ್ಲಿ ಈ ಪ್ರಕ್ರಿಯೆ ಸದೃಢೀಕರಣದ ಹಂತ ಎಂದು ಗುರುತಿಸಿದ್ದಾರೆ. ಈ ಹಂತದಲ್ಲಿ ಕೃಷಿ ಉತ್ಪಾದನೆಯ ತಾಂತ್ರಿಕತೆಯಲ್ಲಿ ಮಹತ್ತರ ಪ್ರಗತಿಯನ್ನು ಸಾಧಿಸುವ ಪ್ರಯತ್ನಗಳನ್ನು ಗಮನಿಸಬಹುದು. ಕೆರೆ ನಿರ್ಮಾಣ, ಹೊಸ ಬೆಳೆಗಳ ಹರಡುವಿಕೆ ಮುಖ್ಯವಾದ ಪ್ರಯತ್ನಗಳಾಗಿವೆ. ಈ ಎಲ್ಲಾ ಆವಿಷ್ಕಾರಗಳು ಸ್ವತಃ ಊಳಿಗಮಾನ್ಯ ವರ್ಗಗಳು ತಮ್ಮ ಉತ್ಪಾದನಾ ಚಟುವಟಿಕೆಯಿಂದಾಗಿ ಭೂಮಿಯ ಹಿಡುವಳಿಯಲ್ಲಿ ಹೆಚ್ಚುವರಿ ಉತ್ಪಾದನೆಯನ್ನು ಪಡೆದುಕೊಳ್ಳಲು ಸಾಧ್ಯವಾಯಿತು. ಇದು ಅವರ ಆಸಕ್ತಿಯ ಫಲವಾಗಿಯೇ ಆರಂಭಿಸಲ್ಪಟ್ಟವು.[೩೨]

### ಚೋಳರ ಆಳ್ವಿಕೆ

ಚೋಳರ ಆಳ್ವಿಕೆಯ ಕಾಲದಲ್ಲಿ ರಾಜ್ಯದ ವಿಸ್ತರಣಾ ನೀತಿ ಮತ್ತು ಸ್ಥಳೀಯ ಆಡಳಿತ ವ್ಯವಸ್ಥೆಯು ಪ್ರಸಿದ್ಧವಾಗಿದೆ. ಇದರೊಂದಿಗೆ ಕಲೆ ಮತ್ತು ವಾಸ್ತುಶಿಲ್ಪ ಹಾಗೂ ವ್ಯಾಪಾರ-ವಾಣಿಜ್ಯಕ್ಕೂ ಹೆಚ್ಚಿನ ಪ್ರೋತ್ಸಾಹ ದೊರೆಯಿತು. ವಿಸ್ತಾರವಾದ ದೇವಾಲಯಗಳ ನಿರ್ಮಾಣ ಇವರ ಕಾಲದಲ್ಲಿ

ಕಾಣಬರುವ ಪ್ರಮುಖ ಅಂಶವಾಗಿದೆ. ಇದು ಕರಕುಶಲಕರ್ಮಿಗಳ ಬೆಳವಣಿಗೆಗೆ ಪೂರಕವಾಯಿತು. ಜೊತೆಗೆ ಗ್ರಾಮಿಣ ಆರ್ಥಿಕತೆಯು ಪೇಟೆ-ಪಟ್ಟಣದ ಬೆಳವಣಿಗೆಗೂ ಪೂರಕವಾಯಿತು. ಚೋಳರ ಕಾಲದಲ್ಲಿ ಹಲವು ದೇವಾಲಯಗಳನ್ನು ಬೆಂಗಳೂರು ಪ್ರದೇಶದಲ್ಲಿ ನಿರ್ಮಿಸಿರುವುದು ಕಂಡುಬರುತ್ತದೆ. ಆ ಸಂದರ್ಭದಲ್ಲಿ ಬ್ರಾಹ್ಮಣರಿಗೆ ದಾನ-ದತ್ತಿಗಳನ್ನು ನೀಡುವ ಮತ್ತು ಅಗ್ರಹಾರಗಳನ್ನು ನಿರ್ಮಿಸುವ ಪ್ರವೃತ್ತಿಯನ್ನು ಗುರುತಿಸಬಹುದು. ಇದು ಸಹಜವಾಗಿಯೆ ಕುಶಲಕರ್ಮಿಗಳಿಗೆ ಮತ್ತು ಇನ್ನಿತರ ಉತ್ಪಾದಕ ವರ್ತಕ ಸಮುದಾಯಗಳಿಗೆ ಸಮಾಜದ ಮುಖ್ಯವಾಹಿನಿಗೆ ಬರಲು ಅವಕಾಶವನ್ನುಂಟು ಮಾಡಿತು. ಕೃಷಿ ಇಳುವರಿಯು ಹೆಚ್ಚಳಗೊಂಡು ಮುಂದೆ ಈ ಪ್ರದೇಶದಲ್ಲಿ ಹೊಸ ಹೊಸ ಪಟ್ಟಣಗಳು ಮತ್ತು ವಿವಿಧ ವರ್ತಕ ಸಮುದಾಯಗಳು ನೆಲೆನಿಂತವು. ಇವೆಲ್ಲವು ವ್ಯಾಪಾರ-ವಾಣಿಜ್ಯದ ಚಟುವಟಿಕೆಗಳನ್ನು ತೀವ್ರಗೊಳಿಸುವ ಆರ್ಥಿಕತೆಯ ಬೆಳವಣಿಗೆಗೆ ಕಾರಣವಾಯಿತು. ಈ ಸಮುದಾಯಗಳು ಬೇರೆ ಬೇರೆ ಪ್ರದೇಶಗಳೊಂದಿಗೆ ವ್ಯಾಪಾರಿ ಸಂಬಂಧವನ್ನು ಹೊಂದಿದ್ದವು ಎನ್ನುವ ವಿಚಾರವು ಶಾಸನಗಳಲ್ಲಿ ದೊರೆಯುತ್ತದೆ.

ಕ್ರಿ.ಶ.೯೭ರ ವೇಳೆಗೆ ಬೆಂಗಳೂರಿನ ಪ್ರದೇಶವು ಸಾಮ್ರಾಟ ಚೋಳ ದೊರೆ ಎಂದು ಪ್ರಸಿದ್ಧನಾದ ಒಂದನೆಯ ರಾಜರಾಜನ ಆಡಳಿತಕ್ಕೆ ಒಳಪಟ್ಟಿತ್ತು ಎಂದು ಹೊಸಕೋಟೆ ತಾಲೂಕಿನ ಕಮ್ಮಸಂದ್ರದ ಶಾಸನ ದೃಢಪಡಿಸುತ್ತದೆ. ಮುಂದೆ ರಾಜೇಂದ್ರ ಚೋಳನ ಕಾಲಕ್ಕೆ ಇಲ್ಲಿಯ ಆಡಳಿತ ಸುಸಂಘಟಿತಗೊಂಡಿತು. ಆತನ ಆಡಳಿತ ಪ್ರದೇಶವನ್ನು ನಿಗರಿಲ್ ಚೋಳ ಮಂಡಳ ಮತ್ತು ವಿಕ್ರಮ ಚೋಳ ಮಂಡಲಗಳೆಂದು ವಿಭಾಗಿಸಿದಾಗ ಬೆಂಗಳೂರು ಪ್ರದೇಶವು ವಿಭಜಿತಗೊಂಡಿತ್ತು. ಬೆಂಗಳೂರಿನ ಯಲಹಂಕ ಪ್ರದೇಶವು ಇಲ್ಪೈಪಾಕಂ ಎಂಬ ನಾಡಿಗೆ ಒಳಪಟ್ಟಿತ್ತು.[೩೩] ಈ ರೀತಿಯ ಉತ್ತಮ ಸ್ಥಳೀಯ ಆಡಳಿತ ವ್ಯವಸ್ಥೆಯು ಸಹಜವಾಗಿಯೇ ವ್ಯಾಪಾರ-ವಾಣಿಜ್ಯದ ಅಭಿವೃದ್ಧಿಗೆ ಅವಕಾಶವನ್ನು ನೀಡಿತು. ವಿಸ್ತಾರವಾದ ಸಾಮ್ರಾಜ್ಯದ ಸ್ಥಾಪನೆಯು ಏರ್ಪಟ್ಟು ವ್ಯಾಪಾರದಲ್ಲಿ ಮಹತ್ತರ ಬದಲಾವಣೆಯನ್ನುಂಟು ಮಾಡಿತು. ಈಗಾಗಲೇ ಉತ್ತರ ಕರ್ನಾಟಕದಲ್ಲಿ ಸ್ಥಾಪನೆಗೊಂಡ ಅಯ್ಯಾವೊಳೆ ಐನೂರ್‌ವರ್ ಎಂಬ ಸಂಚಾರಿ ವರ್ತಕ ಸಮುದಾಯವು ಒಳನಾಡಿನ ವ್ಯಾಪಾರವನ್ನು ವೃದ್ಧಿಸುವ ಮೂಲಕ ದಕ್ಷಿಣ ಕರ್ನಾಟಕ ಮತ್ತು ತಮಿಳುನಾಡಿನ ವರ್ತಕ ಸಮುದಾಯದೊಂದಿಗೆ ವ್ಯವಹರಿಸುತ್ತಾ ಹೊಸರೂಪ ಪಡೆಯಿತು. ಇದನ್ನು ಕ್ರಿ.ಶ ೧೨೬೨ರ ದೊಡ್ಡಬಳ್ಳಾಪುರದ ಶಾಸನವು ಸ್ಪಷ್ಟಪಡಿಸುತ್ತದೆ.[೩೪] ಅಯ್ಯಾವೊಳೆ ಐನೂರ್‌ವರ್ ವರ್ತಕ ಸಮುದಾಯ ತಮ್ಮನ್ನು ಚೋಳ ಮತ್ತು ಚಾಲುಕ್ಯ ಕುಲಕ್ಕೆ ಸೇರಿದ ನಾನಾದೇಶಿಯರು ಎಂದು ಹೇಳಿಕೊಂಡಿದ್ದಾರೆ. ಮುಂದೆ ಇದರಲ್ಲಿ ವಿವಿಧ ಸಂಚಾರಿ ವರ್ತಕ ಸಮುದಾಯಗಳಾದ ನಕರರು, ಉಭಯನಾನಾ ದೇಶಿಗರನ್ನು ಉಲ್ಲೇಖಿಸಿರುವುದನ್ನು ನೋಡಿದಾಗ ವರ್ತಕ ಸಮುದಾಯಗಳು ದಕ್ಷಿಣದ ಐಹೊಳೆ ಎಂಬ ಪ್ರಬಲ ವರ್ತಕ ಸಂಘಟಣೆಯಾಗಿ ರೂಪಗೊಂಡಿತ್ತು ಎನ್ನುವ ಅಂಶ ತಿಳಿದುಬರುತ್ತದೆ.[೩೫] ಈ ನಿಟ್ಟಿನಲ್ಲಿ ಹಲವು ಹೊಸ ಪಟ್ಟಣಗಳು

ಅಂದರೆ ಮಳೂರು, ಐಗಂಡಪುರ (ಹೆಸರುಘಟ್ಟ ಬಳಿಯ), ದೊಮ್ಮಲೂರು, ಬೇಗೂರು, ಮಡಿವಾಳ ಪಟ್ಟಣಗಳು ಹುಟ್ಟಿಕೊಂಡವು. ದೊಮ್ಮಲೂರನ್ನು ದೇಸಿಮಾಣಿಕ ಪಟ್ಟಣಂ ಎಂದು ಶಾಸನದಲ್ಲಿ ಉಲ್ಲೇಖಿಸಲಾಗಿದೆ. ಇದು ಅಂದಿನ ಪ್ರಮುಖ ಒಳನಾಡಿನ ವ್ಯಾಪಾರಿ ಕೇಂದ್ರವಾಗಿತ್ತು ಎಂಬುದು ಸ್ಪಷ್ಟವಾಗುತ್ತದೆ.[೩೬]

ಚೋಳ ಅರಸರು ಈ ಮೇಲಿನ ಪ್ರದೇಶಗಳಲ್ಲಿ ಅಪ್ರಮೇಯ ದೇವಾಲಯ, ಧರ್ಮೇಶ್ವರ ದೇವಾಲಯ, ಚೊಕ್ಕನಾಥ ದೇವಾಲಯ, ಚೋಳೇಶ್ವರ ದೇವಾಲಯ ಹಾಗೂ ಸೋಮನಾಥ ದೇವಾಲಯಗಳನ್ನು ನಿರ್ಮಿಸಿದರು. ಈ ಚಟುವಟಿಕೆಗಳು ಕುಶಲಕರ್ಮಿಗಳು ಅಂದರೆ ವಿಶ್ವಕರ್ಮಿಗಳನ್ನು ಸಾಮಾಜಿಕ ಮತ್ತು ಆರ್ಥಿಕ ರಂಗದಲ್ಲಿ ಮುಖ್ಯವಾಹಿನಿಗೆ ಬರಲು ಅವಕಾಶವನ್ನುಂಟು ಮಾಡಿತು. ವಿಶ್ವಕರ್ಮಿಗಳ ಕುಲದೇವರುಗಳಾದ ಕಾಳಿಕ ಮತ್ತು ಕಮ್ಮಟೇಶ್ವರ ದೇವಾಲಯ[೩೭]ಗಳನ್ನು ಬೇಗೂರಿನ ನಾಗೇಶ್ವರ ದೇವಾಲಯದ ಪಕ್ಕದಲ್ಲಿಯೆ ನಿರ್ಮಿಸಲಾಯಿತು.[೩೮] ವಿಶ್ವಕರ್ಮಿಗಳೆನಿಸಿದ ಪಂಚವೃತ್ತಿಯನ್ನು ನಿರ್ವಹಿಸುತ್ತಿದ್ದ ಕುಶಲಕರ್ಮಿಗಳಾದ ಕಮ್ಮಾರ–ಕೃಷಿ ಮತ್ತು ಸುಗ್ಗಿಗೆ ಸಂಬಂಧಿಸಿದ ಎಲ್ಲಾ ಕಬ್ಬಿಣದ ಕೃಷಿ ಉಪಕರಣಗಳನ್ನು ಮಾಡುತ್ತಿದ್ದ ವೃತ್ತಿಯವರು, ಬಡಗಿ–ಬಾಗಿಲು, ಕಿಟಕಿಗಳು ಮತ್ತು ದೇವಾಲಯದ ಅಗತ್ಯವಾದ ಎಲ್ಲ ಬಗೆಯ ಮರದ ಕೆತ್ತನೆ ಮೊದಲಾದ ಎಲ್ಲಾ ವಿಧದ ಮರದ ಕೆಲಸಮಾಡುವ ವೃತ್ತಿಯವರು, ಕಂಚುಗಾರ–ದೇವಾಲಯದ ಕುಂಭ, ಕಳಸ ಮತ್ತು ಪೂಜಾ ಸಾಮಗ್ರಿಗಳನ್ನು ತಯಾರಿಸುವ ವೃತ್ತಿಯವರು, ಶಿಲ್ಪಿ–ಕಲ್ಲಿನ ವಿಗ್ರಹಗಳ ಮತ್ತು ದೇವಾಲಯದ ವಾಸ್ತುಶಿಲ್ಪಿಯಾಗಿದ್ದು ದೇವಾಲಯಗಳನ್ನು ನಿರ್ಮಿಸುವ ವೃತ್ತಿಯವರು, ಅಕ್ಕಸಾಲಿಗ–ಅಮೂಲ್ಯವಾದ ಆಭರಣಗಳನ್ನು ಮಾಡುವವರು. ಈ ಉತ್ಪಾದಿತ–ವರ್ತಕ ಸಮುದಾಯಗಳು ರಾಜಾಶ್ರಯದ ಅಡಿಯಲ್ಲಿ ಕೆರೆ–ಕಟ್ಟೆಗಳನ್ನು, ದೇವಾಲಯಗಳನ್ನು ನಿರ್ಮಿಸಿದರು. ಇದು ಕೃಷಿಯಲ್ಲಿ ಅಧಿಕ ಇಳುವರಿಗೆ ಕಾರಣವಾಯಿತು. ಚೋಳರು ಕಾಡುಗೋಡಿ ಬಳಿಯಲ್ಲಿ ಪಟ್ಟಂದೂರು ಕೆರೆ ಕಟ್ಟಿಸಿ, ಅದರ ದುರಸ್ತಿಗಾಗಿ ೧೦೪೩ರಲ್ಲಿ ೨೫೦ಕುಳಿ ಭೂಮಿ ದಾನ ಮಾಡಿದರು ಮತ್ತು ಬೆಳ್ಳಂದೂರಿನ ವಿಶಾಲ ಕೆರೆಯನ್ನು ನಿರ್ಮಿಸಿದರೆನ್ನುವುದು ಶಾಸನಗಳಿಂದ ಸ್ಪಷ್ಟವಾಗಿದೆ. ಈ ತೆರನಾದ ಚಟುವಟಿಕೆಗಳು ಬೆಂಗಳೂರು ಪ್ರದೇಶದ ಬೆಳವಣಿಗೆಗೆ ಪೂರಕವಾಯಿತು. ಕ್ರಿ.ಶ ೧೧೧೬ರ ನಂತರ ಹೊಯ್ಸಳ ವಿಷ್ಣುವರ್ಧನನು ಚೋಳರಿಂದ ಗಂಗವಾಡಿಯನ್ನು ವಶಪಡಿಸಿಕೊಂಡನು. ಇವೆಲ್ಲವೂ ಪರೋಕ್ಷವಾಗಿ ಬೆಂಗಳೂರು ಪ್ರದೇಶದ ಬೆಳವಣಿಗೆಯಲ್ಲಿಯೂ ಮಹತ್ತರವಾದ ಬದಲಾವಣೆ ಕಾಣಿಸಿಕೊಳ್ಳಲು ಪೂರಕವಾಯಿತು.

**ಹೊಯ್ಸಳರು**

ಹೊಯ್ಸಳ ದೊರೆ ವಿಷ್ಣುವರ್ಧನನು ಚೋಳರನ್ನು ಸೋಲಿಸಿ ಗಂಗವಾಡಿಯನ್ನು ವಶಪಡಿಸಿಕೊಂಡಾಗ ಬೆಂಗಳೂರು ಪ್ರದೇಶವು ಅವರ ಅಧೀನಕ್ಕೆ ಒಳಪಟ್ಟಿತು. ಹೊಯ್ಸಳರ ಆಳ್ವಿಕೆಯ

ಅವಧಿಯು ರಚನಾತ್ಮಕವಾಗಿದ್ದು, ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಅನೇಕ ಸುಧಾರಣಾ ನೀತಿಗಳು ಜಾರಿಗೆ ಬಂದವು. ಇವರ ಆಡಳಿತ ಅವಧಿಯು ರಾಜ್ಯ ವಿಸ್ತರಣೆಯ ಕಾಲವಾಗಿತ್ತು. ಆರ್ಥಿಕ ಹಾಗೂ ಸಾಮಾಜಿಕ ನೆಲೆಗಳಲ್ಲಿ ಬೆಂಗಳೂರು ಪ್ರದೇಶಕ್ಕೆ ಒಂದು ಸ್ಪಷ್ಟ ಛಾಪನ್ನು ನೀಡುವಲ್ಲಿ ಹೊಯ್ಸಳರ ಕೊಡುಗೆ ಅಪಾರವಾಗಿದೆ.

ಸಂಪನ್ಮೂಲ ಹಂಚಿಕೆಯ ದೃಷ್ಟಿಯಿಂದ ಹೊಯ್ಸಳರ ರಾಜ್ಯವು ಸಾಕಷ್ಟು ವಿಸ್ತಾರವಾಗಿತ್ತು. ಅದು ಕೃಷಿ ಪ್ರಧಾನ ಆರ್ಥಿಕತೆಯನ್ನು ವೃದ್ಧಿಸಿದ್ದರಿಂದಾಗಿ ಹೆಚ್ಚುವರಿ ಉತ್ಪಾದನೆಯು ವ್ಯಾಪಾರ, ಸಾಹಿತ್ಯ, ಕಲೆ, ವಾಸ್ತುಶಿಲ್ಪಗಳನ್ನು ಪ್ರೋತ್ಸಾಹಿಸಿತು. ಇವರ ರಾಜ್ಯವು ಪ್ರಮುಖವಾಗಿ ಮೂರು ವಿಭಿನ್ನ ಪ್ರದೇಶಗಳನ್ನು ಒಳಗೊಂಡಿತ್ತು. ಅವುಗಳನ್ನು ಕ್ರಮವಾಗಿ ಕರಾವಳಿ ಪ್ರದೇಶ, ಪಶ್ಚಿಮ ಘಟ್ಟಗಳು, ಕಣಿವೆ–ಬೆಟ್ಟಗಾಡು ಪ್ರದೇಶ ಮತ್ತು ಬಯಲು ಪ್ರದೇಶ ಎಂದು ಗುರುತಿಸಬಹುದು. ಇದರಿಂದ ಕೃಷಿ ಬೆಳೆಗಳ ಉತ್ಪಾದನೆಯಲ್ಲಿ ಒಂದಕ್ಕೊಂದು ಪೂರಕವಾಗಿ, ಭೂ ಹಿಡುವಳಿಗಳ ವರ್ಗೀಕರಣ, ವಿವಿಧ ರೀತಿಯ ಅಳತೆಗಳ ಆಧಾರಗಳು, ತೆರಿಗೆಗಳನ್ನು ಕಾಣಬಹುದು. ಇವೆಲ್ಲವು ಕೃಷಿಯಾಧಾರಿತ ಉದ್ಯಮಗಳನ್ನು ಸೃಷ್ಟಿಸಿತು. ಇದು ಸಹಜವಾಗಿಯೇ ವ್ಯಾಪಾರ–ವಾಣಿಜ್ಯ ಅಭಿವೃದ್ಧಿ ಹೊಂದಲು ಕಾರಣವಾಯಿತು. ಇವರಿಗಿಂತ ಹಿಂದಿನ ಸಂತತಿಗಳಾದ ಚಾಲುಕ್ಯ, ರಾಷ್ಟ್ರಕೂಟ, ಕಲಚೂರಿ ಮುಂತಾದವರ ರಾಜ್ಯಗಳಲ್ಲಿ ಬೇರೆ ಬೇರೆ ಬಗೆಯ ನೈಸರ್ಗಿಕ ಪ್ರದೇಶಗಳು ಅಷ್ಟಾಗಿ ಸೇರಿರಲಿಲ್ಲ. ಅವುಗಳೆಲ್ಲಾ ಸಾಮಾನ್ಯವಾಗಿ ಉಚ್ಛ್ರಾಯಕ್ಕೆ ಬಂದಿದ್ದು ದಖನ್ ಪ್ರಸ್ಥಭೂಮಿಯ ಬಯಲು ಪ್ರದೇಶದಿಂದಲೇ. ವಿವಿಧ ನೈಸರ್ಗಿಕ ಪ್ರದೇಶಗಳು ಇವರ ಆಡಳಿತ ಭಾಗಗಳಿಗೆ ಒಳಪಟ್ಟಿದ್ದರು ಸಹ ಅವುಗಳ ಬಗೆಗೆ ಈ ರಾಜ ಸಂತತಿಗಳು ಹೆಚ್ಚಾಗಿ ಗಮನಹರಿಸಿರಲ್ಲಿಲ್ಲ.[೪೦]

**ಆಡಳಿತ**

ಹೊಯ್ಸಳರ ಆಡಳಿತದಲ್ಲಿ ಇತಿಹಾಸಕಾರರು ಪ್ರಮುಖವಾಗಿ ಆರು ನೀತಿಗಳನ್ನು ಗುರುತಿಸಿದ್ದಾರೆ. ಅವುಗಳೆಂದರೆ, ೧. ಪ್ರತಿಷ್ಠಾಪನೆ, ೨. ಸಮುದ್ಧರಣ ೩. ನಿರ್ಮೂಲನ ಅಂಶಗಳು ಆಡಳಿತದಲ್ಲಿ ಕಂಡುಬಂದರೆ ೪. ಸೇನೆಯಲ್ಲಿ ದಂಡನಾಯಕರು (ಮಾಂಡಲಿಕರಲ್ಲಿ ಶ್ರೇಣಿವ್ಯವಸ್ಥೆ) ೫. ಮನ್ನೆಯರು (ಕೃಷಿಕರು), ೬. ಗರುಡ ಪದ್ದತಿಗಳಾಗಿವೆ. ಇವು ಊಳಿಗಮಾನ್ಯ ಪದ್ದತಿಯನ್ನು ಸಧೃಡಗೊಳಿಸಿತು.[೪೧] ಈ ಕಾಲಘಟ್ಟವನ್ನು ಆರ್. ಎನ್. ನಂದಿಯವರು ಆರಂಭಿಕ ಊಳಿಗಮಾನ್ಯತೆಗೆ ಸೇರಿದ ಮೂರನೆಯ ಹಂತವಾಗಿದೆ ಎಂದು ಗುರುತಿಸುತ್ತಾರೆ.[೪೨] ಈ ವ್ಯವಸ್ಥೆಯು ಉತ್ಪಾದನೆಯ ಮೇಲೆ ತಮ್ಮ ಒತ್ತಡವನ್ನು ಹೇರಿದ ಪರಿಣಾಮವಾಗಿ ಉತ್ಪಾದಿತ ವರ್ಗ ಕೃಷಿ ಚಟುಟಿಕೆಯಲ್ಲಿ ಹೊಸ ಕೌಶಲ್ಯಗಳನ್ನು ಮೈಗೂಡಿಸಿಕೊಂಡಿತು.

ನಾಡು ಎನ್ನುವುದು ಹೊಯ್ಸಳ ರಾಜ್ಯಾಡಳಿತದಲ್ಲಿ ಒಂದು ಮಹತ್ವದ ಭಾಗವಾಗಿತ್ತು.

ಅರಸರು ಸ್ಥಳೀಯ ಗಣ್ಯರ ನೆರವಿನಿಂದ ನಾಡಿನ ಮಟ್ಟದಲ್ಲಿ ಸಂಪತ್ತನ್ನು ಕ್ರೋಢೀಕರಿಸುತ್ತಿದ್ದರು. ಮನ್ನೆಯರು, ಮಾಂಡಲಿಕರು ನಾಡುಮಟ್ಟದಲ್ಲಿ ಪ್ರಮುಖರಾಗಿದ್ದರು. ಗ್ರಾಮೀಣ ಗಣ್ಯರೆನಿಸಿದ ಪ್ರಭುಗೌಂಡರು ನಾಡಿನ ಉತ್ಪಾದಕ ವರ್ಗಗಳ ಪ್ರತಿನಿಧಿಗಳ ಉಪಸ್ಥಿತಿಯಲ್ಲಿ ಹಲವು ಭೂ ದಾನಗಳನ್ನು ನೀಡಿರುವುದು ಶಾಸನಗಳಲ್ಲಿ ಕಂಡುಬರುತ್ತದೆ. ಜೊತೆಗೆ ನಾಡು ಪ್ರಾದೇಶಿಕ ಆಡಳಿತ ಘಟಕದಂತೆ ಕಾರ್ಯನಿರ್ವಹಿಸುತ್ತಿತ್ತು. ಆಡಳಿತದಲ್ಲಿ ನಾಡಿನ ಸಭೆಗಳ ಮೂಲಕ ಹಲವು ತೀರ್ಮಾನಗಳನ್ನು ತೆಗೆದುಕೊಳ್ಳುತ್ತಿದ್ದರು. ನಾಡಿನ ಮುಖ್ಯಸ್ಥರು ವರ್ತಕರೊಂದಿಗೆ ಮತ್ತು ಹೊಯ್ಸಳ ಪ್ರಭುತ್ವದೊಂದಿಗೆ ಸಹಯೋಗದಿಂದ ಅನುಕೂಲವಾಗಿದ್ದ ಸ್ಥಳಗಳಲ್ಲಿ ಮಾರುಕಟ್ಟೆ ಕೇಂದ್ರಗಳನ್ನು ಸ್ಥಾಪಿಸುತ್ತಿದ್ದರು. ಪ್ರತಿಯೊಂದು ನಾಡಿನ ಪಟ್ಟಣಗಳು ಅಥವಾ ಮಾರುಕಟ್ಟೆ ಕೇಂದ್ರಗಳು ಐಹೊಳೆ ಐನೂರ್‌ವರ್ ಸ್ವಾಮಿಗಳು, ನಾನಾದೇಶಿಗಳು, ಮುಮ್ಮರಿ ದಂಡಂ ಮತ್ತು ಬಣಜಿಗರು ಮೊದಲಾದ ವರ್ತಕ ಸಂಘಟನೆಗಳೊಂದಿಗೆ ಸಂಬಂಧ ಹೊಂದಿದ್ದವು. ಒಂದು ನಗರ ಕೇಂದ್ರದ ಅಭಿವೃದ್ಧಿಯು ಸುತ್ತ-ಮುತ್ತಲಿನ ಗ್ರಾಮಗಳನ್ನು ಅವಲಂಬಿಸಿದ್ದು, ಸ್ಥಳೀಯ ವಿನಿಮಯ ಚಟುವಟಿಕೆಯು ಸಂತೆ, ಪೇಟೆ, ಪಟ್ಟಣಗಳ ಉದಯಕ್ಕೆ ಕಾರಣವಾಯಿತು. ಹೀಗೆ ಒಂದು ಇನ್ನೊಂದರ ನಡುವೆ ಪರಸ್ಪರ ಒಂದುಗೂಡಿಸುವ ಸಾಮರ್ಥ್ಯವನ್ನು ಹೊಂದಿಸುತ್ತಿತ್ತು. ಮುಖ್ಯವಾದ ವಾಣಿಜ್ಯ ಕೇಂದ್ರಗಳಲ್ಲಿ ವಿವಿಧ ಕುಶಲಕರ್ಮಿಗಳು, ವರ್ತಕರು ಮತ್ತು ಸೆಟ್ಟಿಗಳು ತುಂಬಿರುತ್ತಿದ್ದರು. ಇವರು ಕೃಷಿಕೇಂದ್ರಿತ ವಲಯದಿಂದ ಹೊರಗೆ ಗ್ರಾಹಕರಿಗೆ ಬೇಕಾದ ಬೆಲೆಬಾಳುವ ವಸ್ತುಗಳನ್ನು ಉತ್ಪಾದಿಸಿ, ಹಳ್ಳಿಯ ಪೋಷಕ ವರ್ಗದಿಂದ ಗ್ರಾಹಕರಿಗೆ ವಿನಿಮಯದ ಸಂಬಂಧವನ್ನು ಮೀರಿ ಬೆಳೆಯಲು ಅನುವಾಗುತ್ತಿದ್ದರು. ನಾಡ ಸಭೆಯು ಪಟ್ಟಣ ಮತ್ತು ನಗರ ವಾಣಿಜ್ಯ ಕೇಂದ್ರದ ಸ್ಥಾಪನೆಯಲ್ಲಿ ಪ್ರಮುಖ ಪಾತ್ರವಹಿಸುತ್ತಿತ್ತು.[೪೩] ಈ ವಿಚಾರವನ್ನು ಸ್ಪಷ್ಟಪಡಿಸುವ ನಿಟ್ಟಿನಲ್ಲಿ ಹೂಡಿ ಶಾಸನ ಮುಖ್ಯವಾಗಿದೆ.[೪೪] ಈ ಶಾಸನದನ್ವಯ ತೊಳವಂಡಿಯ ಬೊಂಮಿಸೆಟ್ಟಿ ಮಗ ಮತ್ತು ಬಯಿರಸೆಟ್ಟಿಯ ತಮ್ಮ ಮುಕಿತಿಸೆಟ್ಟಿಗೆ ಚಿಕಹೂಡಿ ಪಟ್ಟಣಸ್ವಾಮಿಯಾಗಿ ಸಂತೆಯ ಕಟ್ಟುವುದಕ್ಕೆ ವೀರಬಲ್ಲಾಳದೇವ ಮತ್ತು ಚೋಳ ಮಹಾರಾಜರಾಜರ ಅಪ್ಪಣೆಯಂತೆ ಬೆಮೆಯನಾಯಕ, ತಂಬೇನಾಯಕ, ತೊರಿವಳಿಯನಾಡ ಸಮಸ್ತ ಪ್ರಭು ಗೌಡರು ಸೇರಿ ನೇಮಿಸಿದರು. ಬೆಂಗಳೂರಿನ ಪ್ರದೇಶಗಳಾದ ಬೇಪೂರು,[೪೫] ವಡ್ಡರಹಳ್ಳಿ,[೪೬] ಮಾಗೇನಹಳ್ಳಿ[೪೭] ಪ್ರದೇಶಗಳಲ್ಲಿ ದೊರತ ಶಾಸನಗಳಿಂದ ಹೊಯ್ಸಳರ ಕಾಲಕ್ಕೆ ಬೆಂಗಳೂರು ಪ್ರದೇಶದ ಬಹುಭಾಗಗಳಲ್ಲಿ ಸಂತೆಯನ್ನು ಕಟ್ಟಿ ಪಟ್ಟಣಗಳಾಗಿ ಪರಿವರ್ತಿಸಿರುವುದನ್ನು ಗುರುತಿಸಬಹುದು. ಇಂತಹ ಪಟ್ಟಣಗಳಲ್ಲಿ ವರ್ತಕರು ಕುಟುಂಬ ಸಮೇತ ಬಂದು ನೆಲೆಸಲು ವಿಶೇಷ ಸೌಲಭ್ಯಗಳನ್ನು ನೀಡಲಾಗುತ್ತಿತ್ತು. ಜೊತೆಗೆ ಒಂದು ವರ್ಷದ ತೆರಿಗೆಯಿಂದ ರಿಯಾಯಿತಿ ನೀಡುತ್ತಿದ್ದರು. ಈ ಪ್ರದೇಶದಲ್ಲಿ ಒಕ್ಕಲು ಮಾಡಲು ಬರುವವರಿಗೆ ಎರಡು ವರ್ಷ ತೆರಿಗೆ ರಿಯಾಯಿತಿಯನ್ನು ಪ್ರಭುತ್ವ ನೀಡುತ್ತಿತ್ತು ಎಂಬುದು

ಸಹ ಶಾಸನಗಳಿಂದ ಸ್ಪಷ್ಟವಾಗಿದೆ.[೪೮]

ಹೊಯ್ಸಳರ ಕಾಲದಲ್ಲಿ ಸಾಮಾಜಿಕ-ಧಾರ್ಮಿಕ ವಿಭಿನ್ನತೆಗಳು ಒಂದು ಕಡೆ ಸಾಮಾಜಿಕ ಸ್ಥಿರತೆ ಮತ್ತು ಸಾಮಾಜಿಕ ಒತ್ತಡಕ್ಕೆ ಕಾರಣವಾಗುವುದರ ಫಲವಾಗಿ ಎರಡು ಬಗೆಯ ಸಂಘರ್ಷಗಳು ಹುಟ್ಟಿಕೊಂಡವು. ಈ ಸಂದರ್ಭದಲ್ಲಿ ಒಂದು ನಿರ್ದಿಷ್ಟ ಸಾಮಾಜಿಕ ವರ್ಗವು ಪ್ರಭುತ್ವಕ್ಕೆ ಪೂರಕವಾಗಿ ಕಾರ್ಯ ನಿರ್ವಹಿಸಲು ಬಯಸಿತು. ಜನರಲ್ಲಿ ಅರ್ಥದ ಮೂಲಕವೇ ಧರ್ಮ ಮತ್ತು ಕಾಮಗಳನ್ನು ಸಾಧಿಸಬೇಕೆಂಬ ಪರಿಸ್ಥಿತಿಯನ್ನುಂಟುಮಾಡಿತು. ಇದೇ ಅವಧಿಯಲ್ಲಿ ಭಕ್ತಿ ಆಂದೋಲನಗಳನ್ನು, ವಚನ ಚಳುವಳಿಯನ್ನು ಕಾಣಬಹುದು. ಹಾಗೇ ಸಮಕಾಲೀನವಾಗಿ ವೀರಶೈವರು, ಬ್ರಾಹ್ಮಣರು, ವೈಷ್ಣವರು ಮತ್ತು ಜೈನರು ತಮ್ಮ ಅಸ್ತಿತ್ವವನ್ನು ಗಟ್ಟಿಗೊಳಿಸುವ ನೆಲೆಯಲ್ಲಿ ದಾನ-ದತ್ತಿಗಳನ್ನು ನೀಡುವುದನ್ನು ರೂಢಿಸಿಕೊಂಡರು. ಈ ತೆರನಾದ ವ್ಯವಸ್ಥೆಯು ಆರ್ಥಿಕ ಮತ್ತು ಸಾಮಾಜಿಕ ಸ್ತರವಿನ್ಯಾಸದಲ್ಲಿ ಪ್ರಬಲವಾದ ಅಲೆಯನ್ನು ಎಬ್ಬಿಸಿತು. ಭೂಮಿ ಒಂದು ಹೊಸ ರೂಪವನ್ನು ಈ ಕಾಲಘಟ್ಟದಲ್ಲಿ ಪಡೆದುಕೊಂಡಿತು. ಭೂ ಹಿಡುವಳಿಯು ಕೃಷಿಕರ ಆಸ್ತಿಯಾಗಿರದೆ, ಎಲ್ಲಾ ವೃತ್ತಿಯ ವರ್ಗಸಮುದಾಯಗಳು ಭೂ ಹಿಡುವಳಿಯನ್ನು ಹೊಂದುವ, ತೆರಿಗೆಯನ್ನು ಕಟ್ಟುವ ಪ್ರವೃತ್ತಿಯು ಬೆಳೆಸಿಕೊಂಡರು. ಇದರಿಂದ ಭೂ ಹಿಡುವಳಿಯಲ್ಲಿ ಖಾಸಗಿ ಒಡೆತನದ ಪ್ರವೃತ್ತಿ ಬೆಳೆದು ಭೂಮಿಯನ್ನು ಕೊಡು-ಕೊಳ್ಳುವ ಸಾಧನವಾಗಿ ಬಳಸುವ ಪರಿಪಾಠ ಇತ್ತೆಂಬುದು ಶಾಸನಗಳಿಂದ ತಿಳಿದುಬರುತ್ತದೆ.

ಹೊಯ್ಸಳರು ಚೋಳರ ಮಾದರಿಯಲ್ಲೇ ಸ್ಥಳೀಯ ಆಡಳಿತವನ್ನು ಮುಂದುವರಿಸಿಕೊಂಡು ಹೋದರು. ಇವರು ಏಕಕಾಲದ ಪ್ರಮುಖ ರಾಜಮನೆತನಗಳು ಎಂಬುದು ಗಮನಾರ್ಹ. ಹಾಗೇ ಚೋಳರ ಕಾಲದಲ್ಲಿ ನಿರ್ಮಿಸಿದ ಹಲವು ದೇವಾಲಯಗಳಿಗೆ ಹೊಯ್ಸಳ ಅರಸರು ದಾನ-ದತ್ತಿಗಳನ್ನು ನೀಡಿರುವುದು ಶಾಸನಗಳ ಮೂಲಕ ಸ್ಪಷ್ಟವಾಗಿದೆ. ಕ್ರಿ.ಶ ೧೧೧೦ರಲ್ಲಿ ಮುರುಸು ನಾಡಿನ ಅಧಿಕಾರಿಯೊಬ್ಬನು ವೆಪ್ಪೂರು ಕೆರೆಯ ಪರಿಸರದ ಭೂಮಿಯನ್ನು ನಾಗೇಶ್ವರ ದೇವಾಲಯಕ್ಕೆ ದಾನ ನೀಡಿದನು. ದೇವಾಲಯಕ್ಕೆ ಹೊಸದಾದ ಪ್ರಾಕಾರ ನಿರ್ಮಿಸಿದನು. ದೊಮ್ಮಲೂರಿನ ಚೊಕ್ಕನಾಥ ದೇವಾಲಯ ಮತ್ತು ಸೋಮನಾಥ ದೇವಾಲಯ, ಐಗಂಡಪುರದ ದೇವಾಲಯಗಳಿಗೆ ಗ್ರಾಮಗಳನ್ನು ದಾನನೀಡಿದನು. ವಿಷ್ಣುವರ್ಧನನು ವಿಷ್ಣುವರ್ಧನ ಚತುರ್ವೇದಿಮಂಗಲ ಎಂಬ ಅಗ್ರಹಾರ ಸ್ಥಾಪಿಸಿ ಚೆನ್ನಕೇಶವ ದೇವಾಲಯ ನಿರ್ಮಿಸಿದನು. ಮುಂದೆ ಹೊಯ್ಸಳ ಅಧಿಕಾರಿಗಳು ಈ ದೇವಾಲಯವನ್ನು ವಿಸ್ತರಿಸಿದರು ಎಂಬ ಮೊದಲಾದ ಅಂಶಗಳನ್ನು ಪ್ರಭುತ್ವ ಮತ್ತು ಆರ್ಥಿಕತೆಯ ನೆಲೆಯಲ್ಲಿ ಗುರುತಿಸ ಬಹುದು. ಹಾಗೇ ಚಿಕ್ಕಜಾಲವು ಒಂದು ದೊಡ್ಡ ಊರಾಗಿತ್ತು ಎಂಬುದನ್ನು ಗಮನಿಸಬಹುದು. ಬನ್ನೇರುಘಟ್ಟ ದಾಮೋದರ ದೇವಾಲಯವು ಇವರ ಕಾಲದಲ್ಲಿಯೇ ನಿರ್ಮಿತಗೊಂಡಿದ್ದು ನಂತರದಲ್ಲಿ ಹೊಯ್ಸಳ ದೊರೆ ಇಮ್ಮಡಿ ನರಸಿಂಹ ಮತ್ತು ರಾಮನಾಥರು ಸಹ ದಾನ ನೀಡಿರುವುದನ್ನು

ಕಾಣಬಹುದು. ಜಕ್ಕೂರಿನ ನಾಡಸೇನ ಬೋವನು ಅಲ್ಲಾಳನಾಥ (ವರದರಾಜ) ದೇವಾಲಯವನ್ನು ಕಟ್ಟಿಸಿದನು. ಹಾಗೆ ಸೊಂಡೆಕೊಪ್ಪದಲ್ಲಿ ಅಗ್ರಹಾರ ನಿರ್ಮಿಸಿ ಈಶ್ವರ ದೇವಾಲಯವನ್ನು ಕಟ್ಟಿಸಲಾಯಿತು.[೫೦] ಈ ಮೇಲಿನ ವಿಚಾರಗಳಲ್ಲಿ ಪ್ರಮುಖವಾಗಿ ಪ್ರಾಚೀನ ಮತ್ತು ಮಧ್ಯಕಾಲೀನ ಸಂದರ್ಭದಲ್ಲಿ ದೇವಾಲಯದ ಪರಿಸರದಲ್ಲಿ ಸಂತೆಗಳನ್ನು ಏರ್ಪಡಿಸಲಾಗುತಿತ್ತು ಎಂಬುದರೆಡೆಗೆ ಗಮನಸೆಳೆಯುತ್ತದೆ. ವಾರ್ಷಿಕ ಜಾತ್ರೆಗಳನ್ನು ಮಾಡುತ್ತಿದ್ದು, ದೇವಾಲಯಗಳು ಆರ್ಥಿಕ ಚಟುಚಟಿಕೆಗಳ ಕೇಂದ್ರಗಳಾಗಿದ್ದವು. ಹೊಯ್ಸಳ ಅರಸರು ರಾಜ್ಯದ ಆದಾಯವನ್ನು ದೇವಾಲಯಗಳ ಕಟ್ಟಡಗಳ ಕಾರ್ಯಗಳಿಗೆ ಬಳಸುತ್ತಿದ್ದರು. ಇದರ ಉದ್ದೇಶವು ಬಂಡವಾಳದ ಹೂಡಿಕೆಯೇ ಆಗಿತ್ತು.[೫೧] ದೇವಾಲಯಗಳು ಉದ್ಯೋಗ ನೀಡುವ ಕೈಗಾರಿಕೆಯಾಗಿ, ಉಗ್ರಾಣವಾಗಿ, ಬ್ಯಾಂಕಿಂಗ್, ಮಾರುಕಟ್ಟೆಯ ಕೇಂದ್ರವಾಗಿ ಕಾರ್ಯನಿರ್ವಹಿಸುತ್ತಿದ್ದವು. ಇದರಿಂದಾಗಿ ಒಳನಾಡಿನ ವಾಣಿಜ್ಯ–ವ್ಯಾಪಾರವು ಚುರುಕುಗೊಂಡಿತು. ಇವೆಲ್ಲವು ಕೃಷಿ ಮತ್ತು ಧಾರ್ಮಿಕ ಕ್ಷೇತ್ರಗಳ ನಡುವೆ ವಾಣಿಜ್ಯ–ವ್ಯಾಪಾರದ ಪ್ರಕ್ರಿಯೆಯು ಬೆಳವಣಿಗೆ ಹೊಂದಿದ್ದಕ್ಕೆ ಸಾಕ್ಷಿಯಾಗಿದೆ. ಕೃಷಿ ವ್ಯವಸ್ಥೆಯಲ್ಲಿ ಮಾರಾಟಮಾಡಬಹುದಾದ ವಸ್ತುಗಳ ಹೆಚ್ಚುವರಿ ಇದ್ದಿತೆಂದು ಇದು ಸೂಚಿಸುತ್ತದೆ. ಹಾಗೆ ಹೆಚ್ಚುವರಿ ಇರದಿದ್ದರೆ ವಾಣಿಜ್ಯವನ್ನಾಗಲಿ ಅಥವಾ ಒಂದು ನಗರ–ಪಟ್ಟಣವನ್ನಾಗಲಿ ಕಟ್ಟುವ ಅಗತ್ಯವಿರಲಿಲ್ಲ.

ಹೊಯ್ಸಳರ ಕಾಲದಲ್ಲಿ ಕಂಡುಬರುವ ವಚನ ಚಳುವಳಿಯು ಕಾಯಕಕ್ಕೆ ಹೆಚ್ಚಿನ ಮಹತ್ವವನ್ನು ನೀಡಿತು. ಇದು ವಾಣಿಜ್ಯದ ನೆಲೆಯಲ್ಲಿ ಉಂಟಾಗಿದ್ದ ಅಧಿಕ ಬೇಡಿಕೆಗೆ ಒಂದು ಸಾಕ್ಷಿ ಆಗಿದೆ. ಅಲ್ಲದೆ ವಚನಗಳಲ್ಲಿರುವ ಉತ್ಪಾದಕ ಅಥವಾ ಕಾರ್ಮಿಕ ಹಕ್ಕು ಮತ್ತು ಸ್ಥಾನಮಾನವನ್ನು ಕುರಿತ ಚಿಂತನೆಗಳು ಇದನ್ನು ಇನ್ನೂ ಹೆಚ್ಚು ಸ್ಪಷ್ಟಪಡಿಸಿದವು. ಇದು ಪ್ರತಿಯೊಂದು ಉತ್ಪಾದನಾ ವರ್ಗವು ಸ್ವತಂತ್ರವಾದ ಅಭಿವ್ಯಕ್ತಿಯನ್ನು ಹೊಂದುವಂತೆ ಮಾಡಿತು. ಇಂತಹ ಗುರುತರವಾದ ಬದಲಾವಣೆಗಳನ್ನು ಅವರು ಹೀಗೆ ಗುರುತಿಸುತ್ತಾರೆ. "ಈ ಬದಲಾವಣೆಗಳನ್ನು ನಿಶ್ಚಿತವಾಗಿ ಗುರುತುಮಾಡಿ ತೋರಿಸುವುದು ಕಷ್ಟವಾದರೂ ಬದಲಾವಣೆಗಳನ್ನು ಧೋರಣಾತ್ಮಕ ಪ್ರವೃತ್ತಿಯಲ್ಲಿ ಒಟ್ಟಾರೆಯಾಗಿ ಬಂದ ತಿರುವುಗಳನ್ನು ಸಾಮಾನ್ಯೀಕರಿಸಿ ನೋಡಲು ನಾವು ಹಿಂದೆಗೆಯಬೇಕಾಗಿಲ್ಲ". ಅವುಗಳನ್ನು ಈ ರೀತಿಯಾಗಿ ಗುರುತಿಸಬಹುದು, ಮೊದಲನೆಯದಾಗಿ ಕಸುಬುದಾರ ಉತ್ಪಾದಕರ ಒಂದು ವಿಭಾಗವು ಮಾರುಕಟ್ಟೆಯಲ್ಲಿ ಪಾಲ್ಗೊಳ್ಳಲು ಸ್ವಾತಂತ್ರ್ಯವನ್ನು ಪಡೆದು ಕೊಂಡಿತು. ಪರಿಣಾಮವಾಗಿ ಮಠಗಳು ಮತ್ತು ಭೂಮಾಲೀಕರು ಅವರನ್ನು ಅಧೀನದಲ್ಲಿಟ್ಟುಕೊಳ್ಳುವ ಹಕ್ಕುಗಳನ್ನು ಕಳೆದುಕೊಂಡರು.

ಎರಡನೆಯದಾಗಿ, ಮಠಗಳಿಗೆ ಒಕ್ಕಲಾಗಿ ಬಂಧಿಸಲ್ಪಟ್ಟಿದ್ದ ಗೇಣಿದಾರರು ತಮ್ಮ ಜೀತದಿಂದ ಬಿಡುಗಡೆ ಪಡೆದರು. ಆಗ ಉತ್ತರ ಹಾಗೂ ಮಧ್ಯ ಕರ್ನಾಟಕದಲ್ಲಿದ್ದ ಬಹುಪಾಲು ಮಠಗಳು

ಕಾಳಾಮುಖ ಪಂಥದಿಂದ ವೀರಶೈವ ಪಂಥಕ್ಕೆ ಸಾಮೂಹಿಕವಾಗಿ ಮತಾಂತರಗೊಂಡ ಪ್ರಕ್ರಿಯೆಯನ್ನು ಕಾಣಬಹುದು. ಹಳೆಯ ಮಠಗಳೊಂದಿಗೆ ಹೊಂದಿದ್ದ ಗೇಣಿ ಜೀತವನ್ನು ಉತ್ಪಾದಕ ವರ್ಗ ಬಯಸಿದಾಗ ಬದಲಾಯಿಸಲು ಅವಕಾಶ ಒದಗಿಸಿತು. ಹಿಂದಿನ ಜೀತದ ಗೇಣಿದಾರಿಕೆಯ ಬದಲಾಗಿ ಸ್ವತಂತ್ರ ಗೇಣಿದಾರರ ವರ್ಗವು ಅಸ್ತಿತ್ವಕ್ಕೆ ಬಂದಿತು. ಮೂರನೆಯದಾಗಿ, ಜಮೀನ್ದಾರಿಕೆ ಹಾಗೂ ಅಗ್ರಹಾರಗಳು ಭೂ ಒಡೆಯರಿಗೆ ಸಲ್ಲಿಸಬೇಕಾಗಿದ್ದ ಬಿಟ್ಟಿ ಚಾಕರಿಯಿಂದ ಬಿಡುಗಡೆ ಪಡೆದವು. ತಮ್ಮನ್ನು ತಮ್ಮ ಭೂಮಿಯಿಂದ ಹೊರದೂಡಿ ಬಿಟ್ಟಿ ಚಾಕರಿಯ ಆಳುಗಳಾಗಿ ನಡೆಸಿಕೊಳ್ಳುತ್ತಿದ್ದ ಮಠಮಾನ್ಯಗಳ ಬಲಾತ್ಕಾರದ ದುಡಿಮೆಯಿಂದ ರೈತರು ಬಿಡುಗಡೆ ಹೊಂದಿದರು”.[೫೨]

“ಉತ್ಪಾದನಾ ಸಂಬಂಧಗಳಲ್ಲಿ ಈ ಬಗೆಯ ಹೊಸ ಪ್ರವೃತ್ತಿಗಳ ನೆಲೆಗೊಳ್ಳುವಿಕೆ ಆಗ ಉಗಮವಾಯಿತು. ಉತ್ಪಾದನಾ ಸಾಧನಗಳ ವಿಷಯದಲ್ಲೂ ಸರಕು ಉತ್ಪಾದನೆಯನ್ನು ಹೆಚ್ಚಿಸಲು ಅನುಗುಣವಾಗುವಂತಹ ಬದಲಾಣೆಗಳು ಕಂಡುಬಂದವು. ಈ ಹಿಂದಿದ್ದ ಉತ್ಪಾದನಾ ಸಾಧನಗಳಿಗೆ ಹೋಲಿಸಿದರೆ ಉತ್ಪಾದಕತೆಯಲ್ಲಿ ಹೆಚ್ಚು ಸಾಮರ್ಥ್ಯವಿದ್ದ ಹೊಸ ಸಾಧನಗಳು ರೂಪುಗೊಳ್ಳ ತೊಡಗಿದ್ದವು”.[೫೩] ಜೊತೆಗೆ ಅನೇಕ ಹೊಸ ಸಮುದಾಯಗಳು ಇದರಲ್ಲಿ ಭಾಗವಹಿಸತೊಡಗಿದವು. “ಈ ಹಿಂದೆ ಕಾಳಾಮುಖ ಬ್ರಾಹ್ಮಣರ ನಿಯಂತ್ರಣದಲ್ಲಿದ್ದ ಐಹೊಳೆ ಐನೂರ್ವರ ಶ್ರೇಣಿಯು ಈಗ ವೀರಶೈವ ವರ್ತಕರ ನಿಯಂತ್ರಣಕ್ಕೆ ಬಂದಿತು. ಇದು ಸರಕು ಉತ್ಪಾದನೆಯ ಹೊಸ ರಭಸಕ್ಕೆ ಒಂದು ಚಾಲಕಯಂತ್ರವಾಗಿ ಕಾರ್ಯ ನಿರ್ವಹಿಸಿತು”.[೫೪]

“ಐಯ್ಯಾಹೊಳೆ ಐನೂರ್ವರ ಶ್ರೇಣಿಯು ವೀರಶೈವ ಪ್ರಭಾವಕ್ಕೆ ಒಳಗಾದಾಗ ಅದರ ಹಿಂದಿದ್ದ ಏಕಸ್ವಾಮ್ಯವು ಪತನವಾಗಿ ವಾಣಿಜ್ಯ ಚಟುವಟಿಕೆಗಳ ನಿಯಂತ್ರಣವು ವೀರಬಣಜಿಗರ ಕೈಗೆ ಬಂದಿತು. ಈ ಸಮುದಾಯವು ಕರ್ನಾಟಕದ ಬಲಿಷ್ಠ ವಣಿಕ ಸಮುದಾಯವಾಗಿ ರೂಪುಗೊಂಡಿತು. ಈ ವೀರಬಣಜಿಗ ಸಮುದಾಯವು ಆಗ ಹೊಯ್ಸಳ ಆಳ್ವಿಕೆಗೆ ಒಳಪಟ್ಟಿದ್ದ ದಕ್ಷಿಣ ಕರ್ನಾಟಕದ ಕಾವೇರಿ–ಕಬಿನಿ ನದಿ ಪ್ರಾಂತ್ಯಗಳಲ್ಲೂ ವಾಣಿಜ್ಯ ಚಟುಚಟಿಕೆಗಳನ್ನು ಪ್ರೋತ್ಸಾಹಿಸಿತು”.[೫೫] ಈ ವರ್ತಕ ಶ್ರೇಣಿಯನ್ನು ಕುರಿತು “ವಾಣಿಜ್ಯ ಚಟುವಟಿಕೆಗಳ ಹಾಗೂ ಸರಕು ಉತ್ಪಾದನೆಯ ಈ ಬೆಳವಣಿಗೆಯ ಜೊತೆ ಸಮಾಜದಲ್ಲಿ ಎಡಗೈ ಹಾಗೂ ಬಲಗೈ ಎಂಬ ಶ್ರೇಣೀಕರಣವು ಪ್ರಚಲಿತಗೊಂಡಿತು. ಇದು ಉತ್ಪಾದನೆ ಹಾಗೂ ವಾಣಿಜ್ಯ ಎಂದು ಉಂಟಾಗಿದ್ದ ಜನ ವಿಭಾಗಗಳ ಚಟುವಟಿಕೆಗಳನ್ನು ನಿರ್ವಹಿಸಲು ಏರ್ಪಟ್ಟಿದ್ದ ಯುರೋಪಿನ ಗಿಲ್ಡ್ ಮಾದರಿಯ ಶ್ರೇಣೀಕರಣವಾಗಿತ್ತು” ಎಂದಿರುವುದು ಅದರ ಸ್ವರೂಪದ ಮೇಲೆ ಬೆಳಕು ಚೆಲ್ಲುತ್ತದೆ.[೫೬]

ಸರಕು ಉತ್ಪಾದನೆ ಎಂಬ ಪ್ರಕ್ರಿಯೆಯು ಒಂದು ರೂಪದಲ್ಲಿ ಊಳಿಗಮಾನ್ಯತೆಯ ವಿರುದ್ಧ

ನಿರ್ದೇಶಿತವಾಗಿತ್ತು. ಈ ಬೆಳವಣಿಗೆಯ ಸರಕು ಉತ್ಪಾದಕರು ಹಾಗೂ ಅದರ ವಿನಿಮಯದಾರರು ಎಂಬ ಎರಡು ವರ್ಗಗಳ ನಡುವೆ ಭಿನ್ನತೆಗಳನ್ನು ಸೃಷ್ಟಿಸಿತು. ಆದರೆ ಪ್ರತಿ ವರ್ಗವು ಸಹ ಪರಸ್ಪರ ಹಿತಾಸಕ್ತಿ ಮತ್ತು ರಕ್ಷಣೆಗಾಗಿ ಜಾತಿಗಳನ್ನು ಬದಿಗೊತ್ತಿದವು. ಉತ್ಪಾದಕ ಚಟುವಟಿಕೆಯ ಆಧಾರದ ಮೇರೆಗೆ ವರ್ಗ ಸೌಹಾರ್ದತೆಯಿಂದ ಸಾಮಾಜಿಕ ಸಂಬಂಧಗಳನ್ನು ಹೊಂದಿದವು ಎಂಬುದು ತಿಳಿದುಬರುತ್ತದೆ.

ಬೆಂಗಳೂರು ಪ್ರದೇಶದ ಕನಕನಹಳ್ಳಿ, ಗಾಣಾಳಕೊಪ್ಪ ಎಂಬಲ್ಲಿ ದೊರೆಕಿರುವ ಕ್ರಿ.ಶ ೧೩೧೬ರ ಶಾಸನವು ಮುಖ್ಯವಾಗಿದೆ. ಇದರಲ್ಲಿ ಪ್ರಜೆಗೌಡರು ಮತ್ತು ಹದಿನೆಂಟು ಸಮುದಾಯದ ಕೋಮುಗಳು ಸೇರಿ ಹೊಸದಾಗಿ ಸಂತೆಯನ್ನು ಏರ್ಪಡಿಸಲು ಜಮೀನನ್ನು ನೀಡಿರುವುದು ತಿಳಿಸುತ್ತದೆ.[೫೭] ಇದರೊಂದಿಗೆ ಶಾಸನದಲ್ಲಿ ಉತ್ಪಾದಿತ ವರ್ತಕರು ಮತ್ತು ವಿನಿಮಯ ವರ್ತಕರನ್ನು ಜಾತಿಯ ಆಧಾರದ ಮೇಲೆ ಎಡಗೈ ಮತ್ತು ಬಲಗೈ ಎಂದು ವಿಂಗಿಡಿಸಿಕೊಂಡಿತ್ತು. ಬಲಗೈ ಎಂಬ ಶ್ರೇಣೀಕರಣವು ವಾಣಿಜ್ಯದಲ್ಲಿ ತೊಡಗಿದ್ದ ಹಲವಾರು ವರ್ತಕ ಜಾತಿಗಳನ್ನು ಹಾಗೂ ಅವುಗಳ ಸೇವೆಯಲ್ಲಿ ನಿರತವಾಗಿದ್ದ ಇತರ ಕೆಲವು ಜಾತಿಗಳನ್ನು ಒಳಗೊಂಡಿದ್ದ ಶ್ರೇಣಿಯನ್ನು ಗುರುತಿಸಬಹುದು. ಅದಕ್ಕೆ ಸಮಾನಾಂತರ ಪ್ರಕ್ರಿಯೆಯಾಗಿ, ಸಾಮಾಜಿಕ ಸನ್ನಿವೇಶಕ್ಕೆ ತಕ್ಕಂತೆ ಇನ್ನೊಂದು ಪಂಗಡವಾಗಿ ಸರಕು ಉತ್ಪಾದಕರ ಸಮುದಾಯವು ತನ್ನನ್ನು ತಾನು ಉತ್ಪಾದಕ ಚಟುವಟಿಕೆಯ ಆಧಾರದಲ್ಲಿ ಜಾತಿಯ ಪರಿಮಿತದ ಹೊರೆಗೆ ರೂಪಿಸಿಕೊಂಡಿತು. ಇದು ಎಡಗೈ ಶ್ರೇಣಿಯಾದವು.[೫೮]

ಒಟ್ಟಾರೆಯಾಗಿ ಆರ್ಥಿಕ-ಸಾಮಾಜಿಕ-ಧಾರ್ಮಿಕ ಅಂಶಗಳ ಹಿನ್ನೆಲೆಯೊಳಗೆ ರೂಪುಗೊಂಡ ಸರಕು ಉತ್ಪಾದನೆಯ ಚಟುವಟಿಕೆಗಳು, ಹೊಯ್ಸಳ ಕಾಲಾವಧಿಯಲ್ಲಿ ವಿಸ್ತಾರವಾಗಿ ವಿಸ್ತರಿಸಿದ್ದಕ್ಕೆ ಮೇಲಿನ ಚರ್ಚೆಗಳು ಸಾಕ್ಷಿಯಾಗಿವೆ. ಈ ಬದಲಾವಣೆಗಳು ಸ್ಥಳೀಯರು, ವರ್ತಕರು ಹಾಗೂ ಪ್ರಭುತ್ವದ ನಡುವೆ ಉತ್ತಮ ಸಂಬಂಧವಿತ್ತು ಎಂಬ ಅಂಶವನ್ನು ತಿಳಿಸುತ್ತವೆ. ಈ ಕಾಲಾವಧಿಯಲ್ಲಿ ಬೆಂಗಳೂರು ಪ್ರದೇಶ ಪುರ ಮತ್ತು ಪಟ್ಟಣಗಳು ವ್ಯಾಪಾರ-ವಾಣಿಜ್ಯ ಕೇಂದ್ರಗಳಾಗಿ ರೂಪುಗೊಂಡವು.

ಹೊಯ್ಸಳರ ಕಾಲದ ವ್ಯವಸ್ಥೆಯೊಂದಿಗೆ ಘರ್ಷಣೆಗಳಿಲ್ಲದೆ ವಿಜಯನಗರ ಅರಸರ ಆಳ್ವಿಕೆಗೆ ಅನೇಕ ವಾಣಿಜ್ಯ ಕೇಂದ್ರಗಳು ಹಸ್ತಾಂತರಗೊಂಡವು. ಅಂತಹವುಗಳಲ್ಲಿ ಬೆಂಗಳೂರು ಪ್ರದೇಶವೂ ಒಂದು. ಮೂರನೆಯ ಬಲ್ಲಾಳನ ಸೋದರಳಿಯ ಬಲ್ಲಪ್ಪ ದಂಡನಾಯಕ ವಿಜಯನಗರದ ಹರಿಹರನ ಮಗಳ ಗಂಡನಾಗಿದ್ದನು. ೧೩೪೬ರ ದೊಡ್ಡ ಕನ್ನೆಲ್ಲಿಯ ಶಾಸನವು ಮಹಾಮಂಡಲೇಶ್ವರ ಹರಿಯಪ್ಪ ಮತ್ತು ಅವನ ಅಧೀನ ಬಲ್ಲಪ್ಪನನ್ನು ಹೆಸರಿಸಿದೆ.[೫೯] ಇದು ಹೊಯ್ಸಳರ ನಂತರದಲ್ಲಿ ಪ್ರಬಲವಾಗಿ ರೂಪುಗೊಂಡ ರಾಜಮನೆತನಗಳ ವೈವಾಹಿಕ ಸಂಬಂಧದ ಮೇಲೆ ಬೆಳಕು ಚೆಲ್ಲುತ್ತದೆ. ಈ ವೈವಾಹಿಕ

ಸಂಬಂಧಗಳು ಅಧಿಕಾರ ಹಸ್ತಾಂತರ ಪ್ರಕ್ರಿಯೆಯಲ್ಲಿ ಮಹತ್ವದ ಸ್ಥಾನ ನಿರ್ವಹಿಸುತ್ತಿದ್ದವು.

## ವಿಜಯನಗರ ಸಾಮ್ರಾಜ್ಯ

ಹರಿಹರ, ಬುಕ್ಕ, ಎರಡನೆಯ ಹರಿಹರ, ವಿರೂಪಾಕ್ಷ, ದೇವರಾಯ, ಎರಡನೆಯ ದೇವರಾಯ, ನರಸನಾಯಕ, ಕೃಷ್ಣದೇವರಾಯ, ಅಚ್ಯುತರಾಯ, ಸದಾಶಿವರಾಯ, ರಾಮರಾಯರ ಆಳ್ವಿಕೆಯ ಸಂದರ್ಭದಲ್ಲಿ ಬೆಂಗಳೂರು ಪ್ರದೇಶಗಳಾದ ಹೆಸರಘಟ್ಟ, ಬನ್ನೇರುಘಟ್ಟ, ಮಡಿವಾಳ, ಯಲಹಂಕ, ಅಗರ, ಬೊಮ್ಮಸಂದ್ರ, ಹೂಡಿ, ದೊಮ್ಮಲೂರು, ಚಿಕ್ಕಜಾಲ, ಬೇಗೂರು ಇವರ ಅಧೀನದಲ್ಲಿತ್ತು ಎಂಬುದನ್ನು ಈ ಪ್ರದೇಶದಲ್ಲಿ ದೊರೆತ ಹಲವು ಶಾಸನಗಳು ಸ್ಪಷ್ಟಪಡಿಸುತ್ತವೆ.[೬೦] ಅಂದರೆ ಈ ಪ್ರದೇಶಗಳು ಪ್ರಮುಖ ಆಯಕಟ್ಟಿನ ಸ್ಥಳಗಳು ಸಹ ಆಗಿದ್ದವು. ಜೊತೆಗೆ ರಾಜಕೀಯವಾಗಿ ಹಾಗೂ ಆರ್ಥಿಕವಾಗಿ ಪ್ರಮುಖ ತಾಣಗಳಾಗಿದ್ದವು.

ಹೊಯ್ಸಳರ ಕಾಲದಲ್ಲೇ ವಿಸ್ತಾರಗೊಂಡಿದ್ದ ಕೃಷಿ ಸರಕು ಉತ್ಪಾದನೆ ಹಾಗೂ ಅದರ ಹೆಚ್ಚಳವು ವಿಜಯನಗರದ ಕಾಲಾವಧಿಯಲ್ಲಿ ಪರಾಕಾಷ್ಠೆಯನ್ನು ತಲುಪಿತು. ಈ ಹಂತದಲ್ಲಿ ಭಾರತದ ಇತರೇ ಪ್ರದೇಶಗಳಲ್ಲಿ ಬಳಕೆಯಲ್ಲಿದ್ದ ಸುಧಾರಿತವಾದ ಕೃಷಿ ಉಪಕರಣಗಳು ಇಲ್ಲಿ ಬಳಕೆಯಲ್ಲಿದ್ದುದನ್ನು ಬಾರ್ಬೊಸಾ ತಿಳಿಸಿದ್ದಾನೆ.[೬೧] ಇದರೊಂದಿಗೆ ಈ ಕಾಲಘಟ್ಟದಲ್ಲಿ ಪ್ರಾಂತ್ಯದಲ್ಲಿನ ಹವಾಗುಣ, ಭೂಮಿಯ ಫಲವತ್ತತೆ ಇನ್ನಿತರ ಅಂಶಗಳ ಆಧಾರದ ಮೇಲೆ ಕೆಲವು ನಿರ್ದಿಷ್ಟ ಬಗೆಯ ಬೆಳೆಗಳ ಉತ್ಪಾದನೆಗೆ ಪ್ರಾಮುಖ್ಯತೆಯನ್ನು ನೀಡಲಾಯಿತು. ಬೆಂಗಳೂರು ಪ್ರದೇಶದಲ್ಲಿ ಧಾನ್ಯಗಳು, ಹಣ್ಣುಗಳು, ಹುಣಿಸೆ, ತರಕಾರಿಗಳು ಸಾಂಬಾರ ಪದಾರ್ಥಗಳು ಮತ್ತು ಹೊಗೆಸೊಪ್ಪು ಬೆಳೆಯುತ್ತಿದ್ದ ವಿವರಣೆಯನ್ನು ಶಾಸನಗಳಲ್ಲಿ ಕಾಣಬಹುದು. ಬೆಂಗಳೂರಿನ ಮುಖ್ಯವಾದ ಬೇಸಾಯ ಹೊಲಗಳ ಪ್ರದೇಶವಾಗಿತ್ತು.[೬೨] ಈ ಬೆಳೆಗಳ ಅಭಿವೃದ್ಧಿ ಹಾಗೂ ಸಾಗುವಳಿ ಜಮೀನಿನ ವಿಸ್ತರಣೆ ಸತತವಾಗಿ ಮುಂದುವರಿಯುತ್ತಲೇ ಹೋಯಿತು. ಅರಣ್ಯವನ್ನು ಕಡಿದು ಕೆರೆಗಳನ್ನು ನಿರ್ಮಿಸಿದಾಗ ಗ್ರಾಮೀಣ ಅರ್ಥವ್ಯವಸ್ಥೆಯು ನೂತನವಾಗಿ ರೂಪುಗೊಂಡಿತು. ಸಹಜವಾಗಿಯೇ ನೀರಾವರಿ ಸೌಲಭ್ಯಗಳು ಉತ್ಸಾಹಿ ರೈತರನ್ನು ಹಾಗೂ ಕಸುಬುದಾರರನ್ನು ಹೊಸ ನೆಲೆಗಳಿಗೆ ಆಕರ್ಷಿಸಿತು.

ಎರಡನೆಯ ದೇವರಾಯನ ಕಾಲದಲ್ಲಿ ಹಿರಸುನಾಡಿನ ನಾಯಕತ್ವನ್ನು ವಹಿಸಿದ್ದ ಮುದಿಯ ನಾಯಕನು ಕ್ರಿ.ಶ ೧೪೧೨ರಲ್ಲಿ ಕೋಮಗೊಂಡನ ಹಳ್ಳಿಯಲ್ಲಿ ವಾರದ ಸಂತೆಯನ್ನು ಆರಂಭಿಸಿದನು. ಅದೇ ರೀತಿ ೧೪೨೨ರಲ್ಲಿ ಹಿಮ್ಮರೆನಾಡಿನ ನಾಯಕತ್ವ ವಹಿಸಿದ ಮುದ್ದೆಯ ದಂಡನಾಯಕನ ಕಾಲದಲ್ಲಿ ಸರ್ಜಾಪುರದಲ್ಲಿ ಸಂತೆಯನ್ನು ಕಟ್ಟಿಸಲಾಯಿತು. ೧೪೨೭ರಲ್ಲಿ ಮೊರಸುನಾಡಿನ ಚೊಕ್ಕದೇವ ಆನೇಕಲ್ಲು ತಾಲ್ಲೂಕಿನ ಮಾಸ್ತೇನ ಹಳ್ಳಿಯಲ್ಲಿ ವಾರದ ಸಂತೆಯನ್ನು ಕಟ್ಟಿ ಪಟ್ಟಣಸ್ವಾಮಿಯೊಬ್ಬನನ್ನು

ನೇಮಿಸಿದನು.[೬೩] ನೀರಾವರಿಯಿಂದ ಹೊಲಗಳು ಗದ್ದೆಗಳಾಗಿ ಪರಿವರ್ತಿತವಾಗುತ್ತಿದ್ದರೆ, ಬಂಜರು ಭೂಮಿಯನ್ನು ಸಾಗುವಳಿಗೊಳಪಡಿಸುವ ಮೂಲಕ ಕೃಷಿ ಪ್ರದೇಶವನ್ನು ವಿಸ್ತರಿಸಲಾಗುತ್ತಿತ್ತು. ಕೃಷಿ ಉತ್ಪನ್ನದ ಬೇಡಿಕೆಯಲ್ಲಿ ಬಂದ ಹೆಚ್ಚುವರಿಯು ಕೃಷಿ ವಿಸ್ತರಣೆಗೆ ಹೆಚ್ಚಿನ ಪ್ರೇರಣೆ ನೀಡಿತು. ಸಾಗುವಳಿ ಮಾಡಬಹುದಾದ ಭೂಮಿವು ಅಗ್ಗವಾಗಿ ದೊರಕುತ್ತಿತ್ತು ಮತ್ತು ಅಂತಹ ಭೂಮಿಗೆ ಸರಕಾರದಿಂದ ರಿಯಾಯಿತಿಗಳು ದೊರಕುತ್ತಿದ್ದವು. ಇದರಿಂದಾಗಿ ಜನರು ಪ್ರಭುತ್ವವನ್ನು ಕೃಷಿ ಚಟುವಟಿಕೆಗಳಿಗೆ ಬಂಜರು ಭೂಮಿಯನ್ನು ಮಂಜೂರು ಮಾಡಬೇಕೆಂದು ಮನವಿಯನ್ನು ಮಾಡಿಕೊಳ್ಳುತ್ತಿದ್ದರು.

ಬಂಜರು ಭೂಮಿಯನ್ನು ಸಾಗುವಳಿ ಭೂಮಿಯಾಗಿ ಪರಿವರ್ತಿಸಿದವರು ತಮ್ಮ ವೆಚ್ಚಗಳನ್ನು ಕಳೆದು ಲಾಭವನ್ನು ಪಡೆಯುವಂತಾಗುವವರೆಗೂ ಸರಕಾರಕ್ಕೆ ತೆರಿಗೆಯನ್ನು ಕಟ್ಟುವಂತಿರಲಿಲ್ಲ. ಇಂತಹ ರೈತಾಪಿ ವರ್ಗಗಳನ್ನು ಒಕ್ಕಲಿಗ, ಒಕ್ಕಲು ಮತ್ತು ಗೌಡರು ಎಂದು ಕರೆಯುತ್ತಿದ್ದರು. ಇವರು ಕಠಿಣ ದೇಹಶ್ರಮ ಮತ್ತು ಬಂಡವಾಳಗಳಿಂದ ಹೊಸ ವಸತಿಗಳ ತಳಹದಿ ಹಾಕಿ ಸಾಗುವಳಿ ಭೂಮಿಯನ್ನು ವಿಸ್ತರಿಸಿದರು. ಮಾಗಡಿ, ದೇವನಹಳ್ಳಿ, ಚಿಕ್ಕಬಳ್ಳಾಪುರ ಹಾಗೂ ಬೆಂಗಳೂರು ಸುತ್ತಮುತ್ತಲ ಪ್ರಾಂತ್ಯಗಳಲ್ಲಿ ಹಲವು ಪಾಳೆಯಪಟ್ಟುಗಳನ್ನು ಅಂದರೆ ಕೃಷಿ ವ್ಯವಸ್ಥೆಗೆ ಹೊಸನೆಲೆಗಳನ್ನು ಹೊಂದಲು ವಿಜಯನಗರ ಸಾಮ್ರಾಜ್ಯ ಅನುವು ಮಾಡಿಕೊಟ್ಟಿತ್ತು. ಅವರ ಹಲವು ಸಾಮಂತರಲ್ಲಿ ಒಬ್ಬನಾದ ಯಲಹಂಕನಾಡಿನ ನಾಯಕರು ವಿಜಯನಗರ ಸಾಮ್ರಾಜ್ಯದ ಅಮರನಾಯಕರಲ್ಲಿ ಮೊದಲವರ್ಗಕ್ಕೆ ಸೇರಿದವರು ಎಂಬುದು ಗಮನಾರ್ಹ. ಇವರು ನಾಗರಿಕ ಮತ್ತು ಮಿಲಿಟರಿ ಉಸ್ತುವಾರಿಯನ್ನು ವಹಿಸಿಕೊಂಡಿದರು. ಮೊದಲನೆಯದಾಗಿ ಈ ಮನೆತನದ ಸ್ಥಾಪಕ ರಣಭೈರೇಗೌಡ ಉದ್ಯಮಶೀಲನಾದ ಕೃಷಿಕ. ಎರಡನೆಯದಾಗಿ, ಯುದ್ಧ ಭೂಮಿಯಲ್ಲಿ ೧ನೆಯ ಕೆಂಪೇಗೌಡನ ಪರಾಕ್ರಮವನ್ನು ನೋಡಿ ಮೆಚ್ಚಿದ ಅಚ್ಯುತರಾಯನು ಅವನಿಗೆ ೩೦,೦೦೦ ಪಗೋಡಗಳ ವರಮಾನ ಬರುತ್ತಿದ್ದ ೧೨ ಹೋಬಳಿಗಳನ್ನು ಉಡುಗೊರೆಯಾಗಿ ಕೊಟ್ಟನು.[೬೪] ಹೀಗೆ ಬ್ರಾಹ್ಮಣೇತರರ–ಧಾರ್ಮಿಕವಲ್ಲದ ಕೃಷಿ ನೆಲೆಗಳ ಉದಯವು ನೂತನ ಸಾಮಾಜಿಕ ವಿನ್ಯಾಸವನ್ನು ಈ ಕಾಲಾವಧಿಯಲ್ಲಿ ಕಾಣಬಹುದಾಗಿದೆ. ಆ ಕಾಲದ ಶಾಸನಗಳು ಮತ್ತು ಸಾಹಿತ್ಯಿಕ ಆಕರಗಳು ಭೂಮಿಯನ್ನೇ ಕೇಂದ್ರಿಕರಿಸಿ ಕೊಂಡು ರಚಿತಗೊಂಡಿದ್ದು, ಇದು ಸರಕಾರ ಮತ್ತು ಖಾಸಗಿ ಒಡೆತನವನ್ನು ದೃಢಪಡಿಸುತ್ತದೆ.

ಈ ತೆರನಾದ ಆಡಳಿತ ವ್ಯವಸ್ಥೆಯಲ್ಲಿ ಊಳಿಗಮಾನ್ಯ ಪದ್ಧತಿಯು ಇನ್ನೂ ಪ್ರಬಲವಾಯಿತು. ಇದಕ್ಕೆ ಪ್ರಮುಖ ಕಾರಣ ಅಮರನಾಯಕರ ಪದ್ಧತಿ. ಈ ವ್ಯವಸ್ಥೆಯಿಂದಾಗಿ ನಿರ್ದಿಷ್ಟ ಕ್ಷೇತ್ರಗಳಲ್ಲಿ ಕೃಷಿ, ನೀರಾವರಿ, ಸರಕುಗಳ ಉತ್ಪಾದನೆ, ರಸ್ತೆ ಕಾಮಗಾರಿ, ಕೆರೆ ನಿರ್ಮಾಣ ಮುಂತಾದ ಕಾರ್ಯಗಳನ್ನು ವಿಜಯನಗರದ ಮಾದರಿಯಲ್ಲೇ ನಿರ್ವಹಿಸುತ್ತಿದ್ದರು. ಇವರು ಆಡಳಿತ ಮತ್ತು ಸೈನಿಕ ವ್ಯವಸ್ಥೆಯನ್ನು

ಹೊಂದಿದ್ದರಿಂದಾಗಿ ಅವರ ಅಡಿಯಲ್ಲಿ ಉದ್ಯೋಗಿಗಳ ಸಂಖ್ಯೆಯನ್ನು ಹೆಚ್ಚಿದವು. ಇದು ಸಹಜವಾಗಿಯೇ ಅವರಿಗೆ ಬೇಕಾದ ಉತ್ತಮ ದರ್ಜೆಯ ಬಟ್ಟೆಗಾಗಿ ಬೇಡಿಕೆಯನ್ನು ಹೆಚ್ಚಿಸಿತು. ಇದರಿಂದಾಗಿ ಸಾಮಾಜಿಕ-ಆರ್ಥಿಕ ರಂಗದಲ್ಲಿ ನೇಕಾರ ಜಾತಿಗಳಾದ ದೇವಾಂಗ, ಪದ್ಮಸಾಲಿ, ಸೇಣೆಗಾರರು ಮುಖ್ಯವಾಹಿನಿಯಲ್ಲಿ ಕಾಣಿಸಿಕೊಂಡರು. ಜೊತೆಗೆ ಉಪ ಸಾಮಂತೀಕರಣ ತೀವ್ರವಾದಾಗ ಸೇನಾಶಕ್ತಿಯ ಆದ್ಯತೆಯು ಹೆಚ್ಚಿತು. ಅದರಿಂದ ಸಮರಶೀಲ ಜಾತಿಗಳ ಪ್ರಾಮುಖ್ಯತೆ ಹೆಚ್ಚಾಯಿತು. ಬಲಗೈ ಶ್ರೇಣಿಯ ನಾಯಕತ್ವದಲ್ಲಿ ಸಾಲುಮೂಲೆ ಬಣಜಿಗರು ಮತ್ತು ವೀರ ಬಣಜಿಗರು ಮಹತ್ವದ ಸ್ಥಾನ ಹೊಂದಿದರು. ಇವರೊಂದಿಗೆ ಆಂಧ್ರಮೂಲದ ಕೋಮಟಿಗಳು ಮತ್ತು ಬಲಿಜಿಗರು ಪ್ರಾಮುಖ್ಯತೆಯನ್ನು ಪಡೆದುಕೊಂಡರು. ಇದೇ ಕಾಲಾವಧಿಯಲ್ಲಿ ಪ್ರಾಬಲ್ಯಕ್ಕೆ ಬಂದ ಇನ್ನೊಂದು ಗುಂಪೆಂದರೆ ಅದು ಪಾಂಚಾಳರು(ವಿಶ್ವಕರ್ಮಿಗಳು). ಇವರು ಭೂ ಹಿಡುವಳಿದಾರರಾದ ಒಕ್ಕಲಿಗರು ಮತ್ತು ಲಿಂಗಾಯಿತರ ಒಂದು ಭಾಗ ಮತ್ತು ಸರಕು ಉತ್ಪಾದಕ ವರ್ಗವಾಗಿ ಕಾಣಿಸಿಕೊಂಡರು.[೬೫]

ವಿಜಯನಗರದ ಅರಸರ ಕಾಲದಲ್ಲಿ ಬೆಂಗಳೂರು ಪ್ರದೇಶದಲ್ಲಿ ಹಲವು ದೇವಾಲಯಗಳಿಗೆ ದಾನ-ದತ್ತಿಗಳನ್ನು ನೀಡಿರುವುದಕ್ಕೆ ಅನೇಕ ಶಾಸನಗಳಲ್ಲಿ ಉಲ್ಲೇಖಗಳಿವೆ. ಕಂಪಣನ ಕಾಲದಲ್ಲಿ ೧೩೬೫ ಹಾಗೂ ೧೩೬೬ರಲ್ಲಿ ಮಡಿವಾಳದ ಸೋಮೇಶ್ವರ ದೇವಾಲಯಕ್ಕೆ ದಾನ ನೀಡಲಾಯಿತು. ಈ ದೇವಾಲಯವು ವಿಜಯನಗರದ ಅರಸರ ಕಾಲದಲ್ಲಿಯೇ ನವರಂಗ ಮತ್ತು ಕಂಬಗಳಿಂದ ಅಲಂಕರಿಸಲಾಗಿ ಸಾಕಷ್ಟು ವಿಸ್ತರಣೆಯನ್ನು ಪಡೆಯಿತು. ಆನೇಕಲ್ ಬಳಿ ಮುರಸೂರಿನ ಆದಿನಾರಾಯಣ ದೇವಾಲಯವನ್ನು ಬುಕ್ಕನ ಪುಣ್ಯಾರ್ಥ ೧೩೮೦ರಲ್ಲಿ ನಿರ್ಮಿಸಲಾಗಿತ್ತು ಎಂದು ಶಾಸನವೊಂದು ತಿಳಿಸುತ್ತದೆ. ಎರಡನೆಯ ದೇವರಾಯನ ಕಾಲದಲ್ಲಿ ಬೊಮ್ಮಸಂದ್ರವನ್ನು ಅಗ್ರಹಾರವನ್ನಾಗಿಸಿ ದಾನ ನೀಡಿದನು. ೧೪೪೦ರಲ್ಲಿ ದೊಮ್ಮಲೂರಿನ ಚೊಕ್ಕನಾಥ ದೇವಾಲಯಕ್ಕೆ ಸೊಂಡೆಕೊಪ್ಪದಿಂದ ಬರುವ ಕೆಲವೊಂದು ಆದಾಯವನ್ನು ದಾನಮಾಡಲಾಯಿತು. ಹಾಗೆಯೇ ಸೊಂಡೆಕೊಪ್ಪದ ಹೊಯ್ಸಳರ ಕಾಲದ ಈಶ್ವರ ದೇವಾಲಯವನ್ನು ಇವರ ಕಾಲದಲ್ಲಿ ವಿಸ್ತರಿಸಲಾಗಿತು. ೧೫೦೬ರಲ್ಲಿ ವೀರನರಸಿಂಹನು ಹೊಸಕೋಟೆಯ ಜ್ಯೋತಿಪುರ ಸೋಮೇಶ್ವರ ದೇವಾಲಯಕ್ಕೆ ದಾನ ನೀಡಿದ ವಿವರ ಶಾಸನದಲ್ಲಿದೆ. ಕೃಷ್ಣದೇವರಾಯನ ಕಾಲದಲ್ಲಿ ದೊಡ್ಡಬಳ್ಳಾಪುರದ ಲಿಂಗಪುರದ ಲಕ್ಷ್ಮೀದೇವಾಲಯಕ್ಕೆ ಮತ್ತು ಮಾಗಡಿಯ ಕಲ್ಯದ ಕಲಿನಾಥ ದೇವಾಲಯಕ್ಕೆ ದಾನ ನೀಡಿದನೆಂದು ಶಾಸನಗಳಲ್ಲಿ ಉಲ್ಲೇಖವಿದೆ. ಅದಲ್ಲದೆ, ಪುಣ್ಯಾರ್ಥವಾಗಿ ಜಗ್ಗೆಯ ವೀರಣ್ಣ ಒಡೆಯ ಎಂಬ ಧಾರ್ಮಿಕ ವ್ಯಕ್ತಿಗೆ ಮಾಗಡಿ ತಾಲೂಕು ಅರಸಿನಕುಂಟೆ ಗ್ರಾಮದ ಆದಾಯವನ್ನು ದಾನ ಮಾಡಲಾಗಿತು. ಸಾಳುವ ತಿಮ್ಮನು ದೊಡ್ಡಬಳ್ಳಾಪುರದ ಹಾಡೋನಹಳ್ಳಿಯ ಕೇಶವ ದೇವಾಲಯಕ್ಕೆ ಪ್ರಾಕಾರ ಕಟ್ಟಿಸಿದನು ಮತ್ತು ಮಾಗಡಿಯ ತಿರುಮಲ ದೇವಾಲಯಕ್ಕೆ ದಾನನೀಡಿದ ವಿಷಯ ತಿಳಿಯುತ್ತದೆ.

ಕ್ರಿ.ಶ ೧೫೧೫ರಲ್ಲಿ ಬೆಂಗಳೂರಿನ ಅಗರದ ಕೆರೆಯನ್ನು ಸುಸ್ಥಿರದಲ್ಲಿಡಲು ಕಟ್ಟುಕೊಡುಗೆ ನೀಡಿದನು. ಅಚ್ಯುತರಾಯನ ಕಾಲದಲ್ಲಿಯೂ ಸಹ ಇದೇ ತೆರನಾದ ಕಾರ್ಯಗಳಲ್ಲಿ ತೊಡಗಿದ್ದು ಮಾಗಡಿ, ನೆಲಮಂಗಲಗಳಲ್ಲಿರುವ ದೇವಾಲಯಗಳಿಗೆ ದಾನಕೊಟ್ಟ ವಿವರಗಳಿವೆ.[೬೬] ಇವೆಲ್ಲವೂ ಕೃಷಿ ಮತ್ತು ವಾಣಿಜ್ಯ ವಿಸ್ತರಣೆಯಲ್ಲಿ ದೇವಾಲಯಗಳು ಕೇಂದ್ರ ಪಾತ್ರವಹಿಸುತ್ತಿದ್ದದ್ದಕ್ಕೆ ಸಾಕ್ಷಿಯಾಗಿದೆ. ಈ ದೇವಾಲಯಗಳು ಸ್ಥಳೀಯರು ಮತ್ತು ಪ್ರಭುತ್ವದ ನಡುವೆ ಕೊಂಡಿಗಳಾದ್ದವು. ಬರ್ಟನ್‌ಸ್ಟೈನ್‌ರು ಈ ವ್ಯವಸ್ಥೆಯನ್ನು ಸೆಗ್ಮೆಂಟರಿ ವ್ಯವಸ್ಥೆ ಎಂದು ಗುರುತಿಸಿರುವುದನ್ನು ಕಾಣಬಹುದು.

### ಯಲಹಂಕ ನಾಡಪ್ರಭುಗಳು

ಹೊಯ್ಸಳ ದೊರೆ ಬಲ್ಲಾಳರಾಯನ ಆಳ್ವಿಕೆಯ ನಂತರ ಬೆಂಗಳೂರು ಪ್ರದೇಶವು ಆನೆಗೊಂದಿ ಸಂಸ್ಥಾನದ ಅಧೀನಕ್ಕೆ ಬಂದಿತು. ವಿಜಯನಗರದ ಆಡಳಿತದ ಕಾಲದಲ್ಲಿ ೧೪೧೮ರಲ್ಲಿ ಉತ್ತರ ದೇಶದಲ್ಲಿ ಭೀಕರವಾದ ಕ್ಷಾಮ ಕಂಡುಬಂದಾಗ ಏಳು ಗಾಡಿಗಳಲ್ಲಿ ಏಳು ಕುಟುಂಬಗಳು ಬೆಲೆಬಾಳುವ ಒಡವೆಗಳೊಡನೆ ಇಲ್ಲಿಗೆ ವಲಸೆ ಬಂದು ನೆಲೆಸಿದರು. ಜೊತೆಗೆ ವಿಜಯನಗರದ ಅರಸರು ಕೃಷಿಗೆ ಹೆಚ್ಚು ಒತ್ತು ನೀಡಿದ್ದರಿಂದಾಗಿ ಅವರ ಅನುಮತಿಯನ್ನು ಪಡೆದುಕೊಂಡು ಕೃಷಿಯಲ್ಲಿ ತೊಡಗಿದರು. ಇವರು ತಂದಿದ್ದ ಒಡವೆಗಳನ್ನು ಹಂಚಿಕೊಂಡು ಬೆಂಗಳೂರು ಸುತ್ತಮುತ್ತಲ ಪ್ರದೇಶಗಳಲ್ಲಿ ನೆಲೆಸಿ ಕೃಷಿ ಚಟುವಟಿಕೆಯನ್ನು ಆರಂಭಿಸಿದರು ಎಂಬ ಹಿನ್ನೆಲೆಯೊಂದಿಗೆ ಯಲಹಂಕ ನಾಡಪ್ರಭುಗಳ ಆಳ್ವಿಕೆಯ ಆರಂಭವನ್ನು ಕಾಣಬಹುದು. ಎಲ್ಲಕ್ಕಿಂತ ಮುಖ್ಯವಾಗಿ ಕೃಷಿಯೊಂದಿಗೆ ಹೊಂದಿದ್ದ ನಿಕಟ ಸಂಬಂಧ ಮತ್ತು ಶ್ರೀಮಂತಿಕೆಯನ್ನು ಗುರುತಿಸಬಹುದು. ಇಂತಹ ಕುಟುಂಬಗಳಲ್ಲಿ ಒಂದು ರಣಭೈರೇಗೌಡನ ಕುಟುಂಬ. ರಣಭೈರೇಗೌಡನ ಕುಟುಂಬವು ಇಂದಿನ ದೇವನಹಳ್ಳಿಯ ಆವತಿಯಲ್ಲಿ ನೆಲೆ ನಿಂತಿತು. ಎರಡನೆಯ ಕುಟುಂಬ, ಸಣ್ಣಭೈರೇಗೌಡನ ಕುಟುಂಬವು ಹುಲಿಕಲ್ಲು ಮತ್ತು ಕೊರಟಗೆರೆ ಪ್ರದೇಶದಲ್ಲಿ ನೆಲೆ ನಿಂತಿತು. ಮೂರನೆಯ ಕುಟುಂಬ, ತಮ್ಮೇಗೌಡನ ಕುಟುಂಬವು ಜಂಗಮಕೋಟೆಯ ಸುಗಟೂರು ಗ್ರಾಮದಲ್ಲಿ ನೆಲೆ ನಿಂತಿತು. ಏಳನೆಯ ಜಯಗೌಡನ ಕುಟುಂಬ ಯಲಹಂಕ ಪ್ರದೇಶದಲ್ಲಿ ನೆಲೆನಿಂತ್ತಿದ್ದು, ಇವನು ಆನೆಗೊಂದಿ ಸಂಸ್ಥಾನದ ಅರಸರ ಅಧೀನದಲ್ಲಿ ಅಧಿಕಾರವನ್ನು ಪಡೆದನು. ಏಳು ಕುಟುಂಬಗಳ ಉಲ್ಲೇಖವಿದ್ದು, ಅದರಲ್ಲಿ ನಾಲ್ಕು ಕುಟುಂಬಗಳ ಬಗ್ಗೆ ಮಾತ್ರ ಮಾಹಿತಿ ಇದೆ. ಉಳಿದ ಕುಟುಂಬದವರ ಬಗೆಗೆ ಯಾವುದೇ ಉಲ್ಲೇಖ ಕಂಡುಬಂದಿಲ್ಲ. ಇವರು ಆರಂಭದಲ್ಲಿ ತೆಲುಗು ಭಾಷೆಯಲ್ಲಿ ಮಾತನಾಡುತ್ತಿದ್ದುದರಿಂದ ಇವರನ್ನು ಮೊಸರು ಒಕ್ಕಲಿಗರು ಎಂದು ಕರೆಯಲಾಗಿದೆ. ಏಳನೆಯ ಜಯಗೌಡ ಯಲಹಂಕ ನಾಡಿನ ಅಧಿಕಾರಿಯಾಗಿ ೧೪೧೮ರಿಂದ ೧೪೩೩ರ ವರೆಗೆ ಆಳ್ವಿಕೆ ಮಾಡಿದನು. ನಂತರ ಅವನ ಮಗ ಗಿಡ್ಡೆಗೌಡನು ೧೪೪೩ರಿಂದ ಹತ್ತು ವರ್ಷಗಳ ಕಾಲ ಆಳಿದನು. ಆತನಿಗೆ ಬಹುದಿನಗಳ ಕಾಲ ಮಕ್ಕಳಿರಲಿಲ್ಲ. ಆಗ ಅವನು

ಪತ್ನಿಯ ಕುಲದೇವರ ಕೃಪೆಯಲ್ಲಿ ಮಗು ಜನಿಸಿದರೆ ಆಕೆಯ ಹೆಸರನ್ನೇ ಇಡುವುದಾಗಿ ಹರಕೆಹೊತ್ತನು. ಮುಂದೆ ಗಂಡುಮಗು ಜನಿಸಿದರಿಂದಾಗಿ ಕೆಂಪನಾಚಗೌಡ ಎಂದು ಹೆಸರಿಟ್ಟನು. ಈತನು ೭೦ ವರ್ಷಗಳ ಕಾಲ ರಾಜ್ಯವನ್ನು ಆಳಿದನು. ಕೆಂಪನಾಚಗೌಡನ ಕಾಲದಲ್ಲಿ ಉತ್ಪಾದನೆಯು ಅಭಿವೃದ್ಧಿ ಹೊಂದಿ ಮಿಗುತೆಯು ಹೆಚ್ಚಿದಂತೆ ತೋರುತ್ತದೆ. ಹಾಗಾಗಿ ಈತ ೧೪೫೦ರಲ್ಲಿ ಕೆಂಪಪುರ ಎಂಬ ಗ್ರಾಮವನ್ನು ಅಗ್ರಹಾರವನ್ನಾಗಿ ನಿರ್ಮಿಸಿದನು. ಅಲ್ಲಿ ಹಲವು ಗೋತ್ರ ಮತ್ತು ಸೂತ್ರಕ್ಕೆ ಸೇರಿದ ಬ್ರಾಹ್ಮಣ ಶ್ರೇಷ್ಠರಿಗೆ ದಾನಮಾಡಿದನು ಎಂಬ ಶಾಸನದ ಮಾಹಿತಿಯು ಮೇಲಿನ ವಾದಕ್ಕೆ ಪೂರಕವಾಗಿದೆ.[೬೭]

ಕೆಂಪನಾಚಗೌಡನ ನಂತರ ಅವನ ಮಗ ಕೆಂಪೇಗೌಡನ ಆಳ್ವಿಕೆಯನ್ನು ವಿಜಯನಗರದ ಶ್ರೇಷ್ಠ ದೊರೆಗಳಾದ ಕೃಷ್ಣರಾಯ ಮತ್ತು ಅಚ್ಯುತರಾಯನ ಕಾಲದಲ್ಲಿ ಗುರುತಿಸಲಾಗಿದೆ. ಈತ ಇವರ ಕಾಲದಲ್ಲಿ ಬಹುಪ್ರಿಯನಾದ ಅಮರನಾಯಕನಾಗಿದ್ದನು. ತನ್ನ ಮಧುರವಾದ ವ್ಯಕ್ತಿತ್ವ ಮತ್ತು ಸಾಮರ್ಥ್ಯದಿಂದ ಕೃಷಿಕರ ಕುಟುಂಬದವನಾಗಿ ಮಾತ್ರ ಉಳಿಯದೆ ಸಾಮಂತ ರಾಜರ ಪಟ್ಟಕ್ಕೇರಿದನು. ಕೆಂಪೇಗೌಡನು ಕೃಷಿಯಿಂದ ಬರುವ ಆದಾಯದಿಂದ ತೃಪ್ತಿಹೊಂದದೆ, ತನ್ನ ರಾಜ್ಯದ ಆದಾಯದ ಮೂಲಗಳನ್ನು ಹೆಚ್ಚಿಸುವ ನಿಟ್ಟಿನಲ್ಲಿ ಎರಡು ತಂತ್ರಗಳನ್ನು ಅಳವಡಿಸಿದನು. ಒಂದು ನೂತನ ನಗರಗಳನ್ನು ನಿರ್ಮಿಸಿ ಅಲ್ಲಿ ವಿದೇಶಿ ವರ್ತಕರು ಮತ್ತು ಕುಶಲಕರ್ಮಿಗಳು ಬಂದು ನೆಲೆಸಲು ಪ್ರೋತ್ಸಾಹಿಸುವುದು. ಎರಡನೆಯದಾಗಿ ದೇವಾಲಯ ಮತ್ತು ಅಗ್ರಹಾರಗಳನ್ನು ಕಟ್ಟಿ ಅದನ್ನು ಭೂ ಹಿಡುವಳಿಗಳಾಗಿ ಪರಿವರ್ತಿಸುವುದು.[೬೮] ಇದರ ಹಿನ್ನೆಲೆಯಲ್ಲಿ ಅರಣ್ಯವಾಗಿದ್ದ ಪ್ರದೇಶವನ್ನು ಸ್ವಚ್ಛಗೊಳಿಸಿ ನಿಪುಣ ಶಿಲ್ಪಿಗಳನ್ನು ಮತ್ತು ಕಲ್ಲಿನ ಕೆಲಸದವರನ್ನು ಆಹ್ವಾನಿಸಿ ಅಪಾರ ವೆಚ್ಚಮಾಡಿ ಏಳು ಪ್ರಾಕಾರಗಳಿರುವ ದೇವಾಲಯವನ್ನು ನಿರ್ಮಿಸಿದನು. ಇದರ ಪೂಜೆ ಮತ್ತು ಉತ್ಸವಗಳಿಗೆ ದತ್ತಿಯನ್ನು ನೀಡಿದನು. ದೇವಾಲಯದ ಬಳಿ ಗ್ರಾಮವೊಂದನ್ನು ನಿರ್ಮಿಸಿ ಅದಕ್ಕೆ ಹಲಸೂರು ಎಂದು ಹೆಸರನ್ನಿಟ್ಟನು. ಅಲ್ಲಿ ಮನೆಗಳನ್ನು ಮತ್ತು ಭೂಮಿಯನ್ನು ಸಮಭಾಗ ಮಾಡಿ ಬ್ರಾಹ್ಮಣರಿಗೆ ಜೀವನಾರ್ಥವಾಗಿ ದಾನ ಮಾಡಿದನು. ಹಲಸೂರು ಬೆಂಗಳೂರು ಪ್ರದೇಶದಲ್ಲಿ ಆರಂಭಿಕ ಹಂತದಲ್ಲಿಯೇ ಪೇಟೆ–ಪಟ್ಟಣವಾಗಿತ್ತು. ಕೆಂಪೇಗೌಡ ಯಲಹಂಕದ ಸುತ್ತಮುತ್ತಲ ಕಾಡನ್ನು ಕಡಿದು ವ್ಯವಸಾಯಕ್ಕೆ ಅನುವು ಮಾಡಿಕೊಟ್ಟನು. ಇತರ ಇನ್ನೂ ಅನೇಕ ಹಳ್ಳಿಗಳನ್ನು ನಿರ್ಮಿಸಿ ತನ್ನ ಅಧಿಕಾರವನ್ನು ವೃದ್ಧಿಸಿಕೊಂಡನು. ಜೊತೆಗೆ ಆಳುಕಾಳುಗಳನ್ನು ಹೊಂದಿ ತನ್ನ ಗ್ರಾಮವಾದ ಯಲಹಂಕವನ್ನು ಸುಸ್ಥಿರಗೊಳಿಸಿ ಪ್ರಬಲನಾದ ಪಾಳೆಯಗಾರನಾದನು.[೬೯]

ಕೆಂಪೇಗೌಡನ ಅವಧಿಯಲ್ಲಿಯೇ ಸಂತೆ, ಪೇಟೆ, ಪಟ್ಟಣಗಳು ವಿಸ್ತೃತಗೊಂಡವು. ಕೆಂಪೇಗೌಡ ತನ್ನ ನಾಡಿನ ಸ್ಥಿತಿಗತಿಯನ್ನು ಪರಿಶೀಲಿಸಲು ಹೊರಡುತ್ತಾನೆ. ಆ ಸಂದರ್ಭದಲ್ಲಿ ಊರಿನ ಅಭಿವೃದ್ಧಿಗಾಗಿ

ಸಂತೆಯನ್ನು ಕಟ್ಟಿ ಪಟ್ಟಣವಾಗಿಸುತ್ತಿದ್ದ ಪರಿಪಾಟವನ್ನು ಗಮನಿಸುತ್ತಾನೆ. ಅದನ್ನು ತನ್ನ ಊರಿನಲ್ಲಿಯೂ ಮಾಡಲು ಪ್ರಯತ್ನಿಸುತ್ತಾನೆ. ಅಂದರೆ ಸಂತೆ, ಪೇಟೆಗಳ ನಿರ್ಮಾಣ ನಗರೀಕರಣ ಪ್ರಕ್ರಿಯೆಯನ್ನು ಹೆಚ್ಚಿಸಿತು ಮತ್ತು ಆರ್ಥಿಕ ಕೇಂದ್ರವನ್ನಾಗಿಸಿತು. ಈ ಅವಧಿಯಲ್ಲಿ ಹೊಸ ಊರುಗಳಲ್ಲಿ ಸಂತೆ, ಪೇಟೆಗಳನ್ನು ನಿರ್ಮಿಸಿ, ಅವುಗಳನ್ನು ಬೆಳೆಸುವುದು ಒಂದು ಬಗೆಯಾಗಿತು. ಜೊತೆಗೆ ಹಳೆಯ ಊರುಗಳಲ್ಲೇ ಇದ್ದ ಸಂತೆ, ಪೇಟೆಗಳನ್ನು ವಿಸ್ತರಿಸಲಾಯಿತು. ಕೆಲವೊಂದು ಸಲ ಈಗಾಗಲೇ ಅಸ್ತಿತ್ವದಲ್ಲಿದ್ದ ಮೂಲ ಗ್ರಾಮದಿಂದ ಪ್ರತ್ಯೇಕವಾಗಿದ್ದ ಸ್ಥಳದಲ್ಲಿ ಪಟ್ಟಣವನ್ನು ನಿರ್ಮಿಸುತ್ತಿದ್ದರು ಎಂಬ ವಿಷಯವನ್ನು ಬೇವೂರು ಶಾಸನ ತಿಳಿಸುತ್ತದೆ.[೨೦] ಈ ಹೊತ್ತಿಗೆ ಬೆಂಗಳೂರು ಪದವು ಶಾಸನಗಳಲ್ಲಿ ಉಲ್ಲೇಖಗೊಂಡಿತ್ತು. ಕೆಂಪೇಗೌಡನು ಸಹ ಈಗಾಗಲೇ ಶಾಸನಗಳಲ್ಲಿ ಉಲ್ಲೇಖಗೊಂಡಿರುವ ಮಾದರಿಯಲ್ಲಿ ಬೆಂಗಳೂರಿನಿಂದ ಪ್ರತ್ಯೇಕವಾಗಿದ್ದ ಪ್ರದೇಶವನ್ನು ಸಂತೆ ಮತ್ತು ಪೇಟೆ ನಿರ್ಮಾಣ ಮಾಡಲು ಆಯ್ಕೆ ಮಾಡಿದನೆಂದು ಶಾಸನಗಳು ತಿಳಿಸುತ್ತವೆ. ಇದಕ್ಕೆ ಬಹುಶಃ ಬೆಂಗಳೂರು ಪ್ರದೇಶದ ಪೇಟೆ ನಿರ್ಮಾಣಗೊಂಡಿರುವ ಸ್ಥಳ ಎಲ್ಲಾ ಪ್ರದೇಶಗಳಿಗೆ ರಹದಾರಿಯಾಗಿದ್ದು, ಎತ್ತರವಾದ ಬಯಲು ಪ್ರದೇಶವಾಗಿದ್ದದ್ದು ಕಾರಣವಾಗಿರಬಹುದು. ಇದು ಹೊಸದಾಗಿ ಕೃಷಿ, ವಾಣಿಜ್ಯಕ್ಕೆ ತೆರೆದುಕೊಂಡಿತ್ತಲ್ಲದೆ, ಸೂಕ್ತ ವ್ಯವಸ್ಥೆಯನ್ನು ಹೊಂದಿರುವ ಸಾಧ್ಯತೆ ಇದೆ. ಹೊಸ ಪಟ್ಟಣದಲ್ಲಿ ಒಕ್ಕಲುಮಾಡಲು ಬರುವವರಿಗೆ ಮತ್ತು ವ್ಯಾಪಾರ ಮಾಡುವ ವರ್ತಕರಿಗೆ ಪ್ರಭುತ್ವದಿಂದ ರಿಯಾಯಿತಿ ದೊರೆಯುತ್ತಿದ್ದರಿಂದ ವರ್ತಕರು ಮತ್ತು ಒಕ್ಕಲು ಮಾಡುವವರು ಹೊಸ ಪೇಟೆ, ಪಟ್ಟಣಗಳಿಗೆ ಬಂದು ನೆಲೆಸುತ್ತಿದ್ದರು. ವಾಣಿಜ್ಯ–ವ್ಯಾಪಾರದ ವಿಸ್ತರಣೆಯಿಂದಾಗಿ ೧೬ನೆಯ ಶತಮಾನದಲ್ಲಿ ಪೇಟೆ–ಕೋಟೆ ನಿರ್ಮಿಸಲು ತೊಡಗಿದನು. ಇದಕ್ಕೆ ವಿಜಯನಗರದ ಅರಸ ಅಚ್ಯುತರಾಯನ ಅನುಮತಿ ಪಡೆದುಕೊಂಡನು. ೧೫೩೭ರಲ್ಲಿ ಕಾಡನ್ನು ಕಡಿದು ಪೂರ್ವ ದಿಕ್ಕಿನಲ್ಲಿ ಹಲಸೂರು ಬಾಗಿಲಿನವರೆಗೆ, ಪಶ್ಚಿಮಕ್ಕೆ ಸೊಂಡೇಕೊಪ್ಪ ಬಾಗಿಲಿನವರೆಗೆ (ಈಗಿನ ಅರಳೇಪೇಟೆ ಅಂಚಿನವರೆಗೆ), ಉತ್ತರಕ್ಕೆ ಯಲಹಂಕ ಬಾಗಿಲಿನವರೆಗೆ (ಇಂದಿನ ಮೈಸೂರು ಬ್ಯಾಂಕಿನವರೆಗೆ), ದಕ್ಷಿಣಕ್ಕೆ ಕೋಟೆ ಬಾಗಿಲಿನವರೆಗೆ (ಇಂದಿನ ಸಂಜಯ ಟಾಕೀಸಿನವರೆಗೆ) ಮುಖ್ಯ ರಸ್ತೆಗಳನ್ನು ನಿರ್ಮಿಸಿದನು.[೨೧] ಇದೆಲ್ಲದರ ಮೂಲಕ ಒಂದು ವಿಸ್ತಾರವಾದ ನಗರ ನಿರ್ಮಾಣಕ್ಕೆ ಬುನಾದಿ ಹಾಕಿದನು.

ಕೆಂಪೇಗೌಡ ರಾಜಧಾನಿಯನ್ನು ಯಲಹಂಕದಿಂದ ಹೊಸದಾಗಿ ಪೇಟೆ ಪಟ್ಟಣ ನಿರ್ಮಾಣ ಗೊಂಡಿದ್ದ ಬೆಂಗಳೂರಿಗೆ ವರ್ಗಾಯಿಸಿದನು. ಅಲ್ಲಿಂದ ವಲಸೆ ಬಂದ ಜನರಿಗೆ ಹೊಸ ಪಟ್ಟಣದಲ್ಲಿ ಮನೆಗಳನ್ನು ನೀಡಿದನು. ನೆರೆ ಊರುಗಳಿಂದ ಮತ್ತು ನೆರೆ ರಾಜ್ಯಗಳಿಂದ ವಿವಿಧ ವೃತ್ತಿಯ ಕರಕುಶಲಕರ್ಮಿಗಳನ್ನು ಹಾಗೂ ವಿದೇಶಿ ವರ್ತಕರನ್ನು ಕರೆಸಿಕೊಂಡನು. ಅವರ ವೃತ್ತಿಗೆ ಅನುಸಾರವಾಗಿ ಪೇಟೆ ಬೀದಿಗಳನ್ನು ನಿರ್ಮಿಸಿದನು. ವಸ್ತ್ರೋದ್ಯಮ ಸಮಕಾಲೀನವಾಗಿ ಭಾರತದಾದ್ಯಂತ ವೇಗವಾಗಿ

ಬೆಳೆಯುತ್ತಿದ್ದ ಕೃಷಿ ಆಧಾರಿತ ಕೈಗಾರಿಕೆ ಆಗಿತ್ತು. ವಿಜಯನಗರದ ಅರಸರು ಮತ್ತು ಬಹಮನಿಗಳು ತಮ್ಮ ರಾಜ್ಯದಲ್ಲಿ ವಸ್ತ್ರೋದ್ಯಮಕ್ಕೆ ಪ್ರೋತ್ಸಾಹ ಕೊಡುವುದನ್ನು ಗಮನಿಸಿರಬಹುದು. ವಿಜಯನಗರದ ಸಾಮಂತರಾದ ಕೆಂಪೇಗೌಡನು ತನ್ನ ಪ್ರದೇಶದಲ್ಲಿ ಅದೇ ಮಾದರಿಯನ್ನು ಅನುಸರಿಸಿದನು. ಅದಕ್ಕಾಗಿ ಉತ್ಪಾದನಾ-ವರ್ತಕ ನೇಯ್ಗೆ ಸಮುದಾಯದವರಿಗಾಗಿ ಅರಳೆಪೇಟೆಯನ್ನು ನಿರ್ಮಿಸಿದನು. ಜೊತೆಗೆ ಸಗಟು ವ್ಯಾಪಾರಿಗಳಾದ ಕೊಮ್ಮಟಿಗರು ವಿನಿಮಯ-ವರ್ತಕರಿಗಾಗಿ ದೊಡ್ಡಪೇಟೆಯನ್ನು, ಚಿಲ್ಲರೆ ಮಾರಾಟಗಾರರಿಗಾಗಿ ಚಿಕ್ಕಪೇಟೆಯನ್ನು, ಅಕ್ಕಿ ವ್ಯಾಪಾರಿಗಳಿಗೆ ಅಕ್ಕಿ ಪೇಟೆಯನ್ನು, ರಾಗಿ ಮಾರಾಟ ಮಾಡುವವರಿಗಾಗಿ ರಾಗಿಪೇಟೆಯನ್ನು, ಉತ್ಪಾದನಾ-ವರ್ತಕರಾದ ಕುಂಬಾರರಿಗೆ ಕುಂಬಾರಪೇಟೆಯನ್ನು, ಅಕ್ಕಸಾಲಿಗರಿಗಾಗಿ ಮುತ್ಯಾಲಪೇಟೆಯನ್ನು, ತೋಟಗಾರಿಕೆಯಲ್ಲಿ ಹೆಸರನ್ನು ಹೊಂದಿದ್ದ ತಿಗಳರಿಗಾಗಿ ತಿಗಳರಪೇಟೆಯನ್ನು ಪ್ರತ್ಯೇಕವಾಗಿ ನಿರ್ಮಿಸಿದನು.[೨] ಆ ಕಾಲದ ಪ್ರಮುಖ ಉತ್ಪನ್ನಗಳು ಕೃಷಿ ಆಧಾರಿತ ಮಾರುಕಟ್ಟೆ ಆಗಿತ್ತು ಎಂಬುದನ್ನು ಅಲ್ಲಿಯ ಪೇಟೆ ಬೀದಿಗಳ ಹೆಸರು ಸ್ಪಷ್ಟಪಡಿಸುತ್ತದೆ. ಕೆಂಪೇಗೌಡನು ವ್ಯಾಪಾರಸ್ಥರಿಗೆ ಹೆಚ್ಚಿನ ಸೌಲಭ್ಯ ಮತ್ತು ಉತ್ತೇಜನವನ್ನು ನೀಡಿದನು. ಇದರಿಂದಾಗಿ ಕ್ರಮೇಣ ಬೆಂಗಳೂರು ಪೇಟೆಯು ವ್ಯಾಪಾರ ಕೇಂದ್ರವಾಗಿ ಮಾರ್ಪಟ್ಟಿತು. ಈತನ ಕೃಷಿ ವಿಸ್ತರಣಾ ಚಟುವಟಿಕೆಯ ನೀತಿ ಮತ್ತು ಸೈನ್ಯ ದಕ್ಷತೆಯನ್ನು ಕಂಡು ಸಂತಸಗೊಂಡಿದ್ದ ಅಚ್ಯುತರಾಯನಿಂದ ಅನುಮತಿಯನ್ನು ಪಡೆದು ಕಸಬಾ ಹಳೆ ಬೆಂಗಳೂರು, ವರ್ತೂರು, ಯಲಹಂಕನಾಡು, ಬೇವೂರು, ಹಲಸೂರು, ತೆಂಗರ, ತಲಘಟ್ಟಪುರ, ಜಿಗಣಿ, ಕುಂಬಳಗೋಡು, ಕನ್ನೇಲಿ, ಬಾಣಾವಾರ, ಹೆಸರುಘಟ್ಟಗಳನ್ನೊಳಗೊಂಡ ಒಟ್ಟು ೩೦೦೦೦ ಪಗೋಡ ಆದಾಯಬರುವ ೧೨ ಹೋಬಳಿಗಳನ್ನು ತನ್ನದಾಗಿಸಿಕೊಂಡನು.[೨೩] ಅಂದರೆ ಪ್ರಸ್ತುತ ಬೆಂಗಳೂರಿನ ಬಹುತೇಕ ಭಾಗದ ಮೇಲಿನ ಆಳ್ವಿಕೆ ಕೆಂಪೇಗೌಡನ ಅಧೀನಕ್ಕೆ ಒಳಪಟ್ಟಿತು. ಹೊಸ ಬೆಂಗಳೂರು ಪೇಟೆಯು ಕೋಟೆಯ ಸುತ್ತ ಬೆಳೆದಿದ್ದರಿಂದ ಕ್ರಮೇಣ ಈ ಭಾಗಗಳನ್ನು ತನ್ನೊಳಗೆ ಸೇರಿಸಿಕೊಳ್ಳುತ್ತಾ ಸಾಗಿತು.

ಸಮಕಾಲೀನವಾಗಿ ನಗರ ಕೇಂದ್ರಗಳ ಸುತ್ತ ಅಥವಾ ಪಕ್ಕದಲ್ಲಿ ಕೋಟೆಯನ್ನು ಕಟ್ಟುವುದು ರಕ್ಷಣಾ ತಂತ್ರವಾಗಿತ್ತು. ಎಲ್ಲ ನಗರಗಳು ಹಾಗೂ ಪೇಟೆಗಳು ಕೋಟೆಯನ್ನು ಹೊಂದಿರುತ್ತಿರಲಿಲ್ಲವಾದರೂ ಕೋಟೆ ಇದ್ದರೆ ಅದು ಪ್ರಮುಖವಾದ ನಗರ ಕೇಂದ್ರ ಎನ್ನಬಹುದು. ಕೆಂಪೇಗೌಡನ ಕಾಲದಲ್ಲಿಯೇ ಪೇಟೆಯ ರಕ್ಷಣೆಯು ಅಗತ್ಯವೆನಿಸಿದ್ದರಿಂದ ಮಣ್ಣಿನ ಕೋಟೆಯ ಮೇಲೆ ೪ ತೋಫ್‌ಖಾನೆಗಳು ಹೊಂದಿರುವಂತೆ ಕೋಟೆಯನ್ನು ನಿರ್ಮಾಣ ಮಾಡಲಾಯಿತು. ಕೋಟೆಗೆ ಒಂಬತ್ತು ಬಾಗಿಲು ಗಳನ್ನಿಟ್ಟನು. ಆತನ ಅಧೀನ ಪ್ರದೇಶಗಳಿಂದ ಬೆಳೆದ ಬೆಳೆಗಳನ್ನು ತಂದು ಇಲ್ಲಿಯ ಪೇಟೆಬೀದಿಗಳಲ್ಲಿ ವ್ಯಾಪಾರ ಮಾಡುವ ಉದ್ದೇಶದಿಂದ ಈ ಬಾಗಿಲುಗಳು ಹಲಸೂರು, ಸೊಂಡೇಕೊಪ್ಪ, ಕೆಂಗೇರಿ, ಯಲಹಂಕ, ಯಶವಂತಪುರ, ಆನೇಕಲ್ಲು, ಕಾನಕಾನಹಳ್ಳಿ, ಅಗ್ರಹಾರದ ಬಾಗಿಲು, ಜಿಗಣಿ, ಸರ್ಜಾಪುರ,

ಬಸವನ ಬಾಗಿಲು ಪ್ರದೇಶಗಳಿಗೆ ಮುಖ ಮಾಡಿದಂತಿತ್ತು. ಕೋಟೆಯ ಸುತ್ತಲು ಕಂದಕವನ್ನು ರಚಿಸಲಾಗಿತ್ತು. ಆ ಸಂದರ್ಭದಲ್ಲಿ ಅತ್ಯಾಧುನಿಕ ತಂತ್ರಜ್ಞಾನವನ್ನು ಹೊಂದಿದ್ದ ಕೋಟೆಯೊಂದನ್ನು ನಿರ್ಮಿಸಿದ್ದನು. ವಿಜಯನಗರದ ಅಡಿಯಲ್ಲಿದ್ದ ಪ್ರಮುಖ ನಗರಗಳು ಮಣ್ಣಿನ ಕೋಟೆಗಳನ್ನು ಹೊಂದಲು ಅವಕಾಶವಿತ್ತು. ಆದರೆ ಕಲ್ಲಿನಕೋಟೆ ಕಟ್ಟುವಂತಿರಲಿಲ್ಲ. ಕಲ್ಲಿನ ಕೋಟೆ ಕಟ್ಟಿಸಿದರೆ ಅವರ ಶಕ್ತಿ ಹೆಚ್ಚಿ ವಿಜಯನಗರದ ಅರಸರ ವಿರುದ್ಧ ತಿರುಗಿ ಬೀಳುವ ಸಾಧ್ಯತೆ ಇತ್ತು. ಹಾಗಾಗಿ ಕಲ್ಲಿನ ಕೋಟೆ ನಿರ್ಮಾಣಕ್ಕೆ ವಿಜಯನಗರದ ಅರಸರು ಅವಕಾಶ ನೀಡುತ್ತಿರಲಿಲ್ಲ ಎಂದು ಅನೇಕ ವಿದೇಶಿಗರು ಕಥನಗಳಲ್ಲಿ ಉಲ್ಲೇಖಿಸಿರುವರು. ಮಣ್ಣಿನ ಕೋಟೆಯ ನಿರ್ಮಾಣವು ನಗರ, ಪೇಟೆ–ಪಟ್ಟಣ, ವ್ಯಾಪಾರ–ವಾಣಿಜ್ಯದ ನೆಲೆಯಲ್ಲಿ ಗುರುತರವಾದ ಮೈಲುಗಲ್ಲನ್ನು ಸೂಚಿಸುತ್ತದೆ.

ವಿಜಯನಗರ ಅರಸರ ಮಾದರಿಯಲ್ಲೇ ಆಡಳಿತವನ್ನು ಕೆಂಪೇಗೌಡನು ಅನುಸರಿಸಿದನು. ಸರಳ ಆಡಳಿತ ನಡೆಸುವ ಸಲುವಾಗಿ ತನ್ನ ನಾಡನ್ನು ಬೆಂಗಳೂರು, ರಾಮಗಿರಿ, ಹುತ್ರಿದುರ್ಗಗಳೆಂಬ ಮೂರು ಪ್ರಾಂತ್ಯಗಳಾಗಿ ವಿಭಾಗಿಸಿದನು. ಬೆಂಗಳೂರು ಪ್ರಾಂತ್ಯವನ್ನು ತನ್ನ ಅಧೀನದಲ್ಲಿಟ್ಟುಕೊಂಡು ಉಳಿದ ಎರಡು ಪ್ರಾಂತ್ಯಗಳನ್ನು ತನ್ನ ತಮ್ಮಂದಿರ ಪಾರುಪತ್ತೆಗೆ ನೀಡಿದನು. ನಾಡಪ್ರಭುವಿನ ಅಧೀನದಲ್ಲಿ ಪಾರುಪತ್ತೆದಾರರು, ಅವರ ಅಧೀನದಲ್ಲಿ ಆಯಗಾರರು ಇರುತ್ತಿದ್ದರು. ಆಯಗಾರ ವ್ಯವಸ್ಥೆಯಿಂದಾಗಿ ನಿರ್ದಿಷ್ಟ ಕ್ಷೇತ್ರಗಳಲ್ಲಿ ಕೃಷಿ, ನೀರಾವರಿ, ಸರಕುಗಳ ಉತ್ಪಾದನೆ, ರಸ್ತೆ ಕಾಮಗಾರಿ, ಕೆರೆ ನಿರ್ಮಾಣ ಮುಂತಾದ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ಗ್ರಾಮ ಪಂಚಾಯಿತಿಯಲ್ಲಿ ಬಾರಾಬಲೂತಿ ಪದ್ಧತಿಯಂತೆ, ೧. ಶ್ಯಾನುಭೋಗ ೨.ಪಟೇಲ ೩. ಜೋಯಿಸ ೪. ಕಮ್ಮಾರ ೫. ಅಗಸ ೬. ನಾಯಂದ ೭. ತೋಟಿ ೮. ತಳವಾರ ೯. ನೀರುಗಂಟಿ ೧೦. ಅಕ್ಕಸಾಲೆ ೧೧. ಕುಂಬಾರ ೧೨. ಬಡಗಿಗಳಿದ್ದರು. ಒಟ್ಟು ೧೨ಜನ ಆಯಗಾರರು ಬಹಳ ಪ್ರಮುಖ ಪಾತ್ರವನ್ನು ವಹಿಸುತ್ತಿದ್ದರು.[೭೫] ಸ್ಥಳೀಯ ಆಡಳಿತದಲ್ಲಿ ಉತ್ಪಾದನಾ–ವರ್ತಕರ ಪಾತ್ರ ಹಿರಿದಾದರೆ ಉನ್ನತ ಆಡಳಿತದಲ್ಲಿ ವಿನಿಮಯ–ವರ್ತಕರ ಪಾತ್ರ ಹಿರಿದಾಗಿತ್ತು ಎಂಬುದು ಗಮನಾರ್ಹವಾಗಿದೆ. ಈ ಹನ್ನೆರಡು ಮಂದಿ ಆಯಗಾರರ ಮೇಲ್ವಿಚಾರಣೆಯನ್ನು ಒಬ್ಬ ಪಾರಪತ್ತೇಗಾರನು ನಿರ್ವಹಿಸುತ್ತಿದ್ದನು. ಈ ಹಿನ್ನೆಲೆಯಲ್ಲಿ ಹಳ್ಳಿ–ಗ್ರಾಮಗಳಲ್ಲಿ ಯಾವುದೇ ತಕರಾರುಗಳಿಲ್ಲದೆ ವ್ಯವಸಾಯ ಮತ್ತು ಇತರ ವೃತ್ತಿಗಳು ಸುಗುಮವಾಗಿ ನಡೆಯಲು ಸಹಾಯವಾಗುತ್ತಿತ್ತು.

ಕೆಂಪೇಗೌಡನು ರಾಜಧಾನಿಯ ಜನರಿಗೆ ಮತ್ತು ಕೃಷಿ ಚಟುವಟಿಕೆಗೆ ಅನುಕೂಲವಾಗಲೆಂದು ನೀರಾವರಿ ಸೌಲಭ್ಯವನ್ನು ಒದಗಿಸುವ ನಿಟ್ಟಿನಲ್ಲಿ ಕಲ್ಯಾಣಿ–ಕಟ್ಟೆ, ಕೆರೆ–ಕಟ್ಟೆಗಳನ್ನು ಕಟ್ಟಿಸಿದನು. ಬೆಂಗಳೂರು ಪೇಟೆ ಬಳಿ ಕೆಂಪಾಂಬುಧಿ, ಸಂಪಗಿ ಕೆರೆ, ಧರ್ಮಾಂಬುಧಿ ಕೆರೆಗಳನ್ನು ನಿರ್ಮಿಸಿದನು. ಬೆಂಗಳೂರಿನಿಂದ ಹರಿದು ಹೋದ ನೀರು ಕೋರಮಂಗಲ, ಆಡುಗೋಡಿಯ ಮೂಲಕ ಹರಿದು ಚಳ್ಳಘಟ್ಟದ ಕೆರೆಗೆ ಹೋಗುತ್ತಿತ್ತು. ಇಲ್ಲಿಂದ ಯಮಲೂರು–ಬೆಳ್ಳಂದೂರು ಕೆರೆಯನ್ನು ಸೇರಿ ಮುಂದೆ

ಹರಿದು ಹೋಗುವ ನೀರಿಗೆ ವರ್ತೂರಿನ ಬಳಿ ಅಡ್ಡಗಟ್ಟೆಯನ್ನು ನಿರ್ಮಿಸಿ ವರ್ತೂರು ಕೆರೆಯನ್ನು ಕಟ್ಟಲಾಗಿತ್ತು. ಅಲ್ಲಿಂದ ಮುಂದೆ ದಕ್ಷಿಣದ ಪಿನಾಕಿನಿ ನದಿ ಸೇರುತ್ತಿತ್ತು. ಈ ಕೆರೆಗಳ ಆಯಕಟ್ಟು ಪ್ರದೇಶದಲ್ಲಿ ಹೆಚ್ಚಾಗಿ ಭತ್ತದ ಬೆಳೆಯನ್ನು ಇಳುವರಿ ಮಾಡಲಾಗುತ್ತಿತ್ತು.[೭೫] ಅಂದು ಭತ್ತ ಶ್ರೀಮಂತ ಬೆಳೆಗಳಲ್ಲಿ ಒಂದಾಗಿತ್ತು. ಅಲ್ಲದೆ ಅನೇಕ ಪ್ರವಾಸಿಗರು ಭತ್ತ ಪ್ರಮುಖವಾದ ರಫ್ತು ಪದಾರ್ಥ ಆಗಿತ್ತು ಎಂದು ಉಲ್ಲೇಖಿಸಿದ್ದಾರೆ. ಇವೆಲ್ಲವು ಬೆಂಗಳೂರು ನಗರ ಮತ್ತು ಅದರ ಸುತ್ತಣ ಪ್ರದೇಶ ಕೃಷಿ ಮತ್ತು ವ್ಯಾಪಾರ ಚಟುವಟಿಕೆಗಳಿಂದ ಕೂಡಿತ್ತು ಎಂಬುದಕ್ಕೆ ಸಾಕ್ಷಿಯಾಗಿದೆ.

ನಾಡಿನ ಪ್ರಮುಖ ಆದಾಯದ ಮೂಲಗಳೆಂದರೆ ಭೂಕಂದಾಯ, ಸುಂಕ ಮತ್ತು ತೆರಿಗೆಗಳು. ಉತ್ಪಾದನೆಯ ೧/೩ ಭಾಗವನ್ನು ಭೂಕಂದಾಯವಾಗಿ ಸಲ್ಲಿಸಬೇಕಾಗಿತ್ತು. ಉಪ್ಪಿನ ತೆರಿಗೆ, ಮನೆ ತೆರಿಗೆ, ಅಂಗಡಿ ಸುಂಕ, ಮಗ್ಗದ ತೆರಿಗೆ, ದನದ ತೆರಿಗೆ, ಉಬ್ಬೆ ಕಾಣಿಕೆ, ವ್ಯಾಪಾರದ ವಸ್ತುಗಳ ಮೇಲಿನ ತೆರಿಗೆ, ಸಂತೆ ತೆರಿಗೆ ಇತ್ಯಾದಿಗಳು ಮುಖ್ಯವಾಗಿದ್ದವು.[೭೬] ಸ್ಥಳೀಯವಾಗಿ ಕೃಷಿ ಅತ್ಯಂತ ಲಾಭದಾಯಕವಾಗಿತ್ತು ಎನ್ನುವುದನ್ನು ೧/೩ ಭಾಗದ ಭೂಕಂದಾಯ ಸೂಚಿಸುತ್ತದೆ. ಮಗ್ಗದ ತೆರಿಗೆ ಹಾಗೂ ಉಬ್ಬೆ ಕಾಣಿಕೆ ವಸ್ತ್ರೋದ್ಯಮದ ಬೆಳವಣಿಗೆಯನ್ನು ಸೂಚಿಸುತ್ತದೆ. ಅಂಗಡಿ ತೆರಿಗೆ, ಸಂತೆ ತೆರಿಗೆ, ವ್ಯಾಪಾರದ ತೆರಿಗೆಗಳು ನಗರ ಪ್ರದೇಶದ ಲಕ್ಷಣಗಳು ಆಗಿವೆ. ನಾಡಿನ ಉತ್ಪತ್ತಿಯಲ್ಲಿ ಮೂರನೇ ಒಂದು ಭಾಗವನ್ನು ಸೈನ್ಯಕಾರ್ಯಗಳಿಗೆ ವೆಚ್ಚಮಾಡಲಾಗುತ್ತಿತ್ತು. ಈತನ ಬಳಿ ಎಂಟುಸಾವಿರ ಕಾಲಾಳುದಳ, ಒಂದು ಸಾವಿರ ಕುದುರೆ ದಳವಿತ್ತು. ಸೈನಿಕರಲ್ಲಿ ಬಹುಪಾಲು ರೈತಾಪಿ ವರ್ಗ ಹೆಚ್ಚಿದ್ದು ಯುದ್ಧದ ಸಂದರ್ಭದಲ್ಲಿ ಇವರು ಸೈನಿಕರಾಗಿ ಕಾರ್ಯನಿರ್ವಹಿಸುತ್ತಿದ್ದರು.

ಕೆಂಪೇಗೌಡನ ಅವಧಿಯಲ್ಲಿ ಹಲವು ಕಟ್ಟಡಗಳು ಸಹ ಬೆಂಗಳೂರಿನಲ್ಲಿ ನಿರ್ಮಾಣಗೊಂಡವು. ಗವಿಗಂಗಾಧರೇಶ್ವರ ದೇವಾಲಯವನ್ನು ಬೆಂಗಳೂರಿನಿಂದ ದಕ್ಷಿಣಕ್ಕೆ ಅರ್ಧಕೋಶ ದೂರದಲ್ಲಿರುವ ಗವಿಯೊಂದರಲ್ಲಿ ನಿರ್ಮಿಸಲಾಯಿತು. ಅಲ್ಲಿ ಛತ್ರಿಯ ಆಕಾರ, ತ್ರಿಶೂಲ ಮತ್ತು ಡಮರುಗಳ ಆಕಾರದ ಕಲ್ಲಿನ ಕಂಬಗಳನ್ನು ನಿರ್ಮಿಸಲಾಗಿದೆ. ಅದಕ್ಕೆ ಹೊಂದಿಕೊಂಡಂತೆ ಒಂದು ಕೆರೆಯನ್ನು ನಿರ್ಮಿಸಲಾಗಿತ್ತು. ಗವಿಗಂಗಾಧರೇಶ್ವರ ಗುಡಿಯ ಪೂರ್ವದಿಕ್ಕಿನಲ್ಲಿ ಬಸವೇಶ್ವರ ಗುಡಿಯನ್ನು ನಿರ್ಮಿಸಿದನು. ಅಲ್ಲಿ ಎರಡು ಆಳಿನ ಎತ್ತರದ ಬಸವನ ವಿಗ್ರಹವನ್ನು ಸಣ್ಣ ಬಂಡೆಯೊಂದರ ಮೇಲೆ ಕೆತ್ತಲಾಗಿದೆ. ಈ ಪ್ರದೇಶದಲ್ಲಿ ಬೆಳೆದ ವಸ್ತುಗಳನ್ನು ವಾರ್ಷಿಕೋತ್ಸವವಾದ ಕಡಲೆಕಾಯಿ ಪರಿಷೆ ಸಂದರ್ಭದಲ್ಲಿ ಮಾರಾಟಕ್ಕೆ ಅವಕಾಶ ಮಾಡಲಾಗಿತ್ತು. ಇಂದಿಗೂ ಕಡಲೆಕಾಯಿ ಪರಿಷೆ ಹಳೆ ಬೆಂಗಳೂರಿನ ಸಂಕೇತವಾಗಿ ಉಳಿದುಬಂದಿದೆ. ಆದರೆ ಸುತ್ತಮುತ್ತಲ ಹಳ್ಳಿಗಳಿಂದ ಬೆಳೆದ ಕಡಲೆಕಾಯಿಯನ್ನು ಕರ್ನಾಟಕದ ವಿವಿಧ ಭಾಗಗಳಿಂದ ತಂದು ಮಾರಾಟ ಮಾಡಲಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಬಸವನ ವಿಗ್ರಹಗಳನ್ನು ಅಲಂಕರಿಸಿ ಪೂಜಿಸಲಾಗುತ್ತದೆ. ದೊಡ್ಡ ಗಣಪತಿಯ

ವಿಗ್ರಹವು ಎರಡೂವರೆ ಅಡಿ ಎತ್ತರವಾಗಿ ಕೆತ್ತಲ್ಪಟ್ಟಿದೆ. ಜೊತೆಗೆ ಹನುಮಂತ ದೇವರ ದೇವಾಲಯವನ್ನು ಗಣಪತಿ ದೇವಾಲಯದ ಪೂರ್ವದಲ್ಲಿ ಕಟ್ಟಿಸಲಾಗಿದೆ. ಇವೆಲ್ಲವೂ ಕೋಟೆಯ ಹೊರಗೆ ನಿರ್ಮಿಸಿದ ಪ್ರಮುಖ ಗುಡಿ, ದೇವಾಲಯಗಳಾಗಿವೆ. ಜೊತೆಗೆ ಕೋಟೆಯೊಳಗೆ ಚೆನ್ನಿಗರಾಯಸ್ವಾಮಿ ದೇವಸ್ಥಾನವನ್ನು ನಿರ್ಮಿಸಿದನು. ಈ ಎಲ್ಲಾ ದೇವಾಲಯಗಳ ವಾರ್ಷಿಕೋತ್ಸವ ಹಾಗೂ ಉತ್ಸವಗಳ ವೆಚ್ಚಗಳಿಗಾಗಿ ಕೆಂಪೇಗೌಡನು ದತ್ತಿಗಳನ್ನು ನೀಡಿದನು. ವಿವಿಧ ಗೋತ್ರದ ಬ್ರಾಹ್ಮಣರಿಗಾಗಿ, ಕೆಂಪಸಮುದ್ರ, ಜಡೆಯಹಳ್ಳಿ ಅಗ್ರಹಾರಗಳನ್ನು ನಿರ್ಮಾಣಮಾಡಿ ನೀಡಿದನೆಂದು ಉಲ್ಲೇಖಿಸಲಾಗಿದೆ.[೭೭] ವಿಜಯನಗರ ಅರಸರ ಅನುಮತಿ ಇಲ್ಲದೆ ಇವನು ಬೆಂಗಳೂರಿನಲ್ಲಿ ಒಂದು ಟಂಕಸಾಲೆಯನ್ನು ಸ್ಥಾಪಿಸಿ ನಾಣ್ಯಗಳ ಮೇಲೆ ಯಲಹಂಕನಾಡ ಪ್ರಭುಗಳ ಕುಲದೇವರಾದ ಭೈರವ ವರಹಗಳನ್ನು ಅಚ್ಚು ಹಾಕಿಸಿದನು. ಇದು ಈತನ ಸಾಮರ್ಥ್ಯ ಹೆಚ್ಚುತ್ತಿದ್ದುದ್ದನ್ನು ಹಾಗೂ ಬೆಂಗಳೂರು ಪ್ರಮುಖ ನಗರವಾಗಿ ಹೊರಹೊಮ್ಮುತ್ತಿದ್ದುದ್ದನ್ನು ಸೂಚಿಸುತ್ತದೆ.

ಈ ಮೇಲಿನ ಎಲ್ಲಾ ವಿಚಾರಗಳು ಬೆಂಗಳೂರಿನಿಂದ ಬರುತ್ತಿದ್ದ ಆದಾಯ ಮತ್ತು ಆರ್ಥಿಕ ಸದೃಢತೆಯನ್ನು ವಿವರಿಸುತ್ತದೆ. ಈತನ ಸ್ವತಂತ್ರ ಪ್ರವೃತ್ತಿಯನ್ನು ಸಹಿಸದ ರಾಮರಾಯನು ಬೆಂಗಳೂರನ್ನು ತನ್ನ ಅಧೀನಕ್ಕೆ ತೆಗೆದುಕೊಂಡು, ಕೆಂಪೇಗೌಡನನ್ನು ೫ ವರ್ಷಗಳ ಕಾಲ ಸೆರೆಯಲ್ಲಿಟ್ಟನು. ಆಗ ರಾಜಾಸ್ಥಾನದ ಸ್ನೇಹಿತರ ಪ್ರಭಾವದಿಂದ ಮತ್ತು ಅಪಾರ ಮೊತ್ತವನ್ನು ದಂಡದ ರೂಪದಲ್ಲಿ ನೀಡಿ ಬಿಡುಗಡೆಗೊಂಡು ಅವನ ಪ್ರದೇಶವನ್ನು ಮತ್ತೆ ಪಡೆದನು.[೭೮] ಇಲ್ಲಿ ಪ್ರಮುಖವಾಗಿ ಗಮನಿಸ ಬೇಕಾದ ಅಂಶಗಳೆಂದರೆ, ಒಂದನೆಯದಾಗಿ, ಕೆಂಪೇಗೌಡನು ನಿರ್ಮಿಸಿದ ಎಂದು ಹೇಳಲಾಗಿರುವ ಗವಿಗಂಗಾಧರೇಶ್ವರನ ದೇವಾಯಲವು ಜೈನಯತಿಗಳ ಪ್ರಮುಖ ಆರಾಧನಾ ಕೇಂದ್ರವಾಗಿತ್ತು ಎಂದು ಫಜಲ್ ಹಸನ್ ತಿಳಿಸಿದ್ದಾರೆ.[೭೯] ಅಂದರೆ ಈಗಾಗಲೇ ಇದ್ದ ದೇವಾಲಯ ಮರು ವಿಸ್ತರಣೆ ಗೊಂಡು, ರೂಪಾಂತರಗೊಂಡಿದೆ. ಎರಡನೆಯದಾಗಿ, ವಿಜಯನಗರದ ಅರಸರ ಮೇಲೆ ಪ್ರಭಾವ ಬೀರಿದ ವ್ಯಕ್ತಿಗಳೆಂದರೆ ಅದು ವರ್ತಕ ಸಮುದಾಯದವರಾಗಿರಬೇಕು. ಏಕೆಂದರೆ ರಾಜಾಸ್ಥಾನವು ಕೃಷಿ ಚಟುವಟಿಕೆಗೆ ಹೆಚ್ಚು ಯೋಗ್ಯವಲ್ಲದ ಪ್ರದೇಶವಾಗಿದೆ. ಅದಲ್ಲದೆ, ರಾಜಸ್ಥಾನಿಗರು ಹೆಚ್ಚು ಮಂದಿ ಕೃಷಿ ಕಾರ್ಯವನ್ನು ನಿರ್ವಹಿಸದೇ ವ್ಯಾಪಾರ–ವ್ಯವಹಾರವನ್ನು ಅವರ ಪ್ರಧಾನ ವೃತ್ತಿಯಾಗಿಸಿಕೊಂಡರು ಎಂಬುದು ಗಮನಾರ್ಹ. ನಾಡಪ್ರಭು ಕೆಂಪೇಗೌಡನ ಆಡಳಿತ ವ್ಯವಸ್ಥೆಯು ವ್ಯಾಪಾರಕ್ಕೆ ಪೂರಕವಾಗಿದ್ದು, ವಿವಿಧ ವೃತ್ತಿಬಾಂಧವರನ್ನು ಆಹ್ವಾನಿಸಿ, ಎಲ್ಲಾ ಸೌಲಭ್ಯಗಳನ್ನು ಕಲ್ಪಿಸಿ, ಉತ್ತೇಜಿಸಿದ್ದನು. ಅದು ಆತನು ಮಾಡಿದ ಇಂತಹ ಅಭಿವೃದ್ಧಿಕಾರ್ಯಗಳು ಆತನ ಬಿಡುಗಡೆಗೆ ಕಾರಣವಾಯಿತು ಎಂಬ ವಿಷಯಕ್ಕೆ ಪುಷ್ಟಿ ನೀಡುತ್ತದೆ. ಕೆಂಪೇಗೌಡನ ನಂತರ ಮುಂದೆ ಎರಡನೆಯ ಕೆಂಪೇಗೌಡನು ಆಡಳಿತಕ್ಕೆ ಬಂದನು. ಈತ ಹಿರಿಯ ಕೆಂಪೇಗೌಡನ ಮಗನಾಗಿದ್ದು ಕ್ರಿ.ಶ ೧೫೬೯ರಲ್ಲಿ ಅಧಿಕಾರವನ್ನು

ವಹಿಸಿಕೊಂಡನು. ಇವನು ಸಹ ವಿಜಯನಗರ ಅರಸರಿಗೆ ಅಧೀನನಾಗಿ, ಅವರ ಮಾದರಿಯಲ್ಲಿಯೇ ಆಡಳಿತವನ್ನು ದಕ್ಷ ರೀತಿಯಲ್ಲಿ ನಡೆಸಿದನು. ಈ ಮಾಹಿತಿಯು ತಾಳೀಕೋಟೆ ಕದನದ ನಂತರವೂ ವಿಜಯನಗರದ ಹಿಡಿತ ಪೂರ್ಣವಾಗಿ ಕುಸಿದಿರಲಿಲ್ಲ ಎಂಬುದಕ್ಕೆ ಸಾಕ್ಷಿ ಆಗಿದೆ. ಹಲಸೂರಿನಲ್ಲಿರುವ ಸೋಮೇಶ್ವರ ದೇವಾಲಯವನ್ನು ಪುನರ್ ಸ್ಥಾಪನೆ ಮಾಡಿದನು. ದಕ್ಷಿಣ ದೇಶದ ಶಿಲ್ಪಿಗಳನ್ನು ಕರೆಸಿ ದೇವಾಲಯಕ್ಕೆ ವಿಜಯನಗರದ ವಾಸ್ತುಶಿಲ್ಪದ ಶೈಲಿಯಂತೆ ಪ್ರಾಕಾರ, ನವರಂಗ, ಮುಖಮಂಟಪ, ಹಜಾರ ಮತ್ತು ದ್ವಾರ ಗೋಪುರಗಳನ್ನು ನಿರ್ಮಿಸಿದನು. ಶ್ರೀ ಮಂಗಳ ಕಾಮಾಕ್ಷಿ ಗುಡಿಯನ್ನು ಕಟ್ಟಿಸಿದನು. ಈ ದೇವಾಲಯದ ಒಳ ಗೋಡೆಗಳ ಮೇಲೆ ಕೆತ್ತಿರುವ ಗಿರಿಜಾ ಕಲ್ಯಾಣದ ಚಿತ್ರಗಳು ತುಂಬ ಸುಂದರವಾಗಿವೆ. ದೇವಾಲಯದ ಉತ್ಸವಗಳಿಗೆ ಮತ್ತು ರಥೋತ್ಸವಕ್ಕಾಗಿ ಹಲಸೂರು ಹೋಬಳಿಗೆ ಸೇರಿದ ಮೂವತ್ತಮೂರು ಹಳ್ಳಿಗಳಲ್ಲಿ ರೈತರು ಬೆಳೆದ ತಮ್ಮ ಇಳುವರಿಯಲ್ಲಿ ಖಂಡುಗ ಒಂದಕ್ಕೆ ಒಂದು ಕೊಳಗದಂತೆ ಸೋಮೇಶ್ವರ ದೇವಾಲಯಕ್ಕೆ ನೀಡಬೇಕೆಂದು ಆಜ್ಞೆಯನ್ನು ಹೊರಡಿಸಿದನು.[೮೦]

ಕೆಂಪಾಪುರ ಅಗ್ರಹಾರವನ್ನು ನಿರ್ಮಿಸಿ ೪೮ ಜನ ವಿವಿಧ ಗೋತ್ರಗಳಿಗೆ ಸೇರಿದ ಬ್ರಾಹ್ಮಣರಿಗೆ ದಾನ ನೀಡಿದನು. ಆ ಅಗ್ರಹಾರದ ಬಳಿ ತನ್ನ ಪೂರ್ವಜನಾದ ಗಿಡ್ಡೇಗೌಡನ ಹೆಸರಿನಲ್ಲಿ ಕೆರೆಯನ್ನು ಕಟ್ಟಿಸಿದನು. ಐಗಂಡಪುರ ಅಗ್ರಹಾರವನ್ನು ನಿರ್ಮಿಸಿ ದಾನ ಮಾಡಿದನು. ಬೆಂಗಳೂರು ಕೋಟೆಯ ದಕ್ಷಿಣಕ್ಕೆ ಕಾರಂಜಿ ಕೆರೆಯನ್ನು ಕಟ್ಟಿಸಿ ಗಾರೆ ಕಾಲುವೆಗಳ ಮೂಲಕ ಕೋಟೆಯೊಳಗೆ ನೀರು ಸರಬರಾಜಾಗುವಂತೆ ವ್ಯವಸ್ಥೆ ಮಾಡಿದನು.[೮೧] ಕ್ರಿ.ಶ ೧೬೦೫ರಲ್ಲಿ ಇಮ್ಮಡಿ ಕೆಂಪೇಗೌಡನು ಗಂಗಪ್ಪನಾಯಕನನ್ನು ಸೋಲಿಸಿ ಮಾಗಡಿಯನ್ನು ವಶಪಡಿಸಿಕೊಂಡನು. ಮಾಗಡಿಯನ್ನು ವಿಸ್ತಾರಗೊಳಿಸಿ ಪೇಟೆಯಲ್ಲಿ ಜನವಸತಿಯನ್ನು ಏರ್ಪಡಿಸಿದನು. ಕಾಡನ್ನು ಕಡಿದು ದುರ್ಗವನ್ನು ದುರಸ್ತಿಗೊಳಿಸಿ ಒಂದು ಸೇನ ತುಕಡಿಯನ್ನು ರಕ್ಷಣೆಗೆ ಇರಿಸಿದನು. ಅದಷ್ಟೇ ಅಲ್ಲದೆ, ರಾಮನಗರ, ನೆಲಮಂಗಲ, ಕುಣಿಗಲ್ಲು ಮತ್ತು ತುಮಕೂರಿನ ಪ್ರದೇಶಗಳು ಈತನ ಅಧೀನಕ್ಕೆ ಒಳಪಟ್ಟಿದ್ದವು. ತನ್ನ ತಂದೆಯಂತೆ ಈತನು ಸಹ ಪೇಟೆ–ಪಟ್ಟಣಗಳ ನಿರ್ಮಾಣ ಮತ್ತು ಕೃಷಿಗೆ ಪೂರಕವಾಗಿ ಕೆರೆ–ಕಟ್ಟೆಗಳನ್ನು ನಿರ್ಮಿಸುವುದರಲ್ಲಿ ಆಸಕ್ತಿಯನ್ನು ವಹಿಸಿದ್ದರಿಂದ ಇಳುವರಿ ಹೆಚ್ಚಾಗಿ ವ್ಯಾಪಾರ–ವಾಣಿಜ್ಯಕ್ಕೆ ಒತ್ತು ನೀಡಿತು. ಇದಕ್ಕೆ ಉತ್ತಮ ನಿದರ್ಶನವೆಂದರೆ, ಬೆಂಗಳೂರು ನಗರದ ಬಳ್ಳಾಪುರದ ರಂಗನಾಥ ದೇವಾಲಯದಲ್ಲಿ ದೊರೆತ ಶಾಸನವು ಬೆಂಗಳೂರು ಯಾವ ಯಾವ ಪ್ರದೇಶಗಳೊಂದಿಗೆ ವ್ಯಾಪಾರದ ಸಂಬಂಧವನ್ನು ಹೊಂದಿತ್ತು ಎಂಬುದನ್ನು ತಿಳಿಸುತ್ತದೆ.

ಬಳ್ಳಾಪುರದ ಪೇಟೆಯನ್ನು ಗೌಡರ ಕಾಲದಲ್ಲಿ ಮುಕ್ಯಾಲಪೇಟೆಯೆಂದು ಕರೆಯಲಾಗುತ್ತಿತ್ತು. ಇಲ್ಲಿಯ ರಂಗನಾಥ ದೇವಾಲಯಕ್ಕೆ ೧೬೨೮ರಲ್ಲಿ ಬೆಂಗಳೂರಿಗೆ ವ್ಯಾಪಾರಕ್ಕೆಂದು ಬಂದ

ಐಯ್ಯಾವಳಿಗಳಲ್ಲಿ ಪ್ರಮುಖರೆನಿಸಿದ ಪೆಕ್ಕಂಡ, ಪೆನುಗೊಂಡ, ಬೆಂಗಳೂರು, ಗೂಳೂರು, ಚಿಕ್ಕನಾಯಿಕನಹಳ್ಳಿ, ಬಳ್ಳಾಪುರಮ್, ತಾಟಪತ್ರಿ, ಚಂದ್ರಗಿರಿ, ಕೋಲಾರ, ಕೊತ್ತಕೊಟ್ಟ (ಹೊಸಕೋಟೆ), ಕಾವೇರಿಪಟ್ಟಣ, ರಾಯಕೋಟೆ, ನರಸಿಂಹಪುರ, ಬೇಲೂರು, ಹೆಬ್ಬೂರು, ನಾಗಮಂಗಲ, ಇಕ್ಕೆರಿಬಸ್ತಿಪಲ್ಲಿ ಮುಂತಾದ ಸ್ಥಳೀಯ ಮತ್ತು ಹೊರದೇಶದ ನಾನಾದೇಶದ ಸಾಲುಮೂಲ ಸಮಸ್ತ ಸೇರಿ ದೇವಾಲಯದ ಪಡಿತರ ಸೇವೆಗಳಿಗಾಗಿ ಮತ್ತು ಪೂಜೆ, ಉತ್ಸವವನ್ನು ಮಾಡಲು ದಾನ ನೀಡಿದರು ಎಂದು ಶಾಸನ ಹೇಳುತ್ತದೆ. ಇದು ಬೆಂಗಳೂರು ಹೊಂದಿದ್ದ ವ್ಯಾಪಾರ ಮಾರ್ಗವನ್ನು ಸಹ ಸೂಚಿಸುತ್ತದೆ.

೧೬೩೩ರಲ್ಲಿ ಇಮ್ಮಡಿ ಕೆಂಪೇಗೌಡನ ಗುರುಗಳಿಗೆ ಗುಜ್ಜರಿ ವಿಶ್ವನಾಥನು ಧರ್ಮಾರ್ಥವಾಗಿ ಧರ್ಮದ ಶಾಲಾಮಠವನ್ನು ಕಟ್ಟಿಸಿದನು ಎಂಬ ಶಾಸನವು ಚಿಕ್ಕಪೇಟೆಯ ಸರಹದ್ದಿನಲ್ಲಿ ದೊರಕಿದೆ.[೮೩] ಹಾಗಾಗಿ ಈ ಮಠವು ಚಿಕ್ಕಪೇಟೆಯಲ್ಲಿ ಇದ್ದಿರಬಹುದು ಎಂದು ಗುರುತಿಸಬಹುದು. ಬೆಂಗಳೂರು ಪಟ್ಟಣದ ಸಮೀಪ ಗವಿಪುರದಲ್ಲಿ ಇಮ್ಮಡಿ ಕೆಂಪೇಗೌಡನು ವೀರಶೈವ ಪಟ್ಟದ ಮಠಗಳಲ್ಲಿ ಒಂದಾದ ಗವಿಪುರದಮಠವನ್ನು ನಿರ್ಮಿಸಿದನು. ಮುಂದೆ ವೀರಣಾರ್ಯರು ಬೆಂಗಳೂರಿಗೆ ಬಂದಾಗ ಅವರಿಗೆ ಅರ್ಪಿಸಿದನು ಎಂಬುದನ್ನು ಗಮನಿಸಬೇಕಾಗಿದೆ.[೮೪] ಈ ಮೇಲಿನ ಅಂಶಗಳಲ್ಲಿ ಕೆಂಪೇಗೌಡನು ವೀರಶೈವ ಆರಾಧಕನಾಗಿದ್ದನು ಎಂಬುದು ಮುಖ್ಯವಾಗಿದೆ. ಇವನ ಕಾಲದಲ್ಲಿ ೬೪ ವೀರಶೈವ ಮಠಗಳು ಬೆಂಗಳೂರಿನಲ್ಲಿದ್ದವು.[೮೫]

ಈಗಾಗಲೇ ಚರ್ಚಿಸಿದ ವಿಷಯಗಳನ್ನು ಮತ್ತೊಮ್ಮೆ ಅವಲೋಕಿಸುವ ಅಗತ್ಯವಿದೆ. ಒಂದನೆಯ ಕೆಂಪೇಗೌಡನ ಕಾಲದಲ್ಲಿ ಬೆಂಗಳೂರು ಕೃಷಿ ಉತ್ಪನ್ನಗಳ ಆರ್ಥಿಕತೆಯ ಪ್ರಮುಖ ಕೇಂದ್ರ ಮತ್ತು ಮಾರುಕಟ್ಟೆಯಾಗಿತ್ತು. ಈ ನಿಟ್ಟಿನಲ್ಲಿ ವಿವಿಧ ಪ್ರದೇಶಗಳಿಂದ ಬರುತ್ತಿದ್ದ ವಿವಿಧ ವಿನಿಮಯ-ವರ್ತಕ ಸಮುದಾಯದವರಿಗೆ ಬೆಂಗಳೂರಿನಲ್ಲಿ ನಿರ್ಮಿಸಿದ್ದ ದೇವಾಲಯಗಳು, ಮಠಗಳು ವರ್ತಕರು ಮತ್ತು ವ್ಯಾಪಾರಿಗಳ ವಸ್ತುಗಳಿಗೆ ಉಗ್ರಾಣವಾಗಿ, ತಂಗುತಾಣವಾಗಿ ಹಾಗೂ ಅನ್ನದಾಸೋಹ ಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ಬೆಂಗಳೂರಿಗೆ ಬಂದ ವರ್ತಕರು ಮತ್ತು ಸ್ಥಳೀಯ ವ್ಯಾಪಾರಿಗಳು ತಾವು ಮಾರಾಟ ಮಾಡಿ ಗಳಿಸಿದ ಹಣದಲ್ಲಿ ಒಂದು ಪಾಲನ್ನೋ ಅಥವಾ ತಮಗೆ ಸಂತೋಷ ತರುವಷ್ಟು ದೇವರ ದೀಪಾರಾಧನೆಗೆ ಮತ್ತು ಪ್ರಸಾದ ವಿನಿಯೋಗಕ್ಕಾಗಿ ಭೂ ದಾನ ನೀಡಿದ ಉಲ್ಲೇಖಗಳಿವೆ. ಇವೆಲ್ಲವು ಬರ್ಟನ್ ಸ್ಟೈನ್ ಹೇಳುವಂತೆ ದೇವಾಲಯಗಳು, ಮಠಗಳು ಹಾಗೂ ಆರ್ಥಿಕತೆ ಮತ್ತು ರಾಜಕಾರಣದ ನಡುವೆ ಮಧ್ಯವರ್ತಿಯಾಗಿ ಕಾರ್ಯ ನಿರ್ವಹಿಸುತ್ತಿದ್ದವು. ಎರಡನೆಯ ಕೆಂಪೇಗೌಡನ ಕಾಲದಲ್ಲಿ ಒಂದನೆಯ ಕೆಂಪೇಗೌಡನ ಕಾಲದ ವ್ಯವಸ್ಥೆ ಇನ್ನೂ ಹೆಚ್ಚು ಪ್ರಬಲವಾಗಿ ಬೇರೂರಿತು. ಎರಡನೆಯ ಕೆಂಪೇಗೌಡ ಮತ್ತು ವರ್ತಕ ಸಮುದಾಯದ ನಡುವಿನ ಸಂಬಂಧದ ಸ್ವರೂಪವನ್ನು ವಿವಿಧ ಪ್ರದೇಶದಿಂದ ಬಂದು ವ್ಯಾಪಾರ-ವ್ಯವಹಾರಗಳಲ್ಲಿ ತೊಡಗಿದ್ದ ಸಮುದಾಯ

ದವರ ಕಾರ್ಯಚಟುವಟಿಕೆಗಳ ಮೂಲಕ ಗುರುತಿಸಬಹುದು. ಈ ವರ್ತಕರು ಸಾಮಾಜಿಕ ಸೌಹಾರ್ಧತೆಯಿಂದ ಧಾರ್ಮಿಕ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವಷ್ಟು ಆರ್ಥಿಕವಾಗಿ ಸಧೃಡರಾಗಿದ್ದರು. ಇದು ಸಹ ಬರ್ಟನ್ ಸ್ಟೈನ್ ಅವರ ಸೆಗ್ಮೆಂಟರಿ ಸಿದ್ಧಾಂತದ ಲಕ್ಷಣವನ್ನೇ ಹೊಂದಿದೆ.

ಬೆಂಗಳೂರು ನಗರವು ಇವರ ಅವಧಿಯಲ್ಲಿ ರಾಜಧಾನಿಗಳು ಆರ್ಥಿಕತೆ ಮತ್ತು ರಾಜಕೀಯ ಚಟುವಟಿಕೆಗಳ ಪ್ರಮುಖ ಕೇಂದ್ರವಾಗಿ ಬೆಳೆಯ ತೊಡಗಿತು. ೧ನೆಯ ಕೆಂಪೇಗೌಡನ ಕಾಲದಲ್ಲಿ ಮಣ್ಣಿನ ಕೋಟೆ ಮತ್ತು ಅದರ ಸುತ್ತಲ ಕಂದಕಗಳು ಭದ್ರತೆಯನ್ನು ಒದಗಿಸಿದವು. ೨ನೆಯ ಕೆಂಪೇಗೌಡನು ತನ್ನ ತಂದೆ ಮಣ್ಣಿನ ಕೋಟೆ ಹಾಗೂ ಅದರ ಸುತ್ತಲು ಕಂದಕಗಳನ್ನು ನಿರ್ಮಿಸಿದ್ದರೂ ಸಹ ಈತನ ಕಾಲಕ್ಕೆ ರಕ್ಷಣೆಯ ದೃಷ್ಟಿಯಿಂದ ಅದು ಸಾಲದಾಯಿತು. ವಿಜಯನಗರದ ಅರಸರ ಪತನದ ನಂತರ ಪಾಳೆಯಗಾರರ ಆಳ್ವಿಕೆಯನ್ನು ಕಾಣುತ್ತೇವೆ. ಈ ಕಾಲಘಟ್ಟದಲ್ಲಿ ಯುದ್ಧಗಳು ಸಾಮಾನ್ಯವಾಗಿದ್ದವು. ಪ್ರತಿ ಪಾಳೆಯಗಾರನು ತನ್ನ ಶಕ್ತಿಯನ್ನು ಪ್ರದರ್ಶಿಸುವ ಮತ್ತು ವಿಸ್ತರಿಸುವ ಆಸೆ ಹೊಂದಿರುತ್ತಿದ್ದನು. ಅಲ್ಲದೇ, ಶ್ರೀರಂಗಪಟ್ಟಣವನ್ನು ರಾಜಧಾನಿಯನ್ನಾಗಿಸಿ ಒಡೆಯರು ಆಡಳಿತ ಮಾಡುತ್ತಿದ್ದರು. ಇವರು ಸಮಕಾಲೀನವಾಗಿ ಪ್ರಬಲವಾಗಿದ್ದ ಪ್ರಮುಖ ಅರಸು ಮನೆತನಗಳಲ್ಲಿ ಒಬ್ಬರು ಎಂಬುದು ಗಮನಾರ್ಹ. ಬೆಂಗಳೂರನ್ನು ರಕ್ಷಿಸಲು ರಕ್ಷಣಾ ಕಟ್ಟಡಗಳಾದ ಕಾವಲುಗೋಪುರ ವನ್ನು ಎತ್ತರದ ಗುಡ್ಡದ ಮೇಲೆ ಅಥವಾ ದಿನ್ನೆಯ ನಿರ್ಮಿಸುವುದು ಅವಶ್ಯವಿದ್ದಿತು. ಹಾಗೆಯೇ ಈ ಪ್ರದೇಶವು ಪೂರ್ವ ಮತ್ತು ಪಶ್ಚಿಮ ಕರಾವಳಿಗೆ ಒಳನಾಡಿನ ಕೇಂದ್ರಸ್ಥಾನವಾಗಿ ಗುರುತಿಸಿಕೊಂಡಿತ್ತು. ದಕ್ಷಿಣ ಭಾರತದ ಹೃದಯ ಭಾಗದಲ್ಲಿದ್ದು ಇನ್ನಿತರ ಎಲ್ಲಾ ಪ್ರದೇಶಗಳಿಗೆ ರಹದಾರಿಗಳ ನಡುವೆ ಇರುವುದರಿಂದಾಗಿ ಬೆಂಗಳೂರು ನಗರಕ್ಕೆ ವಿವಿಧ ಪ್ರದೇಶಗಳಿಂದ ಬರುತ್ತಿದ್ದ ವರ್ತಕರ ಸಂಖ್ಯೆ ಹೆಚ್ಚಿದ್ದು ಆರ್ಥಿಕ ಚಟುವಟಿಕೆಯು ವಿಸ್ತರಿಸಿತು. ಫಲವಾಗಿ ಆಯಕಟ್ಟನ್ನು ನಿರ್ಧರಿಸಲು ಗಡಿ ಗೋಪುರಗಳು ಅಗತ್ಯವೆಂದು ಕಂಡುಬಂದು ಬೆಂಗಳೂರು ಪಟ್ಟಣದ ಎಲ್ಲೆಗಳನ್ನು ನಿರ್ಧರಿಸಿ ನಾಲ್ಕು ದಿಕ್ಕುಗಳಲ್ಲಿ ಐದು ಗಡಿಗೋಪುರಗಳನ್ನು ನಿರ್ಮಿಸಿದನು. ಪೂರ್ವಕ್ಕೆ ಹಲಸೂರು ಕೆರೆಯ ಏರಿಯ ಮೇಲೆ, ಪಶ್ಚಿಮಕ್ಕೆ ಕೆಂಪಾಂಬುಧಿ ಕೆರೆಯ ಏರಿಯ ಮೇಲೂ, ಉತ್ತರಕ್ಕೆ ವೈಯಾಳಿಕಾವಲಿನ ಎತ್ತರದ ದಿನ್ನೆಯ ಮೇಲೂ, ದಕ್ಷಿಣಕ್ಕೆ ಲಾಲ್‌ಬಾಗ್ ಎತ್ತರದ ಗುಡ್ಡದ ಮೇಲೆ ಮತ್ತು ಬಸವಣ್ಣನ ದೇವಸ್ಥಾನದ ಹಿಂಭಾಗದಲ್ಲಿ ನಿರ್ಮಿಸಿದನು ಎಂಬುದು ಸಾಮಾನ್ಯವಾಗಿರುವ ಐತಿಹ್ಯಗಳಾಗಿವೆ.[೮೯] ಇದು ಗಡಿಗೋಪುರಗಳೇ ಅಥವಾ ಬೇರೆ ಏನಾದರೂ ಆಗಿರಬಹುದೇ ಎಂಬ ಪ್ರಶ್ನೆ ಜೊತೆಜೊತೆ ಯಲ್ಲಿಯೇ ಉದ್ಭವಿಸುತ್ತದೆ. ಏಕೆಂದರೆ ಸಾಮಾನ್ಯವಾಗಿ ಈ ಲಕ್ಷಣಗಳನ್ನು ಬೇರೆ ಎಲ್ಲೂ ಕಾಣಲು ಸಾಧ್ಯವಿಲ್ಲ.

ಇದೆಲ್ಲದರ ಜೊತೆಗೆ ಗಮನಿಸಬೇಕಾದ ಅಂಶವೆಂದರೆ ಆ ಸಂದರ್ಭದಲ್ಲಿ ಬಿಜಾಪುರದ ಸುಲ್ತಾನರು ಅತ್ಯಂತ ಪ್ರಬಲರಾಗಿದ್ದಿದ್ದು. ಸುಲ್ತಾನರ ಸೇನೆಯನ್ನು ಎದುರಿಸುವ ಶಕ್ತಿ ಬೆಂಗಳೂರಿನ ದೊರೆಗಳಿಗೆ ಇರಲಿಲ್ಲ. ಬಿಜಾಪುರ ಸುಲ್ತಾನರ ಕಾಲದಲ್ಲಿ ನೆರೆಹೊರೆಯ ಪಾಳೆಯಗಾರರು ಬೆಂಗಳೂರಿನ ದೊರೆಗಳ ಏಳಿಗೆಯನ್ನು ಸಹಿಸಲಾರದೆ ಅಸೂಯೆಯಿಂದ ಅವರನ್ನು ಸದೆಬಡಿಯಲು ರಣದುಲ್ಲಾಖಾನ ನಿಗೆ ಆಹ್ವಾನಿಸಿದರು. ಇದರ ಪರಿಣಾಮವಾಗಿ ಬಿಜಾಪುರದ ಸೇನೆ ರಣದುಲ್ಲಾಖಾನನ ನೇತೃತ್ವದಲ್ಲಿ ೧೬೩೮ರಲ್ಲಿ ಬೆಂಗಳೂರಿಗೆ ಮುತ್ತಿಗೆ ಹಾಕಿತು. ಮುತ್ತಿಗೆಯು ಮೂರು ದಿನಗಳ ಕಾಲ ನಡೆಯಿತು. ಇದರಲ್ಲಿ ಕೆಂಪೇಗೌಡನು ಸೋತು ಬಿಜಾಪುರರೊಂದಿಗೆ ಒಪ್ಪಂದಕ್ಕೆ ಬಂದನು. ಆ ಪ್ರಕಾರ ಬೆಂಗಳೂರನ್ನು ಅವರಿಗೆ ಬಿಟ್ಟು ಮಾಗಡಿಗೆ ತನ್ನ ರಾಜಧಾನಿಯನ್ನು ಸ್ಥಳಾಂತರಿಸಿದನು. ಮುಂದೆ ಬಿಜಾಪುರದ ಸುಲ್ತಾನರ ಕಾಲದಲ್ಲಿಯೇ ಇದು ಮರಾಠದ ಆಳ್ವಿಕೆಗೂ ಒಳಪಟ್ಟಿತು. ಜೊತೆಗೆ ಬೆಂಗಳೂರಿನ ಮತ್ತೊಂದು ದಿಕ್ಕಿನಲ್ಲಿ ಮೈಸೂರು ಒಡೆಯರು ಪ್ರಬಲರಾಗಿದ್ದರು. ಅವರಿಗೂ ಈ ಪ್ರದೇಶದ ಮೇಲೆ ಹಿಡಿತ ಹೊಂದುವುದು ಅವಶ್ಯಕವಾಗಿತ್ತು. ಎಲ್ಲಕ್ಕಿಂತ ಮಿಗಿಲಾಗಿ ೨ನೆಯ ಕೆಂಪೇಗೌಡನ ಕಾಲದಲ್ಲಿ ಬೆಂಗಳೂರು ಸಣ್ಣ ಪಾಳೆಯಪಟ್ಟವಷ್ಟೆ ಆಗಿತ್ತು. ಇವರಿಗೆ ಬಿಜಾಪುರದ ಸುಲ್ತಾನರನ್ನಾಗಲೀ ಅಥವಾ ಮೊಗಲರನ್ನಾಗಲಿ ಎದುರಿಸುವ ಶಕ್ತಿ ಇರಲಿಲ್ಲ.

### ಬೆಂಗಳೂರಿನ ಮೇಲೆ ಬಿಜಾಪುರದ ಆದಿಲ್‌ಶಾಹಿಗಳು ಮತ್ತು ಮೊಗಲರ ಆಕ್ರಮಣ

ಎರಡನೆಯ ಕೆಂಪೇಗೌಡನ ಕಾಲದಲ್ಲಿ ಬಿಜಾಪುರ ಆದಿಲ್ ಶಾಹಿಯು ಮುತ್ತಿಗೆ ಹಾಕಿ ಬೆಂಗಳೂರನ್ನು ವಶಪಡಿಸಿಕೊಂಡನು. ಮುಂದೆ ಈ ಪ್ರದೇಶವನ್ನು ಮರಾಠರ ದಂಡನಾಯಕನಾದ ಷಾಹಜಿಗೆ ಜಹಗೀರಾಗಿ ಕೊಡಲಾಯಿತು. ಈ ಸಂದರ್ಭದಲ್ಲಿ ಬೆಂಗಳೂರಿನಿಂದ ಬರುತ್ತಿದ್ದ ಆದಾಯ ಐದು ಲಕ್ಷ ಹುನ್ಸ್‌ಗಳಾಗಿತ್ತು![೮೭] ಬೆಂಗಳೂರಿನ ನಾಡ ಪ್ರಭುಗಳ ಮೇಲೆ ನೆರೆಹೊರೆಯ ಪಾಳೆಯಗಾರರು ಏಕೆ ಅಸೂಯೆಪಡುತ್ತಿದ್ದರು ಎಂಬ ಪ್ರಶ್ನೆಗೆ ಉತ್ತರ ಮೇಲಿನ ಅಂಶವು ನೀಡುತ್ತದೆ. ಇದರೊಂದಿಗೆ ದೊಡ್ಡಬಳ್ಳಾಪುರ, ಚಿಂತಾಮಣಿ, ಚಿಕ್ಕಬಳ್ಳಾಪುರ, ಕೋಲಾರವು ಸಹ ಅಧೀನಕ್ಕೆ ಬಂದವು. ಈ ಸಂದರ್ಭದಲ್ಲಿ ಸ್ಥಳೀಯ ವರ್ತಕರು ಪ್ರತಿಭಟಿಸಿದಂತೆ ತೋರುವುದಿಲ್ಲ. ಮರಾಠರು ವಾಣಿಜ್ಯ-ವ್ಯವಹಾರಗಳನ್ನು ಉತ್ತೇಜಿಸಿದರು. ಏಕೋಜಿಯ ಕಾಲದಲ್ಲಿ ಬೆಂಗಳೂರು ಪೇಟೆಯನ್ನು ವಿಸ್ತರಿಸಿ ವರ್ತಕರಿಗೆ ಮತ್ತು ಉದ್ದಿಮೆದಾರರಿಗೆ ರಕ್ಷಣೆ ನೀಡಿ ನೆಲೆಯೂರಲು ಪ್ರೋತ್ಸಾಹಿಸಿದರು.[೮೮] ಈ ಮಾಹಿತಿಯನ್ನು ಗಮನಿಸಿದಾಗ ದೊಡ್ಡಬಳ್ಳಾಪುರ, ಚಿಂತಾಮಣಿ, ಚಿಕ್ಕಬಳ್ಳಾಪುರ, ಕೋಲಾರದ ನಡುವಿನ ವ್ಯಾಪಾರಿ ಮಾರ್ಗದ ಮುಖ್ಯ ಕೊಂಡಿ ಬೆಂಗಳೂರಾಗಿದ್ದದ್ದನ್ನು ಗಮನಿಸಬಹುದು. ಯಾವುದೇ ಅರಸು ಮನೆತನಗಳು ಈ ಪ್ರದೇಶವನ್ನು ವಶಪಡಿಸಿಕೊಂಡರು ಅವರೂ, ವ್ಯಾಪಾರ-

ವಾಣಿಜ್ಯ ವ್ಯವಹಾರಗಳನ್ನು ಪ್ರೋತ್ಸಾಹಿಸುತ್ತಿದ್ದರು. ಸಾಮಾನ್ಯವಾಗಿ ವರ್ತಕರು ಮತ್ತು ಪ್ರಭುತ್ವದ ನಡುವೆ ಬಹುಬೇಗ ಉತ್ತಮ ಸಂಬಂಧ ಏರ್ಪಡುತ್ತಿತ್ತು.

ಏಕೋಜಿಯ ಕಾಲಕ್ಕೆ ಸೇರಿದ ಒಂದು ಕನ್ನಡದ ಶಾಸನದಲ್ಲಿ ಬೆಂಗಳೂರಿನ ವರ್ತಕ ಶ್ರೇಣಿಯವರು ೧೬೯೯ರಲ್ಲಿ ಕಾಡುಮಲ್ಲೇಶ್ವರ ದೇವಾಲಯಕ್ಕೆ ದಾನ ನೀಡಿದ ಉಲ್ಲೇಖವಿದೆ.[೮೯] ಈತನ ಕೈಕೆಳಗೆ ಸೂರತ್ ಸಿಂಗನೂ ಕೆಲವು ಕಾಲ ಈ ಪ್ರದೇಶವನ್ನು ಆಳಿದನು. ಇವರ ಆಳ್ವಿಕೆಯಲ್ಲಿ ಕಂಡುಬರುವ ವಿಷಯವೆಂದರೆ ಬೆಂಗಳೂರು ಪೇಟೆ ಮತ್ತಷ್ಟೂ ವಿಸ್ತರಿಸಲ್ಪಟ್ಟಿತು. ಈ ನಂತರದಲ್ಲಿ ಪ್ರಾಚೀನ ಪೇಟೆ ಬೀದಿಗಳಾದ ಅರಳೆಪೇಟೆ, ದೊಡ್ಡಪೇಟೆಗಳ ಸರಣಿಯಲ್ಲಿ ಮಾಮೂಲು ಪೇಟೆ, ದರ್ಜಿಪೇಟೆ ಬೀದಿ ಮತ್ತು ಸೌರಾಷ್ಟ್ರಪೇಟೆ ಸೇರಲ್ಪಟ್ಟಿರಬಹುದು. ಪೇಟೆಬೀದಿ ಸರಣಿಯಲ್ಲಿ ಮರಾಠಿ ಭಾಷೆ ಪದಗಳ ಮೂಲಕ ಈ ಪ್ರದೇಶದಲ್ಲಿ ಮರಾಠರು ನೆಲೆನಿಂತರು ಎಂದು ಊಹಿಸಬಹುದು. ಖತ್ರಿಯವರು ಸೌರಾಷ್ಟ್ರಪೇಟೆ ಬೀದಿಯಲ್ಲಿಯೂ ಮತ್ತು ಪಟ್ಟೆಗಾರೆಂಬ ಸಾಂಪ್ರದಾಯಿಕ ವೃತ್ತಿ ನೇಕಾರರು ಷಾಹೂಜಿ ಬೀದಿಗಳಲ್ಲಿ ನೆಲೆಸಿದ್ದರು.[೯೦] ಇವರು ಗಟ್ಟಿಯಾದ ಮತ್ತು ಬೆಲೆಯುಳ್ಳ ಬಟ್ಟೆಗಳನ್ನು ತಯಾರಿಸುತ್ತಿದ್ದರು. ಇಂದು ಸೌರಾಷ್ಟ್ರ ಎಂದು ಗುರುತಿಸುವ ಭೂ ಭಾಗವು ಗುಜರಾತಿನಲ್ಲಿದೆ. ಗುಜರಾತ್ ಬಟ್ಟೆ ಉತ್ಪಾದನೆಯಲ್ಲಿ ಇಂದಿಗೂ ಅತ್ಯಂತ ಪ್ರಮುಖ ಪಾತ್ರ ವಹಿಸುತ್ತಿದೆ ಎಂಬುದು ಗಮನಾರ್ಹ.

೧೭ನೇ ಶತಮಾನದಲ್ಲಿ ಬಿಜಾಪುರ ಸುಲ್ತಾನರು ಮತ್ತು ಮೊಗಲರ ಆಳ್ವಿಕೆ ಬೆಂಗಳೂರು ಪ್ರದೇಶದ ಮೇಲೆ ಹಲವು ರೀತಿಯ ಸಾಂಸ್ಕೃತಿಕ ಪ್ರಭಾವವನ್ನು ಬೀರಿತು. ಬಿಜಾಪುರ ಆದಿಲ್‌ಶಾಹಿಯರ ಸೇನೆಯಲ್ಲಿದ್ದ ಮುಸ್ಲಿಂ ಮತ್ತು ಮರಾಠ ಸೈನಿಕರಿಗೆ ಬೇಕಾದ ವಸ್ತ್ರಗಳನ್ನು ಹೊಲೆದು ಕೊಡುವ ಕಾರ್ಯದಲ್ಲಿ ದರ್ಜಿಗಳು ತೊಡಗಿಕೊಂಡರು. ಆದಿಲ್‌ಶಾಹಿಗಳು ಪರ್ಷಿಯಾದಿಂದ ಬಂದ ವಲಸೆಗಾರರನ್ನು ಆಹ್ವಾನಿಸಿದರು. ಇವರು ಕಲಾತ್ಮಕವಾದ ಬಿದರಿ ಕಲೆಯನ್ನು ಪರಿಚಯಿಸಿದರು. ಹೊಂಬಣ್ಣದ ಗಚ್ಚಿಯನ್ನು ಕರಕುಶಲ ಕಲೆಯಲ್ಲಿ ಉಪಯೋಗಿಸುತ್ತಿದ್ದರು. ದಂತ, ಶ್ರೀಗಂಧದ ಮರ ಮತ್ತು ತೇಗದ ಮರಗಳಲ್ಲಿ ಅಲಂಕೃತ ವಸ್ತುಗಳನ್ನು ಮಾಡಲಾಗಿದ್ದು, ಅದಕ್ಕೆ ಹೊಂಬಣ್ಣದ ಗಚ್ಚಿಯನ್ನು ಬಳಸಲಾಗುತ್ತಿದ್ದು. ಇಂತಹ ವಸ್ತುಗಳ ನಿರ್ಮಾಣ ಮತ್ತು ಬಳಕೆಯಲ್ಲಿ ಮುಸ್ಲಿಂರು ಮುಂದಿದ್ದರು.[೯೧] ನಗರದ ಚಿಕ್ಕಪೇಟೆಯಲ್ಲಿ ಷಾಹಜಿಯು ಗೌರಿವಿಲಾಸ ಅರಮನೆಯನ್ನು ನಿರ್ಮಿಸಿದನು. ಹೊರಗಿನವರು ಬೆಂಗಳೂರು ನಗರಕ್ಕೆ ಬರಬೇಕಾದರೆ ಅನುಮತಿ ಪಡೆಯಬೇಕಾಗಿತ್ತು. ಆದರೆ ರೈತರಿಗೆ, ವ್ಯಾಪಾರಿಗಳಿಗೆ ಉಚಿತ ಪ್ರವೇಶವಿರುತ್ತಿತ್ತು.[೯೨] ಮರಾಠರ ಆಳ್ವಿಕೆಯ ಪರಿಣಾಮವಾಗಿ ಗವಿಪುರದಲ್ಲಿ ಹಲವು ಬ್ರಾಹ್ಮಣ ಮರಾಠರು ನೆಲೆನಿಂತರು. ಮರಾಠಾ ಪಂಗಡದವರಿಗಾಗಿ ಗವಿಪುರದಲ್ಲಿ ಗೋಸಾಯಿ ಮಠವನ್ನು ಸ್ಥಾಪಿಸಲಾಯಿತು.[೯೩] ನಂತರ ಈ ಪ್ರದೇಶಕ್ಕಾಗಿ ಶಿವಾಜಿ ಮತ್ತು ಏಕೋಜಿಯ ನಡುವೆ ಮನಸ್ತಾಪ

ಏರ್ಪಟ್ಟಿತ್ತು. ಈರ್ವರ ನಡುವೆ ಒಪ್ಪಂದ ಏರ್ಪಟ್ಟಿತ್ತು. ಆ ಪ್ರಕಾರ ಈ ಪ್ರದೇಶದಿಂದ ಬರುವ ಆದಾಯವು ಏಕೋಜಿಯ ಪತ್ನಿ ದೀಪಾಬಾಯಿಗೆ ಸೇರಬೇಕೆಂದು ತೀರ್ಮಾನಿಸಲಾಯಿತು. ಶಿವಾಜಿ ಬಿಜಾಪುರದ ಅರಸನ ಆದೇಶದಂತೆ ತಂಜಾವೂರಿನ ಆಡಳಿತವನ್ನು ನಿರ್ವಹಿಸಬೇಕಾಗಿತ್ತು. ಅಂದರೆ ಈ ಸಂದರ್ಭದಲ್ಲಿದ್ದ ಬಿಜಾಪುರದ ಆದಿಲ್‌ಶಾಹಿಗಳ ಅಡಿಯಲ್ಲಿ ಮರಾಠರು ಪ್ರಬಲರಾಗ ತೊಡಗಿದ್ದರು. ಬೇರೆ ಬೇರೆ ಕಡೆಗಳಲ್ಲಿ ನೆಲೆಸುತ್ತಿದ್ದ ಇವರು ಸಾಹಸಿ ಸಮುದಾಯವಾಗಿ ಮರಾಠರು ರೂಪುಗೊಂಡರು. ೧೭ನೇ ಶತಮಾನದ ಉತ್ತರಾರ್ಧದಲ್ಲಿ ಮರಾಠರೇ ಪೂರ್ಣ ರೂಪದಲ್ಲಿ ಪ್ರಾಬಲ್ಯಕ್ಕೆ ಬರುವುದನ್ನು ಕಾಣ ಬಹುದು. ಇದು ೧೭೯೯ರ ವರೆಗೂ ಮೈಸೂರು ಒಡೆಯರು, ನಂತರ ಹೈದರಾಲಿ ಮತ್ತು ಟಿಪ್ಪು ಸುಲ್ತಾನನ ಆಳ್ವಿಕೆಯಲ್ಲಿ ಮರಾಠರೊಂದಿಗೆ ಹಲವು ಬಗೆಯ ಘರ್ಷಣೆಗಳಿಗೆ ಕಾರಣವಾಯಿತು.

* * *

ಮೊಗಲ್ ಚಕ್ರವರ್ತಿಯಾದ ಔರಂಗಜೇಬ್ ಗೋಲ್ಕೊಂಡದಲ್ಲಿದ್ದ ತನ್ನ ದಂಡನಾಯಕನಾದ ಖಾಸಿಂಖಾನನ ಮೂಲಕ ಬೆಂಗಳೂರನ್ನು ಕ್ರಿ.ಶ ೧೬೮೭ ವಶಪಡಿಸಿಕೊಂಡನು. ಈ ಹೊತ್ತಿಗೆ ಬಿಜಾಪುರದ ಆದಿಲ್‌ಶಾಹಿಗಳ ರಾಜ್ಯವನ್ನು ಪೂರ್ಣವಾಗಿ ಔರಂಗಜೇಬ್ ವಶಪಡಿಸಿಕೊಂಡಿದ್ದನು. ಅವರಿಗೆ ಸೇರಿದ್ದ ದೂರ ದೂರದ ಪ್ರದೇಶಗಳಲ್ಲಿ ಬೆಂಗಳೂರನ್ನು ವಶಪಡಿಸಿಕೊಳ್ಳುವ ಅವಶ್ಯಕತೆ ಏರ್ಪಟ್ಟಿತ್ತು. ಈತ ಮುಂದೆ ಮೂರು ವರ್ಷಗಳು ಬೆಂಗಳೂರನ್ನು ಆಳಿದನು. ಈ ಸಂದರ್ಭದಲ್ಲಿ ತಾರಾಮಂಡಲ ಪೇಟೆಯಲ್ಲಿ ಜುಮ್ಮಾ ಮಸೀದಿಯನ್ನು ನಿರ್ಮಿಸಿದನು.[೬೪] ಬೆಂಗಳೂರು ಕೋಟೆಯನ್ನು ಭದ್ರಪಡಿಸಿದನು. ಈ ಮೂರು ವರ್ಷಗಳ ಅವಧಿಯಲ್ಲಿ ಬೆಂಗಳೂರು ಮೊಗಲರ ಚಟುವಟಿಕೆಯ ಕೇಂದ್ರವಾಗಿ ಮಾರ್ಪಟ್ಟಿತ್ತು. ಬೆಂಗಳೂರು ಕೋಟೆಯ ಒಳಗೆ ಪರ್ಷಿಯನ್, ಗುಜರಾತಿ, ರಾಜಸ್ಥಾನಿ, ಪಂಜಾಬಿ ಹೀಗೆ ವಿವಿಧ ಭಾಷೆಯನ್ನಾಡುವ ಮೊಗಲ್ ಅಧಿಕಾರಿಗಳು ಮತ್ತು ಸೈನಿಕರಿದ್ದರು.[೬೫] ಮೊಗಲ್ ದೊರೆಯ ಆಜ್ಞೆಯಂತೆ ಮೊಗಲರ ದಕ್ಷಿಣ ಭಾರತದ ಹೊಸ ರಾಜಧಾನಿಯಾದ ಶಿರಾ ಪ್ರಾಂತ್ಯಾಧಿಕಾರಿಯಾಗಿ ಖಾಸಿಂಖಾನ್ ನೇಮಕಗೊಂಡನು. ಅದ್ದರಿಂದಾಗಿ ಬೆಂಗಳೂರನ್ನು ಬಿಡಬೇಕಾಯಿತು. ಈ ವಿಚಾರ ತಿಳಿಯುತ್ತಿದ್ದಂತೆ ಬೆಂಗಳೂರಿನಲ್ಲಿದ್ದ ದೊಡ್ಡ ದೊಡ್ಡ ವರ್ತಕರು ಶಿರಾಕ್ಕೆ ವಲಸೆ ಹೋದರು.[೬೬] ಮೊಗಲರ ಆಳ್ವಿಕೆ ಕಡಿಮೆ ಅವಧಿಯದಾದರೂ ಬೆಂಗಳೂರಿನ ನಗರೀಕರಣ ಪ್ರಕ್ರಿಯೆಯಲ್ಲಿ ಹೊಸ ತಿರುವನ್ನು ನೀಡಿತು. ಬೆಂಗಳೂರಿನ ಕೋಟೆಯಲ್ಲಿ ಬಹುಭಾಷಾ ಜನರು ನೆಲೆಸಿದ್ದರು ಎಂಬ ಅಂಶ ಮತ್ತು ಮೊಗಲರ ದಕ್ಷಿಣದ ರಾಜಧಾನಿಯಾಗಿ ಶಿರಾ ಪ್ರದೇಶವನ್ನು ಮಾಡಿದಾಗ ವರ್ತಕರು ಅಲ್ಲಿಗೆ ತೆರಳಿದರು ಎನ್ನುವ ಅಂಶಗಳು ಮೊಗಲ ಆಳ್ವಿಕೆ ಸಂದರ್ಭದಲ್ಲಿ ಉತ್ತರ ಭಾರತದಿಂದ ಹಲವು ವರ್ತಕ ಸಮುದಾಯಗಳು ಬಂದು ನೆಲೆಸಿದ್ದವು ಎಂಬುದಕ್ಕೆ ಸಾಕ್ಷಿಯಾಗಿದೆ. ಈ ಹಂತದಲ್ಲಿ ಯಲಹಂಕ ನಾಡಪ್ರಭುಗಳು ರಾಜಕೀಯದ ಮುಖ್ಯಧಾರೆಯಿಂದ

ತೆರೆಮರೆಗೆ ಸರಿದರು. ಮೈಸೂರಿನ ಒಡೆಯರು ಅತ್ಯಂತ ಪ್ರಬಲರಾಗಿದ್ದ ಸ್ಥಳೀಯ ಪ್ರಭುಗಳಾಗಿದ್ದರು ಎಂಬುದನ್ನು ಗಮನಿಸಬೇಕು. ಮೈಸೂರಿನ ಒಡೆಯರ ರಾಜಧಾನಿಯಾದ ಶ್ರೀರಂಗಪಟ್ಟಣಕ್ಕೆ ಬೆಂಗಳೂರು ಸಮೀಪವಿದ್ದು, ಎತ್ತರದ ಪ್ರದೇಶವಾಗಿದ್ದು ತನ್ನ ಸೇನಾ ತುಕಡಿಗೆ ಸರಿಯಾದ ದಂಡು ಎಂದು ಪರಿಗಣಿಸಲ್ಪಟ್ಟಿತು. ವಾಣಿಜ್ಯದ ದೃಷ್ಟಿಯಿಂದಲೂ ಮುಖ್ಯ ಆಯಕಟ್ಟಿನ ಸ್ಥಳವಾಗಿತ್ತು. ಏಕೋಜಿಯ ಕಾಲದಲ್ಲೇ ಒಡೆಯರು ಬೆಂಗಳೂರನ್ನು ಪಡೆಯಲು ಯತ್ನಿಸಿ ವಿಫಲವಾಗಿದ್ದರು. ಚಿಕ್ಕದೇವರಾಜ ಒಡೆಯರು ಬೆಂಗಳೂರನ್ನು ಗೆಲ್ಲುವ ಬದಲು ತನ್ನ ಪ್ರತಿನಿಧಿಯನ್ನು ಕಳುಹಿಸಿ ಮೊಗಲರ ಅಪ್ಪಣೆ ಪಡೆದು ಅವರ ಕರಾರಿಗೆ ಒಪ್ಪಿ, ಮೂರು ಲಕ್ಷ ರೂಪಾಯಿಗೆ ಕೊಂಡುಕೊಂಡರು. ಅಂದರೆ ಬೆಂಗಳೂರಿನ ನಗರೀಕರಣ ಪ್ರಕ್ರಿಯೆಯಲ್ಲಿ ವ್ಯಾಪಾರ–ವಾಣಿಜ್ಯದಷ್ಟೇ ಮಹತ್ತರ ಪಾತ್ರವನ್ನು ದಂಡು ಅಥವಾ ಸೈನಿಕರು ವಹಿಸಿದ್ದಾರೆ ಎನ್ನುವುದು ಇದರಿಂದ ತಿಳಿದುಬರುತ್ತದೆ.

## ಮೈಸೂರು ಒಡೆಯರು

ಮೊಗಲರಿಂದ ಬೆಂಗಳೂರನ್ನು ಚಿಕ್ಕದೇವರಾಜ ಒಡೆಯರು ಕೊಂಡುಕೊಂಡ ನಂತರ ಅದರ ರಕ್ಷಣೆಯ ಕಡೆಗೆ ಗಮನಹರಿಸಿದನು. ಕ್ರಿ.ಶ ೧೬೮೭ರಲ್ಲಿ ಬೆಂಗಳೂರಿನ ಕೋಟೆಯ ದಕ್ಷಿಣಕ್ಕೆ ಚಿಕ್ಕ ಕೋಟೆಯನ್ನು ಮೊಟ್ಟೆಯಾಕಾರದಲ್ಲಿ ನಿರ್ಮಿಸಿದರು. ಅದರಲ್ಲಿ ಸೈನಿಕ ತುಕಡಿಯ ಇಟ್ಟು ಮರಾಠರ ಅಕ್ರಮಣವನ್ನು ತಡೆಯಲು ನಿರ್ಧರಿಸಿದರು.[೬೨] ಈ ಹೊತ್ತಿಗೆ ಒಡೆಯರು ಮರಾಠರು ಹಾಗೂ ಮೊಗಲರಿಗೆ ತಲೆ ನೋವಾಗಿ ಪರಿಣಮಿಸಿದ್ದರು ಎಂಬುದು ಅವರ ಪ್ರಾಬಲ್ಯಕ್ಕೆ ಸಾಕ್ಷಿಯಾಗಿದೆ. ಇವರ ಅನಿರೀಕ್ಷಿತ ದಾಳಿಗಳನ್ನು ಎದುರಿಸಲು ರಕ್ಷಣೆಯನ್ನು ಹೆಚ್ಚಿಸುವುದು ಅವಶ್ಯಕವಾಗಿತ್ತು. ಜೊತೆಗೆ ಬೆಂಗಳೂರು ಪ್ರದೇಶದಲ್ಲೆ ಆಯುಧಗಳ ತಯಾರಿಕಾ ಘಟಕಗಳನ್ನು ಸ್ಥಾಪಿಸಿದರು. ಹಾಗೆ ಆಡಳಿತ ಕಛೇರಿಯನ್ನು ದೊಡ್ಡಪೇಟೆಯಲ್ಲಿರುವ ಕರಿಸಿದ್ದೇಶ್ವರಮಠದ ಬಳಿ ನಿರ್ಮಿಸಿದರು, ಈ ಸ್ಥಳ ಬೆಂಗಳೂರಿನ ಕೋಟೆಗೆ ಪೂರ್ವ ದಿಕ್ಕಿನಲ್ಲಿದ್ದ ಹಲಸೂರು ಬಾಗಿಲಿಗೂ, ಪಶ್ಚಿಮ ದಿಕ್ಕಿನಲ್ಲಿದ್ದ ಸೊಂಡೆಕೊಪ್ಪದ ಬಾಗಿಲಿಗೂ ನೇರವಾದ ಒಂದೆ ಮಾರ್ಗವಿತ್ತು. ಪೂರ್ವದಲ್ಲಿ ಹಲಸೂರು ಪೇಟೆಯಿಂದ ಪ್ರಾರಂಭವಾಗುತ್ತಿದ್ದ ಈ ಮಾರ್ಗವು ಪಶ್ಚಿಮದಲ್ಲಿ ಅರಳೆಪೇಟೆಗೆ ಬಂದು ಮುಟ್ಟುತ್ತಿತ್ತು. ಮಾರ್ಗ ಮಧ್ಯದಲ್ಲಿ ಮೇಲ್ಭಾಗದ ಉತ್ತರಕ್ಕೆ ದೊಡ್ಡಪೇಟೆಯೂ, ಕೆಳಭಾಗದ ದಕ್ಷಿಣಕ್ಕೆ ಚಿಕ್ಕಪೇಟೆಯೂ ಹಂಚಿಕೊಂಡಂತಿದ್ದವು.[೬೮] ಒಟ್ಟಿನಲ್ಲಿ ಬೆಂಗಳೂರು ಪ್ರದೇಶವು ಪ್ರಮುಖವಾದ ಆರ್ಥಿಕ ಕೇಂದ್ರ ಮತ್ತು ರಕ್ಷಣಾ ತಾಣವಾಗಿ ಮೈಸೂರು ಒಡೆಯರ ಕಾಲದಲ್ಲಿ ಬೆಳೆದಿದ್ದಕ್ಕೆ ಇದು ಸಾಕ್ಷಿಯಾಗಿದೆ.

ಒಡೆಯರ ಕಾಲದಲ್ಲಿ ಬೆಂಗಳೂರನ್ನು ವ್ಯಾಪಾರಿ ಕೇಂದ್ರವನ್ನಾಗಿ ಮಾಡುವ ಸಕಲ ಪ್ರಯತ್ನಗಳೂ ನಡೆದಿದ್ದವು. ಪೇಟೆಗಳಲ್ಲಿ ಅಂಗಡಿಬೀದಿಗಳನ್ನು ನಿರ್ಮಿಸಿ ವ್ಯಾಪಾರಿಗಳನ್ನು ಪ್ರೋತ್ಸಾಹಿಸಲಾಯಿತು. ದೇಶದ ನಾನಾ ಭಾಗದ ಕರಕುಶಲಕರ್ಮಿಗಳು, ವರ್ತಕರು, ವಿವಿಧ ಉದ್ದಿಮೆದಾರರು ಬೆಂಗಳೂರು

ಪಟ್ಟಣಕ್ಕೆ ಬಂದು ನೆಲೆಸುವಂತಾಯಿತು. ಚಿಕ್ಕದೇವರಾಯನು ಮೊಗಲರ ಮಾದರಿಯಲ್ಲೇ ಆಡಳಿತವನ್ನು ನಿರ್ವಹಿಸಿದನು. ಬೆಂಗಳೂರು ಪ್ರದೇಶವು ಆ ಸಂದರ್ಭದಲ್ಲಿ ೧೨ ಹೋಬಳಿಗಳನ್ನು ಹೊಂದಿತು. ಬೆಂಗಳೂರಿನಲ್ಲಿ ೧೮ ಚಾವಡಿಗಳನ್ನು ಸ್ಥಾಪಿಸಿ ಪ್ರತಿಯೊಂದು ಕಛೇರಿಗೂ ದಕ್ಷ ಅಧಿಕಾರಿಗಳನ್ನು ನೇಮಿಸಿದನು. ಬೆಂಗಳೂರಿನ ವ್ಯಾಪಾರ ಹಾಗೂ ಕೈಗಾರಿಕೆಗಳನ್ನು ಬೆಳೆಸಲು ವಿಶೇಷ ಆಸಕ್ತಿಯನ್ನು ವಹಿಸಲಾಗಿತು. ಪಾರುಪತ್ತೆಗಾರರ ಸ್ಥಾನಗಳನ್ನು ಹೆಚ್ಚಿಸುವ ಮೂಲಕ ಹೊಸ ಪೇಟೆಗಳ ನಿರ್ಮಾಣಕ್ಕೆ ಅವಕಾಶಗಳನ್ನು ನೀಡಲಾಯಿತು. ರಾಜ್ಯದ ಗಡಿಗಳನ್ನು ೮೪ ಭಾಗಗಳಾಗಿ ವಿಂಗಡಣೆ ಮಾಡಿ ಪ್ರತಿಯೊಂದು ಗಡಿಗಳಲ್ಲಿ ಕಂದಾಯ ಇಲಾಖೆಯನ್ನು ಮತ್ತು ಕೊತ್ವಾಲನನ್ನು ಸ್ಥಾಪಿಸಲಾಯಿತು. ಕೊತ್ವಾಲನ ಪ್ರಮುಖ ಕೆಲಸಗಳೆಂದರೆ, ಜನರು ತಂತಮ್ಮ ಜಾತಿಕಟ್ಟಳೆಗಳನ್ನು ಮೀರಿ ನಡೆಯದಂತೆ ನೋಡಿಕೊಳ್ಳುವುದು. ಕಳ್ಳತನ ನಿಷಿದ್ಧವಾಗಿತ್ತು. ಆಯಾ ಗಡಿಗಳಲ್ಲಿ ವರ್ತಕರು ಸರ್ಕಾರಿ ನಿಯಮಕ್ಕೆ ಒಳಪಟ್ಟು ವ್ಯಾಪಾರ ಮಾಡಬೇಕಾಗಿತ್ತು. ರಾತ್ರಿಯ ಹೊತ್ತು ಗಸ್ತು ತಿರುಗುವವರು ಸರಿಯಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆಯೇ ಎಂದು ನೋಡಿಕೊಳ್ಳುವ ಉಸ್ತುವಾರಿ ಕೆಲಸವನ್ನು ಮಾಡಬೇಕಾಗಿತು.[೯೯] ಬೆಂಗಳೂರಿನಲ್ಲಿ ವ್ಯಾಪಾರಿ ಕೇಂದ್ರಗಳನ್ನು ಸ್ಥಾಪಿಸಲು ವರ್ತಕ ಸಮುದಾಯಗಳಿಗೆ ಹೆಚ್ಚು ಹೆಚ್ಚು ಸೌಲಭ್ಯಗಳನ್ನು ನೀಡಲಾಯಿತು. ಹತ್ತಿ, ಅಡಿಕೆ, ತೆಂಗಿನಕಾಯಿ ಮತ್ತು ಇನ್ನಿತರ ಸಾಮಗ್ರಿಗಳನ್ನು ಬೆಂಗಳೂರು, ಗುಬ್ಬಿ, ತುರುವೆಕೆರೆ ಮುಂತಾದ ಪ್ರಮುಖ ಪಟ್ಟಣ ಪ್ರದೇಶಗಳಿಗೆ ತಂದು ತೂಕ ಹಾಕಿಸಿಕೊಂಡದ್ದಕ್ಕೆ ಪ್ರತಿಯಾಗಿ ದವಸ-ಧಾನ್ಯದ ರಾಶಿಗೆ 'ದೆ' ಎಂಬ ಅಕ್ಷರದ ಎಡಬಲಗಳಲ್ಲಿ ಸೂರ್ಯ ಮತ್ತು ಚಂದ್ರರ ಚಿತ್ರ ಇರುವ ಮುದ್ರೆಯನ್ನು ಹಾಕಲಾಗುತ್ತಿತ್ತು. ಇದಾದ ನಂತರವೆ ಸ್ಥಳೀಯ ಮಾರಕಟ್ಟೆಗಳಲ್ಲಿ ಮಾರಾಟ ಮಾಡಬೇಕಾಗಿತ್ತು.[೧೦೦] ಪ್ರಭುತ್ವದ ವಾಣಿಜ್ಯದ ಪರ ನೀತಿ, ದಕ್ಷ ಆಡಳಿತ, ಸೇನಾ ತುಕಡಿಯ ನೆಲೆಯಾಗಿದ್ದರಿಂದಾಗಿ ಭದ್ರತೆ ಏರ್ಪಟ್ಟಿತು. ಇದೆಲ್ಲದರ ಪರಿಣಾಮವಾಗಿ ಬೆಂಗಳೂರು ಸುಭದ್ರವಾದ ತಾಣವಾಗಿ ಪರಿಣಮಿಸಿತು.

ಮೈಸೂರು ಒಡೆಯರ ಅವಧಿಯಲ್ಲಿ ಬೆಂಗಳೂರು ಪ್ರದೇಶದಲ್ಲಿದ್ದ ವರ್ತಕ ಸಮುದಾಯದ ಶ್ರೇಣಿಗಳಲ್ಲಿಯೂ ಕೆಲವು ಬದಲಾವಣೆಗಳಾದವು. ಕೃಷಿಕ ವರ್ತಕರಾದ ಸಾಲುಮೂಲೆ ಬಣಜಿಗರನ್ನು ಬದಿಗೊತ್ತಿ ಹತ್ತಿ ಬಟ್ಟೆ ತಯಾರಿಕೆಯಲ್ಲಿ ಕೌಶಲ್ಯ ಹೊಂದಿದ ಪಂಚಮ ಬಣಜಿಗರು ಪ್ರಾಬಲ್ಯಕ್ಕೆ ಬಂದರು.[೧೦೧] ಆಂಧ್ರ ಪ್ರದೇಶದಿಂದ ಶ್ರೇಷ್ಠಿ ಎಂದು ಕರೆಯಲ್ಪಡುವ ಕೋಮಟಿಗಳು ಮತ್ತು ಆಂಧ್ರ ದೇವಾಂಗದವರು ವಲಸೆ ಬಂದು ನೆಲೆಸಿದರು. ಈ ಎರಡು ಸಮುದಾಯದವರು ನೇಯ್ಗೆಯಲ್ಲಿ ಕೌಶಲ್ಯತೆಯನ್ನು ಹೊಂದಿದ್ದರು. ಇವರಿಗೆ ಅರಳೆಪೇಟೆಯಲ್ಲಿ ಸ್ಥಳಾವಕಾಶ ಮಾಡಿಕೊಡಲಾಯಿತು. ಈ ಸಂದರ್ಭದಲ್ಲಿ ಹನ್ನೆರಡು ಸಾವಿರ ನೇಕಾರರು ಜವಳಿ ಉದ್ಯಮದಲ್ಲಿ ತೊಡಗಿಕೊಂಡಿದ್ದರು.[೧೦೨] ೧೭ನೆಯ ಶತಮಾನವು ಭಾರತದಾದ್ಯಂತ ಬಟ್ಟೆ ಉತ್ಪಾದನೆ ಶಿಖರ ತಲುಪಿದ್ದ ಸಂದರ್ಭ. ವಸ್ತ್ರೋದ್ಯಮ

ಸಮಕಾಲೀನವಾಗಿ ಉದಯೋನ್ಮುಖ ಉದ್ಯಮವಾಗಿತ್ತು. ಅದರ ಬೆಳವಣಿಗೆಗೆ ಪ್ರಭುತ್ವವು ಅತಿ ಹೆಚ್ಚು ಕಾಳಜಿ ವಹಿಸಿರುವುದು ಕಂಡುಬರುತ್ತದೆ. ಹಾಗೇ ಮೈಸೂರು ರಾಜ್ಯದ ಉತ್ತರ ಭಾಗದಲ್ಲಿ ಹೆಚ್ಚಾಗಿ ಹತ್ತಿ ಬೆಳೆಯಲಾಗುತ್ತಿತ್ತು. ಅಷ್ಟೇ ಹೆಚ್ಚಿನ ಪ್ರಮಾಣದಲ್ಲಿ ಬೆಂಗಳೂರಿಗೆ ತಂದು ಹತ್ತಿ ಬಟ್ಟೆಯನ್ನು ಉತ್ಪಾದಿಸಲಾಗುತ್ತಿತ್ತು. ಬೆಂಗಳೂರು ಪ್ರದೇಶವು ಹತ್ತಿ ಬಟ್ಟೆ ಉತ್ಪಾದನೆಯ ನೆಲೆಯಲ್ಲಿ ಪ್ರಮುಖ ಕೇಂದ್ರವಾಗಿ ಮಾರ್ಪಾಡಾಯಿತು.

ಇವರ ಕಾಲದಲ್ಲಿ ಮೈಸೂರು ರಾಜ್ಯ ವಿಸ್ತಾರವಾಗಿತ್ತು. ಇದು ಇಂದಿನ ಕರ್ನಾಟಕದ ಹೊಸಕೋಟೆ, ಬಾಣಾವರ, ತುಮಕೂರು, ಚಿಕ್ಕಮಗಳೂರು, ಮಧುಗಿರಿ ಇತ್ಯಾದಿ ಪಟ್ಟಣಗಳನ್ನು ಮತ್ತು ಮೈಸೂರು ರಾಜ್ಯದ ದಕ್ಷಿಣಕ್ಕೆ (ಇಂದು ಕರ್ನಾಟಕದ ಹೊರಗಿರುವ) ಸೇಲಂ, ಓಮಲೂರು, ಧರ್ಮಪುರ ಪಟ್ಟಣಗಳನ್ನು ಒಳಗೊಂಡಿತ್ತು. ಚಿಕ್ಕದೇವರಾಜ ಒಡೆಯರು ಮೊಗಲರೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದರು. ಇದು ಸಹ ಬೆಂಗಳೂರಿನ ವ್ಯಾಪಾರ–ವಹಿವಾಟು, ಉದ್ದಿಮೆ ಅಭಿವೃದ್ಧಿಗೊಳ್ಳಲು ಕಾರಣವಾಯಿತು. ಹೀಗೆ ಶ್ರೀರಂಗಪಟ್ಟಣ ಮತ್ತು ಬೆಂಗಳೂರು ಎರಡು ಪ್ರದೇಶಗಳು ಚಿಕ್ಕದೇವರಾಜರ ಕಾಲದಲ್ಲಿ ಸರಕು ಉತ್ಪಾದಕ ಕೇಂದ್ರವಾಗಿ ರೂಪುಗೊಳ್ಳತೊಡಗಿದವು. ಚಿಕ್ಕದೇವರಾಜರ ಮರಣದ ನಂತರ ಪ್ರಮುಖವಾಗಿ ಎರಡು ವರ್ತಕ ಸಮುದಾಯಗಳು ಪ್ರಾಬಲ್ಯಕ್ಕೆ ಬರತೊಡಗಿದವಲ್ಲದೆ, ಸಂಘರ್ಷಕ್ಕೆ ಇಳಿಯತೊಡಗಿದವು. ಅವುಗಳೆಂದರೆ., ಒಂದನೆಯದಾಗಿ, ಈಗಾಗಲೇ ಕರಾವಳಿ ಪ್ರದೇಶಗಳನ್ನು ತಮ್ಮ ವಶಕ್ಕೆ ತರಬೇಕೆಂಬ ಯುರೋಪಿನ ವರ್ತಕರ ಬೆಳವಣಿಗೆ. ಎರಡನೆಯದಾಗಿ, ಹೈದರ್ ಮತ್ತು ಟಿಪ್ಪುವಿನ ನೇತೃತ್ವದಲ್ಲಿ ಸ್ಥಳೀಯ ವರ್ತಕರಲ್ಲಿ ರಾಷ್ಟ್ರೀಯತಾವಾದದ ಬೆಳವಣಿಗೆಯನ್ನು ಕಾಣಬಹುದು.[೧೦೩] ಇದೆಲ್ಲದರ ಪ್ರಭಾವ ಪರಿಣಾಮಗಳು ಬೆಂಗಳೂರು ಪ್ರದೇಶದಲ್ಲಿ ವಿವಿಧ ರೂಪದಲ್ಲಿ ಕಂಡುಬಂದವು. ವಿವಿಧ ಪ್ರದೇಶಗಳಿಂದ ಭೇಟಿ ನೀಡುತ್ತಿದ್ದ ವಿವಿಧ ಬಗೆಯ ವರ್ತಕರು ಅನೇಕ ರೀತಿಯಲ್ಲಿ ನಗರದ ಬೆಳವಣಿಗೆಗೆ ಕೊಡುಗೆ ನೀಡಿದ್ದಾರೆ. ಹೀಗೆ ಬಂದು ಹೋಗುತ್ತಿದ್ದ ವ್ಯಾಪಾರಿ–ವ್ಯವಹಾರಸ್ಥರಿಗೆ ಬೆಂಗಳೂರಿನಲ್ಲಿನ ಮಠಗಳು ಆಶ್ರಯ ತಾಣವಾಗಿದ್ದವು. ಸಾರ್ವಜನಿಕರ ಸೇವೆಗೆಂದೆ ಅನೇಕ ವೀರಶೈವ ಮಠಗಳು ಬೆಂಗಳೂರಿನ ಪೇಟೆಯಲ್ಲಿ ಸ್ಥಾಪಿತಗೊಂಡವು. ಇಲ್ಲಿ ಆಶ್ರಯ ಪಡೆದ ವರ್ತಕರು ಇಂತಹ ಮಠಗಳಿಗೆ ದೀಪಾರಾಧನೆ, ಧರ್ಮದಾಸೋಹ ನಡೆಸಲು ದಾನ–ದತ್ತಿಗಳನ್ನು ನೀಡುತ್ತಿದ್ದರು. ಬೆಂಗಳೂರಿನ ವರ್ತಕ ಸಮುದಾಯದವರು ಈ ಕಾಲಕ್ಕೆ ಸೇರಿದ ಬೆಂಗಳೂರು ಪಟ್ಟಣ, ಮತ್ತು ಹೊರಭಾಗದಲ್ಲಿ ನಿರ್ಮಿತವಾದ ಮಠಗಳು ಧಾರ್ಮಿಕ, ಸಾಮಾಜಿಕ–ರಾಜಕೀಯ ಜೀವನದಲ್ಲಿ ಕೊಟ್ಟ ಕೊಡುಗೆಗೆ ಸ್ಮಾರಕಗಳಾಗಿ ಉಳಿದಿವೆ. ಇವು ಮಠ ಮತ್ತು ಈ ವ್ಯಾಪಾರಿ ಸಮುದಾಯಗಳ ನಡುವಿನ ಸಂಬಂಧಗಳನ್ನು ತಿಳಿಸುವ ಸಾಕ್ಷಿಗಳಾಗಿವೆ.

ಇಂದು ಕಂಡುಬರುವ ಬೆಂಗಳೂರು ಪ್ರದೇಶದ ಪೇಟೆಗಳನ್ನು ಅಂದು ಬೇರೆಯ ಹೆಸರಿನಲ್ಲಿ ಗುರುತಿಸಲಾಗುತ್ತಿತ್ತು. ಉದಾಹರಣೆಗೆ, ವೀರಶೈವರ ವಿರಕ್ತ ಮಠಗಳಲ್ಲಿ ಒಂದಾಗಿರುವ ಅಕ್ಕಿಪೇಟೆಯ

ದೊಡ್ಡಮಠವನ್ನು ಹಿಂದೆ ಅರಳೆಪೇಟೆಯ ದೊಡ್ಡ ಮಠವೆಂದು ಕರೆಯಲಾಗುತಿತ್ತು. ಇದನ್ನು ೧೬ನೇ ಶತಮಾನದಲ್ಲಿ ಕೆಳದಿಯ ಅರಸನಾಗಿದ್ದ ದೊಡ್ಡ ಸಂಕಣ್ಣ ನಾಯಕನು ನಿರ್ಮಿಸಿದನು. ಕಾಲಾನಂತರದಲ್ಲಿ ಸಂಕಣ್ಣ ಎಂಬ ಪದ ಬಿಟ್ಟು ದೊಡ್ಡಮಠ ಎಂಬುದಾಗಿ ಕರೆಯಲಾಗುತಿತ್ತು. ಮಠದ ಪ್ರಮುಖ ವಿಷಯಗಳನ್ನು ಈ ಪಟ್ಟಣದ ಯಜಮಾನ್ ಶೆಟ್ಟಿ ನಿರ್ಧರಿಸುತ್ತಿದ್ದನು.[೧೦೪] ಬೆಂಗಳೂರು ಪಟ್ಟಣದ ಹಳೆಯ ಕೋಟೆಯಿಂದ ಹೊರಭಾಗದಲ್ಲಿದ್ದ ಪ್ರಮುಖ ವೀರಶೈವ ಮಠಗಳಲ್ಲಿ ಅಣ್ಣಿಪುರದ ಕೊಳದ ಮಠವೂ ಒಂದಾಗಿತ್ತು. ಈ ಮಠವು ಅಣ್ಣಿಪುರವು ಕೋಟೆಯ ದಕ್ಷಿಣಭಾಗದಲ್ಲಿದ್ದು ಜಿಗಣಿ ಬಾಗಿಲಿನ ಮಾರ್ಗದಲ್ಲಿತ್ತು. ಈ ಮಾರ್ಗವಾಗಿ ಬರುವ ವರ್ತಕರು, ರೈತರು ಮುಂತಾದ ಸಂಚಾರಿಗಳಿಗೆ ಕೊಳದಮಠದ ಮುಂಭಾಗದಲ್ಲಿ ಕೊಳ, ಅದರ ಪಕ್ಕದಲ್ಲೇ ವಿಶ್ರಾಂತಿ ಮಂಟಪಗಳಿದ್ದು ಪ್ರಯಾಸವನ್ನು ತಣಿಸಿ ಊಟೋಪಚಾರಕ್ಕಾಗಿ ವ್ಯವಸ್ಥೆ ಮಾಡಲಾಗಿತ್ತು. ಬೆಂಗಳೂರು ಪಟ್ಟಣದ ಪ್ರಸಿದ್ಧ ಮೂರು ಪೇಟೆಗಳಾದ ದೊಡ್ಡಪೇಟೆಯ ತಿಪ್ಪಶೆಟ್ಟಿ, ಮಾಮೂಲುಪೇಟೆಯ ಕೊಂಡಶೆಟ್ಟಿ, ಅರಳೆಪೇಟೆಯ ಗಂಗಶೆಟ್ಟಿ ಎಂಬ ಶ್ರೀಮಂತ ಬಣಜಿಗ ವರ್ತಕರು ಧರ್ಮಾಭಿಮಾನಿಗಳಾಗಿದ್ದು ಸಾರ್ವಜನಿಕರ ಉಪಯೊಗಕ್ಕೆಂದು ತಮ್ಮ ಹೆಸರಿನಲ್ಲಿ ಮಠಗಳನ್ನು ನಿರ್ಮಿಸಿದರು.[೧೦೫]

ಬೆಂಗಳೂರು ಪಟ್ಟಣವು ಮೈಸೂರಿನ ಒಡೆಯರ ಅಧೀನದಲ್ಲಿ ಹಲವು ಪಾರಪತ್ತೇಗಾರರ ಆಡಳಿತಕ್ಕೆ ಒಳಪಟ್ಟಿತ್ತು. ಹಾಗೇ ನಂತರದ ಕಾಲದಲ್ಲಿ ಮರಾಠರಿಂದ ಮೈಸೂರನ್ನು ರಕ್ಷಿಸಿದರ ಫಲವಾಗಿ ಹೈದರಾಲಿಗೆ ಬೆಂಗಳೂರು ಪ್ರದೇಶವು ಮೈಸೂರು ಒಡೆಯರಿಂದ ಬಳುವಳಿಯಾಗಿ ಬಂದಿತು.

## ಹೈದರ್ ಮತ್ತು ಟಿಪ್ಪುವಿನ ಕಾಲದ ಬೆಂಗಳೂರು ಪ್ರದೇಶ

ಬೆಂಗಳೂರು ಪ್ರದೇಶವು ಹೈದರ್ ಮತ್ತು ಟಿಪ್ಪುವಿನ ಕಾಲದಲ್ಲಿ ದೊಡ್ಡ ಉತ್ಪಾದನಾ ಕೇಂದ್ರವಾಗಿ ಬೆಳೆಯಿತು. ಇವರು ಚಿಕ್ಕದೇವರಾಜ ಒಡೆಯರ ನೀತಿಗಳನ್ನು ಸುಧಾರಿಸಿ, ತಮ್ಮ ಸಮಕಾಲೀರಾದ ಯುರೋಪಿಯನ್ನರ ಮಾದರಿಯಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡರು. ಅವರು ಅನುಸರಿಸಿದ ಆರ್ಥಿಕ ಮತ್ತು ಕೈಗಾರಿಕಾ ನೀತಿಗಳು ಹಾಗೂ ಬೆಂಗಳೂರಿನಲ್ಲಿ ಅವರ ಸೈನಿಕ ಕಾರ್ಯಾಚರಣೆಗಳು ಈ ಪ್ರದೇಶವನ್ನು ದಕ್ಷಿಣ ಭಾರತದಲ್ಲೇ ಒಂದು ಪ್ರಮುಖ ವ್ಯಾಪಾರ-ವಾಣಿಜ್ಯ ಕೇಂದ್ರ ಮತ್ತು ಮಿಲಿಟರಿ ಕೇಂದ್ರವನ್ನಾಗಿಸಿತು.

ಹೈದರ್ ತನ್ನ ಸಾಮರ್ಥ್ಯ ಹಾಗೂ ಚಾಣಾಕ್ಷತೆಯಿಂದ ಮೈಸೂರನ್ನು ಹಲವು ಸಂಕಷ್ಟಗಳಿಂದ ಪಾರು ಮಾಡಿದನು. ಇದರ ಫಲವಾಗಿ ನಂಜರಾಜಯ್ಯನ ಕೈಯಿಂದ ಮೈಸೂರಿನ ಅಧಿಕಾರವು ಹೈದರನ ಕೈಗೆ ಬಂತು. ಶ್ರೀರಂಗಪಟ್ಟಣದಲ್ಲಿ ಒಡೆಯರ ದಿವಾನನಾಗಿದ್ದ ಖಂಡೇರಾಯನು ಆರಂಭದಲ್ಲಿ

ಹೈದರನ ಸ್ನೇಹಿತನಾಗಿದ್ದನು. ಆದರೆ ಹೈದರನು ಪ್ರಾಬಲ್ಯಕ್ಕೆ ಬರುತ್ತಿರುವುದನ್ನು ಕಂಡು ಸಹಿಸದಾದನು. ಹೀಗಾಗಿ ಒಡೆಯರ ಮನಸ್ಸಿನಲ್ಲಿ ಹೈದರನ ವಿರುದ್ಧ ವಿಷಬೀಜವನ್ನು ಬಿತ್ತುತ್ತಿದ್ದನು. ಖಂಡೇರಾಯನ ನೇತೃತ್ವದಲ್ಲಿ ಒಡೆಯರ ಅನುಮತಿಯೊಂದಿಗೆ ಹೈದರನನ್ನು ಕುತಂತ್ರವಾಗಿ ಸೈನಿಕ ಕಾರ್ಯಾಚರಣೆಯ ಮೂಲಕ ದಮನಮಾಡಲು ಪ್ರಯತ್ನಿಸಲಾಯಿತು. ಆಗ ಹೈದರ್ ಗಂಜಾಂನಲ್ಲಿದ್ದನು. ಇದು ಶ್ರೀರಂಗಪಟ್ಟಣದ ಬಳಿ ಇದ್ದ ಒಂದು ದೊಡ್ಡ ಪೇಟೆಯಾಗಿದ್ದು, ಇದನ್ನು ಹೈದರನೇ ನಿರ್ಮಿಸಿದ್ದನು. ಅಲ್ಲಿಂದ ತಪ್ಪಿಸಿಕೊಂಡು ಹೈದರನನು ಬೆಂಗಳೂರಿಗೆ ಬಂದು, ಅಲ್ಲಿ ಅತಿ ಶ್ರೀಮಂತ ಸಾಹುಕಾರ್ ವರ್ತಕರಾದ ನಗರ್ತ, ಬಣಜಿಗ, ಕೋಮಟಿ, ಗುಜರಾತಿ, ಮಾರ್ವಾಡಿ, ಮುಲ್ತಾನಿ ಮುಂತಾದ ಪ್ರಮುಖ ವರ್ತಕರನ್ನು ಭೇಟಿಮಾಡಿದನು.[೧೦೬] ಜೊತೆಗೆ ಅವರಿಂದ ನಾಲ್ಕು ಲಕ್ಷ ರೂಪಾಯಿಯನ್ನು ಸಾಲ ಪಡೆದನು.[೧೦೭] ಈ ಹಣದಿಂದ ಆತನು ಸೈನ್ಯ ಭದ್ರಪಡಿಸಿ ದಂಡಿಕಲ್ಲ್, ಆನೇಕಲ್ ಕಿಲ್ಲೇದಾರರ ಸಹಾಯ ಮತ್ತು ನಂಜರಾಜಯ್ಯನ ಸಹಕಾರದೊಂದಿಗೆ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡನು. ಈ ಪ್ರಾಂತ್ಯದಲ್ಲಿ ಆಧುನಿಕ ಪ್ರಭುತ್ವ ಹಾಗೂ ವ್ಯಾಪಾರಿ ವರ್ಗದ ಉದ್ದೇಶಗಳು ಪರಸ್ಪರ ಹೊಂದಿಕೊಂಡಿದ್ದು ಭವಿಷ್ಯತ್ತಿನ ದೂರದೃಷ್ಟಿಕೋನ ರೂಪುಗೊಂಡಿತು. ಪ್ರಭುತ್ವ ಮತ್ತು ವರ್ತಕ ಸಮುದಾಯಗಳು ಪರಸ್ಪರ ಪ್ರಗತಿಪರ ನೀತಿಯನ್ನು ರೂಪಿಸಿ, ಊಳಿಗಮಾನ್ಯ ರಾಜನನ್ನು ವ್ಯಾಪಾರ–ವಾಣಿಜ್ಯಕ್ಕೆ ಪೂರಕನಾಗಿ ಬೆಳೆಸಿದ್ದನ್ನು ನೋಡಬಹುದಾಗಿದೆ.

ಬೆಂಗಳೂರಿನ ವರ್ತಕರು ಸರ್ವಾಧಿಕಾರಿಯಂತಿದ್ದ ಹೈದರನಿಗೆ ಸಾಲಕೊಡುವಷ್ಟು ಶ್ರೀಮಂತರಾಗಿದ್ದರು ಎಂಬುದು ಒಂದಾದರೆ, ಇನ್ನೊಂದೆಡೆ ಹೈದರ್ ಮತ್ತು ವರ್ತಕರ ನಡುವಿನ ಸಂಬಂಧವು ಇದರಿಂದ ತಿಳಿಯುತ್ತದೆ. ಕ್ರಿ.ಶ ೧೭೬೨ದಲ್ಲಿ ಶಿರಾವನ್ನು ಗೆದ್ದನು. ಇದರೊಂದಿಗೆ ಚಿಕ್ಕಬಳ್ಳಾಪುರ, ಮಡಕಸಿರಾ, ದೊಡ್ಡಬಳ್ಳಾಪುರ, ಪೆನುಕೊಂಡ ಮುಂತಾದ ಪ್ರದೇಶಗಳನ್ನು ಗೆದ್ದನು. ತನ್ನ ಸೇನೆಯ ಕೇಂದ್ರವಾಗಿದ್ದ ಬೆಂಗಳೂರಿನ ಕೋಟೆಯನ್ನು ಭದ್ರಪಡಿಸುವ ಅಗತ್ಯವಿದ್ದ ಕಾರಣ ಅದನ್ನು ಕಲ್ಲಿನಿಂದ ಪುನರ್ ನಿಮಾರ್ಣ ಮಾಡಿದನು.[೧೦೮] ಹೈದರನ ಅಕ್ರಮಣಾನೀತಿಯಿಂದಾಗಿ ಮೈಸೂರು ರಾಜ್ಯದ ವಿಸ್ತರಣೆಯು ಕರಾವಳಿ ತೀರಗಳನ್ನು ಮುಟ್ಟುವಂತಾಯಿತು. ಅಲ್ಲಿಯ ಬಂದರು ವ್ಯಾಪಾರವನ್ನೂ ತನ್ನ ಅಧೀನಕ್ಕೆ ತಂದನು. ಇದು ವಿಸ್ತಾರವಾದ ವಾಣಿಜ್ಯ–ವ್ಯಾಪಾರದ ಚಟುವಟಿಕೆಗಳು ದೂರ ದೂರ ದೇಶಗಳನ್ನು ಮುಟ್ಟುವಂತೆ ಮಾಡಿತು.

ಹೈದರನು ದೇಶೀಯ ವರ್ತಕರೊಂದಿಗೆ ಒಳ್ಳೆಯ ಸಂಬಂಧವನ್ನು ಹೊಂದಿದ್ದನು. ಅದರಂತೆಯೇ ಯುರೋಪಿನ ವರ್ತಕರೊಂದಿಗೆ ಆರಂಭದಲ್ಲಿ ಉತ್ತಮ ಸಂಬಂಧವನ್ನು ಹೊಂದಿದ್ದನು. ಷೇಕ್ ಅಲಿ ಅಭಿಪ್ರಾಯ ಪಡುವಂತೆ ಹೈದರನ ಪ್ರಾಂತ್ಯಗಳಿಂದ ಉತ್ಪಾದನೆಗೊಳ್ಳುತ್ತಿದ್ದ ವಸ್ತುಗಳಿಗೆ ಬಾಂಬೆ

ಸರ್ಕಾರವು ಗ್ರಾಹಕನಾಗಿತ್ತು. ಯಾವುದೇ ಕಾರಣಕ್ಕೂ ಹೈದರ ಅಲಿಯ ವ್ಯಾಪಾರಿ ಒಡನಾಟವನ್ನು ಬಿಡಲು ಬಯಸುತ್ತಿರಲ್ಲಿಲ್ಲ. ಹೈದರ್ ತನ್ನ ಎಲ್ಲಾ ಶ್ರೀಗಂಧದ ಮರಗಳನ್ನು ಬ್ರಿಟಿಶರಿಗೆ ಮಾರಾಟ ಮಾಡುತ್ತಿದ್ದನು. ಇದಲ್ಲದೇ ಬ್ರಿಟಿಶ್ ಕಂಪನಿಯು ಭಾರಿ ಪ್ರಮಾಣದಲ್ಲಿ ತೆಂಗಿನಕಾಯಿ, ಬೇಯಿಸಿದ ಮತ್ತು ಕಚ್ಚಾ ಅಡಿಕೆ ಇತ್ಯಾದಿ ವಸ್ತುಗಳನ್ನು ಹೈದರನ ಕಾಲದಲ್ಲಿ ಖರೀದಿಸುತ್ತಿತ್ತು. ಅದೇ ರೀತಿ ಫ್ರೆಂಚ್ ಕಂಪನಿಯೊಂದಿಗೆಯೂ ಉತ್ತಮ ಸಂಬಂಧವನ್ನು ಹೊಂದಿದ್ದನು. ಆದರೆ ಹೈದರನ ರಾಜ್ಯ ವಿಸ್ತರಣಾ ನೀತಿಯು ಬ್ರಿಟಿಶ್ ಹಾಗೂ ಮರಾಠರು, ಹೈದ್ರಾಬಾದ್‌ನ ನಿಜಾಮರಿಗೆ ಕಂಠಕ ಪ್ರಾಯವಾಗಿ ಪರಿಣಮಿಸಿತು. ಹೈದರನಿಗೆ ಫ್ರೆಂಚ್ ವರ್ತಕರೊಂದಿಗೆ ಇದ್ದ ಸ್ನೇಹ ಅವರ ಶತ್ರುಗಳಾದ ಬ್ರಿಟಿಶರಿಗೆ ಇಷ್ಟವಾಗಲಿಲ್ಲ. ಹೈದರನ ಶತ್ರುಗಳೊಂದಿಗೆ ಸೇರಿ ಬ್ರಿಟಿಶ್ ವರ್ತಕರು ಹೈದರ್‌ನನ್ನು ದಮನಮಾಡಿ ವ್ಯಾಪಾರದ ಲಾಭ ಪಡೆಯಲು ಪ್ರಯತ್ನಿಸಿ ಮೊದಲೆರಡು ಆಂಗ್ಲೋ–ಮೈಸೂರು ಕದನಗಳನ್ನು ಮಾಡಿ ಸೋಲನ್ನು ಅನುಭವಿಸಬೇಕಾಯಿತು.[೧೦೯] ಇದೇ ಕಾಲದಲ್ಲಿ ಅಂದರೆ ಎರಡನೆಯ ಆಂಗ್ಲೋ–ಮೈಸೂರು ಕದನದ ಸಂದರ್ಭದಲ್ಲಿ ಹೈದರ್ ತಂಜಾವೂರ ಮೇಲಿನ ಯುದ್ಧದಲ್ಲಿ ಅಲ್ಲಿನ ಪಟ್ಟಣದಿಂದ ಸರಕು ಉತ್ಪಾದಕ ವರ್ಗವಾದ ಮೊದಲಿಯಾರ್‌ಗಳನ್ನು ಸಂಸಾರ ಸಮೇತ ಬೆಂಗಳೂರು ಮತ್ತು ಶ್ರೀರಂಗಪಟ್ಟಣಕ್ಕೆ ಕರೆತಂದನು.[೧೧೦]

ಕ್ರಿ. ಶ ೧೭೮೨ರಲ್ಲಿ ಹೈದರ್ ಅನಾರೋಗ್ಯಕ್ಕೆ ತುತ್ತಾಗಿ ಮರಣಹೊಂದಿದಾಗ ಮೈಸೂರು ರಾಜ್ಯ ೮೦,೦೦೦ ಚದರ ಮೈಲಿನಷ್ಟು ವಿಸ್ತರಿಸಿತ್ತು. ರಾಜ್ಯದ ಆದಾಯವು ೪೪ ಲಕ್ಷ ವರಹಗಳಿಂದ ೧೧೦ ಲಕ್ಷ ವರಹಗಳಿಗೆ ಏರಿಕೆಯನ್ನು ಕಂಡಿತು. ವಿಸ್ತಾರವಾದ ರಾಜ್ಯವನ್ನು ಹೊಂದಿತ್ತು. ಅವನ ಅಧೀನದಲ್ಲಿದ್ದ ಬೆಂಗಳೂರನ್ನು ಮಿಲಿಟರಿ ಕೇಂದ್ರವಾಗಿ ಮಾಡಿದನು. ತನ್ನ ಸೈನ್ಯಕ್ಕೆ ಬೇಕಾಗುವ ಆಯುಧಗಳನ್ನು ಉತ್ಪಾದಿಸಲು ತಾರಾಮಂಡಲ ಪೇಟೆಯನ್ನು ಬೆಂಗಳೂರು ಪೇಟೆಯಲ್ಲಿ ಸ್ಥಾಪಿಸಿದನು. ಅಲ್ಲಿ ಮದ್ದುಗುಂಡು ಕಾರ್ಖಾನೆ, ಫಿರಂಗಿ ತಯಾರಿಸುವ ಕಾರ್ಖಾನೆ, ಕಬ್ಬಿಣದ ಆಯುಧಗಳನ್ನು ತಯಾರಿಸುವ ಕಾರ್ಖಾನೆಗಳು ಸ್ಥಾಪನೆಗೊಂಡವು.[೧೧೧] ಹೈದರ್ ಅಲಿಯು ಮೈಸೂರಿನ ಸೈನ್ಯವನ್ನು ಬಲಪಡಿಸುವ ಉದ್ದೇಶ ಹೊಂದಿದ್ದು ಇರಾನ್‌ದಿಂದ (ಪರ್ಷಿಯಾ) ಒಂದು ಸಾವಿರ ಕುದುರೆ ದಳವನ್ನು ನೇಮಿಸಿಕೊಂಡನು.[೧೧೨] ಈ ವಿಷಯವು ಪರ್ಷಿಯಾ ದೇಶದೊಂದಿಗೆ ವ್ಯವಹರಿಸುತ್ತಿದ್ದ ಅಂಶದೊಂದಿಗೆ ಅವನಿಗೆ ಆ ದೇಶದೊಂದಿಗೆ ಇದ್ದ ಸಂಬಂಧಗಳನ್ನು ತಿಳಿಸುತ್ತದೆ. ಆತ ಓದು ಬರಹ ತಿಳಿಯದಿದ್ದರೂ ಸಹ ಒಬ್ಬ ಒಳ್ಳೆಯ ರಾಜತಾಂತ್ರಿಕ ಮತ್ತು ಆರ್ಥಿಕ ತಜ್ಞನಾಗಿದ್ದನು. ತನ್ನ ಅಕ್ರಮಣಾನೀತಿಯಿಂದ ಕೇವಲ ರಾಜ್ಯ ವಿಸ್ತರಣೆಯನ್ನು ಮಾತ್ರ ಮಾಡದೇ ತನ್ನ ರಾಜ್ಯವನ್ನು ಒಂದು ಪ್ರಬಲ ಸಂಪನ್ಮೂಲ ರಾಜ್ಯವನ್ನಾಗಿ ಮಾಡಿದನು. ಇದು ಸಹಜವಾಗಿಯೇ ವ್ಯಾಪಾರ–ವಾಣಿಜ್ಯದ ದೃಷ್ಟಿಯಿಂದ ಬೆಂಗಳೂರು ಅಭಿವೃದ್ಧಿಯನ್ನು ಹೊಂದಲು ಕಾರಣವಾಯಿತು. ಆತ

ಯಾವುದೇ ಪ್ರದೇಶಗಳ ಮೇಲೆ ಅಕ್ರಮಣ ನೀತಿಯನ್ನು ಅನುಸರಿಸುವಾಗ ಆ ಪ್ರದೇಶದಲ್ಲಿ ನೆಲೆಸಿದ್ದ ಸರಕು ಉತ್ಪಾದನೆಯಲ್ಲಿ ಮತ್ತು ಕರಕುಶಲಕಲೆಯಲ್ಲಿ ನೈಪುಣ್ಯತೆಯನ್ನು ಹೊಂದಿದ್ದ ಉತ್ಪಾದಕ ವರ್ತಕ ಸಮುದಾಯದವರನ್ನು ಮತ್ತು ವಿನಿಮಯ ವರ್ತಕ ಸಮುದಾಯದವರನ್ನೂ ಸಹ ತನ್ನ ರಾಜ್ಯಕ್ಕೆ ಕರೆತರುತ್ತಿದ್ದನು. ಇವನ ಕಾಲದಲ್ಲಿ ತಂಜಾವೂರಿನಿಂದ ನೇಯ್ಗೆಯಲ್ಲಿ ಕೌಶಲ್ಯತೆಯುಳ್ಳ ಮೊದಲಿಯಾರ್[೧೧೩] ಮತ್ತು ರೇಷ್ಮೆ ನೇಯುವ ಪಟ್ಟೆಗಾರರನ್ನು[೧೧೪] ಕರೆತಂದು ಬೆಂಗಳೂರಿನ ಜವಳಿ ಉದ್ಯಮದ ಉತ್ಪಾದನೆಯ ಉತ್ಪನ್ನದಲ್ಲಿ ವೈವಿಧ್ಯತೆಯನ್ನು ಮೂಡಿಸಿದನೆಂದು ತಿಳಿಯುತ್ತದೆ. ಇದರಿಂದಾಗಿ ತಮಿಳುನಾಡಿನ ವ್ಯಾಪಾರಿಗಳು ಬೆಂಗಳೂರಿಗೆ ಬರುವಂತಾಯಿತು. ತೋಟಗಾರಿಕೆಯಲ್ಲಿ ಆಸಕ್ತಿಯನ್ನು ಹೊಂದಿದ್ದ ಹೈದರ್ ತೋಟಗಾರಿಕೆಯಲ್ಲಿ ಪರಿಣಿತರಾದ ತಿಗಳರನ್ನು ತಮಿಳುನಾಡಿನಿಂದ ಬೆಂಗಳೂರಿಗೆ ಕರೆ ತಂದನು.[೧೧೫] ಅಂದರೆ ಇಲ್ಲಿಯವರೆಗೆ ಈ ಮೇಲಿನ ಉತ್ಪಾದಕ–ವಿನಿಮಯ ವರ್ತಕ ಸಮುದಾಯಗಳು ಬೆಂಗಳೂರಿನಲ್ಲಿ ಇರಲ್ಲಿಲ್ಲ ಎಂದು ಅರ್ಥವಲ್ಲ. ಪ್ರದೇಶದಿಂದ ಪ್ರದೇಶಕ್ಕೆ ಸರಕು ಉತ್ಪಾದನೆಯ ಕರಕುಶಲತೆಯ ಕೌಶಲ್ಯತೆಯು ಭಿನ್ನವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಹೈದರ್ ವರ್ತಕ ಸಮುದಾಯವನ್ನು ತನ್ನ ರಾಜ್ಯಕ್ಕೆ ಕರೆತಂದು ವಾಣಿಜ್ಯ ಹಾಗೂ ಕೈಗಾರಿಕೆಗಳನ್ನು ಹಲವು ಪಟ್ಟು ಬೆಳೆಸುವ ಆಸಕ್ತಿಯನ್ನು ಹೊಂದಿದ್ದನು. ಟಿಪ್ಪು ಹೈದರ್ ಅಲಿಯ ಮರಣದ ನಂತರ ಅಧಿಕಾರಕ್ಕೆ ಬಂದನು. ತಂದೆಯ ಹಾದಿಯಲ್ಲಿಯೇ ಟಿಪ್ಪು ಮುಂದವರೆದನು. ಕ್ರಿ.ಶ ೧೭೮೫ರಿಂದ ಟಿಪ್ಪು ಸಂಪೂರ್ಣವಾಗಿ ವಿದೇಶಿ ವ್ಯಾಪಾರದ ಮೇಲೆ ತನ್ನ ಹತೋಟಿ ಸಾಧಿಸಿದನು. ಯಾವುದೇ ಕಾರಣಕ್ಕೂ ರಾಜ್ಯದ ಉತ್ಪನ್ನಗಳು ತನ್ನ ಶತ್ರುಗಳಾದ ಬ್ರಿಟಿಶ್ ವರ್ತಕರಿಗೆ ಮತ್ತು ಅವರಿಗೆ ಪೂರಕವಾಗಿ ಕಾರ್ಯವಹಿಸುವವರ ಕೈಸೇರದಂತೆ ಎಚ್ಚರವಹಿಸುವಂತೆ ಅಧೀನ ಅಧಿಕಾರಿಗಳಿಗೆ ಮತ್ತು ವರ್ತಕ ಪ್ರತಿನಿಧಿಗಳಿಗೆ ಆಜ್ಞಾಪಿಸಿದನು. ಬ್ರಿಟಿಶ್ ವರ್ತಕರಿಗೆ ತಡೆಯನ್ನು ನೀಡುವ ಮತ್ತು ಅವರನ್ನು ಎದುರಿಸುವ ನಿಟ್ಟಿನಲ್ಲಿ ಹಾಗೂ ತನ್ನ ಮಿಲಿಟರಿ ಮತ್ತು ಆರ್ಥಿಕತೆಯನ್ನು ಭದ್ರಪಡಿಸುವ ಉದ್ದೇಶದಿಂದ ಆಡಳಿತದಲ್ಲಿ ಹಲವು ಸುಧಾರಣೆಗಳನ್ನು ತನ್ನ ರಾಜ್ಯದಲ್ಲಿ ಜಾರಿಗೊಳಿಸಿದನು.[೧೧೬] ಕ್ರಿ.ಶ ೧೭೮೪ ರಿಂದ ೧೭೯೯ರವರೆಗೆ ಬೆಂಗಳೂರಿನ ಪ್ರದೇಶದಲ್ಲಿ ಮಹತ್ತರವಾದ ಬದಲಾವಣೆಯು ಸಾಮಾಜಿಕ ಮತ್ತು ಆರ್ಥಿಕ ರಂಗದಲ್ಲಿ ಏರ್ಪಟ್ಟಿತ್ತು.

ಟಿಪ್ಪು ಊಳಿಗಮಾನ್ಯ ಪದ್ಧತಿಯನ್ನು ಸಂಪೂರ್ಣವಾಗಿ ನಿರ್ಮೂಲನೆ ಮಾಡಿದನು. ಜಮೀನ್ದಾರಿ ಪದ್ಧತಿಯನ್ನು ಬುಡಸಮೇತ ಅಲ್ಲಾಡಿಸುವ ಪ್ರಯತ್ನ ಮಾಡಿದನು. ಅಂದರೆ ದೊಡ್ಡ ದೊಡ್ಡ ಜಮೀನ್ದಾರರ ಭೂಮಿಯನ್ನು ಹಿಂಪಡೆಯುವ, ಮಠಮಾನ್ಯಗಳು – ದೇವಾಲಯಗಳಿಗೆ ನೀಡಿದ್ದ ಭೂಮಿಯನ್ನು ಸರ್ಕಾರಕ್ಕೆ ಅಧೀನವಾಗಿಸಿ ಬದಲಾಗಿ ಹಣವನ್ನು ನೀಡಿದನು. ಜೊತೆಗೆ ಸಂಬಳವನ್ನು ಹಣದ ರೂಪದಲ್ಲಿ ನೀಡುತ್ತಿದ್ದು, ಭೂಮಿಯನ್ನು ನೀಡುತ್ತಿರಲಿಲ್ಲ. ಅಂದರೆ ಭೂಮಿಯನ್ನು ಸಾರ್ವಜನಿಕ

ಅಥವಾ ಸರ್ಕಾರದಡೆಗೆ ತರುವ ಪ್ರಯತ್ನವಾಗಿತ್ತು. ಇದಕ್ಕಾಗಿ ಪ್ರತಿಯೊಂದು ಗ್ರಾಮದ ಭೂಮಿಯನ್ನು ಅರವತ್ತು ಚದರಡಿಯ ತುಣುಕುಗಳಾಗಿ ವಿಂಗಡಿಸಿ ಲೆಕ್ಕಹಾಕಿ ಕಂದಾಯವನ್ನು ನಿಗದಿ ಪಡಿಸಲಾಗುತ್ತಿತ್ತು. ವಾಣಿಜ್ಯ ಬೆಳೆಗಳಿಗೆ ಹೆಚ್ಚು ಪ್ರೋತ್ಸಾಹಿಸಲಾಗಿತ್ತು. ಈ ನಿಟ್ಟಿನಲ್ಲಿ ಯುರೋಪಿಯನ್ನರ ಮಾದರಿಯಲ್ಲಿಯೇ ಕೃಷಿ ವಾಣಿಜ್ಯೀಕರಣಕ್ಕೆ ಮುಂದಾದನು. ಬೆಂಗಳೂರು ಪ್ರದೇಶದಲ್ಲಿ ಅಡಿಕೆ, ತೆಂಗು, ವೀಳ್ಯೆದೆಲೆ, ಕಬ್ಬು, ಹತ್ತಿ, ಹಿಪ್ಪುನೇರಳೆ ಬೆಳೆಗಳಿಗೆ ವಿಶೇಷ ಉತ್ತೇಜನ ನೀಡಿದನು. ಬೆಂಗಳೂರು ಮತ್ತು ಶ್ರೀರಂಗಪಟ್ಟಣದ ಲಾಲ್‌ಬಾಗ್‌ಗಳಲ್ಲಿ ವಿವಿಧ ದೇಶಗಳಿಂದ ತರಿಸಿದ ಬೀಜಗಳನ್ನು ಮತ್ತು ಸಸಿಗಳನ್ನು ನೆಟ್ಟು ಹೊಸ ಪ್ರಯೋಗಗಳನ್ನು ನಡೆಸಿದನು. ಟರ್ಕಿಯಿಂದ ಬುಲ್‌ಬುಲ್, ಗುಡ್‌ಹೋಪ್‌ನಿಂದ ಪೈನ್, ಇಂಗ್ಲೆಂಡ್‌ನಿಂದ ಓಕ್, ಮೆಕ್ಸಿಕೋನಿಂದ ಅವಕ್ಕಾಡೋ ಮುಂದಾದ ಉಪಯುಕ್ತ ಮರಗಿಡಗಳನ್ನು, ಕಿತ್ತಳೆ, ಮಾವು, ಸೇಬು, ನಿಂಬೆ, ಅಂಜೂರ, ದ್ರಾಕ್ಷಿ ಹೀಗೆ ವಿವಿಧ ರೀತಿಯ ಹಣ್ಣಿನ ಗಿಡಗಳನ್ನು ವಿದೇಶಗಳಿಂದ ತರಿಸಿ ನೆಟ್ಟು ಇಲ್ಲಿಯ ಪರಿಸರದಲ್ಲಿ ಅದನ್ನು ಬೆಳೆಯಲು ಸಾಧ್ಯವಿದೆಯೇ ಎಂದು ಪರೀಕ್ಷಿಸಿದನು.[೧೧೭] ರೇಷ್ಮೆಯನ್ನು ಅಭಿವೃದ್ಧಿ ಪಡಿಸುವ ನಿಟ್ಟಿನಲ್ಲಿ ಮಸ್ಕತ್ ಮತ್ತು ಬಂಗಾಲದಿಂದ ಹಿಪ್ಪುನೇರಳೆಯನ್ನು ತರಿಸಿ ಬೆಂಗಳೂರು,[೧೧೮] ಮೈಸೂರು ಪ್ರದೇಶಗಳಲ್ಲಿ ಬೆಳೆಸಿ ರೇಷ್ಮ ಉದ್ಯಮದಲ್ಲಿ ಅಭೂತಪೂರ್ವ ವೃದ್ಧಿಯನ್ನು ಕಂಡನು. ಲೇವಾದೇವಿಗಾರರಿಂದ ರೈತರನ್ನು ಕಾಪಾಡುವ ನಿಟ್ಟಿನಲ್ಲಿ ಅವರಿಗೆ ತೆಕ್ಕವಿಸಾಲಗಳನ್ನು ಪ್ರಭುತ್ವವೇ ನೀಡಿ ಕೃಷಿ ಚುಟಿವಟಿಕೆಯನ್ನು ಮಾಡಿಸಿದನು. ಮಣ್ಣಿನ ಫಲವತ್ತತೆ, ಮಳೆ, ಬೆಳೆಯನ್ನಾಧರಿಸಿ ತೆರಿಗೆ ನಿಗದಿಪಡಿಸಿದನು. ಬಂಜರು ಭೂಮಿಯಲ್ಲಿ ಬೇಸಾಯ ಮಾಡುವವರಿಗೆ ಪ್ರಾರಂಭದ ಹಂತದಲ್ಲಿ ತೆರಿಗೆ ಮನ್ನಮಾಡಲಾಗುತ್ತಿತ್ತು. ರೈತರಿಗೆ ಯಾವುದೇ ರೀತಿಯಲ್ಲೂ ತೊಂದರೆ ಆಗದಂತೆ ನೋಡಿಕೊಳ್ಳಬೇಕೆಂದು ಅಮಲ್ದಾರರಿಗೆ ಆಜ್ಞೆಯನ್ನು ಹೊರಡಿಸಿದನು.

ಈ ನಿಟ್ಟಿನಲ್ಲಿ ಅಮಲ್ದಾರನು ತನ್ನ ಅಧೀನದಲ್ಲಿರುವ ಪ್ರಾಂತ್ಯಗಳಲ್ಲಿರುವ ಜನರ ಜಾತಿ ಮತ್ತು ವೃತ್ತಿ, ಭೂಮಿಯ ಸ್ವರೂಪ, ನೇಗಿಲ ಸಂಖ್ಯೆ, ಕೆಲಸಗಾರರು ಇತ್ಯಾದಿ ವಿಷಯಗಳನ್ನು ಎಲ್ಲಾ ಗ್ರಾಮದ ಶ್ಯಾನುಭೋಗರಿಂದ ಸಂಗ್ರಹಿಸಿದ ವರದಿಯನ್ನು ಪಡೆದು ಪ್ರಾಂತ್ಯದ ಸಮೀಕ್ಷೆ ವರದಿಯನ್ನು ಸಿದ್ದಪಡಿಸಿ ಹುಜೂರ್‌ಗೆ ನೀಡಬೇಕಾಗಿತು.[೧೧೯] ಟಿಪ್ಪುವಿನ ನೀತಿಗಳು ರೈತರ ಪರವಾಗಿತ್ತು. ಫಲವಾಗಿ, ಕಬ್ಬು, ರೇಷ್ಮೆ, ಭತ್ತ, ಮತ್ತು ವಾಣಿಜ್ಯ ಬೆಳೆಗಳಲ್ಲಿ ವೃದ್ಧಿಯನ್ನು ಕಾಣುವಂತಾಯಿತು. ಇದು ಅವನ ರಾಜ್ಯದಲ್ಲಿ ಬಂಡವಾಳದ ಸಂಚಲನವನ್ನು ಸೃಷ್ಟಿಸಿತು. ಇವನ ಕಾಲದಲ್ಲಿ ಮೈಸೂರು ಬಂಡವಾಳಶಾಹಿ ರಾಜ್ಯವಾಗಿದ್ದ ಬಗ್ಗೆ ವಾದ ವಿವಾದಗಳು ಇವೆ. ಇಲ್ಲಿ ನಾವು ಗಮನಿಸಬೇಕಾದ್ದು ಬಂಡವಾಳದ ಸಂಚಲನ ಯಾರ ಕೈಯಲ್ಲಿತ್ತು ಎಂಬುದನ್ನು ಮಾತ್ರ. ಊಳಿಗಮಾನ್ಯ ನೀತಿಯ ನಿರ್ಮೂಲನೆಯನ್ನು ಮಾಡುವ ನಿಟ್ಟಿನಲ್ಲಿ ಟಿಪ್ಪುವಿನ ಆಡಳಿತ ಮತ್ತು ಆರ್ಥಿಕ ನೀತಿಗಳಿದ್ದವು. ಇದು ಮೈಸೂರನ್ನು ಬಂಡವಾಳಶಾಹಿ ರಾಜ್ಯವಾಗಿ ಪರಿವರ್ತನೆಗೊಳಿಸಿತು. ಆದರೆ ಬಂಡವಾಳದ

ಸಂಚಲನ ಸಾಮಾನ್ಯ ವರ್ಗಗಳಾದ ರೈತರಲ್ಲಿ, ಇನ್ನಿತರಲ್ಲಿ ಕಾಣದೇ ಅದರ ಹಿಡಿದ ಪ್ರಭುತ್ವದ್ದಾಗಿತ್ತು. ಕಾರಣ ರೈತ ಅಧಿಕ ಮಟ್ಟದಲ್ಲಿ ಬಂಡವಾಳವನ್ನು ಹೂಡುವ ಮಟ್ಟದಲ್ಲಿ ಇರಲಿಲ್ಲ. ಬಡ್ಡಿ ವ್ಯವಹಾರಿಗಳಾದ ಲೇವಾದೇವಿಗಾರರ ಮೇಲೆ ಪ್ರಭುತ್ವದ ಸಂಪೂರ್ಣ ನಿಯಂತ್ರಣವಿತ್ತು. ಹೂಡಿಕೆದಾರನಾಗಿ ಪ್ರಭುತ್ವವೇ ಕಾರ್ಯನಿರ್ವಹಿಸಿತು. ಆದ್ದರಿಂದ ರೈತನಿಗೆ ಹೆಚ್ಚುವರಿ ಉತ್ಪಾದನೆಯ ಪ್ರಶ್ನೆಯೇ ಬರುವುದಿಲ್ಲ. ಟಿಪ್ಪುವಿನ ಬಂಡವಾಳಶಾಹಿ ನೀತಿಗಳು ವ್ಯಾಪಾರ–ವಾಣಿಜ್ಯ, ಕೈಗಾರಿಕೆಗಳ ಮೇಲೆ ಸಂಪೂರ್ಣವಾಗಿ ಅಧಿಕಾರವನ್ನು ಪ್ರಭುತ್ವದ ಕೈಯಲ್ಲಿ ಕೇಂದ್ರೀಕರಿಸಿತು. ಅಧಿಕ ಬೆಲೆಬಾಳುವ ಸರಕು ಉತ್ಪನ್ನಗಳು ಮತ್ತು ಪ್ರಮುಖ ವಾಣಿಜ್ಯ ಬೆಳೆಗಳ ಮೇಲೆ ಪ್ರಭುತ್ವ ಏಕಸ್ವಾಮ್ಯವನ್ನು ಸಾಧಿಸಿತು.[೧೨೦]

ಟಿಪ್ಪು ಉತ್ಪಾದನೆ ಮತ್ತು ಉದ್ಯಮದಲ್ಲಿ ತೊಡಗುವ ನಿಟ್ಟಿನಲ್ಲಿ ಅತೀವ ಆಸಕ್ತಿಯನ್ನು ಹೊಂದಿದ್ದನು. ಸಂಪೂರ್ಣವಾಗಿ ಟಿಪ್ಪುವಿನ ನಿಯಂತ್ರಣದಲ್ಲಿದ್ದ ಉತ್ಪಾದನೆ ಮತ್ತು ಕೈಗಾರಿಕ ಪ್ರದೇಶವನ್ನು ತಾರಾಮಂಡಲವೆಂದು ಕರೆಯಲಾಗುತಿತ್ತು. ಇಲ್ಲಿ ಗನ್, ಕೋವಿ, ಪೇಪರ್, ಖಡ್ಗ, ಕುಡುಗತ್ತಿ, ಕಠಾರಿ, ಫಿರಂಗಿ ಇತ್ಯಾದಿಗಳನ್ನು ಉತ್ಪಾದಿಸಲಾಗುತ್ತಿತ್ತು. ಖಾಸಗಿ ಒಡೆತನದಲ್ಲಿ ಕೆಲವು ಉದ್ಯಮಗಳಿದ್ದರೂ ಸಹ ಅವರು ಟಿಪ್ಪುವಿನ ಬಂಡವಾಳವನ್ನು ಎದುರು ನೋಡುವ ಪರಿಸ್ಥಿತಿಯಿತ್ತು. ಈ ಉದ್ಯಮಿಗಳು ಪ್ರಭುತ್ವದಿಂದ ನೇಮಿಸಲ್ಪಟ್ಟ ಅಧಿಕಾರಿಗಳ ಸಂಪೂರ್ಣ ನಿಯಂತ್ರಣಕ್ಕೆ ಒಳಗಾಗಿದ್ದರು.[೧೨೧] ತನ್ನ ರಾಜ್ಯದಲ್ಲಿ ಉತ್ಪಾದಿಸಲ್ಪಡುವ ಸರಕು ಉತ್ಪನ್ನಗಳಲ್ಲಿ ಉತ್ತಮ ಗುಣಮಟ್ಟ ಕಾಯ್ದಿರಿಸುವ ನಿಟ್ಟಿನಲ್ಲಿ ತಯಾರಿಕಾ ಮಾದರಿ ಮತ್ತು ತಾಂತ್ರಿಕತೆಯ ನೈಪುಣ್ಯತೆಯನ್ನು ತನ್ನ ರಾಜ್ಯದ ಕಾರ್ಮಿಕರಲ್ಲಿ ಮೂಡಿಸುವ ಉದ್ದೇಶದಿಂದ ಟಿಪ್ಪು ಫ್ರಾನ್ಸ್, ಕಾನ್‌ಸ್ಟ್ಯಾಂಟಿನೋಪಲ್, ಮಸ್ಕತ್, ಇರಾನ್ (ಪರ್ಷಿಯಾ) ಚೀನ ದೇಶಗಳಿಂದ ಕರಕುಶಲಕರ್ಮಿಗಳನ್ನು ಕಳುಹಿಸಿಕೊಡುವಂತೆ ಪತ್ರ ಬರೆದು ತನ್ನ ರಾಯಬಾರಿಗಳನ್ನು ಕಳುಹಿಸಿಕೊಟ್ಟನು.[೧೨೨] ಅದರಂತೆ ೧೭೮೪ರಲ್ಲಿ ಮೊದಲ ಬಾರಿಗೆ ಟರ್ಕಿಗೆ ತನ್ನ ರಾಯಬಾರಿಯನ್ನು ಕಳುಹಿಸಿಕೊಟ್ಟನು. ಕೆಲವು ಚೀನಿಯರು, ಫ್ರೆಂಚ್ ಕರ ಕುಶಲಕರ್ಮಿಯರು ಮೈಸೂರು ರಾಜ್ಯಕ್ಕೆ ಬಂದು ಶಸ್ತ್ರಾಸ್ತ್ರಗಳ ತಯಾರಿಕೆ ಮತ್ತು ಸಕ್ಕರೆ ತಯಾರಿಕೆಯಲ್ಲಿ ತೊಡಗಿಕೊಂಡಿದ್ದರು. ೧೭೮೮ರಲ್ಲಿ ಫ್ರಾನ್ಸಿನ ಕಸಬುಗಾರರನ್ನು ಹಾಗೂ ಕಾರ್ಮಿಕರನ್ನು ಹದಿನಾರನೆಯ ಲೂಯಿ ಕಳುಹಿಸಿಕೊಟ್ಟನು.[೧೨೩] ಟರ್ಕಿಯ ಸುಲ್ತಾನನು ಕರಕುಶಲಕರ್ಮಿಗಳನ್ನು ಕಳುಹಿಸಿಕೊಟ್ಟನು. ವ್ಯಾಪಾರ–ವಾಣಿಜ್ಯದ ದೃಷ್ಟಿಯಿಂದ ನೌಕೆಯನ್ನು ತಯಾರಿಸಲು ಬಯಸಿದ ಮೊದಲ ದೊರೆಯಾಗಿದ್ದನು.

ಇದಲ್ಲದೇ ಹತ್ತಿ ಮತ್ತು ರೇಷ್ಮೆಯಿಂದ ದಾರ ತೆಗೆಯುವ ಕೈಗಾರಿಕೆ, ಜವಳಿ ಉದ್ಯಮ, ಬಟ್ಟೆಗೆ ಬಣ್ಣ ಹಾಕುವ ಕೈಗಾರಿಕೆ, ವಿವಿಧ ರೀತಿಯ ತೈಲ ತಯಾರಿಕೆಯ ಕೈಗಾರಿಕೆ, ನೀಲಿ ಬಣ್ಣದ ತಯಾರಿಕೆ, ಗೋಣಿ ಚೀಲ ತಯಾರಿಕೆಯ ಕೈಗಾರಿಕೆ, ನೇಕಾರಿಕೆ, ಲಾಲ್‌ಬಾಗ್‌ನಲ್ಲಿ ವಿವಿಧ ರೀತಿಯ

ಔಷಧಿಯ ಗಿಡಗಳ ಆಧಾರದ ಮೇಲೆ ಈ ಪ್ರದೇಶದಲ್ಲಿ ಔಷಧಿಗಳ ತಯಾರಿಕೆ, ಬಿದರಿ ಕಲೆಯುಳ್ಳ ಕರಕುಶಲ ವಿಲಾಸಿವಸ್ತುಗಳು, ಮನೆಗೆ ಬೇಕಾಗುವ ವಸ್ತುಗಳ ಕೈಗಾರಿಕೆ, ಮಣ್ಣಿನ ವಸ್ತುಗಳ ಕೈಗಾರಿಕೆ, ಬೆಲ್ಲದ ಕೈಗಾರಿಕೆ, ಚರ್ಮದ ಕೈಗಾರಿಕೆ, ಆಭರಣದ ಕೈಗಾರಿಕೆ ಇತ್ಯಾದಿ ಕೈಗಾರಿಕೆಗಳು ಬೆಂಗಳೂರು ಪರಿಸರದಲ್ಲಿದ್ದವು. ವಿವಿಧ ಕೈಗಾರಿಕೆಯಲ್ಲಿ ತೊಡಗಿದ್ದ ಕಸುಬುದಾರರು ಮತ್ತು ಕರಕುಶಲಕರ್ಮಿಗಳು ಸಾಮಾನ್ಯವಾಗಿ ತಮ್ಮ ತಮ್ಮ ಮನೆಯಲ್ಲಿಯೇ ಕಾರ್ಯನಿರ್ವಹಿಸುತ್ತಿದ್ದರು. ತಮ್ಮ ಕೈಗಾರಿಕೆಗೆ ಬೇಕಾದ ವಸ್ತುಗಳನ್ನು ಹತ್ತಿರದ ಸ್ಥಳಗಳಿಂದ ಪಡೆದು ವಾರದ ಸಂತೆ ಅಥವಾ ಮಾರುಕಟ್ಟೆಗಳಲ್ಲಿ ಮಾರಾಟ ಮಾಡುತ್ತಿದ್ದರು. ವೃತ್ತಿಯು ವಂಶಪರಂಪರೆಯಾಗಿ ತಂದೆಯಿಂದ ಮಗನಿಗೆ ಮುಂದುವರೆಯುತ್ತಿತ್ತು.[೧೨೪] ವಿವಿಧ ಉತ್ಪಾದಕ–ವಿನಿಮಯ ವರ್ತಕ ಸಮುದಾಯದವರಾದ ಪಂಚಮ ಬಣಜಿಗರು, ಖಿತ್ರಿಯರು, ಪಟ್ಟೆಗಾರರು, ದರ್ಜಿಗಳು, ಗೋಸಾಯಿಗಳು, ದೇವಾಂಗರು, ಸಾಮ್ಯಸಾಲಿ, ಗಾಣಿಗರು, ತೆಲಿಗ ಬಣಜಿಗರು, ನೀಲಿಗರು, ಮಾದಿಗರು, ಕುಂಬಾರರು, ಪದ್ಮಶಾಲಿಯರು, ಉಪ್ಪಾರರು, ಕೋಮಟಿಗಳು, ಗುಜರಾತಿಯರು, ಬನಿಯಾರು, ನಗರ್ತರು, ಮಾರ್ವಾಡಿಯರು ಮೊದಲಾದವರು[೧೨೫] ಈ ಪ್ರದೇಶದಲ್ಲಿ ನೆಲೆಸಿದ್ದು ತಮ್ಮ ತಮ್ಮ ಕುಲಕಸಬಿನಲ್ಲಿ ತೊಡಗಿಸಿಕೊಂಡಿದ್ದರು. ಇದು ಉತ್ಪಾದನೆಯಲ್ಲಿ ವೈವಿಧ್ಯತೆಯನ್ನು ಸೃಷ್ಟಿಸಲು ಕಾರಣವಾಯಿತು.

ಬೆಂಗಳೂರು ಹಲವಾರು ರಾಜ್ಯಗಳೊಂದಿಗೆ ವ್ಯಾಪಾರ–ವಾಣಿಜ್ಯದ ಸಂಬಂಧವನ್ನು ಹೊಂದಿತ್ತು. ಮಂಗಳೂರು, ಆರ್ಕಾಟ್, ಪುಣೆ, ಮುಂಬಯಿ, ಹೈದರಾಬಾದ್, ಧಾರವಾಡ, ಹುಬ್ಬಳ್ಳಿ, ನರಗುಂದ, ಕಲ್ಲಿಕೋಟೆ, ಬರ್ಹಾಮಪುರ ಮೊದಲಾದ ರಾಜ್ಯಗಳೊಂದಿಗೆ ವ್ಯವಹರಿಸುತಿತ್ತು. ಸಗಟು ವ್ಯಾಪಾರಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡಲಾಗಿತ್ತು. ಭಾರಿ ಮೊತ್ತದಲ್ಲಿ ವಿವಿಧ ಮತ್ತು ವೈವಿಧ್ಯತೆಯಿಂದ ಕೂಡಿದ ಸೀರೆಗಳು, ಪಂಚೆ ಧೋತ್ರಗಳು, ರೇಷ್ಮೆ ಬಟ್ಟೆಗಳು ಮೊದಲಾದ ಜವಳಿ ಉತ್ಪನ್ನಗಳನ್ನು ರಫ್ತು ಮಾಡಲಾಗುತ್ತಿತ್ತು. ಇಲ್ಲಿನ ಜವಳಿ ವಾಣಿಜ್ಯವು ಪ್ರಧಾನವಾಗಿ ನಾಲ್ಕು ವರ್ತಕ ಸಮುದಾಯದವರಿಗೆ ಒಳಪಟ್ಟಿತ್ತು. ಬಣಜಿಗರು ಜವಳಿ ಉತ್ಪಾದನೆಯಲ್ಲಿ ತೊಡಗಿಸಿಕೊಂಡಿದ್ದು, ಕಚ್ಚ ಹತ್ತಿ, ರೇಷ್ಮೆ ಎಳೆಗಳ ತಯಾರಿಕೆಯಲ್ಲಿದ್ದು ನೂಲನ್ನು ನೇಕಾರರಿಗೆ ಮುಂಗಡವಾಗಿ ನೀಡುತ್ತಿದ್ದರು. ತೆಲುಗು ಬಣಜಿಗರು ಹತ್ತಿ ದಾರ ಮತ್ತು ಉಣ್ಣೆಯಿಂದ ನೂಲನ್ನು ಉತ್ಪಾದಿಸುತ್ತಿದ್ದರು, ಕೋಮಟಿಗರಿಗೆ ಇದೂ ಒಂದು ವಾಣಿಜ್ಯದ ಸರಕಾಗಿತ್ತು. ನಗರ್ತರು ಸಿದ್ಧ ಬಟ್ಟೆಯನ್ನು ಚಿಲ್ಲರೆಯಾಗಿ ಮಾರಾಟ ಮಾಡುತ್ತಿದ್ದರು.[೧೨೬]

ಇದಷ್ಟೇ ಅಲ್ಲದೆ, ಅಡಿಕೆ, ಶ್ರೀಗಂಧ, ಕರಿ ಮೆಣಸು, ಏಲಕ್ಕಿ, ಸೀಗೆಕಾಯಿ, ಹುಣಿಸೇಹಣ್ಣು, ಕಲ್ಲುಸಕ್ಕರೆ, ಜಾಯಿಕಾಯಿ, ಕಬ್ಬಿನ ಬೆಲ್ಲ, ತುಪ್ಪ, ಬೆಣ್ಣೆ ಮುಂದಾದ ಉತ್ಪನ್ನಗಳು ಸಹ ಸೇರ್ಪಡೆಯಾಗಿತ್ತು.

ಉಪ್ಪು, ಗಂಧಕ, ಸೀಸ, ತವರ, ತಾಮ್ರ, ಗೋಂದು, ಕರ್ಪೂರ, ಗಾಜಿನ ಸಾಮಾನುಗಳನ್ನು ಸಗಟಾಗಿ ಆಮದು ಮಾಡಿಕೊಂಡು ಸುತ್ತಮುತ್ತಲ ಊರುಗಳಿಗೆ ಮಾರಾಟ ಮಾಡಲಾಗುತ್ತಿತ್ತು.

೧೭-೧೮ನೇ ಶತಮಾನಕ್ಕೆ ಸೇರಿದ ದೇವಾಲಯಗಳನ್ನು ವಿವಿಧ ವರ್ಗಕ್ಕೆ ಸೇರಿದ ಉತ್ಪಾದಕ-ವಿನಿಮಯ ವರ್ತಕ ಸಮುದಾಯದವರಾದ ಬ್ರಾಹ್ಮಣರು, ಅಕ್ಕಸಾಲಿಯರು, ಜವಳಿ ವ್ಯಾಪಾರಿಗರು, ತಿಗಳರು, ರಜಪೂತರು, ಬಲಿಜ ವರ್ತಕರು, ದಾಸರು, ಗುಜರಾತಿ ಬ್ರಾಹ್ಮಣರು, ಗಾಜಲವರು, ಲಾಲದಾಸನೆಂಬ ಲೇವಾದೇವಿ ವರ್ತಕ, ಕೆರೆ ಅಗೆಯುವವರು, ಲೋಡರು, ನೇಕಾರರು, ಬನಿಯಾರು ಬೆಂಗಳೂರು ಪೇಟೆಬೀದಿಗಳಾದ ನಗರ್ತಪೇಟೆ, ಅರಳೆಪೇಟೆ, ದೊಡ್ಡಪೇಟೆ ಮತ್ತು ಮಾಮೂಲು ಪೇಟೆಗಳಲ್ಲಿ ಒಟ್ಟು ನಲವತ್ತನಾಲ್ಕು ದೇವಾಲಯಗಳನ್ನು ನಿರ್ಮಿಸಿದ್ದರು.[೧೨೭] ಅರಸರಿಗೆ ಸಮನಾಗಿ ದೇವಾಲಯಗಳನ್ನು ನಿರ್ಮಿಸಿದ್ದರು ಎಂದರೆ ಅವರಿಗೆ ಪ್ರಭುತ್ವದೊಂದಿಗೆ ಇದ್ದ ಸಂಬಂಧವನ್ನು ಮತ್ತು ಅವರ ಸ್ಥಾನಮಾನಗಳನ್ನು ತಿಳಿಯಬಹುದು. ನಾಲ್ಕು ಬೀದಿಗಳಲ್ಲಿ ವಿವಿಧ ಸಮುದಾಯಕ್ಕೆ ಸೇರಿದ ನಲವತ್ತನಾಲ್ಕು ದೇವಾಲಯಗಳು ಈ ವರ್ತಕ ಸಮುದಾಯದವರ ನಡುವಿನ ಸಾಮರಸ್ಯದ ಬದುಕನ್ನು ತಿಳಿಸುತ್ತದೆ. ಅದರಲ್ಲಿ ಬಣಜಿಗರು ಹೆಚ್ಚು ದೇವಾಲಯಗಳನ್ನು ನಿರ್ಮಿಸಿದ್ದರು. ಬೆಂಗಳೂರು ಪಟ್ಟಣ ಪ್ರದೇಶದಲ್ಲಿ ಬಣಜಿಗರು ಅಧಿಕ ಸಂಖ್ಯೆಯಲ್ಲಿ ಇದ್ದರೆಂದು ತಿಳಿಯುತ್ತದೆ. ಇವರು ಆರ್ಥಿಕವಾಗಿ ಹಾಗೂ ರಾಜಕೀಯವಾಗಿ ಪ್ರಾಬಲ್ಯತೆ ಪಡೆದ ವರ್ತಕ ಸಮುದಾಯದವರಾಗಿದ್ದರೆಂದು ಅರಿವಾಗುತ್ತದೆ.

ಟಿಪ್ಪು ಸ್ಥಳೀಯ ವರ್ತಕ ಸಮುದಾಯಗಳೊಂದಿಗೆ ಉತ್ತಮ ಸಂಬಂಧಗಳನ್ನು ಹೊಂದಿದ್ದನು. ಹೈದರ್‌ನು ಒಮ್ಮೆ ಮಳವಳ್ಳಿಯ ಅಧಿಕಾರಿಯಾಗಿದ್ದ ಸಂದರ್ಭದಲ್ಲಿ ಚಿತ್ರದುರ್ಗದ ಮೇಲೆ ಅಕ್ರಮಣ ಮಾಡುವುದಕ್ಕಾಗಿ ಟಿಪ್ಪುನನ್ನು ಕಳುಹಿಸಿಕೊಟ್ಟನು. ಆದರೆ ಟಿಪ್ಪು ಆ ಪ್ರದೇಶವನ್ನು ಗೆಲ್ಲದೇ ಅಲ್ಲಿಂದ ಹಿಂದಕ್ಕೂ ಬರದೇ ಭಾರೀ ನಷ್ಟವನ್ನುಂಟು ಮಾಡಿದನು. ಇದರಿಂದ ಕೊಪಗೊಂಡ ಹೈದರ್ ಜಹಗೀರಿ ಪಟ್ಟವನ್ನು ಹಿಂದಕ್ಕೆ ಪಡೆದಾಗ ಟಿಪ್ಪುವಿಗೆ ಹೈದರನ ವಿರುದ್ಧವಾಗಿ ಸಹಾಯ ಮಾಡಿದ ಶ್ರೀಮಂತ ವರ್ತಕರಾದ ಶಂಕರಶೆಟ್ಟಿ, ಅನ್ನದಾನಶೆಟ್ಟಿ, ನರಸಶೆಟ್ಟರಿಗೆ ತಲಾ ೨೪ ಸಾವಿರ ವರಹ ದಂಡ ವಿಧಿಸಿದನು.[೧೨೮] ಇದು ಟಿಪ್ಪು ಅಧಿಕಾರಕ್ಕೆ ಬರುವ ಪೂರ್ವದಲ್ಲಿಯೇ ವರ್ತಕ ಸಮುದಾಯಗಳೊಂದಿಗೆ ಆತ ಹೊಂದಿದ್ದ ಉತ್ತಮ ಸಂಬಂಧವನ್ನು ತಿಳಿಸುತ್ತದೆ. ತಂದೆಯ ಮರಣದ ನಂತರ ಅಧಿಕಾರವಹಿಸಿದ ಟಿಪ್ಪು ಬ್ರಿಟಿಶ್ ವರ್ತಕರ ವಿರುದ್ಧವಾದ ವಾಣಿಜ್ಯನೀತಿಯಿಂದಾಗಿ ನಿಜಾಮನ ಪ್ರದೇಶದ ವರ್ತಕರನ್ನು ನಿಷೇದಿಸಿದನು. ತನ್ನ ವಿರೋಧಿಗಳಿಗೆ ತನ್ನ ರಾಜ್ಯದ ವಸ್ತುಗಳನ್ನು ಮಾರಾಟ ಮಾಡಬಾರದೆಂದು ತಿಳಿಸಿದನು. ಆದರೆ ಕೆಲವು ವರ್ತಕರು ಟಿಪ್ಪುವಿನ ಅಧಿಕಾರಿಗಳಿಗೆ ಮೋಸ ಮಾಡಿ ವ್ಯಾಪಾರ ಮಾಡುತ್ತಿದ್ದರು.[೧೨೯]

೧೭೮೭ರಲ್ಲಿ ಮರಾಠರೊಂದಿಗೆ ಯುದ್ಧವಾದಾಗ ಬೆಂಗಳೂರಿನ ಉದ್ಯಮಕ್ಕೆ ಯಾವುದೇ ತೊಂದರೆಯಾಗಲಿಲ್ಲ. ಕಾರಣ ಶ್ರೀಮಂತ ವ್ಯಾಪಾರಿಗಳು ಟಿಪ್ಪುವಿಗೆ ಯುದ್ಧದ ಸಂದರ್ಭದಲ್ಲಿ ಹಣವನ್ನು ಸಾಲವಾಗಿ ಕೊಡುತ್ತಿದ್ದರು.[೧೩೦] ಕ್ರಿ.ಶ ೧೭೯೦–೧೭೯೨ರಲ್ಲಿ ನಡೆದ ಮೂರನೆಯ ಆಂಗ್ಲೋ–ಮೈಸೂರು ಕದನದ ಸಂದರ್ಭದಲ್ಲಿ ಕಾರ್ನ್‌ವಾಲೀಸ್ ಬೆಂಗಳೂರನ್ನು ಗೆಲ್ಲಲು ಅವನಿಗೆ ಕೆಲವು ವರ್ತಕರು ಸಹಕರಿಸಿದರು. ಬಹುಶ: ವರ್ತಕರಿಗೆ ಪ್ರಭುತ್ವ ಆರ್ಥಿಕ ಚಟುವಟಿಕೆಗಳಲ್ಲಿ ಏಕಸ್ವಾಮ್ಯವನ್ನು ಸಾಧಿಸಿ ವರ್ತಕ ಸಮುದಾಯದ ಮೇಲೆ ನಿಯಂತ್ರಣ ಹೊಂದಲು ಪ್ರಯತ್ನಿಸುತ್ತಿದ್ದುದು ಇಷ್ಟವಿರಲ್ಲಿಲ್ಲವೆಂದು ತೋರುತ್ತದೆ. ಹೋಮ್ ಎಂಬಾತ ತನ್ನ 'ಸೆಲೆಕ್ಟ್ ವ್ಯೂವ್ ಆಫ್ ಮೈಸೂರು' ಕೃತಿಯಲ್ಲಿ ಬೆಂಗಳೂರು ಪೇಟೆ ವಿಸ್ತೀರ್ಣವು ೬೦೦೦ ಅಡಿ ಉದ್ದ ಮತ್ತು ೭೫೦ ಅಡಿ ಅಗಲವಾಗಿತ್ತು ಎಂದು ಹೇಳಿದ್ದಾನೆ.[೧೩೧] ಬೆಂಗಳೂರು ಏಳು ಮುಖ್ಯ ಹೆದ್ದಾರಿ ಸಂಪರ್ಕವನ್ನು ಹೊಂದಿತ್ತು. ಅವುಗಳೆಂದರೆ., ಬಿದನೂರು, ಶ್ರೀರಂಗಪಟ್ಟಣ, ಚಿತ್ರದುರ್ಗ, ಪೆನುಕೊಂಡಾ, ತದಿಮೇರಿ, ಕೋಲಾರ ಹಾಗೂ ಮಾಲೂರು ಪ್ರದೇಶಗಳು.[೧೩೨] ಈ ಕದನದ ವಿಷಯವನ್ನು ಮೊದಲೇ ಗ್ರಹಿಸಿದ್ದ ಕೆಲವು ವರ್ತಕರು ಬೆಂಗಳೂರನ್ನು ತೊರೆದರು. ಯುದ್ಧವಾದ ನಂತರ ಬೆಂಗಳೂರು ಒಂದು ವರ್ಷ ಕಾರ್ನ್‌ವಾಲೀಸ್‌ನ ಅಧೀನದಲ್ಲಿತ್ತು. ಕ್ರಿಶ ೧೭೯೧ರಲ್ಲಿ ಬೆಂಗಳೂರಿನ ಕೆಂಪೇಗೌಡನಿಂದ ನಿರ್ಮಿತವಾದ ಕೋಟೆಯ ವಿಸ್ತಿರ್ಣಾ ೧೮೪ ಹೆಕ್ಟೇರು ಮತ್ತು ಮೊಟ್ಟೆಯಾಕಾರದ ಕೋಟೆಯ ವಿಸ್ತಿರ್ಣಾ ೧೨ ಹೆಕ್ಟೇರುಗಳಾಗಿದ್ದು, ಇದರ ಒಟ್ಟು ಜನಸಂಖ್ಯೆ ಸುಮಾರು ೮೦ ಸಾವಿರಗಳಷ್ಟಿದ್ದರು.[೧೩೩] ಈ ಸಂದರ್ಭದಲ್ಲಿ ಅವನು ಕೆಲವು ವರ್ತಕರನ್ನು ತನ್ನ ರಾಜ್ಯದಲ್ಲಿ ಬಂದು ನೆಲೆಸುವಂತೆ ತಿಳಿಸಿದನು. ಶ್ರೀರಂಗಪಟ್ಟಣ ಒಪ್ಪಂದ ಏರ್ಪಟ್ಟ ನಂತರ ಬೆಂಗಳೂರು ಪ್ರದೇಶವನ್ನು ಟಿಪ್ಪುವಿಗೆ ನೀಡಲಾಯಿತು.

ಬ್ರಿಟಿಶರೊಂದಿಗೆ ಸ್ನೇಹದಿಂದ ಇದ್ದ ವರ್ತಕರಿಗೆ ಟಿಪ್ಪು ತೊಂದರೆ ನೀಡಿದನು. ಹಲವರನ್ನು ಬಂಧನದಲ್ಲಿ ಇಟ್ಟನು.[೧೩೪] ಕ್ರಿಶ ೧೭೯೩–೯೪ರಲ್ಲಿ ಟಿಪ್ಪು ವಾಣಿಜ್ಯ ನೀತಿಯನ್ನು ಜಾರಿಗೊಳಿಸಿದನು. ಇವನ ವಾಣಿಜ್ಯ ನೀತಿಯಲ್ಲಿ ಆಂತರಿಕ ಮತ್ತು ವಿದೇಶ ವ್ಯಾಪಾರ–ವಾಣಿಜ್ಯಗಳಿಗೆ ಸಂಬಂಧಿಸಿದಂತೆ ಹಲವು ನಿಯಮಗಳಿದ್ದವು. ಇದನ್ನು ತನ್ನ ರಾಜ್ಯದಲ್ಲಿರುವ ಎಲ್ಲ ಅಧಿಕಾರಿಗಳು, ವರ್ತಕರು ಸಹ ಕರಾರುವಕ್ಕಾಗಿ ಪರಿಪಾಲನೆಯನ್ನು ಮಾಡಬೇಕಾಗಿತ್ತು. ಒಂದು ವೇಳೆ ಅಧಿಕಾರಿಗಳು ಹಾಗೂ ವರ್ತಕರು ಅದಕ್ಕೆ ತಪ್ಪಿ ನಡೆದರೆ ಶಿಕ್ಷೆಗೆ ಗುರಿಪಡಿಸಲಾಗುತ್ತಿತ್ತು.[೧೩೫] ನಿಧಾನಗತಿಯಲ್ಲಿ ವ್ಯಾಪಾರ ಚೇತರಿಕೆಯನ್ನು ಹೊಂದುತ್ತಿದ್ದಂತೆ ೧೭೯೯ರಲ್ಲಿ ನಾಲ್ಕನೆಯ ಆಂಗ್ಲೋ–ಮೈಸೂರು ಕದನ ಆರಂಭವಾಯಿತು. ಟಿಪ್ಪುವಿನ ಮರಣದ ನಂತರ ಈ ಪ್ರದೇಶವು ಪರೋಕ್ಷವಾಗಿ ಬ್ರಿಟಿಶರ ಅಧೀನಕ್ಕೆ ಒಳಪಟ್ಟಿತು.

## ಕೊನೆ ಟಿಪ್ಪಣಿಗಳು

೧. ಮೋಹನ್‌ಕೃಷ್ಣ ರೈ ಕೆ., ೨೦೦೪, **ಪ್ರಭುತ್ವ ಮತ್ತು ಜನತೆ**, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ. ಪು.೮೪.

೨. ಚಂದ್ರಶೇಖರ್ ಎಚ್., ೨೦೧೩, ಬೆಂಗಳೂರು ನಗರ ವಲಯದ ಭೂವಿಜ್ಞಾನ, ಆರ್. ಗೋಪಾಲ್(ಸಂ)., **ಬೆಂಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ**, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು. ಪು.೨.

೩. ಅದೇ, ಪ.೩

೪. ಅದೇ, ಪು.೨

೫. ಆನಂತರಾಮು ಟಿ. ಆರ್., ೨೦೦೫, ಭೂಗೋಳ ಮತ್ತು ಭೂ ವಿಜ್ಞಾನ, ಸೂರ್ಯನಾಥ್ ಕಾಮತ್ (ಸಂ)., **ಬೆಂಗಳೂರು ದರ್ಶನ ಸಂ–೧**, ಉದಯಭಾನು ಕಲಾಸಂಘ, ಬೆಂಗಳೂರು, ಪು.೧.

೬ ಬೂದಿಹೊಲ ಅಥವಾ ಬೂದಿಗುಡ್ಡ ಎಂದರೆ ಪ್ರಾಣಿಗಳ ಸಗಣಿ ಅಥವಾ ಬೆರಣಿಯನ್ನು ಸುಟ್ಟ ಬೂದಿ ರಾಶಿ. ಬಹುತೇಕವಾಗಿ ನದಿ ಜಲಾನಯನ ಪ್ರದೇಶದಲ್ಲಿ ಬೂದಿ ಗುಡ್ಡಗಳು ಅಧಿಕವಾಗಿ ದೊರೆಯುತ್ತವೆ. ಇವು ಜನಸಮೂಹದ ಕೊಟ್ಟಿಗೆಗಳಾಗಿದ್ದು ಮಡಿಕೆಗಳನ್ನು ಸುಡುವ, ಇಟ್ಟಿಗೆ ತಯಾರಿಸುವ ಮತ್ತು ಶಿಲಾಯುಧಗಳನ್ನು ನಯಗೊಳಿಸುವ ಸಾಧನಗಳನ್ನು ತಯಾರಿಸುವ ಕಾರ್ಯಾಗಾರಗಳಾಗಿದ್ದವು. ಅಂದರೆ ನವಶಿಲಾಯುಗದ ಕಾಲಕ್ಕೆ ಪಶು ಸಂಗೋಪನೆ ಮತ್ತು ಕೃಷಿ ಬದುಕು ವಿಸ್ತಾರಗೊಂಡಿರುವುದನ್ನು ಹಾಗೂ ಗ್ರಾಮೀಣ ಬದುಕನ್ನು ಸೂಚಿಸುತ್ತದೆ.

೭ ಸೂರ್ಯನಾಥ್ ಯು. ಕಾಮತ್(ಸಂ)., **ಪೂರ್ವೋಕ್ತ**, ಪು.೬.

೮. ಪುಟಪ್ರಕಾಶ್ ಬಿ.ಕೆ., ೨೦೦೫, **ಪ್ರಾಚೀನ ಕರ್ನಾಟಕದಲ್ಲಿ ವ್ಯಾಪಾರ ಮತ್ತು ವಾಣಿಜ್ಯ (ಹೊಯ್ಸಳ ಕಾಲದವರೆಗೆ)**, ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ, ಮೈಸೂರು. ಪು.೨೦.

೯. ಅದೇ, ಪು.೨೬.

೧೦. ಜಯಪ್ಪಗೌಡ ಡಿ.ಎಸ್., ೧೯೮೩, **ಕರ್ನಾಟಕದ ಕಡಲಾಚೆಯ ಸಂಪರ್ಕಗಳು**, ಶುಭೋದಯ ಪ್ರಕಾಶನ, ಮೈಸೂರು, ಪು.೮೧–೮೬.

೧೧. ಕೊಸಂಬಿ ಡಿ. ಡಿ., ೨೦೧೧, **ಪ್ರಾಚೀನ ಭಾರತದ ಸಂಸ್ಕೃತಿ ಮತ್ತು ನಾಗರಿಕತೆ ಚಾರಿತ್ರಿಕ ರೂಪುರೇಶೆ,** ವೇಣುಗೋಪಾಲ್ ಟಿ.ಎಸ್., ಶೈಲಜಾ(ಅನು), ೨೦೦೧, ಚಿಂತನ ಪುಸ್ತಕ, ಬೆಂಗಳೂರು, ಪು.೨೯೮.

೧೨. ಅದೇ, ಪು.೨೯

೧೩. ಸುಂದರ ಅ., ೧೯೮೯, **ಆನ್ಯೂವೆಲ್ ರಿಪೋರ್ಟ್ಸ್ ಆಫ್ ದಿ ಆರ್ಕ್ಯಾಲಾಜಿಕಲ್ ಡಿಪಾರ್ಟ್ ಮೆಂಟ್ ಫಾರ್ ದಿ ಈಯರ್ಸ್ ೧೮೮೪–೧೯೦೫,** ಡೈರೆಕ್ಟರೇಟ್ ಆಫ್ ಆರ್ಕ್ಯಾಲಾಜಿಕಲ್ ಆ್ಯಂಡ್ ಮ್ಯೂಸಿಯಂ, ಮೈಸೂರ್ ಗವರ್ನ್‌ಮೆಂಟ್ ಆಫ್ ಕರ್ನಾಟಕ. ಪು.೨೦.

೧೪. ಜಯಪ್ಪಗೌಡ ಡಿ.ಎಸ್., **ಪೂರ್ವೋಕ್ತ,** ಪು.೭೮.

೧೫. ಸುಂದರ ಅ., **ಪೂರ್ವೋಕ್ತ,** ಪು.೨೦.

೧೬. ಜಯಪ್ಪಗೌಡ ಡಿ.ಎಸ್., **ಪೂರ್ವೋಕ್ತ,** ಪು.೭೯.

೧೭. ಮಂಜುನಾಥ್ ಎಂ. ಜಿ., ೨೦೧೩, **ಬೆಂಗಳೂರಿನ ಪ್ರಾಚೀನತೆ ಹಾಗೂ ಪ್ರಾಚೀನ ಬೆಂಗಳೂರಿನ ಅಭಿಜ್ಞೆ,** ಬೆಂಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು. ಪು.೪೦.

೧೮. ಜಯಪ್ರಕಾಶ ಬಂಜಗೆರೆ, ೨೦೦೬, **ಕರ್ನಾಟಕತ್ವ: ಸಮಾಜೋ–ಆರ್ಥಿಕ ತಳಹದಿ,** ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ಪು.೧೮.

೧೯. ಕೆಂಪರಾಜ ಎಸ್. ಹೆಚ್., ೨೦೧೨, **ಬೆಂಗಳೂರು ಜಿಲ್ಲಾ ಶಾಸನಗಳ ಸಾಂಸ್ಕೃತಿಕ ಅಧ್ಯಯನ,** ಪಿಎಚ್.ಡಿ. ಪ್ರಬಂಧ, ಬೆಂಗಳೂರು, ಪು.೧೪.

೨೦. ಎಂ.ಎ.ಆರ್ ೧೯೩೮,ಪಿಪಿ.೮೦–೯೦; ಐಡಬ್ಲ್ಯು ನಂ.೧೪.

೨೧. ಶೇಷಗಿರಿರಾವ್ ಎಲ್.ಎಸ್., **ಪೂರ್ವೋಕ್ತ** ಪು.೭.

೨೨. ಅದೇ, ಪು.೭.

೨೩. ಪುಟಪ್ರಕಾಶ್ ಬಿ.ಕೆ., **ಪೂರ್ವೋಕ್ತ,** ಪು.೪೨–೪೩.

೨೪. ಇ. ಸಿ. ೯ ಬೆಂಗಳೂರು–೮೩, ಬೇಗೂರು. ಪು.೩೦.

೨೫. ಶೇಷಗಿರಿರಾವ್ ಎಲ್.ಎಸ್., **ಪೂರ್ವೋಕ್ತ,** ಬೆಂಗಳೂರು, ಪು.೭.

೨೬. ಹೀರೆಮಠ ಬಿ.ಆರ್., ೧೯೮೬, **ಶಾಸನಗಳಲ್ಲಿ ಕರ್ನಾಟಕದ ವರ್ತಕರು,** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪು.೩೮.

೨೭. ಹಯವದನ ರಾವ್ ಸಿ., ೧೯೨೭, ಮೈಸೂರು ಗ್ಯಾಜೆಟಿಯರ್ಸ್, ಬಿ.ಆರ್.ಪಬ್ಲಿಷಿಂಗ್ ಕಾರ್ಪೋರೇಶನ್, ದೆಲ್ಲಿ, ಪು.೧೪೫.

೨೮. ಕೃಷ್ಣಮೂರ್ತಿ ಪಿ.ವಿ., ೨೦೧೩, ಬೆಂಗಳೂರು ನಗರ ಜಿಲ್ಲಾ ಪ್ರದೇಶದ ಪ್ರಾಚೀನ ಆಡಳಿತ ಘಟಕಗಳು, ಬೆಂಗಳೂರ ಜಿಲ್ಲಾ ಇತಿಹಾಸ ಮತ್ತು ಪುರಾತತ್ವ, ಮೈಸೂರು, ಪು.೮೩.

೨೯. ರಾಜಗೋಪಾಲ್ ಕ.ವೆಂ., ಮಣ್ಣೆಯ ಅಹರ್ಪ್ವತಿ ಮಂದಿರ, ಕಪಿಲ, ಸೂರ್ಯ, ಇತಿಹಾಸ ದರ್ಪಣ, ಸಂಪುಟ ೧೬, ೨೦೦೧, ಪು.೧೧೪.

೩೦. ರಣಬೀರ್ ಚಕ್ರವರ್ತಿ., ೨೦೧೧, ಟ್ರೇಡ್ ಇನ್ ಅರ್ಲಿ ಇಂಡಿಯ, ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್, ದೆಹಲಿ. ಪು.೭೭.

೩೧. ಶೇಷಗಿರಿರಾವ್ ಎಲ್.ಎಸ್., ಪೂರ್ವೋಕ್ತ, ಪು.೮.

೩೨. ಸಾಕಿ., ೧೯೯೮, ಮೇಕಿಂಗ್ ಹಿಸ್ಟರಿ, ಕರ್ನಾಟಕಾಸ್ ಪೀಪಲ್ ಆಂಡ್ ದೇರ್ ಪಾಸ್ಟ್, ವಿಮುಕ್ತಿ ಪ್ರಕಾಶನ, ಶಿವಮೊಗ್ಗ. ಸಂ.೧ ಪು.೨೨೧.

೩೩. ಶೇಷಗಿರಿರಾವ್ ಎಲ್.ಎಸ್., ಪೂರ್ವೋಕ್ತ, ಪು.೮.

೩೪. ಎ. ಸಿ. ೯ ದೊಡ್ಡಬಳ್ಳಾಪುರ ೩೧.

೩೫. ಚಂಪಕಲಕ್ಷ್ಮಿ ಆರ್., ೨೦೦೧, ದಿ ಮೆಡಿವಲ್ ಸೌತ್ ಇಂಡಿಯನ್ ಗಿಲ್ಡ್ಸ್ : ದೇರ್ ರೋಲ್ ಇನ್ ಟ್ರೇಡ್ ಅಂಡ್ ಅರ್ಬನೈಜೇಶನ್, ಟ್ರೇಡ್ ಇನ್ ಅರ್ಲಿ ಇಂಡಿಯ, ಆಕ್ಸ್‌ಫರ್ಡ್ ಪ್ರೆಸ್, ನ್ಯೂ ದೆಲ್ಲಿ. ಪು.೩೩೧.

೩೬ ಶೇಷಗಿರಿರಾವ್ ಎಲ್.ಎಸ್., ಪೂರ್ವೋಕ್ತ, ಪುಟ–೮.

೩೭ ಹಯವದನ ರಾವ್ ಸಿ., ೧೯೨೭, ಪೂರ್ವೋಕ್ತ, ಪು.೧೪೫.

೩೮. ಹಯವದನ ರಾವ್ ಸಿ., ಪೂರ್ವೋಕ್ತ(ವಿಶ್ವಕರ್ಮಿಯರ ಆರಾಧನಾ ದೇವರು. ಇಂದು ಸಹ ಅಲ್ಲಿ ಅಕ್ಕಸಾಲಿಗರ ಮಠವಿದೆ) ಪು.೧೪೫.

೩೯. ಶೇಷಗಿರಿರಾವ್ ಎಲ್.ಎಸ್., ಪೂರ್ವೋಕ್ತ, ಪು.೯.

೪೦. ಷೇಕ್ ಅಲಿ ಬಿ., ೧೯೯೭, ಕರ್ನಾಟಕ ಚರಿತ್ರೆ, ಸಂ–೨, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೪೭

೪೧. ಅದೇ, ಪು.೧೩೬.

೪೨. ಸಾಕಿ., ೧೯೯೮, ಪೂರ್ವೋಕ್ತ, ಪು.೨೨೬.

೪೩. ಷೇಕ್ ಅಲಿ ಬಿ., ಪೂರ್ವೋಕ್ತ, ಪು.೨೦೩.

೪೪. ಎ.ಕ.೯, ಬೆಂಗಳೂರು ೬೧, ಹೂಡಿ(ಕ್ರಿ ಶ ೧೩೩೨).

೪೫. ಎ.ಕ.೯, ಚನ್ನಪಟ್ಟಣ ೭೧, ಬೇವೂರು(ಕ್ರಿ ಶ ೧೩೩೧).

೪೬. ಎ.ಕ.೯, ಮಾಗಡಿ ೭೮, ವಡ್ಡರಹಳ್ಳಿ(ಕ್ರಿ ಶ ೧೨೩೯).

೪೭. ಎ.ಕ.೯, ಚನ್ನಪಟ್ಟಣ, ಮಾಗೇನಹಳ್ಳಿ(ಕ್ರಿ ಶ ೧೩೧೮).

೪೮. ಎ.ಕ.೯, ಚನ್ನಪಟ್ಟಣ ೭೧, ಬೇವೂರು(ಕ್ರಿ ಶ ೧೩೩೧).

೪೯. ಷೇಕ್ ಅಲಿ ಬಿ., ಪೂರ್ವೋಕ್ತ, ಪು.೧೫೫, ೨೧೩–೨೧೫.

೫೦. ಶೇಷಗಿರಿರಾವ್ ಎಲ್.ಎಸ್., ಪೂರ್ವೋಕ್ತ, ಪು.೯.

೫೧. ಷೇಕ್ ಅಲಿ ಬಿ., ಪೂರ್ವೋಕ್ತ, ಪು.೧೭೧.

೫೨. ಸಾಕಿ., ಪೂರ್ವೋಕ್ತ, ಪು.೨೭೪.

೫೩. ಅದೇ, ಪು.೨೭೬.

೫೪. ಅದೇ, ಪು.೨೭೭.

೫೫. ಅದೇ, ಪು.೨೭೭–೨೭೮.

೫೬. ಅದೇ, ಪು.೨೭೮.

೫೭. ಎ.ಕ.೯, ಕಾನಕಾನಹಳ್ಳಿ, ಗಾಣಾಳುಕೊಪ್ಪ (ಕ್ರಿ ಶ ೧೩೧೬).

೫೮. ಜಯಪ್ರಕಾಶ ಬಂಜಗೆರೆ, ಪೂರ್ವೋಕ್ತ, ಪು.೫೫,೫೬.

೫೯. ಶೇಷಗಿರಿರಾವ್ ಎಲ್.ಎಸ್., ಪೂರ್ವೋಕ್ತ, ಪು.೧೦.

೬೦. ಅದೇ, ಪು–೧೦,೧೧,೧೨.

೬೧. ಶಿವಣ್ಣ ಕೆ.ಎಸ್, ಕರ್ನಾಟಕ ಚರಿತ್ರೆ, ಸಂ–೩, ೧೯೯೭, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೫೪.

೬೨. ಅದೇ, ಪು.೧೫೮.

೬೩. ಶೇಷಗಿರಿರಾವ್ ಎಲ್.ಎಸ್., ಪೂರ್ವೋಕ್ತ, ಪು.೧೧.

೬೪. ಶಿವಣ್ಣ ಕೆ.ಎಸ್., **ಪೂರ್ವೋಕ್ತ,** ಪು.೭೭.

೬೫. ಬಂಜಗೆರೆ ಜಯಪ್ರಕಾಶ., **ಪೂರ್ವೋಕ್ತ,** ಪು.೬೯-೭೦.

೬೬. ಶೇಷಗಿರಿರಾವ್ ಎಲ್.ಎಸ್., **ಪೂರ್ವೋಕ್ತ,** ಪು.೧೧-೧೨.

೬೭. ಮಂಜುನಾಥ ಎಂ.ಜಿ., ೨೦೦೬, **ಬೆಂಗಳೂರಿನ ಬಖೈರುಗಳು,** ಪ್ರಸಾರಾಂಗ ಮತ್ತು ಮುದ್ರಣಾಲಯ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ಪು.೩೯.

೬೮. ಶಿವಣ್ಣ ಕೆ.ಎಸ್., **ಪೂರ್ವೋಕ್ತ,** ಪು-೭೮,೭೯.

೬೯. ಮಂಜುನಾಥ ಎಂ.ಜಿ., **ಪೂರ್ವೋಕ್ತ,** ಪು-೭೫.

೭೦. ಹೀರೆಮಠ ಬಿ. ಆರ್., **ಪೂರ್ವೋಕ್ತ,** ಪು-೧೧೮.

೭೧. ಸುಂದರರಾವ್ ಬ.ನ., ೨೦೧೧, **ಬೆಂಗಳೂರಿನ ಇತಿಹಾಸ,** ಪು.೯.

೭೨. ಅದೇ, ಪು.೪೯.

೭೩. ಅದೇ, ಪು.೪೯.

೭೪. ಅದೇ, ಪು.೫೫.

೭೫. ಅದೇ, ಪು.೫೩.

೭೬. ಅದೇ, ಪು.೫೬.

೭೭. ಮಂಜುನಾಥ ಎಂ.ಜಿ., **ಪೂರ್ವೋಕ್ತ,** ಪು.೪೨,೪೩.

೭೮. ಅದೇ, ಪು.೪೪.

೭೯. ವೀರಪ್ಪ ಬಿ.ಸಿ., ೨೦೦೧, **ಬೆಂಗಳೂರು ನಗರದ ವೀರಶೈವ ಮಠಗಳು-ಒಂದು ಸಾಂಸ್ಕೃತಿಕ ಅಧ್ಯಯನ,** ಅಖಿಲ ಭಾರತ ಸಾಹಿತ್ಯ ಪರಿಷತ್ತು, ಮೈಸೂರು, ಪು.೧೧.

೮೦. ಸುಂದರರಾವ್ ಬ.ನ., **ಪೂರ್ವೋಕ್ತ,** ಪು.೫೮.

೮೧. ಮಂಜುನಾಥ ಎಂ.ಜಿ., **ಪೂರ್ವೋಕ್ತ,** ಪು.೪೫.

೮೨. ಎ.ಕ.೯ ಬೆಂಗಳೂರು ೧ ಬೆಂಗಳೂರು (೧೬೨೮).

೮೩. ಎ.ಕ.೯ ಬೆಂಗಳೂರು ೨ ಬೆಂಗಳೂರು(೧೬೩೩).

೮೪. ವೀರಪ್ಪ ಬಿ.ಸಿ., **ಪೂರ್ವೋಕ್ತ,** ಪು.೯೬.

೮೫. ಅದೇ, ಪು.೧೯.

೮೬. ಸುಂದರರಾವ್ ಬ.ನ., **ಪೂರ್ವೋಕ್ತ**, ಪು.೬೫.

೮೭. ಹಸನ್ ಫಜ್ಲುಲ್., ೧೯೭೦, **ಬ್ಯಾಂಗಲೂರ್ ಥ್ರೂ ದಿ ಏಜಸ್**, ಹಿಸ್ಟಾರಿಕಲ್ ಪಬ್ಲಿಕೇಷನ್, ಬೆಂಗಳೂರು, ಪು.೩೨.

೮೮. ಮಂಜುನಾಥ ಎಂ.ಜಿ., **ಪೂರ್ವೋಕ್ತ**, ಪು.೪೭.

೮೯. ಶೇಷಗಿರಿರಾವ್ ಎಲ್.ಎಸ್., **ಪೂರ್ವೋಕ್ತ**, ಪು.೨೨.

೯೦. ಕೃಷ್ಣಮೂರ್ತಿ ಪಿ.ವಿ., ೨೦೧೧, ಬೆಂಗಳೂರು ಪರಿಸರದ ಜನಸಮುದಾಯಗಳು–ಒಂದು ಚಾರಿತ್ರಿಕ ಅವಲೋಕನ, ಹಂ.ಗು. ರಾಜೇಶ್(ಸಂ)., **ಇತಿಹಾಸ ದರ್ಪಣ** (ತ್ರೈಮಾಸಿಕ), ಸಂಚಿಕೆ–೮, ಅಮೃತ ಪ್ರಿಂಟರ್ಸ್, ಬೆಂಗಳೂರು. ಪು.೩೬–೩೭.

೯೧. ಆರ್.ಆರ್.ದಿವಕರ್., ೧೯೬೮, **ಕರ್ನಾಟಕ ಥ್ರೂ ದಿ ಏಜಸ್**, ಮೈಸೂರು ಸರ್ಕಾರ, ಬೆಂಗಳೂರು, ಪು.೭೨೩.

೯೨. ಸುಂದರರಾವ್ ಬ.ನ., **ಪೂರ್ವೋಕ್ತ**, ಪು.೧೧೧.

೯೩. ಶೇಷಗಿರಿರಾವ್ ಎಲ್.ಎಸ್., **ಪೂರ್ವೋಕ್ತ**, ಪು.೧೯.

೯೪. ಫಜಲ್ ಹಸನ್, **ಪೂರ್ವೋಕ್ತ**, ಪು.೫೪.

೯೫. ಅದೇ, ಪು.೫೬.

೯೬ ಸುಂದರರಾವ್ ಬ.ನ., **ಪೂರ್ವೋಕ್ತ**, ಪು.೧೦೪.

೯೭ ಫಜಲ್ ಹಸನ್, **ಪೂರ್ವೋಕ್ತ**, ಪು.೬೩.

೯೮. ವೀರಪ್ಪ ಬಿ.ಸಿ., **ಪೂರ್ವೋಕ್ತ**, ಪು.೧೫೧.

೯೯. ಸುಂದರರಾವ್ ಬ.ನ., **ಪೂರ್ವೋಕ್ತ**, ಪು.೧೨೧.

೧೦೦. ತಿಮ್ಮಯ್ಯನಾಯ್ಡು ಎಸ್., ೧೯೮೪, **ದಿ ಏಜ್ ಆಫ್ ಚಿಕ್ಕದೇವರಾಜ ಒಡೆಯರ್ ಆಫ್ ಮೈಸೂರು**, ಮೈಸೂರು ವಿಶ್ವವಿದ್ಯಾಲಯ, ಮಾನಸ ಗಂಗೋತ್ರಿ, ಮೈಸೂರು, ಪು.೨೧೧.

೧೦೧. ಜಯಪ್ರಕಾಶ ಬಂಜಗೆರೆ, **ಪೂರ್ವೋಕ್ತ**, ಪು.೮೭.

೧೦೨. ಸುಂದರರಾವ್ ಬ.ನ., **ಪೂರ್ವೋಕ್ತ**, ಪು.೧೩೧.

೧೦೩. ಸಾಕಿ., **ಪೂರ್ವೋಕ್ತ**, ಪು.೩೬೮.

೧೦೪. ವೀರಪ್ಪ ಬಿ.ಸಿ., **ಪೂರ್ವೋಕ್ತ,** ಪು.೧೪೧.

೧೦೫. ಅದೇ, ಪು.೧೫೫.

೧೦೬. ಶೇಷಗಿರಿರಾವ್ ಎಲ್.ಎಸ್., **ಪೂರ್ವೋಕ್ತ,** ಪು.೨೬.

೧೦೭. ಸುಂದರರಾವ್ ಬ.ನ., **ಪೂರ್ವೋಕ್ತ,** ಪು.೧೭೩.

೧೦೮. ಶೇಷಗಿರಿರಾವ್ ಎಲ್.ಎಸ್., **ಪೂರ್ವೋಕ್ತ,** ಪು.೨೭.

೧೦೯. ಶಾಮಲಾಂಬಿಕ ಸಿ.ಎಸ್., ೧೯೯೦, **ಸೋಶ್ಯೋ–ಎಕಾನಾಮಿಕ್ ಕಂಡೀಶನ್ ಆಫ್ ಕರ್ನಾಟಕ ಫ್ರಮ್ ೧೭೦೧ ಟು ೧೮೮೧,** ಮೈಸೂರು ವಿಶ್ವವಿದ್ಯಾನಿಲಯ, ಮಾನಸ ಗಂಗೋತ್ರಿ, ಮೈಸೂರು, ಪು.೩೧೬.

೧೧೦.ಸುಂದರರಾವ್ ಬ.ನ., **ಪೂರ್ವೋಕ್ತ,** ಪು.೨೦೨.

೧೧೧.ಸೂರ್ಯನಾಥ್ ಯು.ಕಾಮತ್, **ಪೂರ್ವೋಕ್ತ,** ಪು.೨೮.

೧೧೨.ಗುರುಸಿದ್ದಯ್ಯ ಸಿ., ೨೦೧೧, **ಸೌತ್ ಇಂಡಿಯಾ ಆಂಡ್ ದಿ ಪರ್ಷಿಯನ್ ಗಲ್ಫ್ ಡ್ಯೂರಿಂಗ್ ದಿ ಎೃಟೀನ್ತ್ ಸೆಂಚುರಿ ವಿತ್ ರೆಫರೆನ್ಸ್ ಟು ಹೈದರ್ ಅಲಿ ಆ್ಯಂಡ್ ಟಿಪ್ಪು ಸುಲ್ತಾನ್: ಎ ಸ್ಟಡಿ,** ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ಪು.೭೭.

೧೧೩.ಸುಂದರರಾವ್ ಬ.ನ., **ಪೂರ್ವೋಕ್ತ,** ಪು.೨೦೨.

೧೧೪. ಸೂರ್ಯನಾಥ ಕಾಮತ್., **ಪೂರ್ವೋಕ್ತ,** ಪು.೨೮.

೧೧೫.ಸುಮಿತ್ರ ಎಂ., ೨೦೦೧, **ಕರಗ ಸಂಪ್ರದಾಯ,** ಅಂಕಿತ ಪುಸ್ತಕ, ಬೆಂಗಳೂರು, ಪು.೩೨.

೧೧೬.ಮಹಮೂದ್ ಹುಸೇನ್., ಫತೇಫಲುಲ್ ಮುಜಾಹಿದಿನ್., ೧೯೮೯, ಎ ಮಿಲಿಟರಿ ಮ್ಯಾನುಯೆಲ್ ಆಫ್ ಟಿಪ್ಪು ಸುಲ್ತಾನ್, ಮುದ್ದಾಚಾರಿ (ಸಂ)., **ಸೆಮಿನಾರ್ ಪೇಪರ್ಸ್,** ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪು.೧೯.

೧೧೭.ಅಶ್ವತ್ಥಪ್ಪ ಕೆ.ಎನ್., ೨೦೦೯, **ಕರ್ನಾಟಕದ ಇತಿಹಾಸ,** ಲಕ್ಷ್ಮಿ ಮುದ್ರಣಾಲಯ. ಬೆಂಗಳೂರು, ಪು.೮೯–೯೦.

೧೧೮.ಸಂಜುಂಡಪ್ಪ ಕೆ.ಎಸ್., ೧೯೮೯, ಕ್ರಾಫ್ಟ್ ಪ್ರೊಡಕ್ಷನ್ ಅಂಡ್ ಇಂಡಸ್ಟ್ರಿಯಲ್ ಡೆವಲಪ್‌ಮೆಂಟ್ ಅಂಡರ್ ಟಿಪ್ಪು ಸುಲ್ತಾನ್, ಮುದ್ದಾಚಾರಿ (ಸಂ)., **ಸೆಮಿನಾರ್ ಪೇಪರ್ಸ್,** ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪು.೧೦೦.

೧೧೯. ಷೇಕ್ ಅಲಿ ಬಿ., ಸಂ-೫, **ಪೂರ್ವೋಕ್ತ**, ಪು.೪೫೫.

೧೨೦. ಮೀರ ಸೆಬಾಸ್ಟಿಯನ್., ೧೯೮೯, ಸ್ಟೇಟ್ ಕ್ಯಾಪಿಟಲಿಸಂ ಇನ್ ಮೈಸೂರ್ ಅಂಡರ್ ಟಿಪ್ಪು ಸುಲ್ತಾನ್, ಮುದ್ದಾಚಾರಿ (ಸಂ)., **ಸೆಮಿನಾರ್ ಪೇಪರ್ಸ್**, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪು.೯೫.

೧೨೧. ಅದೇ, ಪು.೯೭.

೧೨೨. ನಂಜುಡಪ್ಪ ಕೆ.ಎಸ್., **ಪೂರ್ವೋಕ್ತ**, ಪು.೯.

೧೨೩. ಅದೇ, ಪು.೯೭.

೧೨೪. ಅದೇ, ಪು.೯೭.

೧೨೫. **ಫ್ರಾನ್ಸಿಸ್ ಬುಕನನ್, ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದಿ ಕಂಟ್ರೀಸ್ ಆಫ್ ಮೈಸೂರ್, ಕೆನರಾ ಆಂಡ್ ಮಲಬಾರ್**. ಸಂ-೨೧೬, ೨೧೭.

೧೨೬. ಅದೇ, ಪು.೧೯೮-೧೯೯.

೧೨೭. ಜಯಪ್ರಕಾಶ ಬಂಜಗೆರೆ, **ಪೂರ್ವೋಕ್ತ**, ಪು.೧೧೨.

೧೨೮. ಮಂಜುನಾಥ, **ಪೂರ್ವೋಕ್ತ**, ಪು.೬೦.

೧೨೯. ಸುಂದರರಾವ್ ಬ.ನ., **ಪೂರ್ವೋಕ್ತ**, ಪು.೧೮೭.

೧೩೦. ಅದೇ, ಪು.೨೭೭.

೧೩೧. ಅದೇ, ಪು.೨೭೯.

೧೩೨. ಸೂರ್ಯನಾಥ ಕಾಮತ್, **ಪೂರ್ವೋಕ್ತ**, ಪು.೨೯.

೧೩೩. ಜಯಪ್ರಕಾಶ ಬಂಜಗೆರೆ, **ಪೂರ್ವೋಕ್ತ**, ಪು.೧೧೨.

೧೩೪. ಸೂರ್ಯನಾಥ ಕಾಮತ್, **ಪೂರ್ವೋಕ್ತ**, ಪು.೪೪.

೧೩೫. ಅದೇ, ಪು.೩೨.

## ಅಧ್ಯಾಯ ಮೂರು

# ಸಾಮ್ರಾಜ್ಯಶಾಹಿಗೆ ಪೂರಕವಾದ ವಾಣಿಜ್ಯವಾದ

೩.೧. ವಸಾಹತುಶಾಹಿ ನೀತಿಯ ನಿಲುವುಗಳು

೩.೨. ಚಾರ್ಟರ್ ಕಾಯಿದೆಗಳು

೩.೩. ಮುಕ್ತ ವ್ಯಾಪಾರ ನೀತಿ

೩.೪. ಕೃಷಿ ವಾಣಿಜ್ಯೀಕರಣ

## ಅಧ್ಯಾಯ ಮೂರು

# ಸಾಮ್ರಾಜ್ಯಶಾಹಿಗೆ ಪೂರಕವಾದ ವಾಣಿಜ್ಯವಾದ

ಭಾರತವು ೧೮ನೇ ಶತಮಾನದ ಉತ್ತರಾರ್ಧದಿಂದ ಹಂತ ಹಂತವಾಗಿ ವಸಾಹತುವಾಗಿ ಪರಿವರ್ತನೆ ಹೊಂದಿತು. ಈ ಪ್ರಕ್ರಿಯೆಯು ೧೮೫೭ರವರೆಗೂ ಮುಂದುವರೆಯಿತು. ವಸಾಹತೀಕರಣ ಪ್ರಕ್ರಿಯೆಯು ಭಾರತದ ರಾಜಕಾರಣ, ಆರ್ಥಿಕತೆ ಮತ್ತು ಸಮಾಜವನ್ನು ಪರಿವರ್ತಿಸಿತು. ಈ ಪ್ರಕ್ರಿಯೆಯಲ್ಲಿ ಭಾರತವು ಸಬಾರ್ಡಿನೇಟ್ ಸ್ಥಾನಕ್ಕೆ ಇಳಿಯಿತು. ವಸಾಹತುಶಾಹಿಯಿಂದಾಗಿ ಬ್ರಿಟನ್ ಲಾಭವನ್ನು ಹೊಂದಿತು. ಬ್ರಿಟಿಶರ ವಸಾಹತೀಕರಣದಲ್ಲಿ ಮೂರು ಹಂತಗಳನ್ನು ಕಾಣಬಹುದು. ಮೊದಲ ಹಂತದಲ್ಲಿ(೧೭೫೭-೧೮೧೩) ವಾಣಿಜ್ಯವಾದ, ನೇರವಾದ ಲೂಟಿಯನ್ನು ಗುರುತಿಸ ಬಹುದು. ಈ ಹಂತದಲ್ಲಿ ಭಾರತದ ತೆರಿಗೆಗಳನ್ನು ಬಳಸಿ ಭಾರತೀಯ ಸಿದ್ಧ ಉತ್ಪಾದನೆಗಳನ್ನು ಬ್ರಿಟನ್‌ಗೆ ಕಳುಹಿಸಲಾಗುತ್ತಿತ್ತು. ಎರಡನೆಯ ಹಂತ(೧೮೧೩-೧೮೫೮) ಮುಕ್ತ ವ್ಯಾಪಾರದ ಕಾಲ. ಇಲ್ಲಿಂದ ಭಾರತವನ್ನು ಕಚ್ಚಾ ವಸ್ತುಗಳ ಸಂಪನ್ಮೂಲ ಮತ್ತು ಬ್ರಿಟನ್ ಸಿದ್ಧಪಡಿಸಿದ ವಸ್ತುಗಳ ಮಾರುಕಟ್ಟೆಯನ್ನಾಗಿಸಿತು. ಮೂರನೆಯ ಹಂತವು(೧೮೫೮ ನಂತರ) ಆರ್ಥಿಕ ಸಾಮ್ರಾಜ್ಯಶಾಹಿಯ ಕಾಲ. ಈ ಸಂದರ್ಭದಲ್ಲಿ ಬ್ರಿಟನ್ ಭಾರತದ ಆರ್ಥಿಕತೆಯನ್ನು ವಿದೇಶಿ ಮಾರುಕಟ್ಟೆಯ ನಿರ್ವಹಣಾ ಏಜೆನ್ಸಿಗಳ ಮೂಲಕ ನಿಯಂತ್ರಿಸುತ್ತಿತ್ತು. ಈ ಹಂತದಲ್ಲಿ ಶೋಷಣೆಯನ್ನು ಆರ್ಥಿಕ ಯೋಜನೆಗಳ ಮೂಲಕ ಮಾಡಲಾಯಿತು.

೧೮ನೇ ಶತಮಾನದಾದ್ಯಂತ ಯುರೋಪ್‌ನಲ್ಲಿ ವಾಣಿಜ್ಯವಾದ ಮುಖ್ಯವಾಗಿ ಕಂಡುಬರುತ್ತಿದ್ದರೂ ಉದಾರವಾದ ಎಂಬ ಹೊಸ ರಾಜಕೀಯ-ಆರ್ಥಿಕ ಸಿದ್ಧಾಂತವು ಪ್ರಸಿದ್ಧವಾಗುತ್ತಿತ್ತು. ೧೯ನೇ ಶತಮಾನದಲ್ಲಿ ಉದಾರವಾದಿ ಸರ್ಕಾರದ ಸ್ಥಾಪನೆಯು ಸಹ ಯುರೋಪಿನಲ್ಲಿ ಸಾಧ್ಯವಾಯಿತು. ಈ ಸಿದ್ಧಾಂತವು ವ್ಯಕ್ತಿಯ ವೈಯಕ್ತಿಕ ಸ್ವಾತಂತ್ರ್ಯ ಮತ್ತು ಮುಕ್ತ ವ್ಯಾಪಾರದ ಆದರ್ಶಗಳನ್ನು ಹೊಂದಿತ್ತು. ೧೮ನೇ ಶತಮಾನದ ಕೊನೆ ಮತ್ತು ೧೯ನೇ ಶತಮಾನದ ಆರಂಭದಲ್ಲಿ ಬ್ರಿಟನಿನಲ್ಲಿ ಕೈಗಾರಿಕಾ ಕ್ರಾಂತಿಯ ಪರಿಣಾಮವಾಗಿ ಕೃಷಿ ಮತ್ತು ಕೈಗಾರಿಕಾ ಉತ್ಪಾದನೆಯನ್ನು ಹೆಚ್ಚಿಸಿತು.

ಬ್ರಿಟಿಶ್ ಈಸ್ಟ್ ಇಂಡಿಯ ಕಂಪನಿಯು ೧೭೫೭ರ ನಂತರ ಭಾರತವನ್ನು ಹಂತ ಹಂತವಾಗಿ ವಸಾಹತುವನ್ನಾಗಿಸುವ ಬ್ರಿಟನ್ ರಾಜಕಾರಣ ಮತ್ತು ಆರ್ಥಿಕತೆಯನ್ನು ನಿಯಂತ್ರಿಸುವ ಬೃಹತ್ ಶಕ್ತಿಯಾಗಿ ಹೊರಹೊಮ್ಮಿತ್ತು. ಈ ದಿಶೆಯಲ್ಲಿ ಬ್ರಿಟನ್ ಪಾರ್ಲಿಮೆಂಟ್ ಕಂಪನಿಯ ಏಕಸ್ವಾಮ್ಯವನ್ನು ಕಡಿತಗೊಳಿಸುವ ಪ್ರಯತ್ನಗಳಲ್ಲಿ ೧೯ನೇ ಶತಮಾನದ ಪೂರ್ವಾರ್ಧದಲ್ಲಿ ಬಂದ ಚಾರ್ಟರ್ ಕಾಯ್ದೆಗಳು ಪ್ರಮುಖವಾಗಿದೆ.

ಭಾರತದಲ್ಲಿ ಜಾರಿಗೊಂಡ ಬ್ರಿಟನ್ ಈಸ್ಟ್ ಇಂಡಿಯ ಕಂಪನಿಯ ಚಾರ್ಟರ್ ಕಾಯ್ದೆಗಳಲ್ಲಿ ರಾಜಕೀಯ ಹಾಗೂ ಆರ್ಥಿಕ ಉದ್ದೇಶಗಳನ್ನು ಗುರುತಿಸಬಹುದಾಗಿದೆ. ಈ ನಿಟ್ಟಿನಲ್ಲಿ ೧೮೧೩, ೧೮೩೩ ಮತ್ತು ೧೮೫೩ರ ಚಾರ್ಟರ್ ಕಾಯ್ದೆಗಳು ಹಂತ ಹಂತವಾಗಿ ಬ್ರಿಟಿಶ್ ಈಸ್ಟ್ ಇಂಡಿಯ ಕಂಪನಿಯ ಏಕಸ್ವಾಮ್ಯವನ್ನು ಮುರಿದುಹಾಕಿ ಮುಕ್ತ ವ್ಯಾಪಾರವನ್ನು ಪ್ರೋತ್ಸಾಹಿಸಿತು. ಮುಕ್ತವ್ಯಾಪಾರ ನೀತಿಯು ಮೊದಲು ಬ್ರಿಟನ್ ಮತ್ತು ಅದರ ವಸಾಹತುಗಳಲ್ಲಿ ಕಂಡುಬಂದಿತು. ಕ್ರಮೇಣ ಎಲ್ಲ ಪ್ರಬಲ ಯುರೋಪಿನ ರಾಷ್ಟ್ರಗಳು ಸಹ ಈ ನೀತಿಯನ್ನು ಅನುಸರಿದವು ಹಾಗೂ ತಮ್ಮ ವಸಾಹತುಗಳಲ್ಲಿ ಈ ನೀತಿಯನ್ನು ಅಳವಡಿಸಿಕೊಂಡವು.

ಚಾರ್ಟರ್ ಕಾಯ್ದೆಯ ಮೂಲಕ ಭಾರತದಲ್ಲಿ ಜಾರಿಗೊಂಡ ಮುಕ್ತವ್ಯಾಪಾರ ನೀತಿ ಯುರೋಪಿನ ಎಲ್ಲ ಪ್ರಜೆಗಳಿಗೂ ಫ್ರಾನ್ಸ್, ಅಮೆರಿಕಾ, ಡಚ್ಚ್, ಸ್ಪಾನೀಶ್ ಇತ್ಯಾದಿ ದೇಶಗಳಿಗೆ ಭಾರತದಲ್ಲಿ ವ್ಯಾಪಾರ ಮಾಡಲು ಅವಕಾಶವನ್ನು ನೀಡಿತು. ಆದರೂ ಪರೋಕ್ಷವಾಗಿ ಅವುಗಳ ಮೇಲೆ ಬ್ರಿಟಿಶ್ ಪ್ರಭುತ್ವವು ತನ್ನ ನಿಯಂತ್ರಣವನ್ನು ಹೊಂದಿತು. ಈ ದಿಶೆಯಲ್ಲಿ ಕಾಯ್ದೆಯ ನಿಯಮಗಳು, ಪ್ರಭಾವ ಮತ್ತು ಪರಿಣಾಮಗಳು, ಪ್ರಭುತ್ವ ಮತ್ತು ಕಂಪನಿಯ ನಡುವಿನ ಸಂಬಂಧಗಳು, ಭಾರತದಲ್ಲಿ ವ್ಯಾಪಾರದಲ್ಲಿ ತಂದ ಬದಲಾಣೆಗಳನ್ನು ವಿಶ್ಲೇಷಿಸಲಾಗಿದೆ. ಇದರ ಚೌಕಟ್ಟಿನಲ್ಲಿಯೇ ಉಗಮಗೊಂಡ ಮುಕ್ತ ವ್ಯಾಪಾರ ಮತ್ತು ಕೃಷಿ ವಾಣಿಜ್ಯೀಕರಣದ ನೀತಿಯು ಅಂದಿನ ಬೆಂಗಳೂರು ಪ್ರದೇಶ ಮತ್ತು ನಗರೀಕರಣದ ಮೇಲೆ ಉಂಟುಮಾಡಿದ ಪ್ರಭಾವ, ಪರಿಣಾಮಗಳನ್ನು ಚರ್ಚಿಸುವ ಉದ್ದೇಶವನ್ನು ಈ ಅಧ್ಯಾಯದಲ್ಲಿ ಮಾಡಲಾಗಿದೆ. ವಸಾಹತುಶಾಹಿ ನೀತಿಯನ್ನು ಸರಳ ಅಧ್ಯಯನ ಮಾಡುವ ಉದ್ದೇಶದಿಂದ ಮೂರು ಭಾಗಗಳಾಗಿ ವಿಂಗಡಿಸಲಾಗಿದೆ.

### ೩.೧. ವಸಾಹತುಶಾಹಿ ನೀತಿಯ ನಿಲುವುಗಳು

ವಸಾಹತುಶಾಹಿ ಪ್ರಭುತ್ವ ಭಾರತದಲ್ಲಿ ರಾಜಕೀಯ ಮತ್ತು ಆರ್ಥಿಕವಾಗಿ ಸಂಪೂರ್ಣ ನಿಯಂತ್ರಣವನ್ನು ಸಾಧಿಸುವ ಪ್ರಕ್ರಿಯೆಯಲ್ಲಿ ಯಶಸ್ಸನ್ನು ಕಂಡಿತು. ತನ್ನ ವಸಾಹತುಶಾಹಿ ಪ್ರದೇಶಗಳ ಮೇಲೆ ರಾಜಕೀಯ, ಆರ್ಥಿಕ, ಸಾಮಾಜಿಕ ಕ್ಷೇತ್ರದ ಮೇಲೆ ಯಜಮಾನಿಕೆಯನ್ನು ಮುಂದುವರಿಸುವ

ಉದ್ದೇಶವನ್ನು ಹೊಂದಿತ್ತು. ಭಾರತದಂತಹ ಬೃಹತ್ ದೇಶಗಳ ಮೇಲೆ ತನ್ನ ಯಜಮಾನಿಕೆ ಮುಂದುವರಿಯಬೇಕಾದರೆ ಇಲ್ಲಿಯ ಬೂರ್ಶ್ವಾ ಸಮುದಾಯಗಳನ್ನು ತಮ್ಮ ಕಡೆಗೆ ಸೆಳೆಯಬೇಕು. ಆ ನಿಟ್ಟಿನಲ್ಲಿ ಬೌದ್ಧಿಕ ಗದಾಪ್ರಹಾರವನ್ನು ಮಾಡಲು ಪ್ರಯತ್ನಸಿದೆಂದು ತೋರುತ್ತದೆ. ಕಾರಣ ಇದೇ ಸಂದರ್ಭದಲ್ಲಿ ಬ್ರಿಟನ್ನಿನಲ್ಲಿಯು ಸಹ ಹಲವು ಸೈದ್ಧಾಂತಿಕ ಚಿಂತನೆಗಳು ಹುಟ್ಟಿಕೊಂಡವು. ಬ್ರಿಟನ್ ಪ್ರಭುತ್ವವು ಕಂಪನಿಯ ಅಧೀನದ ಭಾರತದ ಆಡಳಿತ ಸುಧಾರಣೆಯ ಕುರಿತಂತೆ ರ್‍ಯಾಡಿಕಲ್ಸ್, ಇವ್ಯಾಂಜೆಲಿಕಲ್ಸ್, ಟ್ರೆಡಿಶನಲಿಸ್ಟ್ ಎಂಬ ಮೂರು ಪಂಗಡಗಳು ಭಾರತೀಯರನ್ನು ಅಭಿವೃದ್ಧಿಗೊಳಿಸುವ ಕಾರ್ಯವು ತಮ್ಮದೆಂದು ವಾದಿಸಿದವು.[೧] ಈ ಕಾಲಾವಧಿಯಲ್ಲಿ "ಬಿಳಿಯರ ಮೇಲಿನ ಹೊರೆ" ಎಂಬ ಸೈದ್ಧಾಂತಿಕ ನಿಲವುಗಳನ್ನು ಪಡೆಯಿತು.[೨] ಭಾರತವು ಅಜ್ಞಾನ ಅಂಧಕಾರ ದಲ್ಲಿದ್ದು, ಜಾತಿ, ಮೂಢನಂಬಿಕೆಗಳು, ರಾಜರು ನವಾಬರುಗಳ ಶೋಷಣೆಯಲ್ಲಿ ಮುಳುಗಿ ನಾಶವಾಗುತ್ತಿದೆ. ಅದ್ದರಿಂದಾಗಿ ಅವರಿಗೆ ಮುಕ್ತ ಸುಧಾರಣೆಗಳನ್ನು ತಂದು ಭಾರತವನ್ನು ಅಭಿವೃದ್ಧಿ ಮಾರ್ಗದಲ್ಲಿ ಸಾಗುವಂತೆ ಮಾಡುವುದು ತಮ್ಮ ಜವಾಬ್ದಾರಿಯೆಂದು ಸಾರಿದರು. ಇದರ ನೆಲೆಯಲ್ಲಿ ಮುಕ್ತ ವ್ಯಾಪಾರದ ವಾದವನ್ನು ಪ್ರಚುರ ಪಡಿಸಿದರು. ಭಾರತವನ್ನು ಆಳಲು ಬ್ರಿಟಿಷರಿಗಿರುವ ಹಕ್ಕನ್ನು ಅರ್ಥಪೂರ್ಣ ಗೊಳಿಸಲು ಇವರು ಒತ್ತಾಯಿಸಿದರು. ಉದಾರವಾದದ ನೆಲೆಯಲ್ಲಿ ಜೇಮ್ಸ್ ಮಿಲ್ಲ್, ಜೆರಮೀ ಇದಕ್ಕೆ ಸಂಬಂಧಿಸಿದಂತೆ ಚರಿತ್ರೆಯ ಲೇಖನಶಾಸ್ತ್ರವನ್ನು ರೂಪಿಸಿದರು. ಇವಾಂಜೆಲಿಕಲ್ಸ್‌ರು ಸಹ ಇದೇ ತೆರನಾದ ಸೈದ್ದಾಂತಿಕ ಚಿಂತನೆಗಳನ್ನು ಮುಂದಿಟ್ಟದ್ದನ್ನು ಕಾಣಬಹುದಾಗಿದೆ. ಭಾರತೀಯರ ಧರ್ಮವೇ ವೈಚಾರಿಕವಾಗಿ ಭಾರತೀಯರು ಹಿಂದುಳಿದಿರಲು ಕಾರಣ. ಆದ್ದರಿಂದಾಗಿ ಕ್ರೈಸ್ತ ಧರ್ಮವು ಅಭಿವೃದ್ಧಿಶೀಲ ಧರ್ಮವಾಗಿದೆ. ಭಾರತೀಯರಿಗೆ ಕ್ರೈಸ್ತ ಧರ್ಮದ ಮೂಲಕ ಅವರನ್ನು ಮುಕ್ತ ಸ್ವಾತಂತ್ರ್ಯದ ಬೆಳವಣಿಗೆಯಿಂದ ಭಾರತದಲ್ಲಿ ರಾಷ್ಟ್ರೀಯ ಪ್ರಗತಿ ಸಾಧ್ಯ ಎಂದು ವಾದಿಸಿದರು. ಹೀಗೆ ಭಾರತೀಯರನ್ನು ಸೈದ್ಧಾಂತಿಕ ಚಿಂತನೆಗಳ ಮೂಲಕ ಬೌದ್ಧಿಕ ಹಿಡಿತವನ್ನು ಸಾಧಿಸಿ, ಒಡೆದು ಆಳುವ ನೀತಿಯನ್ನು ಸಹ ಭಾರತದಲ್ಲಿ ಅನುಸರಿಸಿದರು. ಈ ಪಂಥದ ಸೈದ್ಧಾಂತಿಕ ವ್ಯಕ್ತಿಯೆನಿಸಿದ ಮೆಕಾಲೆಯ ಮಾತಿನಲ್ಲಿ ಸಾಮ್ರಾಜ್ಯಶಾಹಿ ನೀತಿಯ ನಿಲುವುಗಳನ್ನು ತಿಳಿಯ ಬಹುದಾಗಿದೆ.[೩]

"ರಕ್ತ ಮತ್ತು ಬಣ್ಣದಲ್ಲಿ ಭಾರತೀಯ, ಆದರೆ ಅಭಿರುಚಿ, ಹವ್ಯಾಸ ಮತ್ತು ಬುದ್ಧಿಮತ್ತೆಯಲ್ಲಿ ಇಂಗ್ಲೀಷ್‌ರಂತಹ ವರ್ಗ" ಎಂಬ ಮೆಕಾಲೆಯ ಮಾತುಗಳಲ್ಲಿ ಎರಡು ವಿಚಾರಗಳು ಗಮನಾರ್ಹವಾಗಿದೆ. ಒಂದು ಬ್ರಿಟಿಶ್ ಸಾಮ್ರಾಜ್ಯಶಾಹಿ ಪ್ರಭುತ್ವ ಉದಾರತೆಯನ್ನು ಹೊಂದಿದೆ ಎಂಬುದರ ಹಿಂದೆ ಭಾರತೀಯರನ್ನು ಬೌದ್ಧಿಕವಾಗಿ ತಮ್ಮ ಹಿಡಿತವನ್ನು ಸಾಧಿಸಿ ತಮ್ಮ ಸಂಸ್ಕೃತಿಯ ಪ್ರಚಾರವನ್ನು

ಮಾಡುವುದು. ಆ ಮೂಲಕ ಭಾರತದಲ್ಲಿ ತಮ್ಮ ಆಡಳಿತ ಮುಂದುವರಿಸುವುದು. ಎರಡನೆಯದಾಗಿ ಕಡಿಮೆ ವೇತನದಲ್ಲಿ ವಿದೇಯರಾಗಿ ದುಡಿಯುವ ವರ್ಗವನ್ನು ಸೃಷ್ಟಿಸುವುದು. ಮೂರನೆಯದಾಗಿ, ತಮ್ಮ ದೇಶದ ಸಿದ್ಧವಸ್ತುಗಳಿಗೆ ಅನುಭೋಗಿಗಳನ್ನು ಬೆಳೆಸಿ ಭಾರತವನ್ನು ಪ್ರಬಲ ವಸ್ತುಕೇಂದ್ರಿತ ಮಾರುಕಟ್ಟೆಯನ್ನಾಗಿ ಪರಿವರ್ತಿಸುವುದು. ಬ್ರಿಟಿಶ್ ಸಾಮ್ರಾಜ್ಯವು ಯಾವುದೇ ತೊಂದರೆ ಇಲ್ಲದೇ ತನ್ನ ಮೂಲ ಉದ್ದೇಶವನ್ನು ಪೂರೈಕೆ ಮಾಡಲು ನಿರ್ಧರಿಸಿತು.

ಬ್ರಿಟಿಶ್ ಪ್ರಭುತ್ವ ತಮ್ಮ ಹಿತಾಸಕ್ತಿಯ ನೆಲೆಯಲ್ಲಿ ಸಾರಿಗೆ–ಸಂಪರ್ಕ, ಅಂಚೆ–ತಂತಿಗಳ ವ್ಯವಸ್ಥೆ, ಶೈಕ್ಷಣಿಕ ವ್ಯವಸ್ಥೆಯ, ಸ್ಥಳೀಯ ಆಡಳಿತದ ಅಭಿವೃದ್ಧಿಯ ಇಲಾಖೆ, ಭೂ ಸರ್ವೆ ಇಲಾಖೆ, ಅರಣ್ಯ ಇಲಾಖೆ ಸ್ಥಾಪನೆ. ನ್ಯಾಯಾಂಗ ಸುಧಾರಣೆ ಮತ್ತು ಅರಣ್ಯ ಸಂರಕ್ಷಣಾ ಕಾಯ್ದೆಗಳು, ಸಾಮಾಜಿಕ ಸುಧಾರಣಾ ಕ್ರಮಗಳನ್ನು ಭಾರತದಲ್ಲಿ ಜಾರಿಗೊಳಿಸಿದರು. ಈ ಅಭಿವೃದ್ಧಿ ಕಾರ್ಯಗಳ ಮೂಲ ರೂಪು–ರೇಶೆಗಳನ್ನು ಚಾರ್ಟರ್ ಕಾಯ್ದೆಗಳ ಮೂಲಕ ಜಾರಿಗೊಳಿಸಿದರು. ಅದರಲ್ಲಿ ೧೮೧೩, ೧೮೩೩, ೧೮೫೩ರ ಚಾರ್ಟರ್ ಕಾಯ್ದೆಗಳು ಪ್ರಮುಖವಾದವು.

## ೩.೨. ಚಾರ್ಟರ್ ಕಾಯ್ದೆಗಳು

ಚಾರ್ಟರ್ ಕಾಯಿದೆಗಳು ನಿಧಾನಗತಿಯಲ್ಲಿ ವಸಾಹತುಶಾಹಿ ಪ್ರಭುತ್ವದಿಂದ ಸಾಮ್ರಾಜ್ಯಶಾಹಿ ಪ್ರಭುತ್ವಕ್ಕೆ ಭಾರತದ ಅಧಿಕಾರ ಹಸ್ತಾಂತರಕ್ಕೆ ಅವಕಾಶವನ್ನು ಮಾಡಿಕೊಡುವ ನಿಟ್ಟಿನಲ್ಲಿ ಪ್ರಮುಖ ಪಾತ್ರವನ್ನು ವಹಿಸಿತು. ಇದಕ್ಕಾಗಿ ಬ್ರಿಟಿಶ್ ಪ್ರಭುತ್ವವು ಸಹ ಹವನಿಸುತ್ತಿತು. ಈ ಅಂಶಗಳನ್ನು ಬ್ರಿಟಿಶ್ ಸಂಸತ್ತಿನಲ್ಲಿ ನಡೆಯುತ್ತಿದ್ದ ತೀವ್ರತರವಾದ ಚರ್ಚೆಗಳು ತಿಳಿಸುತ್ತದೆ. ಬ್ರಿಟಶ್ ಪ್ರಭುತ್ವವು ಕಂಪನಿಯ ವ್ಯಾಪಾರದ ಮೇಲಿನ ಹಿಡಿತವನ್ನು ಕಡಿಮೆಗೊಳಿಸುವ ಮತ್ತು ಕಂಪನಿಯನ್ನು ಬಿಟ್ಟು ಇನ್ನಿತರ ವರ್ತಕ ಸಮುದಾಯಗಳು ಭಾರತದಲ್ಲಿ ವ್ಯವಹರಿಸಲು ಅವಕಾಶವನ್ನು ಕಲ್ಪಿಸಲು ಪ್ರಯತ್ನಿಸಿತು. ಇದರ ಹಿಂದೆ ಬ್ರಿಟಿಶ್ ಪ್ರಭುತ್ವದ ಮೇಲೆ ಒತ್ತಡಗಳನ್ನು ಪ್ರಾಂತೀಯ ವರ್ತಕರು ಹಾಕುತ್ತಿದ್ದರು. ಬ್ರಿಟನ್‌ನಲ್ಲಾದ ಆಂತರಿಕ ದಂಗೆಗಳು, ಕಾನೂನುಗಳ ನಿಟ್ಟಿನಲ್ಲಿ ಕಂಪನಿಯ ವ್ಯಾಪಾರದ ಮೇಲಿನ ಹಿಡಿತವನ್ನು ಸಡಿಲಗೊಳಿಸಲು ಪ್ರಯತ್ನಿಸಿತು. ವಸಾಹತುಶಾಹಿ ನೀತಿಯನ್ನು ಸಾಮ್ರಾಜ್ಯಶಾಹಿ ನೀತಿಗೆ ಪೂರಕವಾಗಿ ಕಾರ್ಯನಿರ್ವಹಿಸುವ ನಿಟ್ಟಿನಲ್ಲಿ ಚಾರ್ಟರ್ ಕಾಯಿದೆಗಳ ಜಾರಿಗೆ ಅವಕಾಶವನ್ನು ಉಂಟುಮಾಡಿತು. ಅಂತಹ ಅಂಶಗಳನ್ನು ನಾವು ೧೮೧೩ರ ಚಾರ್ಟರ್ ಕಾಯಿದೆ, ೧೮೩೩ರ ಚಾರ್ಟರ್ ಕಾಯಿದೆ ಮತ್ತು ೧೮೫೩ರ ಚಾರ್ಟರ್ ಕಾಯಿದೆಗಳಲ್ಲಿ ಕಾಣಬಹುದಾಗಿದೆ. ಈ ಮೂರು ಭಾರತದ ಆಡಳಿತದಲ್ಲಿ ಮಾತ್ರವಲ್ಲದೇ ಭಾರತದ ಆರ್ಥಿಕತೆಯಲ್ಲಿಯೂ ಸಹ ಮಹತ್ವದ ತಿರುವನ್ನು ತಂದುಕೊಟ್ಟ ಕಾಯಿದೆಗಳಾಗಿವೆ. ಜೊತೆಗೆ ಭಾರತೀಯ ರಾಜಕೀಯ, ಆರ್ಥಿಕತೆ, ಸಾಮಾಜಿಕತೆ, ಧಾರ್ಮಿಕತೆ ಮತ್ತು ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ವಿಚಾರಗಳ ವಿವಿಧ ಆಯಾಮಗಳನ್ನು ಸೃಷ್ಟಿಸಿತು. ಅವುಗಳ ಬಗೆಗೆ ಇಲ್ಲಿ ಚರ್ಚಿಸಲಾಗಿದೆ.

ಚಾರ್ಟರ್ ಕಾಯಿದೆಗಳು ಆರ್ಥಿಕ ಕ್ಷೇತ್ರದಲ್ಲಿ ವಿವಿಧ ಆಯಾಮಗಳಿಗೆ ಒಂದು ಹೊಸ ತಿರುವನ್ನು ನೀಡಿದವು. ಇದರಿಂದಾಗಿ ಆರ್ಥಿಕ ಚಟುವಟಿಕೆಯ ಮೂಲಭೂತ ಅಂಶಗಳಾದ ಭೂ ಹಿಡುವಳಿ ಮತ್ತು ವಾಣಿಜ್ಯ–ವ್ಯಾಪಾರದಲ್ಲಿ ಆದ ಬದಲಾವಣೆಗಳು ಭಾರತದ ಆಡಳಿತದಲ್ಲಿ ಮಹತ್ತರವಾದ ಬದಲಾವಣೆಗಳನ್ನು ತಂದಿತು. ಅದರೊಂದಿಗೆ ಭಾರತದ ಸಂಪತ್ತು ಭರಿತ ಪ್ರದೇಶಗಳು ಮತ್ತು ಒಳನಾಡಿನ ಕೇಂದ್ರ ಮತ್ತು ಪ್ರಮುಖ ರೇವುಪಟ್ಟಣಗಳು ಹಾಗೂ ಅದರ ಸುತ್ತಮುತ್ತಲಿನ ಪ್ರದೇಶಗಳಲ್ಲಿ ನಗರೀಕರಣದ ಪ್ರಕ್ರಿಯೆಯು ಚುರುಕುಗೊಂಡಿತು. ನಗರೀಕರಣದ ಪ್ರಕ್ರಿಯೆಯಲ್ಲಿ ಚಾರ್ಟರ್ ಕಾಯಿದೆಗಳು ಪ್ರಭಾವವನ್ನು ಬೀರಿದವು. ಬೆಂಗಳೂರು ಪ್ರದೇಶದ ನಗರೀಕರಣದ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಹಲವು ಅಂಶಗಳಲ್ಲಿ ಪ್ರಭಾವವನ್ನು ಬೀರುತ್ತದೆ. ಅಂಶಗಳಲ್ಲಿ ಚಾರ್ಟರ್ ಕಾಯಿದೆಗಳು ಒಂದು. ಎಲ್ಲ ಚಾರ್ಟರ್ ಕಾಯಿದೆಗಳನ್ನು ಇಲ್ಲಿ ಚರ್ಚಿಸದೇ ನಗರೀಕರಣದ ಪ್ರಕ್ರಿಯೆಯನ್ನು ಚುರುಕುಗೊಳಿಸಿದ ಚಾರ್ಟರ್ ಕಾಯಿದೆಗಳನ್ನು ಮಾತ್ರ ಇಲ್ಲಿ ಚರ್ಚಿಸಲಾಗಿದೆ. ನಗರೀಕರಣದ ಪ್ರಕ್ರಿಯೆಯನ್ನು ಚಾರ್ಟರ್ ಕಾಯಿದೆಗಳ ಮೂಲಕ ವಿಶ್ಲೇಷಣೆಯನ್ನು ಮಾಡುವ ಉದ್ದೇಶವನ್ನು ಇಲ್ಲಿ ಹೊಂದಿದೆ.

ಚಾರ್ಟರ್ ಕಾಯಿದೆಗಳ ಮೂಲಕ ಬ್ರಿಟಿಶ್ ಪ್ರಭುತ್ವವು ಕಂಪನಿಯ ಅಧಿಕಾರವನ್ನು ಕಡಿಮೆಗೊಳಿಸುತ್ತಾ ಬಂದಾಗ ಕಂಪನಿಯ ವರ್ತಕರು ಮತ್ತು ಕಂಪನಿಯ ಭಾರತದ ಪ್ರಭುತ್ವವು ತಮ್ಮ ವ್ಯಾಪಾರದ ಲಾಭವನ್ನು ಇನ್ನಿತರ ರೂಪದಲ್ಲಿ ಪಡೆಯುವ ನಿಟ್ಟಿನಲ್ಲಿ ಹಲವು ರೀತಿ ನೀತಿಗಳನ್ನು ಅಳವಡಿಸಿಕೊಳ್ಳ ತೊಡಗಿದವು. ಇದರಿಂದಾಗಿ ಭಾರತದಲ್ಲಿ ಹೊಸ ಹೊಸ ತೆರನಾದ ಆರ್ಥಿಕ ಮತ್ತು ಆಡಳಿತಾತ್ಮಕ ಭೂ ಸುಧಾರಣಾ ಕಾಯಿದೆಗಳು, ಇಂಗ್ಲೀಶ್ ಶಿಕ್ಷಣ ವ್ಯವಸ್ಥೆ ಸುಧಾರಣೆ, ದತ್ತು ಮಕ್ಕಳಿಗೆ ಹಕ್ಕಿಲ್ಲ ನೀತಿ ಮೊದಲಾದ ನೀತಿಗಳು ಮತ್ತು ಆಯಾಮಗಳು ಪ್ರಾರಂಭವಾದವು.[೨] ಇದು ಭಾರತದಲ್ಲಿ ಕಂಪನಿ ಮತ್ತು ಸ್ಥಳೀಯರ ನಡುವೆ ಸಂಘರ್ಷಕ್ಕೆ ಇಳಿಯಲು ಎಡೆಮಾಡಿಕೊಟ್ಟಿತ್ತು. ಫಲವಾಗಿ ೧೮೫೭ರ ದಂಗೆಗೂ ಸಹ ಅವಕಾಶವನ್ನು ಮಾಡಿಕೊಟ್ಟಿತ್ತು. ಇದನ್ನೇ ಕಾಯುತ್ತಿದ್ದ ಬ್ರಿಟಿಶ್ ಪ್ರಭುತ್ವ ತನ್ನ ಸಾಮ್ರಾಜ್ಯಶಾಹಿತ್ವವನ್ನು ಭಾರತದ ಮೇಲೆ ಸಾರಿತು. ಇವೆಲ್ಲಾ ಘಟನಾವಳಿಗಳ ಹಿಂದೆ ಚಾರ್ಟರ್ ಕಾಯಿದೆಗಳ ಪಾತ್ರವು ಪ್ರಮುಖವಾಗಿದೆ.

೧೮೧೩ರ ಚಾರ್ಟರ್ ಕಾಯಿದೆಯು ಭಾರತ, ವಸಾಹತುಶಾಹಿ ಪ್ರಭುತ್ವ ಮತ್ತು ಬ್ರಿಟಿಶ್ ಪ್ರಭುತ್ವ ಚರಿತ್ರೆಯಲ್ಲಿ ನಿರಂತರ ಚರ್ಚೆಗೆ ಗ್ರಾಸವಾದ ಕಾಯಿದೆಯಾಗಿದೆ. ಇದರ ಮಹತ್ವ ಅಂದಿನ ವಿದ್ಯಮಾನಗಳನ್ನು ತಿಳಿದಾಗ ಮಾತ್ರ ಸಾಧ್ಯವಾಗುತ್ತದೆ. ಜೊತೆಗೆ ೧೮೧೩ರ ಕಾಯಿದೆಯ ನೀತಿ ನಿಯಮಾವಳಿಗಳು ರೂಪುಗೊಂಡ ಬಗೆಯನ್ನು ಮೊದಲು ಗ್ರಹಿಸಬಹುದಾಗಿದೆ.

ಬ್ರಿಟನ್ ಅಮೆರಿಕಾ ಸ್ವಾತಂತ್ರ್ಯ ಸಂಗ್ರಾಮದ ಫಲವಾಗಿ ತನ್ನ ಹದಿಮೂರು ವಸಾಹತು ನೆಲೆಗಳನ್ನು ಕಳೆದುಕೊಳ್ಳುವ ಭಯ ಒಂದೆಡೆಯಾದರೆ. ಇನ್ನೊಂದೆಡೆ ದಿನೇ ದಿನೇ ಕಂಪನಿಯು ಆರ್ಥಿಕವಾಗಿ ಪ್ರಬಲಗೊಳ್ಳುತ್ತಾ ಪ್ರಭುತ್ವದ ಮೇಲೆ ಹಿಡಿತವನ್ನು ಸಾಧಿಸಲು ಪ್ರಯತ್ನಿಸುತ್ತಿತ್ತು. ಕಂಪನಿಯ ಅಧಿಕಾರವನ್ನು ಕಡಿತಗೊಳಿಸುವ ಉದ್ದೇಶವನ್ನು ಸಾಮ್ರಾಜ್ಯಶಾಹಿ ಪ್ರಭುತ್ವವು ಹೊಂದಿತ್ತು. ೧೮೦೦ರ ದಶಕದಲ್ಲಿ ಯುರೋಪಿನಲ್ಲಾದ ಯುದ್ಧಗಳು, ಖಂಡಾಂತರ ಪದ್ಧತಿ, ಕಾರ್ನ್ ಲಾ ಮತ್ತು ಆಹಾರದ ಅಭಾವವನ್ನು ಸೃಷ್ಟಿಸಿತು. ಸಂಯುಕ್ತ ರಾಜ್ಯವಾದ ಬ್ರಿಟನ್‌ನಲ್ಲಿ ಏಕಸ್ವಾಮ್ಯವನ್ನು ಹೊಂದಿದ್ದ ಲಂಡನ್ನಿನ ವರ್ತಕರನ್ನು ಬಿಟ್ಟು ಇನ್ನಿತರ ಪ್ರಾಂತ್ಯಗಳ ವರ್ತಕ ಸಮುದಾಯಗಳು ಮತ್ತು ಉತ್ಪಾದಕರು ತಮಗೂ ಬ್ರಿಟನ್, ಪೂರ್ವ ಏಷಿಯಾ ಮತ್ತು ಭಾರತದೊಂದಿಗೆ ವ್ಯಾಪಾರ–ವಾಣಿಜ್ಯವನ್ನು ಮಾಡಲು ಅವಕಾಶಗಳನ್ನು ಕಲ್ಪಿಸಿಕೊಡುವಂತೆ ಒತ್ತಡವನ್ನು ಹೇರುತ್ತಿದ್ದವು. ಈಗಾಗಲೇ ಒಂದು ಹೊಸ ಪಂಥ ಬ್ರಿಟನ್ನಿನಲ್ಲಿ ಉದಯಿಸಿದ್ದು. ಉದಾರವಾದದ ಚಿಂತನೆಗಳು ಸಾಮ್ರಾಜ್ಯಶಾಹಿ ಪ್ರಭುತ್ವವನ್ನು ಕಂಪನಿಯ ಕರಾರುಗಳಲ್ಲಿ ಸುಧಾರಣೆಯನ್ನು ಮಾಡುವಂತೆ ಪ್ರೇರೇಪಿಸಿತು. ಇದರ ಬಗೆಗೆ ನಿರಂತರವಾಗಿ ಬ್ರಿಟನ್ನಿನ ಸಂಸತ್ತು ಚರ್ಚಿಸಿತು. ಇವೆಲ್ಲದರ ಫಲವಾಗಿ ೧೮೧೩ರ ಚಾರ್ಟರ್ ಕಾಯಿದೆ ಕರಾರುಗಳು ರೂಪವನ್ನು ಪಡೆದವು.

೧೮೧೩ರ ಚಾರ್ಟರ್ ಕಾಯಿದೆಯು ಉಳಿದೆಲ್ಲಾ ಚಾರ್ಟರ್ ಕಾಯಿದೆಗಿಂತ ಪ್ರಮುಖವಾಗಿದೆ. ೧೮೧೩ರ ತನಕ ಕಂಪನಿಯು ಭಾರತದ ವ್ಯಾಪಾರ–ವಾಣಿಜ್ಯಕ್ಕೆ ಅಷ್ಟೇ ಸೀಮಿತಗೊಂಡಿತ್ತು. ಆದರೆ ಬ್ರಿಟಿಶ್ ಸಾಮ್ರಾಜ್ಯಶಾಹಿ ಪ್ರಭುತ್ವವು ಈ ಕಾಯಿದೆಯ ಮೂಲಕ ಕಂಪನಿಯು ಭಾರತದ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಕ್ಷೇತ್ರಕ್ಕೆ ಪ್ರವೇಶಿಸುವಂತೆ ಮಾಡಿತು. ಫಲವಾಗಿ ನಗರೀಕರಣದ ಪ್ರಕ್ರಿಯೆಯಲ್ಲಿ ಆಮೂಲಾಗ್ರವಾಗಿ ಅಡಿಪಾಯವನ್ನು ಹಾಕಲು ಅವಕಾಶವನ್ನು ನೀಡಿತು. ಈ ಕಾಯಿದೆಯ ಪ್ರಮುಖ ಕರಾರುಗಳು ಮತ್ತು ನಿಬಂಧನೆಗಳನ್ನು ಈ ಕೆಳಗಿನಂತೆ ಕಾಣಬಹುದಾಗಿದೆ.

ಕಂಪನಿಯು ಭಾರತದಲ್ಲಿ ಹೊಂದಿದ್ದ ವ್ಯಾಪಾರೀ ಏಕಸ್ವಾಮ್ಯವನ್ನು ರದ್ದುಗೊಳಿಸಲಾಯಿತು. ಚಹಾದ ವ್ಯಾಪಾರ ಮತ್ತು ಚೀನಾದೊಂದಿಗೆ ವ್ಯಾಪಾರ ಮಾಡುವ ಹಕ್ಕನ್ನು ಮಾತ್ರ ನೀಡಲಾಯಿತು. ಕಂಪನಿಯ ಹಕ್ಕನ್ನು ೨೦ ವರ್ಷಗಳಿಗೆ ವಿಸ್ತರಿಸಿತು. ಧಾರ್ಮಿಕ ವ್ಯವಹಾರಗಳಲ್ಲಿ ಕಂಪನಿಯು ತನ್ನ ಹಸ್ತಕ್ಷೇಪವನ್ನು ಮಾಡಬಾರದೆಂದು ತಿಳಿಸಿ, ಧಾರ್ಮಿಕ ವ್ಯವಹಾರಗಳ ಸಂಪೂರ್ಣ ಹಕ್ಕನ್ನು ಧಾರ್ಮಿಕ ಮಂಡಲಿಯ ಮೂಲಕ ಪೋಪ್‌ಗೆ ಕೊಡಲಾಯಿತು. ಭಾರತದಲ್ಲಿ ಭೂಮಿಗಳ ಮೇಲೆ ಮಾಲಿಕತ್ವವನ್ನು ಹೊಂದುವ ಹಕ್ಕನ್ನು ಕಂಪನಿಯನ್ನು ಬಿಟ್ಟು ಇತರರಿಗೂ ಅವಕಾಶವನ್ನು ಕಲ್ಪಿಸಲಾಯಿತು. ಒಂದು ಲಕ್ಷ ರೂಪಾಯಿಯನ್ನು ಭಾರತೀಯರ ಶಿಕ್ಷಣಕ್ಕೆ ತೆಗೆದಿರಿಸಿತು.

೧೮೧೩ರ ಕಾಯಿದೆ ಪ್ರತಿಯೊಂದು ಕರಾರುಗಳ ಬಗ್ಗೆಯು ಬ್ರಿಟಿಶ್ ಬೋರ್ಡ್ ಆಫ್ ಟ್ರೇಡಿನಲ್ಲಿ ಸುದೀರ್ಘವಾದ ಚರ್ಚೆಗಳು ನಡೆದವು. ಪ್ರತಿ ಹಂತದಲ್ಲಿ ವಸಾಹತುನೀತಿಯನ್ನು ಭಾರತದಲ್ಲಿ ಉಳಿಸಿಕೊಳ್ಳುವ ಉದ್ದೇಶವನ್ನು ಇಟ್ಟುಕೊಂಡೆ ಕರಾರುಗಳನ್ನು ರೂಪಿಸಲಾಯಿತು. ಇದು ವಸಾಹತುನೀತಿಯ ಜೊತೆ ಬ್ರಿಟಿಶ್ ಸಾಮ್ರಾಜ್ಯಶಾಹಿ ನೀತಿಯ ಹಿತಾಸಕ್ತಿಯ ಆಡಳಿತ ಮತ್ತು ಆರ್ಥಿಕ ವಿಚಾರಗಳಿಗೆ ಸಂಬಂಧಿಸಿದ ಪ್ರಮುಖ ಕರಾರುಗಳಾಗಿವೆ. ಕಂಪನಿಯ ಏಕಸ್ವಾಮ್ಯ ರದ್ದುಗೊಂಡಿದ್ದರಿಂದಾಗಿ ಕಂಪನಿಯ ವರ್ತಕರಲ್ಲದೇ ಬ್ರಿಟನ್ನಿನ ಇನ್ನಿತರ ವರ್ತಕ ಸಮುದಾಯಗಳು ಮತ್ತು ಇನ್ನಿತರ ದೇಶಗಳ ವರ್ತಕರ ಸಮುದಾಯಗಳು ತಮ್ಮ ವ್ಯಾಪಾರಿ ಚಟುವಟಿಕೆಯನ್ನು ಭಾರತದಲ್ಲಿ ಪ್ರಾರಂಭಿಸಲು ಅವಕಾಶವನ್ನು ಉಂಟುಮಾಡಿತು. ಫಲವಾಗಿ ಭಾರತದಲ್ಲಿ ಬ್ರಿಟಿಶ್ ನೆಲೆಗಳಲ್ಲಿ ಯುರೋಪಿಯನ್ನರು ನೆಲೆನಿಂತು ಇಲ್ಲಿಯ ವ್ಯಾಪಾರದಲ್ಲಿ ಭಾಗಿಯಾದರು.[೫]

ಈ ತೆರನಾದ ಬೆಳವಣಿಗೆಗಳು ಬ್ರಿಟಿಶ್ ದಂಡು ಪ್ರದೇಶದ ಜನಸಾಂದ್ರತೆಯನ್ನು ಹೆಚ್ಚಿಸಿತು. ಬೆಂಗಳೂರಿನ ಪ್ರದೇಶದ ಸುತ್ತಮುತ್ತಲಿನ ಪ್ರದೇಶಗಳಾದ ಜಕ್ಕೂರು, ತಾವರೆಕೆರೆ, ಮೊದಲಾದ ಪ್ರದೇಶಗಳಲ್ಲಿ ಎಸ್ಟೇಟ್ ಎಂಬ ಪರಿಕಲ್ಪನೆಯ ಭೂ ಹಿಡುವಳಿಗಳು ಉದಯಿಸಿದವು. ಎಸ್ಟೇಟ್‌ನ ಮಾಲೀಕರು ಮತ್ತು ಪಾಂಟ್ಲೇಶನ್ ಮಾಲೀಕರು ಬೆಂಗಳೂರು ಪ್ರದೇಶದ ದಂಡು ಪ್ರದೇಶದಲ್ಲಿ ನೆಲೆಸಿ ತಮ್ಮ ಪ್ಲಾಂಟೇಶನ್ ಕಾರ್ಯ ಚಟುವಟಿಕೆಗಳಲ್ಲಿ ತೊಡಗಿಕೊಳ್ಳ ತೊಡಗಿದರು. ಅದು ಪರೋಕ್ಷವಾಗಿ ಒಂದು ವ್ಯವಸ್ಥಿತ ಯುರೋಪಿನ ಮಾದರಿಯ ಆಧುನಿಕ ಜೀವನಶೈಲಿಯನ್ನು ಸ್ಥಳೀಯವಾಗಿ ರೂಪಿಸಲು ಕಾರಣವಾಗಿ ದಂಡು ಪ್ರದೇಶಗಳು ನಾಗರಿಕ ನೆಲೆಗಳಾಗಿ ಪರಿವರ್ತಿತಗೊಂಡವು. ಭಾರತೀಯ ಬ್ರಿಟಿಶ್ ದಂಡು ನಾಗರಿಕ ನೆಲೆಗಳಾದವು. ಸ್ಥಳೀಯ ಆಡಳಿತದಲ್ಲಿ ಈ ಯುರೋಪಿನ ನಾಗರಿಕರು ಪಾಲ್ಗೊಂಡು ತಮ್ಮ ವ್ಯಾಪಾರ ಮತ್ತು ವಾಣಿಜ್ಯಕ್ಕೆ ಪೂರಕವಾಗಿ ಬ್ರಿಟಿಶ್ ಪ್ರಭುತ್ವವನ್ನು ಇಲ್ಲಿಯ ಮೂಲಭೂತ ಸೌಲಭ್ಯವನ್ನು ಒದಗಿಸುವಂತೆ ಬೇಡಿಕೆಯನ್ನು ಮುಂದಿಟ್ಟರು. ವಸಾಹತುಶಾಹಿ ಪ್ರಭುತ್ವವು ಇಂತಹ ಬೇಡಿಕೆಗಳಿಗೆ ಬೇಗ ಸ್ಪಂದಿಸುತ್ತಿತ್ತು. ಇದರಿಂದಾಗಿ ಒಂದು ಯೋಜಿತ ನಗರಗಳ ರಚನೆಗಳ ನೀಲಿ ನಕಾಶೆಗಳನ್ನು ತಯಾರಿಸಿ ಅದರಂತೆ ನಗರಗಳ ನಿರ್ಮಾಣದ ಕಾರ್ಯ ಆರಂಭವಾಯಿತು. ಇಂತಹ ನಗರಗಳ ರಚನೆಯಲ್ಲಿ ಯುರೋಪಿನ ನೆಲೆ ಮತ್ತು ಸ್ಥಳೀಯರ ನೆಲೆಗಳೆಂಬ ಎರಡು ಗುಂಪನ್ನು ಕಾಣಬಹುದು. ಮದ್ರಾಸ್, ಬಾಂಬೆ, ಕಲ್ಕತ್ತಗಳಂತೆ ಬೆಂಗಳೂರು ಪ್ರದೇಶದಲ್ಲಿ ಎರಡು ನಗರಗಳ ಸೃಷ್ಟಿಯಾಯಿತು. ಒಂದು ಬೆಂಗಳೂರು ಪೇಟೆ ಮತ್ತು ಇನ್ನೊಂದು ಬೆಂಗಳೂರು ದಂಡು ಮತ್ತು ನಾಗರಿಕ ನೆಲೆ. ಬೆಂಗಳೂರು ಪೇಟೆಗಿಂತ ಬೆಂಗಳೂರು ದಂಡು ಮತ್ತು ನಾಗರಿಕ ನೆಲೆಯು ನೈರ್ಮಲ್ಯತೆ ಮತ್ತು ಉತ್ತಮ ಮೂಲಭೂತ ಸೌಲಭ್ಯವನ್ನು ಪಡೆದುಕೊಳ್ಳಲು ಕಾರಣವಾಯಿತು. ಈ ಪ್ರದೇಶ ಸ್ಥಳೀಯವಾಗಿಯೇ ಒಂದು ಪರಕೀಯರ ನಗರದಂತೆ ಕಾಣುತ್ತಿದ್ದ ವಿಚಾರಗಳನ್ನು

ಅಂದಿನ ಬರವಣಿಗೆಗಳಲ್ಲಿ ಕಾಣಬಹುದಾಗಿದೆ. ಅಲ್ಲಿಯ ರಸ್ತೆಗಳು, ಮನೆಗಳ ನಿರ್ಮಾಣ, ಸಾರ್ವಜನಿಕ ಕಟ್ಟಡಗಳು, ಮಳಿಗೆ ಮುಂಗ್ಗಟ್ಟುಗಳು ಎಲ್ಲವೂ ಸಹ ಯುರೋಪಿನ ಮಾದರಿಯ ಶೈಲಿಯನ್ನು ಪ್ರತಿ ಬಿಂಬಿಸುತ್ತಿದ್ದವು. ಜೊತೆಗೆ ಅವರಿಗೆ ಸಹಾಯಕರಾಗಿ ಒಂದು ಹೊಸ ವರ್ಗಗಳ ಸೃಷ್ಟಿಯಾದವು. ಇದನ್ನು ಬ್ಲಾಕ್‌ಪಲ್ಲಿ ಎಂದು ಕರೆಯುತ್ತಿದ್ದರು. ಈ ರೀತಿಯ ಪ್ರದೇಶಗಳು ಕೂಲಿಕಾರ್ಮಿಕ ನೆಲೆಗಳಾಗಿದ್ದವು. ಇಂತಹ ನಗರಗಳ ಸಾಮೀಪ್ಯದಲ್ಲಿಯೇ ರೂಪುಗೊಳ್ಳುತ್ತಿದ್ದವು. ಇಲ್ಲಿ ನೆಲೆಸುವ ಜನರು ಸ್ಥಳೀಯರಿಗಿಂತ ಹೆಚ್ಚಾಗಿ ಬೇರೆ ಬೇರೆ ಪ್ರದೇಶ ಅಥವಾ ರಾಜ್ಯಗಳಿಂದ ವಲಸೆ ಬಂದ ಜನರಾಗಿದ್ದರು. ಈ ಅಂಶವನ್ನು ಅಲ್ಲಿಯ ಜನಗಣತಿಯ ಆಧಾರಗಳು ಸ್ಪಷ್ಟಪಡಿಸುತ್ತದೆ. ಇದರಿಂದಾಗಿ ಇಂತಹ ನೆಲೆಗಳಲ್ಲಿ ತ್ರಿಭುಜಾಕಾರದ ಸಂಸ್ಕೃತಿಯ ದುಭಾಷಿಯ ಜನರ ಮಾಧ್ಯಮ ವರ್ಗವನ್ನು ಸೃಷ್ಟಿಸಿತು. ಇವರು ಪಾಶ್ಚಿಮಾತ್ಯ ಸಂಸ್ಕೃತಿಯ ಅನುಸರಣೆಯೊಂದಿಗೆ ವಸಾಹತುಶಾಹಿಯ ಚಿಂತನೆಗಳಿಂದ ಪ್ರಭಾವಕ್ಕೆ ಒಳಗಾಗಿ ವಸಾಹತು ಕಂಪನಿಯ ಪೂರಕವಾಗಿ ಕಾರ್ಯವನ್ನು ನಿರ್ವಹಿಸುವುದಲ್ಲದೇ ಅವರ ಗ್ರಾಹಕರಾಗಿಯೂ ಪರಿವರ್ತನೆಗೊಂಡರು.

೧೮೧೩ರ ಕಾಯ್ದೆಯು ಭಾರತದಲ್ಲಿ ಭೂಮಿಯನ್ನು ಯುರೋಪಿಯನ್ನರು ಹೊಂದಲು ಅವಕಾಶವನ್ನು ಉಂಟುಮಾಡಿತು. ಇದರಿಂದಾಗಿ ಕೃಷಿ ವಾಣಿಜ್ಯೀಕರಣದ ಪ್ರಕ್ರಿಯೆಯನ್ನು ಚುರುಕುಗೊಳಿಸಿತು. ಭಾರತದ ಆರ್ಥಿಕತೆಯಲ್ಲಿ ಇದರ ಪ್ರತಿಬಿಂಬಗಳನ್ನು ಕಾಣಬಹುದಾಗಿದೆ. ಭೂ ಹಿಡುವಳಿಯಲ್ಲಿ ಒಂದು ಹೊಸ ತೆರನಾದ ಪರಿಕಲ್ಪನೆಗಳು ಬೆಳವಣಿಗೆ ಹೊಂದಿ ಒಂದು ವರ್ಗವನ್ನೇ ಸೃಷ್ಟಿಸಿತು. ಎಸ್ಟೇಟ್, ಪ್ಲಾಂಟೇಶನ್, ಪ್ಲಾಂಟರ್ಸ್, ಎಸ್ಟೇಟ್ ಮಾಲೀಕ ಎಂಬ ದೊಡ್ಡ ಮಟ್ಟದ ಹಿಡುವಳಿದಾರರನ್ನು ಸೃಷ್ಟಿಸಿ ಅವರು ಸಹ ವಸಾಹತು ಮತ್ತು ಸಾಮ್ರಾಜ್ಯಶಾಹಿ ನೀತಿಗೆ ಪೂರಕವಾಗಿ ನಡೆದುಕೊಳ್ಳುವಂತೆ ಮಾಡಲಾಯಿತು. ಪ್ಲಾಂಟರ್ಸ್‌ಗಳು ಸಂಘಟಿತರಾಗಿ ಕಂಪನಿಯ ಕಾನೂನುಗಳು ಮತ್ತು ನಿಯಮಗಳಿಗೆ ಬದ್ಧರಾಗಿದ್ದರು. ಕಾರಣ ಬಹುತೇಕವಾಗಿ ಇವರು ಭಾರತದ ವಿವಿಧ ಪ್ರದೇಶಗಳಲ್ಲಿ ಕಂಪನಿಯ ಆಡಳಿತದಲ್ಲಿ ಸೇವೆಗಳನ್ನು ಸಲ್ಲಿಸಿದವರಾಗಿದ್ದರು. ತಮ್ಮ ಆದಾಯವನ್ನು ಇಲ್ಲಿಯ ಭೂ ಹಿಡುವಳಿಗಳ ಮೇಲೆ ಹೂಡಿಕೆಯನ್ನು ಮಾಡುತ್ತಿದ್ದರು. ಇಲ್ಲವೇ ವ್ಯಾಪಾರದಲ್ಲಿ ಬಂಡವಾಳವನ್ನು ಹಾಕಿ ತಮ್ಮ ನಿವೃತ್ತಿ ಜೀವನವನ್ನು ಸ್ವಲ್ಪ ದಿನಗಳ ಕಾಲ ಸ್ಥಳೀಯವಾಗಿ ನೆಲೆನಿಂತು ಜೀವಿಸುತ್ತಿದ್ದರು. ಯುರೋಪಿಯನ್ನರ ಈ ರೀತಿಯ ಆರ್ಥಿಕ ಜೀವನ ಕ್ರಮವು ಬೆಂಗಳೂರು ಪ್ರದೇಶದ ಸುತ್ತಮುತ್ತಲಿನಲ್ಲಿ ಕೃಷಿ ಚಟುವಟಿಕೆಯನ್ನು ಮತ್ತು ವ್ಯಾಪಾರಿ ಚಟುವಟಿಗಳನ್ನು ಹೆಚ್ಚಿಸಿತು.

ಚಾರ್ಟರ್ ಕಾಯ್ದೆಯು ಕ್ರೈಸ್ತ ಮಿಷನರಿಗಳಿಗೆ ಭಾರತದಲ್ಲಿ ಧರ್ಮ ಪ್ರಚಾರ ಅನುಮತಿಯನ್ನು ನೀಡಿತು. ಆದರೆ ಇದರ ಬಗೆಗೆ ಕಂಪನಿ, ಕ್ರೈಸ್ತ ಮಿಷನರಿಗಳು ಮತ್ತು ಬ್ರಿಟಿಶ್ ಸಾಮ್ರಾಜ್ಯ ಗಣನೀಯ ಚರ್ಚೆಯನ್ನು ಮಾಡಿ ನಂತರವೇ ಕಂಪನಿಯು ಹಸ್ತಕ್ಷೇಪದ ರದ್ದತಿ ಮತ್ತು ಕ್ರೈಸ್ತ

ಧರ್ಮದ ಪ್ರಚಾರದ ಕಾರ್ಯವನ್ನು ಭಾರತದಲ್ಲಿ ಮಾಡಲು ಅವಕಾಶವನ್ನು ಮಾಡಿಕೊಡಲಾಯಿತು. ಚಾರ್ಟರ್ ಕಾಯಿದೆಯು ಕ್ರೈಸ್ತ ಮಿಷನರಿಗಳಿಗೆ ಅವಕಾಶವನ್ನು ನೀಡುವುದರ ಹಿಂದೆ ಸಾಮ್ರಾಜ್ಯಶಾಹಿ ಉದ್ದೇಶವನ್ನು ಸಹ ನೋಡಬಹುದು. ಅದು ಭಾರತೀಯರನ್ನು ವಸಾಹತು ಮತ್ತು ಸಾಮ್ರಾಜ್ಯಶಾಹಿ ನೀತಿಗೆ ಅನುಗುಣವಾಗಿ ಭಾರತೀಯರನ್ನು ಪರಿವರ್ತಿಸುವ ಮತ್ತು ವಸಾಹತುಶಾಹಿ ಶಕ್ತಿಯ ಮುಖ್ಯ ಗ್ರಾಹಕರನ್ನಾಗಿಸುವ ಉದ್ದೇಶವನ್ನು ಹೊಂದಿತ್ತು. ಆ ಮೂಲಕ ಭಾರತವನ್ನು ಬ್ರಿಟಿಶರ ಮಾರುಕಟ್ಟೆಗೆ ಪೂರಕವಾದ ವಾತಾವರಣವನ್ನು ನಿರ್ಮಿಸುವ ಯೋಜನೆಯನ್ನು ಚಾರ್ಟರ್ ಕಾಯಿದೆಯಲ್ಲಿ ಕಾಣಬಹುದಾಗಿದೆ. ಅದಕ್ಕೆ ಸಂಬಂಧಿಸಿದಂತೆ ಮಿಷನರಿಗಳಿಗೆ ಸಂಪೂರ್ಣವಾದ ಹಕ್ಕನ್ನು ನೀಡಿತು.

ಕ್ರೈಸ್ತ ಧರ್ಮದ ಪ್ರಚಾರದ ಕಾರ್ಯದಲ್ಲಿ ಭಾರತಕ್ಕೆ ಬಂದ ಲಂಡನ್ ಮಿಷನ್, ವೆಲ್ಲಸ್ಲಿಯನ್ ಮಿಷನ್, ಬ್ಯಾಸಿಲ್ ಮಿಷನ್ ಮೊದಲಾದ ಮಿಷನರಿಗಳು ಭಾರತದ ಬೇರೆ ಬೇರೆ ಪ್ರದೇಶಗಳಿಗೆ ತೆರಳಿ ಅಲ್ಲಿ ಅವರದೇ ಆದ ತೆರದಲ್ಲಿ ಕಾರ್ಯ ಚಟುವಟಿಕೆಯನ್ನು ಪ್ರಾರಂಭಿಸಿತು. ಶಿಕ್ಷಣವೆಂದರೆ ಅದು ಪಾಶ್ಚಿಮಾತ್ಯ ಸಂಸ್ಕೃತಿ ಮತ್ತು ಕೈಗಾರಿಕಾ ತರಬೇತಿಯನ್ನು ಭಾರತೀಯರಿಗೆ ನೀಡಿ ಗ್ರಾಹಕರಾಗಿ ಮತ್ತು ತಮಗೆ ಬೇಕಾದ ಉಪ–ಉತ್ಪನ್ನಗಳ ಕೈಗಾರಿಕೆಯಲ್ಲಿ ಅವರನ್ನು ಬಳಸಿಕೊಳ್ಳುವ ಉದ್ದೇಶವನ್ನು ಹೊಂದಿತ್ತು. ಈ ನಿಟ್ಟಿನಲ್ಲಿ ಯುರೋಪಿಯನ್ನರ ಅಧೀನದಲ್ಲಿ ಕರಕುಶಲ ಕರ್ಮಿಗಳಿಗೆ ಹೊಸ ತೆರನಾದ ಕೌಶಲ್ಯತೆಯನ್ನು ನೀಡಲು ಮುಂದಾದರು. ಹೀಗೆ ಕ್ರೈಸ್ತ ಮಿಷನರಿಗಳು ಶಿಕ್ಷಣ, ಆರೋಗ್ಯ ಕ್ಷೇತ್ರದಲ್ಲಿ ಸಲ್ಲಿಸಿದ ಸೇವೆಗಳು ಪರೋಕ್ಷವಾಗಿ ನಗರೀಕರಣದ ಪ್ರಕ್ರಿಯೆಯು ಪೂರಕ ವಾತಾವರಣಕ್ಕೆ ಒತ್ತು ನೀಡಿತು.

೧೮೧೩ರ ಚಾರ್ಟರ್ ಕಾಯಿದೆಯು ಇತಿಹಾಸಕಾರರ ಚಿಂತನೆಗೆ ಹೊಸ ಚಿಂತನೆಗಳ ಔತಣವನ್ನು ನೀಡಿತು. ಕಂಪನಿಯ ವ್ಯಾಪಾರದ ಒಡೆತನವನ್ನು ಕೊನೆಗಾಣಿಸಿತು. ಜೊತೆಗೆ ಭಾರತದಲ್ಲಿ ಬ್ರಿಟಿಶ್ ವರ್ತಕರ ಕಾರ್ಯ ಚಟುವಟಿಕೆಯನ್ನು ಬ್ರಿಟನ್, ಭಾರತ ಮತ್ತು ದಕ್ಷಿಣ ಪೂರ್ವಾರ್ತ ಏಷ್ಯಾ ರಾಷ್ಟ್ರಗಳಿಗೆ ಸೀಮಿತಗೊಂಡಿತು. ವರ್ತಕರು ೩೫೦ ಟನ್ ಮತ್ತು ಅದಕ್ಕಿಂತ ಮೇಲ್ಪಟ್ಟ ಉತ್ಪನ್ನಗಳಿಗೆ ಕಂಪನಿಯೆ ಹಡಗುಗಳನ್ನು ಏರ್ಪಾಡು ಮಾಡಿಕೊಡಬೇಕಿತ್ತು. ಕಂಪನಿಯ ಅಧೀನ ಪ್ರದೇಶಗಳಲ್ಲಿ ಕಂಪನಿಯ ವರ್ತಕರಲ್ಲದವರಿಗೆ ವ್ಯಾಪಾರ ವ್ಯವಹಾರಗಳನ್ನು ನಿರ್ಬಂಧಿಸಲಾಗಿತ್ತು. ಅದಷ್ಟೇ ಅಲ್ಲದೇ ಕಂಪನಿಯು ಖಾಸಗಿ ವರ್ತಕರ ಹಡಗು ಮತ್ತು ಮಾರಾಟದ ಮೇಲೆ ಸಂಪೂರ್ಣವಾದ ನಿಯಂತ್ರಣವನ್ನು ಹೊಂದಿತ್ತು.[೬] ೧೮೧೩ರ ಕಾಯಿದೆಯು ಬ್ರಿಟಿಶ್ ಸಾಮ್ರಾಜ್ಯಶಾಹಿಯ ನೀತಿಯನ್ನು ಭಾರತದ ಮೇಲೆ ಹಿಡಿತ ಸಾಧಿಸುವಂತೆ ಮಾಡಿತು. ಇದೇ ತೆರನಾದ ಕಾಯಿದೆಗಳನ್ನು ನಿಧಾನಗತಿಯಲ್ಲಿ ಬ್ರಿಟಿಶ್ ಸಂಸತ್ತು ಈಸ್ಟ್ ಇಂಡಿಯ ಕಂಪನಿಯ ಮೇಲೆ ಹೇರಿತು. ಈ ಅಂಶಗಳನ್ನು ೧೮೩೩ರ

ಚಾರ್ಟರ್ ಕಾಯಿದೆಯಲ್ಲೂ ಕಾಣಬಹುದಾಗಿದೆ. ಇವುಗಳು ಸಹ ಬೆಂಗಳೂರು ಪ್ರದೇಶದ ನಗರೀಕರಣ ಪ್ರಕ್ರಿಯೆಗಳಿಗೆ ಪೂರಕವಾದ ಒತ್ತನ್ನು ನೀಡಿತು.

೧೮೩೩ರ ಚಾರ್ಟರ್ ಕಾಯಿದೆಯ ಪ್ರಮುಖ ನೀತಿ–ನಿಯಮಾವಳಿಗಳು ಈ ಕೆಳಗಿನಂತಿವೆ. ಕಂಪನಿಗೆ ಕೆಲವು ಉತ್ಪನ್ನಗಳ ಮೇಲೆ ಇದ್ದ ಏಕಸ್ವಾಮ್ಯವನ್ನು ರದ್ದುಪಡಿಸಲಾಯಿತು. ಕಂಪನಿಗೆ ಇದ್ದ ಭಾರತದ ಶಾಸಕೀಯ ಮತ್ತು ಆಡಳಿತಾತ್ಮಕ ಅಧಿಕಾರಗಳನ್ನು ಮುಂದುವರಿಸಲಾಯಿತು. ೨೦ ವರ್ಷಗಳ ಕಾಲ ಕಂಪನಿಗೆ ಭಾರತೀಯ ವ್ಯಾಪಾರದ ಉಸ್ತುವಾರಿಯನ್ನು ನೀಡಲಾಯಿತು. ಕಂಪನಿಯು ಹೊಂದಿದ್ದ ಆಡಳಿತ ಮತ್ತು ಅಧಿಕಾರಗಳಿಗೆ ಸಂಬಂಧಿಸಿದಂತೆ ನೇಮಕಾತಿ ಮತ್ತು ಹುದ್ದೆಗಳ ಹಂಚಿಕೆಯಲ್ಲಿ ಪ್ರಧಾನ ಪಾಲುಗಾರನಾಗಿ ಪರಿವರ್ತನೆಗೊಂಡಿತು. ಭಾರತದ ಗವರ್ನರ್ ಜನರಲ್ ಮತ್ತು ಪ್ರಾಂತೀಯ ಗೌರ್‍ನರ್‌ರುಗಳ ನಡುವೆ ಅಧಿಕಾರ ಸ್ಪಷ್ಟೀಕರಿಸಲಾಯಿತು. ಇದರಿಂದಾಗಿ ಇಲ್ಲಿಯವರೆಗೆ ಇದ್ದ ಗೊಂದಲಗಳನ್ನು ತೊಡಗಿಸಲಾಯಿತು. ಭಾರತದ ಗವರ್ನರ್ ಜನರಲ್ ಅಧಿಕಾರವನ್ನು ಇಡೀ ಭಾರತಕ್ಕೆ ಸಂಬಂಧಿಸಿದಂತೆ ಹೆಚ್ಚಿಸಲಾಯಿತು.

ಕಲ್ಕತ್ತದಲ್ಲಿದ್ದ ಕಂಪನಿಯ ಗವರ್ನರ್ ಜನರಲ್‌ರನ್ನು ಒಳಗೊಂಡಂತೆ ಮಂಡಲಿ ರಚಿಸಲಾಯಿತು. ಈ ಮಂಡಲಿಯು ನಾಲ್ಕು ಸದಸ್ಯರನ್ನು ಹೊಂದಿದ್ದು, ಅವರಿಗೆ ಮಾತ್ರ ಶಾಸನಗಳನ್ನು ರಚಿಸುವ ಅಧಿಕಾರವನ್ನು ನೀಡಲಾಯಿತು. ಗವರ್ನರ್ ಜನರಲ್ ಮಂಡಲಿಯ ನಾಲ್ಕನೇ ಸದಸ್ಯನು ನಾಯ್ಯಿಕ ಸದಸ್ಯನಾಗಿದ್ದನು. ಈತನ ಅಧ್ಯಕ್ಷತೆಯಲ್ಲಿ ನ್ಯಾಯಿಕ ಆಯೋಗವನ್ನು ರಚಿಸಲಾಯಿತು.

೧೮೩೩ರ ಚಾರ್ಟರ್ ಕಾಯಿದೆಯು ಕಂಪನಿಯು ಹೊಂದಿದ್ದ ಟೀ ಮೇಲಿನ ಏಕಸ್ವಾಮ್ಯವನ್ನು ಸಹ ರದ್ದುಪಡಿಸಲಾಯಿತು. ಆದರೆ ಇಲ್ಲಿ ಪ್ರಮುಖವಾಗಿ ಇನ್ನೊಂದು ಅಂಶವನ್ನು ಗಮನಿಸಬೇಕಾಗಿದೆ. ಕಂಪನಿಗೆ ಭಾರತೀಯ ವ್ಯಾಪಾರದ ಉಸ್ತುವಾರಿಯ ಜವಾಬ್ದಾರಿಯನ್ನು ನೀಡಿದ್ದಲ್ಲದೆ, ಭಾರತದ ಆಡಳಿತಾಧಿಕಾರವನ್ನು ಕಂಪನಿಗೆ ಬ್ರಿಟಿಶ್ ಸಾಮ್ರಾಜ್ಯವು ನೀಡಿತು. ಇದು ಪರೋಕ್ಷವಾಗಿ ಭಾರತೀಯ ವ್ಯಾಪಾರ ವಾಣಿಜ್ಯದ ಮೇಲೆ ಹಿಡಿತವನ್ನು ಸಡಿಲಗೊಳಿಸದೇ ಇನ್ನಷ್ಟು ಭದ್ರಪಡಿಸಿತು. ಮೇಲ್ನೋಟಕ್ಕೆ ರದ್ದುಗೊಳಿಸಿದಂತೆ ಕಂಡುಬರುವುದು ತೋರಿಕೆಯಾಗಿದೆ. ಇದಕ್ಕೆ ಸಂಬಂಧಿಸಿದ ಚರ್ಚೆಗಳು, ಅಭಿಪ್ರಾಯಗಳನ್ನು ಮೆಕಾಲೆಯ ಮಾತುಗಳಲ್ಲಿ ಕಾಣಬಹುದಾಗಿದೆ. ಉದಾರವಾದಿ ಮಾತುಗಳನ್ನು ಆಡುತ್ತಾ ಭಾರತೀಯರನ್ನು ತಮ್ಮ ಕಪಿಮುಷ್ಟಿಯಲ್ಲಿ ಹಿಡಿದಿಡಲು ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿ ಪ್ರಭುತ್ವಗಳು ಪ್ರಯತ್ನಿಸಿದವು. ಅದಕ್ಕೆ ಸಂಬಂಧಿಸಿದಂತೆ ಭಾರತೀಯ ಸ್ಥಳೀಯ ಆಡಳಿತದಲ್ಲಿ ಸುಧಾರಣೆಗಳನ್ನು ಜಾರಿಗೊಳಿಸಲಾಯಿತು. ಆ ಮೂಲಕ ಸ್ಥಳೀಯ ಆಡಳಿತಕ್ಕೆ ಸಂಬಂಧಿಸಿದಂತಹ ಕಾನೂನು ಮತ್ತು ಇಲಾಖೆಗಳನ್ನು ರಚಿಸಿ, ಸ್ಥಳೀಯ ಪುಟ್ಟದಲ್ಲಿಯೇ ಕಂಪನಿ ತನ್ನ ಹಿಡಿತವನ್ನು ಸಾಧಿಸಲು ಯತ್ನಿಸಿತು.

೧೮೩೩ರ ಕಾಯಿದೆಯು ಭಾರತದಲ್ಲಿ ಮುಕ್ತ ವ್ಯಾಪಾರವನ್ನು ಬೆಳೆಸಲು ಅವಕಾಶ ನೀಡಿತು. ಮುಕ್ತ ವ್ಯಾಪಾರದ ಪರಿಕಲ್ಪನೆಯು ಇಂಗ್ಲೆಂಡಿನಲ್ಲಿ ಮೂಡಿಬರಲು ಪ್ರಮುಖ ಕಾರಣ ರಾಜಕೀಯವಾಗಿ ಉದಾರವಾದಿ ತತ್ವಗಳಿಂದ ಪ್ರಭಾವಕ್ಕೆ ಒಳಗಾಗಿದ್ದು. ಬೋರ್ಡ್ ಆಫ್ ಕಂಟ್ರೋಲಿನ ಸೆಕ್ರೇಟರಿಯಾಗಿದ್ದ ಮೆಕಾಲೆ ಮತ್ತು ಬೆಂಥಾಮಿನ ಶಿಷ್ಯನಾದ ಜೇಮ್ಸ್ ಮಿಲ್ ಭಾರತದ ಬಗೆಗೆ ನಿರಂತವಾಗಿ ಚರ್ಚಿಸುತ್ತಿದ್ದರು. ತಮ್ಮ ದೇಶದಲ್ಲಿ ಉದಯಿಸುತ್ತಿದ್ದ ಪಾಶ್ಚಿಮಾತ್ಯ ಬಂಡವಾಳಶಾಹಿ ವ್ಯವಸ್ಥೆಯು ಊಳಿಗಮಾನ್ಯ ಆರ್ಥಿಕತೆಯನ್ನು ಸೃಷ್ಟಿಸಿತು. ಇದು ಅಂತಾರಾಷ್ಟ್ರೀಯ ಆರ್ಥಿಕತೆಯಲ್ಲಿ ತಮ್ಮ ಸ್ಥಾನವನ್ನು ಭದ್ರಪಡಿಸಲು ಪ್ರಯತ್ನಿಸಿದವು. ಫಲವಾಗಿ ಈಸ್ಟ್ ಇಂಡಿಯಾ ಕಂಪನಿಯ ಏಕಸ್ವಾಮ್ಯವನ್ನು ರದ್ದುಪಡಿಸುವ ಸಲುವಾಗಿ ಖಾಸಗಿ ವರ್ತಕರಿಗೆ ವಿಶೇಷ ಪರವಾನಿಗೆಯ ಅಡಿಯಲ್ಲಿ ವ್ಯಾಪಾರ–ವಾಣಿಜ್ಯವನ್ನು ಕೈಗೊಳ್ಳಲು ಅವಕಾಶವನ್ನು ನೀಡಲಾಯಿತು. ೧೮೨೫ರ ತನಕ ಕಂಪನಿಯು ಯಾವುದೇ ವಸ್ತುವನ್ನು ಕಂಪನಿಯ ಮೂಲಕ ಭಾರತಕ್ಕೆ ರಫ್ತು ಮಾಡಿರಲಿಲ್ಲ. ಅದಲ್ಲದೇ ಭಾರತದಿಂದ ಅಪಾರ ಪ್ರಮಾಣದಲ್ಲಿ ಕಚ್ಚಾ ಮಾಲು, ಸಾಲ್ಟಪೀಟರ್ ಮತ್ತು ಇಂಡಿಗೊ ಮೊದಲಾದ ಉತ್ಪನ್ನಗಳನ್ನು ಆಮದು ಮಾಡಿಕೊಳ್ಳುತ್ತಿತ್ತು. ಆದರೆ ಈಗ ಬ್ರಿಟನ್ನಿನ ಕೈಗಾರಿಕೆಗಳೂ ಅಪಾರ ಪ್ರಮಾಣದ ಹತ್ತಿ ಬಟ್ಟೆಗಳನ್ನು ಮತ್ತು ಇನ್ನಿತರ ಸಿದ್ಧ ಉತ್ಪನ್ನಗಳನ್ನು ಉತ್ಪಾದಿಸುತ್ತಲಿದ್ದು, ಅವುಗಳಿಗೆ ಭಾರತದಂತಹ ಬೃಹತ್ ಪ್ರಮಾಣದ ಮಾರುಕಟ್ಟೆ ಮತ್ತು ಗ್ರಾಹಕರ ಅವಶ್ಯಕತೆಯು ಬ್ರಿಟನ್ನಿನ ಕೈಗಾರಿಕೋದ್ಯಮಿಗಳಿಗೆ ಈಗ ಅಗತ್ಯ ಒದಗಿಬಂದಿತು. ಈ ಹೊತ್ತಿಗಾಗಲೇ ಕಂಪನಿಯು ಭಾರತದ ಬಹುಪಾಲು ಪ್ರದೇಶಗಳಲ್ಲಿ ಅಸ್ಸಾಂ ಮತ್ತು ರಾಜಪಠಾಣದಲ್ಲಿ ಪರಮಾಧಿಕಾರವನ್ನು ಸ್ಥಾಪಿಸಿತ್ತು. ಲಾರ್ಡ್ ವೆಲ್ಲೆಸ್ಲಿಯು ಭಾರತದಲ್ಲಿ ಬ್ರಿಟನ್ ಸಾಮ್ರಾಜ್ಯ ಸ್ಥಾಪನೆಯ ಕನಸನ್ನು ಕಾಣುತಿದ್ದನು.

೧೮೩೨ರಲ್ಲಿ ಥಾಮಸ್ ಮೆಕಾಲೆಯು ಹೌಸ್ ಆಫ್ ಕಾಮನ್ಸ್ ಸದಸ್ಯನಾಗಿದ್ದು ನಂತರದಲ್ಲಿ ಬೋರ್ಡ್ ಆಫ್ ಕಂಟ್ರೋಲಿನ ಅಸಿಸ್ಟೆಂಟ್ ಕಮೀಷನರಾಗಿ ನೇಮಕಹೊಂದಿದನು. ಅದಷ್ಟೇ ಅಲ್ಲದೇ ವಿಲಿಯಂ ಬೆಂಟಿಂಕ್ ನಂತಹ ಉದಾರಿವಾದಿಗಳು ಭಾರತಕ್ಕೆ ಸಂಬಂಧಿಸಿದಂತೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಸುಧಾರಣಾತ್ಮಕ ನೀತಿಗಳನ್ನು ಜಾರಿಗೆ ತರಲು ಪ್ರಯತ್ನಿಸುತ್ತಿದ್ದರು. ಗ್ರಾಂಟ್ ಹೇಳಿಕೆಯಂತೆ, ಚೀನಾದ ಚಹಾದ ಏಕಸ್ವಾಮ್ಯ ರದ್ದುಗೊಂಡರೆ ಚಹಾದ ಬೆಲೆ ಕಡಿಮೆಗೊಂಡು ಚಹಾದ ಬೇಡಿಕೆ ಹೆಚ್ಚುತ್ತದೆ. ಜೊತೆಗೆ ಬ್ರಿಟನ್ನಿನ ರಫ್ತಿನ ಪ್ರಮಾಣವನ್ನು ಅಧಿಕಗೊಳಿಸುತ್ತದೆ. ಮ್ಯಾಂಚೆಸ್ಟರ್, ಗ್ಲಾಸ್ಗೌನಿನ ಹತ್ತಿ ಮತ್ತು ಉಣ್ಣೆಯ ಬಟ್ಟೆಗಳು, ಬರ್ಮಿಂಗ್ಹ್ಯಾಮ್‌ನಿನ ಹಾರ್ಡ್‌ವೇರ್ ಉತ್ಪನ್ನಗಳನ್ನು ಚೀನ ಮತ್ತು ಭಾರತಕ್ಕೆ ಮಾರಾಟ ಮಾಡುವ ಪ್ರೋತ್ಸಾಹವನ್ನು ಅಲ್ಲಿನ ವರ್ತಕರು ಹೊಂದಿದ್ದರು. ಬೋರ್ಡ್ ಆಫ್ ಕಂಟ್ರೋಲ್ ಮತ್ತು ಬೋರ್ಡ್ ಆಫ್ ಡೈರೆಕ್ಟರ್‌ನಲ್ಲಿದ್ದ ವರ್ತಕರು ಮತ್ತು ಉದಾರಿವಾದಿಗಳಿಗೆ ಕಂಪನಿಯ ವಾಣಿಜ್ಯ ಅಧಿಕಾರವು ಸಂಪೂರ್ಣವಾಗಿ ಕಡಿತಗೊಳ್ಳುವುದು

ಇಷ್ಟವಾಗಿರಲಿಲ್ಲ.[೭] ಇದರಿಂದಾಗಿ ೧೮೩೩ರ ನಂತರದಲ್ಲಿ ಜಾರಿಗೊಳಿಸಿದ ಕಾಯಿದೆಗಳಲ್ಲಿ ಕಂಪನಿಯು ಬ್ರಿಟನ್ನಿನ ವರ್ತಕರು ಮತ್ತು ಕೈಗಾರಿಕೋದ್ಯಮಿಗಳು ತಮ್ಮ ಸಿದ್ಧ ವಸ್ತುಗಳನ್ನು ಮುಕ್ತ ವ್ಯಾಪಾರದ ಹಿನ್ನೆಲೆಯಲ್ಲಿ ಭಾರತಕ್ಕೆ ರಫ್ತು ಮಾಡುವ ಉದ್ದೇಶವನ್ನು ಹೊಂದಿದ್ದರು. ಈಗಾಗಲೇ ಕೈಗಾರಿಕೀಕರಣ ದಿಂದಾಗಿ ಬಂಡವಾಳದ ಸಂಚಲನದ ಪ್ರಭಾವದಿಂದಾಗಿ ವರ್ತಕರು, ಉತ್ಪಾದನಾ ವರ್ಗ ತಮ್ಮ ಹಣವನ್ನು ಭಾರತದಲ್ಲಿ ಹೂಡುವ ಮಾರ್ಗದ ಹುಡುಕಾಟದಲ್ಲಿ ನಿರತರಾಗಿದ್ದರು. ಇದರ ಬೆನ್ನಲ್ಲೇ ಸಾರಿಗೆ–ಸಂಪರ್ಕವನ್ನು ಭಾರತದಲ್ಲಿ ಜಾರಿಗೊಳಿಸಲಾಯಿತು. ವಲಸೆ, ಉತ್ಪನ್ನಗಳ ರವಾನೆಯನ್ನು ಸರಳಗೊಳಿಸಲಾಯಿತು. ಅದಷ್ಟೇ ಅಲ್ಲದೆ ರೈಲ್ವೆ ಸಾರಿಗೆಯ ಹಿನ್ನೆಲೆಯು ಸ್ವತಂತ್ರವಾದ ವಾಣಿಜ್ಯ ಮತ್ತು ಕೈಗಾರಿಕಾ ಮಂಡಲಿಯನ್ನು ಸ್ಥಳೀಯ ಮಟ್ಟದಲ್ಲಿ ಸ್ಥಾಪಿಸಲು ಅವಕಾಶ ಮಾಡಿಕೊಟ್ಟಿತು.[೮] ಫಲವಾಗಿ ಭಾರತದಲ್ಲಿ ೧೯೦೮ರಲ್ಲಿ ವಾಣಿಜ್ಯ ಮತ್ತು ಕೈಗಾರಿಕಾ ಮಂಡಲಿಗಳು ಸ್ಥಾಪನೆಗೊಂಡವು.

ಈ ತರಹದ ಬೆಳವಣಿಗೆಗಳು ಬೆಂಗಳೂರಿನ ಪ್ರದೇಶದ ನಗರ ವ್ಯವಸ್ಥೆಯ ವೃದ್ಧಿಗೆ ಪೂರಕವಾಗಿ ಕಾರ್ಯವೆಸಗಿತು. ಭಾರತದಲ್ಲಿ ಕೈಗಾರಿಕೆಗಳಿಗೆ ಬಂಡವಾಳವನ್ನು ಹೂಡುವ ಮತ್ತು ಕೂಡು ಬಂಡವಾಳ ಕಂಪನಿಗಳನ್ನು ಸ್ಥಾಪಿಸುವ ಹಾಗೂ ಬ್ಯಾಂಕಿಂಗ್ ವ್ಯವಸ್ಥೆಯನ್ನು ಸಹ ಸ್ಥಾಪಿಸಲು ೧೮೩೩ರ ಕಾಯಿದೆಯು ಪೂರಕವಾದ ವಾತಾವರಣವನ್ನು ಕಲ್ಪಿಸಿಕೊಟ್ಟಿತು. ೧೮೧೩ರ ಚಾರ್ಟರ್ ಕಾಯಿದೆಯು ಭಾರತದಲ್ಲಿ ಹೊಸ ಶಿಕ್ಷಣ ವ್ಯವಸ್ಥೆಗೆ ತಳಹದಿಯನ್ನು ಹಾಕಿಕೊಟ್ಟಿತು. ಆದರೆ ಅದರ ಕಾರ್ಯ ಚಟುವಟಿಕೆಯನ್ನು ಚುರುಕುಗೊಳಿಸಿದ್ದು ೧೮೩೩ರ ಚಾರ್ಟರ್ ಕಾಯಿದೆಯಾಗಿದೆ. ೧೮೩೩ರ ಕಾಯಿದೆಯ ಅಡಿಯಲ್ಲಿ ಚರ್ಚೆಗೊಂಡ ಮುಕ್ತ ವ್ಯಾಪಾರ ಮತ್ತು ಗ್ರೇಟ್ ಬ್ರಿಟನ್ ದೇಶದ ಸಂಯುಕ್ತ ರಾಜ್ಯಗಳು, ಐರ್ಲೆಂಡನ್ನು ಒಳಗೊಂಡಂತೆ ಅಲ್ಲಿಯ ಬಂಡವಾಳದ ಸಂಚಲನದ ಪ್ರಕ್ರಿಯೆಗಳು ಭಾರತದ ಶಿಕ್ಷಣ ವ್ಯವಸ್ಥೆಯ ಬಗೆಗೆ ಸ್ಪಷ್ಟ ನಿಲುವನ್ನು ವಸಾಹತುಶಾಹಿ ಪ್ರಭುತ್ವ ನಿರ್ಧರಿಸುವಂತೆ ಮಾಡಿತು. ಇದರ ಹಿನ್ನೆಲೆಯಲ್ಲಿ ಮೆಕಾಲೆಯು ಪಾಶ್ಚಿಮಾತ್ಯ ಶಿಕ್ಷಣ ವ್ಯವಸ್ಥೆಯನ್ನು ವಿವರಿಸುತ್ತಾ, ಭಾರತವನ್ನು ಒಂದು ದೊಡ್ಡ ಮಾರುಕಟ್ಟೆಯನ್ನಾಗಿ ಪರಿವರ್ತಿಸುವುದು, ಜೊತೆಗೆ ಇಲ್ಲಿಯ ಜನತೆಯನ್ನು ತಮ್ಮ ಉತ್ಪನ್ನಗಳಿಗೆ ಗ್ರಾಹಕರನ್ನಾಗಿ ಮಾಡುವ ಕಾರ್ಯತಂತ್ರವನ್ನು ಅವನು ಹೊಂದಿದ್ದ ವಿಚಾರಗಳನ್ನು ಕಾಣಬಹುದಾಗಿದೆ.

೧೮೩೩ರ ಚಾರ್ಟರ್ ಕಾಯಿದೆಯ ನಂತರದಲ್ಲಿ ಭಾರತದೆಲ್ಲೆಡೆ ಇಂಗ್ಲಿಶ್ ಮಾದರಿ ಶೈಕ್ಷಣಿಕ ವ್ಯವಸ್ಥೆಯ ಕಾರ್ಯ ವೈಖರಿಯನ್ನು ಚುರುಕುಗೊಳಿಸಲಾಯಿತು. ಇದರಿಂದಾಗಿ ಭಾರತದ ಎಲ್ಲೆಡೆ ಶಾಲೆಗಳು ಸ್ಥಾಪನೆಗೊಂಡವು. ಇದರ ನೆಲೆಯಲ್ಲಿಯೇ ಬೆಂಗಳೂರು ದಂಡು ಮತ್ತು ನಾಗರಿಕ ಪ್ರದೇಶದಲ್ಲಿಯೂ ಸಹ ಶಾಲೆಗಳು ತೆರೆಯಲ್ಪಟ್ಟವು. ದಕ್ಷಿಣ ಭಾರತದಲ್ಲಿ ಮದ್ರಾಸ್ ಪ್ರೆಸಿಡೆನ್ಸಿಯನ್ನು

ಬಿಟ್ಟರೆ ಬೆಂಗಳೂರು ಪ್ರದೇಶವು ಒಂದು ಶೈಕ್ಷಣಿಕ ಕೇಂದ್ರವಾಗಿ ಹೊರ ಹೊಮ್ಮಲು ೧೮೩೩ರ ಕಾಯಿದೆಯು ಒಂದು ಕಾರಣವಾಯಿತು.

೧೮೫೩ ಚಾರ್ಟರ್ ಕಾಯಿದೆಯು ಭಾರತದ ಆಡಳಿತ ಮತ್ತು ಶಾಸಕೀಯ ಅಧಿಕಾರದಲ್ಲಿ ಹೆಚ್ಚೆಚ್ಚು ಜನರು ಭಾಗವಹಿಸಲು ಅವಕಾಶವನ್ನು ಕಲ್ಪಿಸಿತು. ಗವರ್ನರ್ ಜನರಲ್ಲನ ಶಾಸನ ರಚನಾ ಸಭೆಯ ಸಂಖ್ಯೆಯನ್ನು ಹನ್ನೆರಡಕ್ಕೆ ಹೆಚ್ಚಿಸಲಾಯಿತು. ಇದರಲ್ಲಿ ನಾಲ್ವರು ಸದಸ್ಯರು, ಮಹಾದಂಡನಾಯಕ, ಮಹಾನ್ಯಾಯಾಧೀಶ, ಒಬ್ಬ ಸಹಾಯಕ ನ್ಯಾಯಾಧೀಶ ಹಾಗೂ ನಾಲ್ಕು ಪ್ರಾಂತ್ಯಗಳ ರಾಜ್ಯಪಾಲರು ಸೇರಿ ಶಾಸನ ಸಮಿತಿಯನ್ನು ರೂಪಿಸಲಾಗುತಿತ್ತು. ಶಾಸಕಾಂಗವು ಕಾರ್ಯಾಂಗದ ಮೇಲೆ ನಿಯಂತ್ರಣದ ಅಧಿಕಾರವನ್ನು ಹೊಂದಿರದೇ ಇದ್ದರೂ ಸಹ ಶಾಸಕಾಂಗದ ನಿರ್ಣಯಗಳನ್ನು ಅದು ಒಪ್ಪಬೇಕಾಯಿತು. ೧೮೫೩ರ ಕಾಯಿದೆಯು ಪ್ರಾಂತೀಯ ಆಡಳಿತದ ಸುಧಾರಣೆಗೆ ಅವಕಾಶವನ್ನು ಮಾಡಿಕೊಟ್ಟಿತು. ಕಂಪನಿಯು ನ್ಯಾಯಿಕ, ಆಡಳಿತಾತ್ಮಕ, ಶಾಸಕೀಯ ಜವಾಬ್ದಾರಿಗಳ ಗವರ್ನರ್ ಜನರಲ್ ಮತ್ತು ಪ್ರಾಂತೀಯ ಪ್ರಾಂತ್ಯಪಾಲರು ಹೊಂದಿದರು. ಇದರಿಂದಾಗಿ ಸ್ಥಳೀಯ ಮಟ್ಟದಲ್ಲಿ ವಿವಿಧ ಇಲಾಖೆಗಳು ಮತ್ತು ಸ್ಥಳೀಯ ಆಡಳಿತಕ್ಕೆ ಸಂಬಂಧಿಸಿದಂತೆ ಹಲವು ಕಾನೂನುಗಳನ್ನು ಜಾರಿಗೊಂಡವು. ಪರಿಣಾಮವಾಗಿ ಪ್ರಾದೇಶಿಕ ಮಟ್ಟದ ಸಣ್ಣ ಸಣ್ಣ ಪೇಟೆ–ಪಟ್ಟಣಗಳಲ್ಲಿ ಮೂಲಭೂತ ಸೌಲಭ್ಯಗಳನ್ನು ಅಭಿವೃದ್ಧಿಪಡಿಸಲು ಸಾಧ್ಯವಾಯಿತು. ಈ ತೆರನಾದ ವಿಚಾರಗಳು ನಗರಗಳು ಬೆಳವಣಿಗೆ ಹೊಂದಲು ಸೂಕ್ತ ವಾತಾವರಣವನ್ನು ಸೃಷ್ಟಿಸಿತು.

### ೩.೩. ಮುಕ್ತ ವ್ಯಾಪಾರ ನೀತಿ

ಫ್ರೆಂಚ್ ಭಾಷೆಯ ಮುಕ್ತ ವ್ಯಾಪಾರ ನೀತಿ ಎಂಬ ಪದದಿಂದ ಈ ಪದ ಬಂದಿದೆ. ಬಂಡವಾಳಶಾಹಿಯು ಮುಕ್ತ ಮಾರುಕಟ್ಟೆಯಲ್ಲಿ ಪ್ರಭುತ್ವ ಕಡಿಮೆ ಹಸ್ತಕ್ಷೇಪದ ಪರಿಕಲ್ಪನೆಯನ್ನು ಪ್ರೇರೇಪಿಸಿತು. ಇದರಿಂದಾಗಿ ವ್ಯಾಪಾರ–ವಾಣಿಜ್ಯ ಉತ್ತಮಗೊಂಡು ನಂತರ ಇಡೀ ಸಮಾಜದಲ್ಲಿ ವ್ಯಾಪಕವಾಗಿ ಕಾಣಿಸುಸಿತು. ಈ ಧೋರಣೆಯು ೧೮ನೇ ಶತಮಾನದಲ್ಲಿ ಜನಪ್ರಿಯವಾದ ಆರ್ಥಿಕ ಸಿದ್ಧಾಂತವಾಗಿತ್ತು. ಇದರ ಮೂಲವನ್ನು ಫ್ರೆಂಚ್ ಆರ್ಥಿಕ ಮಂತ್ರಿಯಾದ ಕೊಲ್ಬರ್ಟ್ ಮತ್ತು ಅಲ್ಲಿಯ ವಾಣಿಜ್ಯೋದ್ಯಮಿಯಾದ ಲೀ ಗ್ಯಾಂಡ್ರೆ ನಡುವೆ ನಡೆದ ಸಭೆಯ ಸಂಭಾಷಣೆಯಲ್ಲಿ ಮೊದಲ ಬಾರಿಗೆ ಈ ಪದವನ್ನು ಬಳಸಲಾಯಿತು. ಕೊಲ್ಬರ್ಟ್ ವ್ಯಾಪಾರ ಮತ್ತು ವಾಣಿಜ್ಯದ ಅಭಿವೃದ್ಧಿಯಲ್ಲಿ ಪ್ರಭುತ್ವದಿಂದ ಯಾವ ತೆರನಾದ ಸಹಾಯವನ್ನು ಬಯಸುತ್ತೀರಿ ಎಂದಾಗ ಅಲ್ಲಿಯ ವಾಣಿಜ್ಯೋದ್ಯಮಿ ಲೀ ಗ್ಯಾಂಡ್ರೆ ರವರು 'ನಮಗೆ ಅನಿಸಿದ್ದನ್ನು ಮಾಡಲು ಬಿಡಿ' ಎಂದು ಉತ್ತರಿಸಿದನು. ವ್ಯಾಪಾರವೆಂದರೆ ಆಮದು ಮತ್ತು ರಫ್ತುವಿನ ನಡುವೆ ಪ್ರಭುತ್ವದ ಯಾವುದೇ ಆರ್ಥಿಕ ಚಟುಚಟಿಕೆ ಮತ್ತು ಸೇವೆಗಳನ್ನು ಒಳಗೊಂಡಂತೆ ನಿರ್ಬಂಧವಿಲ್ಲದೆ ವಿದೇಶಿಯ ವ್ಯಾಪಾರಕ್ಕೆ ಮುಕ್ತ ಅವಕಾಶವನ್ನು

ನೀಡುವುದೇ ಮುಕ್ತ ವ್ಯಾಪಾರವೆಂದು ವ್ಯಾಖ್ಯಾನಿಸಲಾಗಿದೆ. ಇದರ ಮೇಲೆ ತೆರಿಗೆ, ಶುಲ್ಕ, ಸಬ್ಸಿಡಿಗಳಿರುವುದಿಲ್ಲ. ಮುಕ್ತ ವ್ಯಾಪಾರವು ೧೮ನೇ ಶತಮಾನದ ಉತ್ತರಾರ್ಧದಲ್ಲಿ ಹುಟ್ಟಿದ ಒಂದು ನಿರ್ಧಾರಕ ರಾಜಕೀಯ ಹಿನ್ನೆಯ ಆರ್ಥಿಕ ಪರಿಕಲ್ಪನೆಯಾಗಿದೆ. ಅಮೆರಿಕದ ಸ್ವಾತಂತ್ರ್ಯ ಸಂಗ್ರಾಮಕ್ಕಿಂತ ಕೆಲವು ವರ್ಷಗಳ ಮೊದಲೇ ಮುಕ್ತ ವ್ಯಾಪಾರದ ಪರಿಕಲ್ಪನೆಯನ್ನು ವ್ಯಾಖ್ಯಾನಿಸಲಾಗಿತ್ತು. ಅಂದಿನ ೧೮ನೇ ಶತಮಾನದಲ್ಲಿ ಚರಿತ್ರೆ ರಚನಾಕಾರರು ತಮ್ಮದೇ ಆದ ನೆಲೆಯ ವಿವಿಧ ವ್ಯಾಖ್ಯಾನಗಳನ್ನು ನೀಡಿರುವುದನ್ನು ಕಾಣಬಹುದಾಗಿದೆ.

ಮುಕ್ತ ವ್ಯಾಪಾರ ನೀತಿ ಪದದ ಅರ್ಥವು ಸಂಕೀರ್ಣತೆಯಿಂದ ಕೂಡಿದೆ. ಅದಕ್ಕೆ ಒಂದು ನಿಖರತೆಯಾದ ಅರ್ಥವನ್ನು ನೀಡಲು ಸಾಧ್ಯವಿಲ್ಲ. ಮುಕ್ತ ವ್ಯಾಪಾರದ ಪರಿಕಲ್ಪನೆಯನ್ನು ತಮ್ಮ ತಮ್ಮ ಸಂದರ್ಭಕ್ಕೆ ತಕ್ಕಂತೆ ಬಳಸಿಕೊಳ್ಳಲಾಗಿದೆ. ೧೭೭೬ರ ಸಂದರ್ಭದಲ್ಲಿನ ಬರವಣಿಗೆಗಾರರು ತಿಳಿಸಿರುವಂತೆ ಪ್ರಭುತ್ವ ಮತ್ತು ಸಾಮ್ರಾಜ್ಯಶಾಹಿ ಪ್ರಭುತ್ವ ತನ್ನ ವಸಾಹತುಗಳಲ್ಲಿ ವ್ಯಾಪಾರಕ್ಕೆ ಸಂಬಂಧಿಸಿದಂತೆ ಯಾವುದೇ ರೀತಿಯ ನಿರ್ಬಂಧವನ್ನು ಹಾಕದೇ ವರ್ತಕ ಸಮುದಾಯಗಳು ಮುಕ್ತವಾಗಿ ವ್ಯವಹರಿಸಲು ಅವಕಾಶವನ್ನು ನೀಡುವುದಾಗಿದೆ. ಎರಡನೆಯದಾಗಿ, ಸ್ಥಳೀಯ ವರ್ತಕರಂತೆ ವಿದೇಶಿಯ ವರ್ತಕ ಸಮುದಾಯಗಳು ಸ್ಥಳೀಯ ಶುಲ್ಕವನ್ನು ಕಟ್ಟಿ ವ್ಯವಹರಿಸುವುದು. ಮೂರನೆಯದಾಗಿ, ಇಂದಿನ ಪರಿಕಲ್ಪನೆಯಂತೆ ಒಪ್ಪಂದದ ಮೂಲಕ ಗಡಿಗಳು ವ್ಯಾಪಾರಕ್ಕೆ ಮುಕ್ತವಾಗಿ ಯಾವುದೇ ನಿರ್ಬಂಧವಿಲ್ಲದೇ ತೆರೆದಿಡುವುದು. ನಾಲ್ಕನೆಯದಾಗಿ, ಯುದ್ಧದ ಸಂದರ್ಭದಲ್ಲಿಯು ಶತ್ರು ರಾಷ್ಟ್ರಗಳು ವ್ಯಾಪಾರ ವ್ಯವಹಾರದ ಸಂಬಂಧವಾಗಿ ತಟಸ್ಥವಾಗಿ ಉಳಿಯುವುದು.[೯] ಮುಕ್ತ ವ್ಯಾಪಾರದ ಪದದ ಅರ್ಥದ ಬಗ್ಗೆ ನಿಘಂಟುವಿನಲ್ಲಿ ಗೊಂದಲವನ್ನು ಸೃಷ್ಟಿಸುತ್ತದೆ.

ಬ್ರಿಟನ್ನಿನಲ್ಲಿ ಮುಕ್ತ ವ್ಯಾಪಾರ ಪ್ರವೃತ್ತಿಯು ಹದಿನೆಂಟನೇ ಶತಮಾನದಲ್ಲಿ ಆರಂಭವಾಗಿ ೧೮೨೦ರ ವೇಳೆಗೆ ದಾಪುಗಾಲು ಹಾಕಿತು. ೧೮೪೦ರ ನೀತಿಯಿಂದ ಏಕಪಕ್ಷೀಯವಾಗಿ ನಿರ್ಧರಿಸಲಾಯಿತು. ರಾಜಕೀಯ, ಆರ್ಥಿಕ ಅಂಶಗಳ ಪರಸ್ಪರ ಸಂಬದ್ಧತೆಯನ್ನು ಇದು ಹೊಂದಿದ್ದು, ಅದಷ್ಟೆ ಅಲ್ಲದೇ ೧೮೪೬ರ ಕಾರ್ನ್ ಲಾ ರದ್ದುಗೊಳಿಸಿದ್ದು ಸಹ ಇದಕ್ಕೆ ಅವಕಾಶವನ್ನು ನೀಡಿದೆಯೆಂದು ಹೇಳಬಹುದಾಗಿದೆ.[೧೦]

ಮುಕ್ತವ್ಯಾಪಾರವೆಂದರೆ ಯಾರಿಗೆ ಮುಕ್ತವ್ಯಾಪಾರವಾಗಿತ್ತು? ಎಂಬುದು ಇಲ್ಲಿ ಮುಖ್ಯವಾಗಿದೆ. ಭಾರತೀಯ ಆರ್ಥಿಕತೆಗೆ ಬ್ರಿಟಿಶ್ ಪ್ರಭುತ್ವದ ಆರ್ಥಿಕ ನೀತಿಯು ಮುಕ್ತವಾಗಿರಲಿಲ್ಲ. ಅದು ಒಂದು ನಿರ್ಬಂಧಿತ ಆರ್ಥಿಕತೆಯ ನೀತಿಯಾಗಿತ್ತು. ಅಂದರೆ ಭಾರತೀಯ ಉತ್ಪನ್ನಗಳ ಮೇಲೆ ಬ್ರಿಟನಿನಲ್ಲಿ (ಸಂಯುಕ್ತ ರಾಜ್ಯಗಳಲ್ಲಿ) ನಿರ್ಬಂಧವಿತ್ತು. ಭಾರತೀಯ ಉತ್ಪನ್ನಗಳ ಮೇಲೆ ಅಧಿಕ ತೆರಿಗೆಯನ್ನು ಹೇರಲಾಗುತ್ತಿತ್ತು. ಭಾರತೀಯ ಕಚ್ಚಾ ವಸ್ತುಗಳು ಮತ್ತು ಆಹಾರೋತ್ಪನ್ನಗಳಿಗೆ ಕಡಿಮೆ ದರ

ನಿಗದಿಯೊಂದಿಗೆ ವ್ಯವಹರಿಸಲಾಗುತ್ತಿತ್ತು. ವಿದೇಶಿವರ್ತಕರಿಗೂ ಸಹ ಇದೇ ನಿರ್ಬಂಧವನ್ನು ಹೇರಲಾಗುತ್ತಿತ್ತು. ಕಾರಣ ಭಾರತವು ಬ್ರಿಟಿಶ್ ಕಂಪನಿಯ ಆಡಳಿತಕ್ಕೆ ಒಳಪಟ್ಟದ್ದು. ಭಾರತೀಯ ವ್ಯಾಪಾರ–ವಾಣಿಜ್ಯದ ಮೇಲಿನ ಏಕಸ್ವಾಮ್ಯವನ್ನು ಕಂಪನಿ ರದ್ದುಗೊಳಿಸಿದ್ದರು ಸಹ ಅದರ ಉಸ್ತುವಾರಿಯನ್ನು ಕಂಪನಿಗೆ ಚಾರ್ಟರ್ ಕಾಯಿದೆಯ ಮೂಲಕ ಬ್ರಿಟಿಶ್ ಸಾಮ್ರಾಜ್ಯಶಾಹಿ ಪ್ರಭುತ್ವವು ನೀಡಿತ್ತು. ಆದರಿಂದಾಗಿ ಯುರೋಪಿನ ಯಾವುದೇ ದೇಶದ ವರ್ತಕರು ಬ್ರಿಟಿಶ್ ಕಂಪನಿ ಮತ್ತು ಸಾಮ್ರಾಜ್ಯಶಾಹಿ ಪ್ರಭುತ್ವದ ಅನುಮತಿಯಿಲ್ಲದೇ ಭಾರತದಲ್ಲಿ ವ್ಯವಹಾರವನ್ನು ನಡೆಸುವಂತಿರಲಿಲ್ಲ. ಆ ಮೂಲಕ ವಿದೇಶಿಯ ರಾಷ್ಟ್ರಗಳ ವರ್ತಕ ಸಮುದಾಯಗಳು ಬ್ರಿಟಿಶ್ ಕಂಪನಿ ಅಥವಾ ನಂತರದ ಕಾಲದಲ್ಲಿ ಬ್ರಿಟಿಶ್ ಸಾಮ್ರಾಜ್ಯಶಾಹಿ ಭಾರತದ ಪ್ರಭುತ್ವದ ನಿಯಂತ್ರಣದಲ್ಲಿ ವ್ಯಾಪಾರ–ವಾಣಿಜ್ಯ ನಿರ್ವಹಣೆಯನ್ನು ಮಾಡಲಾಗುತ್ತಿತ್ತು. ಇಂತಹ ವಿಚಾರಗಳನ್ನು ನಾವು ಬೆಂಗಳೂರಿನಲ್ಲಿ ಅಮೆರಿಕಾ, ಡಚ್, ಫ್ರಾನ್ಸ್ ಮೊದಲಾದ ವರ್ತಕ ಸಮುದಾಯಗಳಿಂದ ರಚನೆಗೊಂಡಿದ್ದ ಬೆಂಗಳೂರು ಟ್ರೇಡರ್ಸ್ ಅಸೋಸಿಯೇಶನ್ ಸಂಘಟನೆಯ ಕಾರ್ಯಚಟುವಟಿಕೆಗಳು ಮತ್ತು ಭಾರತೀಯ ಬಂದರು ಪ್ರದೇಶಗಳನ್ನು ಬಳಸಿಕೊಳ್ಳುವಿಕೆಯಲ್ಲಿ ಅವುಗಳಿಗಿದ್ದ ನಿರ್ಬಂಧಗಳು ಹಾಗೂ ನಿಯಂತ್ರಣಗಳು ನಮಗೆ ಇದರ ಬಗೆಗೆ ತಿಳಿಸುತ್ತದೆ.[೧೧] ಜೊತೆ ಬ್ರಿಟಿಶ್ ಕಂಪನಿ, ಬ್ರಿಟಿಶ್ ಸಾಮ್ರಾಜ್ಯ, ಸ್ಥಳೀಯ ಪ್ರಭುತ್ವ ಮತ್ತು ವಿದೇಶಿಯ ವರ್ತಕ ಸಮುದಾಯಗಳ ನಡುವಿನ ಸಂಘರ್ಷಗಳು, ಅಧಿಕಾರದ ವ್ಯಾಪ್ತಿ ಇನ್ನಿತರ ವಿಚಾರಗಳ ಬಗೆಗೆ ಸೂಕ್ಷ್ಮ ವಿಚಾರಗಳನ್ನು ತಿಳಿಸುತ್ತದೆ. ೧೮೧೩ರ ಚಾರ್ಟರ್ ಕಾಯಿದೆಯಲ್ಲಿ ಕಂಪನಿ ಏಕಸ್ವಾಮ್ಯವನ್ನು ರದ್ದುಗೊಳಿಸಿದ್ದ ಅಂಶಗಳು ಕೇವಲ ಲಂಡನ್‌ನಲ್ಲಿದ್ದ ಸಾಂಪ್ರದಾಯಿಕ ವರ್ತಕರಿಗೆ ಮಾತ್ರ. ಇನ್ನು ಮುಕ್ತ ವ್ಯಾಪಾರ ಯಾರಿಗೆ? ಎಂಬ ಪ್ರಶ್ನೆ ಮೂಡುತ್ತದೆ. ಬ್ರಿಟನ್‌ನಲ್ಲಿದ್ದ ಕಂಪನಿಯ ವರ್ತಕ ಸಮುದಾಯಗಳನ್ನು ಹೊರತುಪಡಿಸಿ ಇನ್ನಿತರ ವರ್ತಕ ಸಮುದಾಯಗಳಿಗೆ ಭಾರತ, ಬ್ರಿಟನ್, ಪೌರಾತ್ಯ ದೇಶಗಳೊಂದಿಗೆ ವ್ಯವಹರಿಸುವ ಹಕ್ಕನ್ನು ನೀಡಲಾಯಿತು. ಬ್ರಿಟನ್ನಿನ ಮುಕ್ತವ್ಯಾಪಾರವು ಸಂಪೂರ್ಣ ಮುಕ್ತ ವ್ಯಾಪಾರವಾಗಿರದೆ, ಭಾಗಶಃ ಮುಕ್ತ ವ್ಯಾಪಾರವಾಗಿತ್ತು. ಅದು ಕಂಪನಿಯ ವಸಾಹತು ಕೇಂದ್ರ ಅಥವಾ ಪ್ರದೇಶಗಳಲ್ಲಿ ಕಂಪನಿಯನ್ನು ಹೊರತುಪಡಿಸಿದ ಇನ್ನಿತರ ವರ್ತಕ ಸಮುದಾಯಗಳು ವ್ಯಾಪಾರ–ವ್ಯವಹಾರಗಳಲ್ಲಿ ಪ್ರವೇಶಿಸುವಂತಿರಲಿಲ್ಲ. ಒಂದು ವೇಳೆ ವಾಣಿಜ್ಯ ಚಟುವಟಿಕೆಯನ್ನು ಮಾಡಬೇಕಾದರೆ ಅದಕ್ಕೆ ಬ್ರಿಟಿಶ್ ವಸಾಹತುಶಾಹಿ ಅಥವಾ ಸಾಮ್ರಾಜ್ಯಶಾಹಿ ಪ್ರಭುತ್ವದ ಅನುಮತಿ ಅಗತ್ಯವಾಗಿತ್ತು.

ದೇಶಿಯ ವರ್ತಕರ ಮತ್ತು ವಿದೇಶಿಯ ವರ್ತಕ ಸಮುದಾಯಗಳನ್ನು ತಮ್ಮ ಹಿಡಿತದಲ್ಲಿ ಇಡುವ ಹಿನ್ನೆಲೆಯಲ್ಲಿ ಭಾರತದಲ್ಲಿ ಆಡಳಿತಾತ್ಮಕ ಇಲಾಖೆ ಮತ್ತು ಕಾನೂನುಗಳನ್ನು ಜಾರಿಗೊಳಿಸಲಾಯಿತು. ಅದೇ ತೆರದಲ್ಲಿ ಬ್ರಿಟನ್ನಿನಲ್ಲಿಯೂ ಜಾರಿಗೊಳಿಸಲಾಯಿತು. ಇಂತಹ ಅಂಶಗಳನ್ನು

೧೮೩೩ ರಿಂದ ೧೮೫೮ರವರೆಗೆ ಬ್ರಿಟನ್ನಿನಲ್ಲಿ ಕಾನೂನುಗಳ ಮೂಲಕ ಜಾರಿಗೊಳಿಸಿದ ಅಂಶಗಳನ್ನು ತಿಳಿಯಬಹುದಾಗಿದೆ.

**೧. ಸಾಮಾನ್ಯ ಆಡಳಿತದ ಸ್ವತಂತ್ರ ಆಯೋಗಗಳ ಖಾಯಂ ಇಲಾಖೆಗಳು**

೧. ಫೊರ್ ಲಾ ಆಯೋಗ(೧೮೩೪), ೨. ಚರ್ಚಿನ ಆಯೋಗ(೧೮೩೬), ೩. ಮರುಳು ಆಯೋಗ(೧೮೪೨), ೪. ಚಾರಿಟಿ ಕಮಿಷನ್(೧೮೫೪), ೫. ರಿಜಿಸ್ಟಾರ್ ಜನನಗಳು ಮತ್ತು ಮದುವೆಗಳು(೧೮೩೬), ೬. ಹೋಮ್ ಆಫೀಸ್ ಇನ್ಸ್ಪೇಟರ್ಸ್

**೨. ಹೋಮ್ ಆಫೀಸ್ ಇನ್ಸ್ಪೇಟರ್ಸ್**

೧. ಕಾರ್ಖಾನೆ ತಪಾಸಕರು(೧೮೩೩), ೨. ಕೈದಿಗಳ ತನಿಖಾಧಿಕಾರಿಗಳು(೧೮೩೫, ೧೮೫೪), ೩. ಅನ್ಯಾಟಮಿ ತನಿಖಾಧಿಕಾರಿಗಳಿಗೆ ಪರಿಶೀಲನೆ(೧೮೩೯), ೪. ಮೈನಿಂಗ್ ತನಿಖಾಧಿಕಾರಿಗಳು(೧೮೪೨ ಮತ್ತು ೧೮೫೦), ೫. ಬ್ಯುರಿಯಲ್ ತನಿಖಾಧಿಕಾರಿಗಳು(೧೮೫೪), ೬. ಕಾಂಸ್ಟಾಬುಲರಿ ತನಿಖಾಧಿಕಾರಿಗಳು(೧೮೫೬)

**೩. ವಸಾಹತು ಕಚೇರಿ ವಸಾಹತು ಜಮೀನು ಮತ್ತು ವಲಸೆ ಆಯೋಗ(೧೮೩೯) ಶಿಕ್ಷಣ ಡಿ ಪ್ರಿವಿ ಕೌನ್ಸಿಲ್ ಇಲಾಖೆಗಳು ಸಮಿತಿಗಳ ಸ್ಥಾಪನೆ(೧೯೩೯)**

ವಾಣಿಜ್ಯ ಮಂಡಳಿ ೧. ಮರ್ಚೆಂಟ್ ಮರೈನ್ ಇಲಾಖೆ(೧೮೫೦), ೨. ಇಲಾಖೆ ಆರ್ಟ್ಸ್ ಅಂಡ್ ಸೈನ್ಸ್(೧೮೫೨), ೩. ರೈಲ್ವೆ ಮಂಡಳಿ(೧೮೩೯), ಮರಣ ಪೇಟೆಂಟ್ ಮತ್ತು ಇನ್ವೆಷನ್(೧೮೫೦), ೪. ಆಯುಕ್ತರ ಕಚೇರಿಯ ಜಾಯಿಂಟ್ ಸ್ಟಾಕ್ ಕಂಪನೀಸ್(೧೮೩೩), ೫. ನೋಂದಾವಣಿ ಕಚೇರಿ(೧೮೩೯), ೬. ವಿನ್ಯಾಸಕರ ಮೆಟ್ರೋಪೊಲೀಸ್ ಖಾಯಂ ಇಲಾಖೆಗಳು

ಹೋಮ್ ಆಫೀಸ್: ಮೆಟ್ರೋಪಾಲಿಟನ್ ಪೊಲೀಸ್ ೧. ಸಾಮಾನ್ಯ ತಂಗುದಾಣದಲ್ಲಿ ಮನೆ(೧೮೫೩), ೨. ಅನಾರೋಗ್ಯರ ವ್ಯಾಪಾರ ತಡೆಯುವ ಸಮಿತಿ(೧೮೫೪) ೩. ಕಚೇರಿ ವುಡ್ಸ್ ಮತ್ತು ಅರಣ್ಯ ಮತ್ತು ಲೋಕೋಪಯೋಗಿ ತನಿಖಾಧಿಕಾರಿ ನಿರೀಕ್ಷಕರು, ೪. ಕೌಂಟಿ ನ್ಯಾಯಾಲಯಗಳು.[೧೨]

ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿ ಪ್ರಭುತ್ವ ತಮಗೆ ಬೇಕಾದ ಕಚ್ಚಾ ಉತ್ಪನ್ನಗಳ ಮೇಲೆ ನಿಯಂತ್ರಣವನ್ನು ಸಾಧಿಸಲು ಭಾರತದಲ್ಲಿಯು ಸಹ ಹಲವು ಇಲಾಖೆಗಳನ್ನು ರಚನೆ ಮಾಡಿ ಕಾನೂನು ರೂಪಿಸಿತು. ಉದಾಹರಣೆಗೆ ಅರಣ್ಯ ಇಲಾಖೆ ಮತ್ತು ಅದಕ್ಕೆ ಸಂಬಂಧಿಸಿದ ಕಾಯಿದೆಗಳ ಮೂಲಕ ಸ್ಥಳೀಯರು ಮತ್ತು ವಿದೇಶಿಯ ವರ್ತಕರು ಇಲ್ಲಿಯ ನೈಸರ್ಗಿಕ ಸಂಪನ್ಮೂಲಗಳನ್ನು ಬಳಸಿಕೊಳ್ಳದಂತೆ ಗಮನ ಹರಿಸಲಾಯಿತು. ಜೊತೆಗೆ ಬ್ರಿಟಿಶ್ ಪ್ರಭುತ್ವಕ್ಕೆ ಬೇಕಾದ ಮೌಲ್ಯಧಾರಿತ

ಮರ–ಮುಟ್ಟಗಳ ಬಳಕೆಯ ಮೇಲೆಯು ಸಹ ನಿರ್ಬಂಧ ಹೇರಿದ್ದನ್ನು ಭಾರತದಲ್ಲಿ ಕಾಣಬಹುದಾಗಿದೆ. ಇದು ಭಾರತದ ಸಂಪತ್ತಿನ ರಕ್ಷಣೆಗಾಗಿ ಎಂದು ತಿಳಿದರೆ ಅದು ತಪ್ಪಾಗುತ್ತದೆ. ತಮ್ಮ ವಸಾಹತು ನೀತಿಯ ಮೂಲಕ ತಮ್ಮ ದೇಶಕ್ಕೆ ಬೇಕಾದ ಉತ್ಪನ್ನಗಳ ಮೇಲೆ ಬ್ರಿಟಿಶರು ಭಾರತದಲ್ಲಿ ಪರೋಕ್ಷವಾಗಿ ನಿಯಂತ್ರಣ ಸಾಧಿಸಿದ ತಂತ್ರವನ್ನು ಇಲ್ಲಿ ಕಾಣಬಹುದಾಗಿದೆ. ತಮಗೆ ಅನುಕೂಲಕರವಾದ ಹಲವು ಕಾಯಿದೆಗಳನ್ನು ಭಾರತದಲ್ಲಿ ರಚಿಸಿ ಜಾರಿಗೊಳಿಸಿದರು. ಸ್ಥಳೀಯ ಆಡಳಿತ ಇಲಾಖೆಗಳನ್ನು ಮತ್ತು ಇನ್ನಿತರ ಇಲಾಖೆಗಳನ್ನು ರಚಿಸುವ ಮೂಲಕ ಬ್ರಿಟಿಶ್ ಪ್ರಭುತ್ವವನ್ನು ಇನ್ನಷ್ಟು ಭದ್ರಪಡಿಸುವ ಕ್ರಮಗಳಾಗಿದ್ದವು. ಇಲ್ಲದಿದ್ದರೆ ಇಂತಹ ಇಲಾಖೆಗಳು ಮತ್ತು ಆಡಳಿತಾತ್ಮಕ ಸಂಘಟನೆಗಳು, ಕಾನೂನುಗಳ ಅವಶ್ಯಕತೆಯ ಅಗತ್ಯ ಇರುತ್ತಿರಲಿಲ್ಲ. ಅರಣ್ಯ ಇಲಾಖೆ ಮತ್ತು ಕಾನೂನು ಒಂದು ಉದಾಹರಣೆಯಷ್ಟೇ. ಇಂತಹ ಹಲವು ಕಾಯಿದೆ ಮತ್ತು ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದ ಇಲಾಖೆಗಳನ್ನು ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿ ಪ್ರಭುತ್ವಗಳ ಸ್ಥಾಪನೆಗೆ ಮುಂದಾದವು. ಈ ಪ್ರಭುತ್ವಗಳ ಉದ್ದೇಶಗಳನ್ನು ಸೂಕ್ಷ್ಮವಾಗಿ ಗಮನಿಸಿದಲ್ಲಿ ಮಾತ್ರ ಇದು ತಿಳಿದುಬರುತ್ತದೆ. ಅದರ ಹೊರತು ಭಾರತದ ಆಡಳಿತವನ್ನು ಸುಧಾರಿಸುವ ಅಥವಾ ಮುಕ್ತ ವ್ಯಾಪಾರ ಎಂಬ ಉದಾರವಾದ ಪರಿಕಲ್ಪನೆಯು ಕೇವಲ ತೋರಿಕೆಯಾಗಿ ಇಲ್ಲಿ ಕಾಣಿಸುತ್ತದೆ ಅಥವಾ ವಸಾಹತುಶಾಹಿ ನೀತಿಯು ಸಾಮ್ರಾಜ್ಯಶಾಹಿ ನೀತಿಗೆ ಪೂರಕವಾಗಿ ಕಾರ್ಯ ನಿರ್ವಹಣೆಯನ್ನು ಮಾಡಿದನ್ನು ಸಹ ಗಮನಿಸಬಹುದಾಗಿದೆ.

ಜೊತೆಗೆ ಭಾರತದಲ್ಲಿ ಬ್ರಿಟಿಶ್ ಸಾಮ್ರಾಜ್ಯಶಾಹಿ ವಿಸ್ತರಣೆಯ ಕಾರ್ಯ ಚಟುವಟಿಕೆಯನ್ನು ಮುಕ್ತವ್ಯಾಪಾರದ ಮೂಲಕ ಬೆಳೆಸಲು ಅವಕಾಶವನ್ನು ನೀಡಿತು. ಮುಕ್ತ ವ್ಯಾಪಾರವೆಂದರೆ ಬ್ರಿಟನ್, ಭಾರತ ಮತ್ತು ದಕ್ಷಿಣ ಪೌರಾತ್ಯ ಏಷ್ಯಾ ರಾಷ್ಟ್ರಗಳಿಗೆ ಸೀಮಿತಗೊಂಡಿತು. ವರ್ತಕರು ೩೫೦ ಟನ್ ಮತ್ತು ಅದಕ್ಕಿಂತ ಮೇಲ್ಪಟ್ಟ ಉತ್ಪನ್ನಗಳಿಗೆ ಕಂಪನಿಯೆ ಹಡಗುಗಳನ್ನು ಏರ್ಪಾಡು ಮಾಡಿಕೊಡಬೇಕು. ಜೊತೆಗೆ ಕಂಪನಿಯ ಅಧೀನ ಪ್ರದೇಶಗಳಲ್ಲಿ ಈ ವರ್ತಕರಿಗೆ ವ್ಯಾಪಾರ ವ್ಯವಹಾರಗಳನ್ನು ನಿರ್ಬಂಧಿಸಲಾಗಿತ್ತು. ಅದಷ್ಟೇ ಅಲ್ಲದೇ ಕಂಪನಿಯು ಖಾಸಗಿ ವರ್ತಕರ ಹಡಗು ಮತ್ತು ಮಾರಾಟದ ಮೇಲೆ ಸಂಪೂರ್ಣವಾದ ನಿಯಂತ್ರಣವನ್ನು ಹೊಂದಿತ್ತು.[೧೨] ಬ್ರಿಟಿಶ್ ಸಾಮ್ರಾಜ್ಯಶಾಹಿಯ ನೀತಿಯನ್ನು ಭಾರತದ ಮೇಲೆ ಹಿಡಿತ ಸಾಧಿಸಲು ಅನುವು ಮಾಡಿಕೊಟ್ಟಿತ್ತು. ಇದೇ ತೆರನಾದ ಕಾಯಿದೆಗಳನ್ನು ನಿಧಾನಗತಿಯಲ್ಲಿ ಬ್ರಿಟಿಶ್ ಸಂಸತ್ತು ಈಸ್ಟ್ ಇಂಡಿಯ ಕಂಪನಿಯ ಮೇಲೆ ಹೇರಿತು. ಈ ಅಂಶಗಳನ್ನು ಚಾರ್ಟರ್ ಕಾಯಿದೆಗಳಲ್ಲಿ ಕಾಣಬಹುದಾಗಿದೆ. ಒಟ್ಟಿನಲ್ಲಿ, ಮುಕ್ತ ವ್ಯಾಪಾರ ನೀತಿಯು ಭಾರತದ ಆಡಳಿತಾತ್ಮಕ ಇಲಾಖೆ ಮತ್ತು ಸಂವಿಧಾನಾತ್ಮಕ ಬೆಳವಣಿಗೆಗೆ ಪೂರಕವಾದ ವಾತಾವರಣವನ್ನು ಸೃಷ್ಟಿಸಿತು. ಜೊತೆಗೆ ಪರೋಕ್ಷವಾಗಿ ಬೆಂಗಳೂರು ಪ್ರದೇಶದ ನಗರೀಕರಣ ಪ್ರಕ್ರಿಯೆಯಲ್ಲಿ ತನ್ನದೇ ಆದ ಮಹತ್ವದ ಪಾತ್ರವನ್ನು ವಹಿಸಿದೆ.

## ೩.೪. ಕೃಷಿ ವಾಣಿಜ್ಯೀಕರಣ

ಒಂದು ದೇಶ ತನ್ನ ಆರ್ಥಿಕತೆಯನ್ನು ಸದೃಢಗೊಳಿಸುವ ಉದ್ದೇಶದಿಂದ ರಫ್ತನ್ನು ಹೆಚ್ಚು ಮಾಡಿ ಆಮದನ್ನು ಕಡಿಮೆ ಮಾಡಿಸುವ ಮೂಲಕ ದೇಶದ ಸಂಪತ್ತನ್ನು ರಕ್ಷಿಸುವುದೇ ವಾಣಿಜ್ಯವಾದ. ಇದೊಂದು ನಿರ್ಬಂಧಿತ ವ್ಯಾಪಾರ ಪದ್ಧತಿ. ನಾವು ತಿಳಿದಿರುವಂತೆ ವ್ಯಾಪಾರವೆಂದರೆ ಮಾರುವ ಮತ್ತು ಕೊಳ್ಳುವ ಸರಳ ಪ್ರಕ್ರಿಯೆಯಲ್ಲ. ಅದು ಸರ್ಕಾರದ ನೀತಿ, ಕೃಷಿ, ಬಂಡವಾಳ, ವ್ಯಾಪಾರ, ವರ್ತಕರು, ಉತ್ಪನ್ನ, ಕೈಗಾರಿಕೆ ಇತ್ಯಾದಿ ಆರ್ಥಿಕ ಚಟುವಟಿಕೆಗಳ ಮೂಲಕ ದೇಶದ ಸಂಪತ್ತನ್ನು ಹೆಚ್ಚಿಸುವುದು. ಅದನ್ನು ೧೬ನೇ ಶತಮಾನದಲ್ಲಿ ಚಿನ್ನ ಮತ್ತು ಬೆಳ್ಳಿಯ ರೂಪದಲ್ಲಿ ಅಳೆಯಲಾಗುತ್ತಿತ್ತು.

೧೬ನೇ ಶತಮಾನದಲ್ಲಿ ಯೂರೋಪಿನ ವಿವಿಧ ದೇಶಗಳಲ್ಲಿ ವಾಣಿಜ್ಯ ವಾದವನ್ನು ವಾಣಿಜ್ಯ ಪದ್ಧತಿ, ಕೋಲ್ಬರ್ಟಿಸಂ, ನಿಯಂತ್ರಣ ಪದ್ಧತಿ ಇತ್ಯಾದಿ ನಾನಾ ಬಗೆಯ ಹೆಸರಿನಲ್ಲಿ ಕರೆಯಲ್ಪಟ್ಟಿತು. ಆಡಂ ಸ್ಮಿತ್ 'ದಿ ವೆಲ್ತ್ ಆಫ್ ನೇಷನ್ಸ್' ಎಂಬ ಗ್ರಂಥದಲ್ಲಿ ಮೊದಲ ಬಾರಿಗೆ "ಇಂಗ್ಲೆಂಡ್ ಟ್ರೆಶರ್ ಬೈ ಫಾರಿನ್ ಟ್ರೇಡ್" ಎಂಬ ಗ್ರಂಥದಲ್ಲಿ ವ್ಯಾಪಾರದ ಸಮತೋಲನದ ಬಗ್ಗೆ ಪ್ರಚುರ ಪಡಿಸಿದರು.

ಆದರೆ ಭಾರತದಲ್ಲಿ ಬ್ರಿಟಿಶರು ಪಾಲಿಸಿದ ವಾಣಿಜ್ಯ ನೀತಿ ಅದಕ್ಕೆ ತದ್ವಿರುದ್ಧವಾಗಿತ್ತು. ಭಾರತದ ರಫ್ತು ವಸ್ತುಗಳ ಮೇಲೆ ಅಧಿಕ ಸುಂಕ ವಿಧಿಸುವದು, ಇಲ್ಲಿಗೆ ಬರುವ ಇಂಗ್ಲೆಂಡಿನ ವಸ್ತುಗಳನ್ನು ಸುಂಕರಹಿತಗೊಳಿಸುವುದು, ಅಗ್ಗದ ಬೆಲೆಗೆ ವಸ್ತುಗಳನ್ನು ಕೊಳ್ಳುವುದು ಮತ್ತು ಹೆಚ್ಚಿನ ಬೆಲೆಗೆ ವಸ್ತುಗಳನ್ನು ಮಾರುವುದು ಮುಂತಾದ ಬ್ರಿಟಿಶ್ ಸಾಮ್ರಾಜ್ಯಶಾಹಿ ನೀತಿಗೆ ಪೂರಕವಾಗುವಂತಹ ವ್ಯವಸ್ಥೆಯನ್ನು ರೂಪಿಸಲಾಯಿತು. ಈ ವಿಚಾರವು ನಮಗೆ ತಿಳಿದಿರುವ ಅಂಶ ಎಂದು ಮೊದಲೇ ನಿರ್ಣಯಕ್ಕೆ ಬರುವುದು ಸರಿಯಲ್ಲ. ಮೇಲಿನ ವಿಚಾರಗಳನ್ನು ಮತ್ತೆ ನೆನಪಿಸುವ ಅಗತ್ಯವಿರುವುದರಿಂದ ಈ ಅಧ್ಯಾಯದಲ್ಲಿ ಸರಳವಾಗಿ ವಿವರಿಸಲಾಗಿದೆ.

ಬ್ರಿಟಿಶ್ ವಸಾಹತು ಕಾಲಘಟ್ಟದಲ್ಲಿ ನಡೆದ ಘಟನೆಗಳು, ಅವರ ನೀತಿ, ಅವು ಪಡೆದ ಸ್ವರೂಪ ಹಾಗೂ ಹೊಂದಿದ್ದ ನೆಲೆಗಳು ಬ್ರಿಟಿಶರ ಅಧೀನಕ್ಕೆ ಒಳಪಟ್ಟ ಪ್ರದೇಶದ ಎಲ್ಲಾ ಕಾರ್ಯಕ್ಷೇತ್ರಗಳ ಮೇಲೆ ಪ್ರಭಾವ ಬೀರಿದವು. ಪರಿಣಾಮವಾಗಿ ಭಾರತದ ಪ್ರದೇಶದಲ್ಲಿ ಅನೇಕ ನಿಧಾನಗತಿಯ ಗಮನಾರ್ಹವಾದ ಬದಲಾವಣೆಗಳು ಕಂಡುಬಂದವು. ಬ್ರಿಟಿಶರ ಆರ್ಥಿಕ ಸಾಮ್ರಾಜ್ಯಶಾಹಿ ಎಂದು ಬಣ್ಣಿಸಬಹುದಾದ ವಾಣಿಜ್ಯ ನೀತಿಯು ವರ್ತಕರು, ಕೃಷಿ, ಕೈಗಾರಿಕೆ, ಉತ್ಪನ್ನಗಳ ಮೇಲೆ ಪ್ರಭಾವ ಬೀರಿತು. ಫಲವಾಗಿ, ಕೃಷಿ ವಾಣಿಜ್ಯೀಕರಣವು ಬೃಹತ್ ಯಾಂತ್ರಿಕೃತ ಕೈಗಾರಿಕೆ ಸ್ಥಾಪನೆ, ಬ್ಯಾಂಕಿಂಗ್ ವ್ಯವಸ್ಥೆ, ದಲ್ಲಾಳಿಗಳ ಪ್ರಾಬಲ್ಯ, ಪ್ರಭುತ್ವದ ವಾಣಿಜ್ಯ-ವ್ಯಾಪಾರದ ನೀತಿ ಬೆಳವಣಿಗಳಿಗೆ ಅವಕಾಶ ಮಾಡಿಕೊಟ್ಟಿತ್ತು. ಈ ಎಲ್ಲಾ ಅಂಶಗಳು ಬ್ರಿಟಿಶ್ ಸಾಮ್ರಾಜ್ಯಶಾಹಿ ನೀತಿಗೆ ಪೂರವಾಗಿಯೇ

ವಸಾಹತುನೀತಿಗಳು ಕಾರ್ಯವೆಸಗಿದರು. ಇದರ ನಿಟ್ಟಿನಲ್ಲಿಯೇ ಹಲವು ವಸಾಹತು ಪ್ರದೇಶದಲ್ಲಿ ಆದ ಮೂಲಭೂತ ಸೌಲಭ್ಯಗಳ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡರು ಎಂಬುದು ಗಮನಾರ್ಹವಾಗಿದೆ. ಇವು ಬ್ರಿಟಿಶ್ ಭಾರತದ ವಾಣಿಜ್ಯವಾದವಾಗಿದೆ. ಇವೆಲ್ಲದರ ಹಿನ್ನೆಲೆಯಲ್ಲಿ ಬ್ರಿಟಿಶರ ಸಾಮ್ರಾಜ್ಯಶಾಹಿ ನೀತಿಗೆ ಪೂರಕವಾಗಿ ವಾಣಿಜ್ಯವಾದದ ಒಂದು ರೂಪವಾದ ಕೃಷಿ ವಾಣಿಜ್ಯವಾದವನ್ನು ಭಾರತದಲ್ಲಿ ಜಾರಿಗೊಳಿಸಿದರು.

ಈ ಮೇಲಿನ ಕೃಷಿ ವಾಣಿಜ್ಯೀಕರಣದ ಆರ್ಥಿಕ ಕಾರ್ಯ ಚಟುವಟಿಕೆಗಳನ್ನು ಬ್ರಿಟಿಶ್ ಭಾರತದ ಪ್ರದೇಶಗಳಲ್ಲಿ ಜಾರಿಗೊಳಿಸಿದರು. ಇದಕ್ಕೆ ಮೈಸೂರು ರಾಜ್ಯವೇನೂ ಹೊರತಾಗಿರಲಿಲ್ಲ. ಮೈಸೂರಿನ ಚರಿತ್ರೆಯಲ್ಲಿ ೧೭೯೯ರಿಂದ ೧೯೪೭ರ ಕಾಲಘಟ್ಟ ಪ್ರಮುಖವಾಗಿದೆ. ಕಾರಣ ಮೈಸೂರು ಬ್ರಿಟಿಶ್ ಸ್ವಾಧೀನಕ್ಕೆ ಒಳಪಟ್ಟು ಮೈಸೂರಿನ ಚರಿತ್ರೆಯಲ್ಲಿ ಹೊಸ ಅಧ್ಯಾಯ ಆರಂಭವಾಯಿತು. ಮೈಸೂರು ರಾಜ್ಯದ ಕೇಂದ್ರವಾಗಿ ಬೆಂಗಳೂರು ಪ್ರಮುಖ ಪಾತ್ರವನ್ನೇ ವಹಿಸಿತು. ಉತ್ತಮ ಹವಾಗುಣ, ಫಲವತ್ತಾದ ಭೂಮಿಯಿಂದಾಗಿ ಕೃಷಿ ಕ್ಷೇತ್ರದಲ್ಲಿ ಪ್ರಯೋಗಾತ್ಮಕವಾದ ನೆಲೆಯನ್ನಾಗಿ ಬೆಂಗಳೂರು ಪ್ರದೇಶವನ್ನು ಬಳಸಿಕೊಳ್ಳಲಾಯಿತು.[೧೪] ಪ್ರಸ್ತುತ ಅಧ್ಯಯನದಲ್ಲಿ ಬೆಂಗಳೂರು ಪ್ರದೇಶದಲ್ಲಾದ ಕೃಷಿ ವಾಣಿಜ್ಯೀಕರಣ ವನ್ನು ಗುರುತಿಸುವ ಉದ್ದೇಶವನ್ನು ಹೊಂದಿದೆ.

ಬೆಂಗಳೂರು ಪ್ರದೇಶದಲ್ಲಿ ಕೃಷಿ ವಾಣಿಜ್ಯೀಕರಣದ ಪ್ರಯತ್ನವನ್ನು ಮೊದಲು ಪ್ರಾರಂಭಿಸಿದವರು ಹೈದರ್ ಮತ್ತು ಟಿಪ್ಪು. ಆರಂಭದಲ್ಲಿ ಹೈದರ್ ಮತ್ತು ಟಿಪ್ಪು ಉತ್ತಮವಾದ ಸಂಬಂಧವನ್ನು ಯುರೋಪಿನ ವರ್ತಕರೊಂದಿಗೆ ಹೊಂದಿದ್ದರು. ಅವರ ಆರ್ಥಿಕ ಮತ್ತು ಸೈನಿಕ ಕಾರ್ಯಕ್ಷೇತ್ರಗಳನ್ನು ಬಲಪಡಿಸುವ ಯೋಜನೆಯ ಅಡಿಯಲ್ಲಿ ವಿದೇಶಿಯರೊಂದಿಗೆ ರಾಯಭಾರಿಗಳನ್ನು ವಿನಿಮಯ ಮಾಡಿಕೊಂಡರು. ಇವೆಲ್ಲದರ ಹಿಂದೆಯೇ ಯುರೋಪಿನಲ್ಲಿ ಪ್ರಚಲಿತದಲ್ಲಿದ್ದ ಭೌದ್ಧಿಕ ಮತ್ತು ಸೈದ್ಧಾಂತಿಕ ವಿಚಾರಗಳು ಟಿಪ್ಪು ಮೇಲೆ ಪ್ರಭಾವಿಸಿತು ಎಂಬ ಅಂಶವನ್ನು ಮರೆಯುವಂತಿಲ್ಲ. ಆದರೆ ನಂತರದಲ್ಲಿ ರಾಜಕೀಯ ಮತ್ತು ಆರ್ಥಿಕ ಕಾರಣಗಳಿಂದಾಗಿ ಬ್ರಿಟಿಶರ ಶತ್ರುತ್ವವನ್ನು ಕಟ್ಟಿಕೊಳ್ಳಬೇಕಾಯಿತು. ತಮ್ಮ ರಾಜಕೀಯ ಮತ್ತು ಆರ್ಥಿಕತೆಯನ್ನು ಸದೃಢಪಡಿಸಿಕೊಳ್ಳುವ ಪ್ರಯತ್ನಗಳನ್ನು ತಮ್ಮ ರಾಜ್ಯದಲ್ಲಿ ಮಾಡಿದರು. ಬ್ರಿಟಿಶರನ್ನು ಭಾರತದಿಂದ ಹೊರಹಾಕುವ ಮತ್ತು ಬ್ರಿಟಿಶರ ವಸಾಹತು ನೀತಿಯನ್ನು ತಡೆಯುವ ನಿಟ್ಟಿನಲ್ಲಿ ಅನೇಕ ಆಡಳಿತ ಮತ್ತು ಆರ್ಥಿಕ ಅವಿಷ್ಕಾರಗಳನ್ನು ಜಾರಿಗೊಳಿಸಿದರು. ಈ ಸಂದರ್ಭದಲ್ಲಿಯೇ ಬ್ರಿಟಿಶರ ಶತ್ರುಗಳು ಮತ್ತು ಯುರೋಪಿಯನ್ನರೇ ಆದ ಫ್ರೇಂಚ್‌ರ ಸ್ನೇಹ ಸಂಪರ್ಕ ಬೆಳೆಸಿಕೊಂಡಿದ್ದರು. ಸಹಜವಾಗಿ ಯುರೋಪಿನಲ್ಲಿ ಪ್ರಚಲಿತದಲ್ಲಿದ್ದ ವಾಣಿಜ್ಯವಾದ ಫ್ರೆಂಚರ ಮೂಲಕ ಟಿಪ್ಪುವಿನ ಆರ್ಥಿಕ ನೀತಿಯಲ್ಲಿ ನೋಡಬಹುದಾಗಿದೆ.[೧೫]

ಟಿಪ್ಪುವಿನ ವಾಣಿಜ್ಯವಾದ ಹಾಗೂ ಬ್ರಿಟಿಶರು ತಮ್ಮ ದೇಶದಲ್ಲಿ ಅನುಸರಿಸಿದ ವಾಣಿಜ್ಯವಾದದ ನಡುವೆ ಸ್ವಲ್ಪಮಟ್ಟಿಗೆ ಸಾಮ್ಯತೆಯನ್ನು ಕಾಣಬಹುದೆಂದು ಹೇಳಬಹುದು. ಉದಾಹರಣೆಗೆ ರಾಜ್ಯದ ವಾಣಿಜ್ಯ-ವ್ಯಾಪಾರದ ಮೇಲೆ ಸರ್ಕಾರದ ಏಕಸ್ವಾಮ್ಯವನ್ನು ಸಾರಿದನು. ಸ್ಥಳೀಯ ವರ್ತಕರಿಗೆ ಪ್ರೋತ್ಸಾಹ ನೀಡಿದನು. ವಿದೇಶಿ ವರ್ತಕರ ಮತ್ತು ವಸ್ತುಗಳ ಆಮದುಗಳ ಮೇಲೆ ನಿರ್ಬಂಧವನ್ನು ಹೇರಿದನು. ಇದೇ ವಿಚಾರಗಳನ್ನು ಬುಕಾನನ್ ನಡೆಸಿದ ಸಮೀಕ್ಷೆಯಲ್ಲಿಯೂ ವಿವರಿಸಿದ್ದಾನೆ. ಈ ಮೇಲಿನ ಎಲ್ಲಾ ಅಂಶಗಳನ್ನು ಗಮನಿಸಿದಾಗ ಟಿಪ್ಪು ವಾಣಿಜ್ಯವಾದದಿಂದ ಪ್ರಭಾವಿತನಾಗಿದ ಮತ್ತು ಆ ನೀತಿಯನ್ನು ತನ್ನ ರಾಜ್ಯದಲ್ಲಿ ಅಳವಡಿಸಿಕೊಂಡಿದ್ದ ಎಂಬ ವಿಚಾರ ಸ್ಪಷ್ಟವಾಗುತ್ತದೆ. ರಾಜ್ಯದಲ್ಲಿ ಆಮದನ್ನು ಕಡಿಮೆ ಮಾಡಿ ರಫ್ತನ್ನು ಹೆಚ್ಚಿಸುವ ಉದ್ದೇಶದಿಂದ ವಿದೇಶಗಳಲ್ಲಿ ವ್ಯಾಪಾರ ಕಛೇರಿಗಳನ್ನು ಸ್ಥಾಪಿಸಿದನು. ಈ ಎಲ್ಲಾ ಅಂಶಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಸ್ಥಳೀಯ ವರ್ತಕರು, ಇನ್ನಿತರ ಪ್ರದೇಶದ ವರ್ತಕರು ಮತ್ತು ಟಿಪ್ಪುವಿನ ನಡುವಿನ ಸಂಬಂಧ ಸುಮಧುರ ವಾಗಿರಲಿಲ್ಲವೆಂಬ ಅಂಶ ಸಹ ತಿಳಿಯುತ್ತದೆ. ಇದೇ ವಿಚಾರವನ್ನು ಮಾರ್ಕ್ಸ್ ವೀಲರ್ ತನ್ನ ಕೃತಿಯಲ್ಲಿ ಮೂರನೇ ಆಂಗ್ಲೋ-ಮೈಸೂರು ಕದನದ ಸಂದರ್ಭದಲ್ಲಿ ಸ್ಥಳೀಯ ವರ್ತಕರು ಬ್ರಿಟಿಶರಿಗೆ ಸಹಕಾರ ನೀಡಿದರು ಎಂಬ ವಿಚಾರವನ್ನು ಉಲ್ಲೇಖಿಸಿದ್ದಾನೆ.

ಬ್ರಿಟಿಶ್ ಭಾರತದ ವಾಣಿಜ್ಯ ನೀತಿಯಂತೆ ಟಿಪ್ಪು ಸಹ ಬ್ರಿಟಿಶರ ವಿರುದ್ಧ ಆರ್ಥಿಕ ನೀತಿಯನ್ನು ಅನುಸರಿಸಿದನು. ತೋಟಗಾರಿಕೆ ಕೃಷಿಯಲ್ಲಿ ಆಸಕ್ತಿ ಹೊಂದಿದ್ದ ಟಿಪ್ಪು ಮೈಸೂರು ಮತ್ತು ಬೆಂಗಳೂರಿನ ಲಾಲ್‌ಬಾಗ್‌ಗಳಲ್ಲಿ ಮಾವು, ಹಲಸು, ದಾಳಿಂಬೆ, ಕಿತ್ತಳೆ, ಸೇಬು, ನಿಂಬೆ, ಅಂಜೂರಾ, ದ್ರಾಕ್ಷಿ ಮುಂತಾದ ವಿವಿಧ ಹಣ್ಣುಗಳ ಗಿಡಗಳನ್ನು ವಿವಿಧ ದೇಶಗಳಿಂದ ತರಿಸಿ ಈ ಪ್ರದೇಶಗಳಲ್ಲಿ ಬೆಳೆದು ನೋಡಿ ನಂತರದಲ್ಲಿ ಮೈಸೂರು ರಾಜ್ಯದ ಎಲ್ಲಾ ಪ್ರದೇಶಗಳಲ್ಲಿ ರೈತರು ಬೆಳೆಯಲು ಪ್ರೋತ್ಸಾಹಿ ಸುತ್ತಿದ್ದನು. ಅದೇ ರೀತಿಯಲ್ಲಿ ವಾಣಿಜ್ಯ ಮೌಲ್ಯವುಳ್ಳ ಓಕ್ ಮರದ ಗಿಡವನ್ನು ಇಂಗ್ಲೆಂಡಿನಿಂದ, ಬುಬಲ್ ಮರದ ಗಿಡವನ್ನು ಟರ್ಕಿಯಿಂದ, ಪೈನ್ ಮರದ ಗಿಡವನ್ನು ಗುಡ್ ಹೋಪ್ ಭೂಶಿರದಿಂದ, ಉನ್ನತ ಗುಣಮಟ್ಟದ ಹಿಪ್ಪುನೇರಳೆ ತಳಿಗಳನ್ನು ತರಿಸಿ ಬೆಂಗಳೂರಿನ ಲಾಲ್‌ಬಾಗ್‌ನಲ್ಲಿ ಬೆಳೆಸಿದನು. ಬುಕಾನನ್ ೧೮೦೦ರ ದಶಕದಲ್ಲಿ ಮೈಸೂರು, ಮದ್ರಾಸ್, ಮಲಬಾರ್ ಪ್ರದೇಶಗಳ ಸಮೀಕ್ಷೆಯ ಸಂದರ್ಭದಲ್ಲಿ ೧೫ ಬಗೆಯ ಹಣ್ಣಿನ ಸಸ್ಯ ಮತ್ತು ೨೪ ಬಗೆಯ ತರಕಾರಿ ಸಸ್ಯಗಳನ್ನು ನೋಡಿರುವುದಾಗಿ ವರದಿ ಮಾಡಿದ್ದಾನೆ.[೧೬]

ವಾಣಿಜ್ಯ ಬೆಳೆಗಳನ್ನು ಬೆಳೆಯಲು ಮತ್ತು ತೋಟಗಾರಿಕೆ ಬೆಳೆಗಳನ್ನು ಬೆಳೆಯುವಲ್ಲಿ ಕೌಶಲ್ಯತೆಯನ್ನು ಹೊಂದಿದ್ದ ಮತ್ತು ಪಳಗಿದ ತಿಗಳರನ್ನು ಬೆಂಗಳೂರಿಗೆ ಕರೆ ತಂದು ನೆಲೆ ನಿಲ್ಲಲು ಅವಕಾಶ ಮಾಡಿಕೊಡಲಾಯಿತು. ಇಂದಿಗೂ ಸಹ ತಿಗಳ ಸಮುದಾಯವು ಬೆಂಗಳೂರಿನಲ್ಲಿ ತಮ್ಮದೇ ಅಸ್ತಿತ್ವನ್ನು ಹೊಂದಿದ್ದಾರೆ. ಇವರ ಪ್ರಧಾನ ವೃತ್ತಿ ತೋಟಗಾರಿಕೆ. ಲಾಲ್‌ಬಾಗ್ ಹೈದರ್ ನಿರ್ಮಿಸಿ

ದನಾದರೂ ಅದನ್ನು ಅಭಿವೃದ್ಧಿಪಡಿಸುವ ಕಾರ್ಯವನ್ನು ಟಿಪ್ಪು ಮಾಡಿದನು. ಟಿಪ್ಪುವಿನ ಕಾಲದಲ್ಲಿ ವಿವಿಧ ರೀತಿಯ ಹೂ, ಹಣ್ಣು, ಗಿಡ-ಮರಗಳನ್ನು ಪ್ರಯೋಗಾತ್ಮಕವಾಗಿ ಬೆಳೆಸುವ ಪ್ರಯೋಗಾಲಯ ಎಂಬುದು ಗಮನಾರ್ಹವಾಗಿದೆ. ಸಾಂಪ್ರದಾಯಿಕ ಕೃಷಿಯನ್ನು ಅನುಸರಿಸುತ್ತಿದ್ದ ಭಾರತೀಯ ರೈತರನ್ನು ವಾಣಿಜ್ಯ ಬೆಳೆಗಳನ್ನು ಬೆಳೆಯುವಂತೆ ಪ್ರೋತ್ಸಾಹಿಸುವ ನೆಲೆಯಲ್ಲಿ ಹಲವಾರು ಸುಧಾರಣಾ ಕ್ರಮಗಳನ್ನು ಜಾರಿಗೊಳಿಸಿದನು. ಆದರೆ ನಿರಂತರ ಕದನಗಳಿಂದ ತನ್ನ ನೀತಿಯನ್ನು ಮೈಸೂರು ರಾಜ್ಯದ ಎಲ್ಲೆಡೆ ಕಾರ್ಯರೂಪಕ್ಕೆ ತರಲು ಸಾಧ್ಯವಾಗಲಿಲ್ಲವೆಂದು ತೋರುತ್ತದೆ. ಭಾರತವು ಬ್ರಿಟಿಶರ ವಸಾಹತುವಾಗಿ ಒಳಪಟ್ಟ ನಂತರದಲ್ಲಿ ವಸಾಹತುಗಳ ಸಂಪತ್ತು ಇರುವುದೇ ತಮ್ಮ ದೇಶದ ಅನುಕೂಲಕ್ಕಾಗಿ ಎಂಬ ನಂಬಿಕೆ ಹೊಂದಿದ್ದರು. ಈಗಾಗಲೇ ತೋಟಗಾರಿಕೆಯ ಕೃಷಿ ವ್ಯವಸ್ಥೆಯಲ್ಲಿ ಅನುಭವವಿದ್ದ ಬ್ರಿಟಿಶರು ಏಕನೀತಿಯ ಆಡಳಿತ ಮತ್ತು ಆರ್ಥಿಕ ನೀತಿಯನ್ನು ಭಾರತದೆಲ್ಲೆಡೆ ಜಾರಿಗೊಳಿಸಿದರು.

ಸಸ್ಯ ಉದ್ಯಮವು ಒಂದು ವಿಸ್ತೃತವಾದ ರೂಪವಾಗಿ ವಸಾಹತು ಕಾಲಘಟ್ಟದಲ್ಲಿ ಪಡೆಯಿತು. ಕಾಫಿ, ಟೀ, ರಬ್ಬರ್, ಮೌಲ್ಯಾಧಾರಿತವಾದ ಸಸ್ಯಗಳನ್ನು ಬೆಳೆಸುವುದು ಕಂಪನಿಗೆ ಅನಿವಾರ್ಯವಾಗಿತ್ತು. ಇದಕ್ಕೆ ಯುರೋಪಿನ ದೇಶಗಳಲ್ಲಿ ಅತೀಯಾದ ಬೇಡಿಕೆಯಿತು. ಅಮೆರಿಕಾ, ಫ್ರಾನ್ಸ್, ಜರ್ಮನಿ ಇತ್ಯಾದಿ ದೇಶಗಳು ಇದಕ್ಕಾಗಿ ಪೈಪೋಟಿ ನಡೆಸುತ್ತಿದ್ದವು.[೧೭]

ಭಾರತದಲ್ಲಿ ಕೃಷಿಯನ್ನು ವಾಣಿಜ್ಯೀಕರಿಸುವ ನೆಲೆಯಲ್ಲಿ ಕ್ರಿ. ಶ ೧೭೮೬ ಜನವರಿ ೧ರಲ್ಲಿ ಅಗ್ರಿಕಲ್ಚರ್ ಸೊಸೈಟಿಯನ್ನು ಕಲ್ಕತ್ತದಲ್ಲಿ ಸ್ಥಾಪಿಸಿದರು. ನಂತರ ಈ ಸಂಸ್ಥೆಯನ್ನು ೧೮೩೦ರ ಸೆಪ್ಟೆಂಬರ್ ೧೪ರಂದು ಅಗ್ರಿ-ಹಾರ್ಟಿಕಲ್ಚರ್ ಸೊಸೈಟಿ ಎಂದು ಮರುನಾಮಕರಣ ಮಾಡಿದರು. ಈ ಸಂಸ್ಥೆಯ ಮುಖ್ಯ ಉದ್ದೇಶ ಕೃಷಿ ಬೆಳೆಗಳ ಅಭಿವೃದ್ಧಿಯೊಂದಿಗೆ ತೋಟಗಾರಿಕೆಯನ್ನು ಅಭಿವೃದ್ಧಿಪಡಿಸುವುದೇ ಆಗಿತ್ತು. ಭಾರತದ ಇನ್ನಿತರ ಪ್ರದೇಶಗಳಲ್ಲಿ ಈ ವಾಣಿಜ್ಯ ಕೃಷಿ ನೀತಿಯನ್ನು ಪ್ರಚಾರಪಡಿಸುವ ಉದ್ದೇಶದಿಂದ ಇದರ ಶಾಖೆಯನ್ನು ೧೮೩೫ರಲ್ಲಿ ಲಕ್ನೋ, ಮದ್ರಾಸ್‌ಗಳಲ್ಲಿಯೂ ನಂತರ ೧೮೩೬ರಲ್ಲಿ ಬೆಂಗಳೂರು, ಮೀರತ್ ಮತ್ತು ಸಿಂಗಪೂರ್ ಸೇರಿದಂತೆ ಇನ್ನಿತರ ವಸಾಹತು ಪ್ರದೇಶಗಳಲ್ಲಿ ಸ್ಥಾಪಿಸಲಾಯಿತು. ಬೆಂಗಳೂರಿನ ಲಾಲ್‌ಬಾಗ್‌ನ್ನು ಕೇಂದ್ರವಾಗಿರಿಸಿಕೊಂಡು ವಾಣಿಜ್ಯ ಬೆಳೆಗಳಾದ ಕಬ್ಬು, ಹತ್ತಿ, ಹಿಪ್ಪುನೇರಳೆ, ದ್ರಾಕ್ಷಿ ಮತ್ತು ಯುರೋಪಿನ ವಿವಿಧ ಬಗೆಯ ಗಿಡ-ಮರ, ಫಲ-ಪುಷ್ಪಗಳನ್ನು ಪ್ರಯೋಗಾತ್ಮಕವಾಗಿ ಬೆಳೆಸಿ ನಂತರ ಇನ್ನಿತರ ಪ್ರದೇಶಗಳಲ್ಲಿ ಸಾಂಪ್ರದಾಯಿಕ ಕೃಷಿಯನ್ನು ವಾಣಿಜ್ಯ ಕೃಷಿಯನ್ನಾಗಿ ಪರಿವರ್ತಿಸಿ ಬೃಹತ್ ಪ್ರಮಾಣದಲ್ಲಿ ಪ್ರೇರೇಪಿಸುವ ತಂತ್ರವನ್ನು ಬ್ರಿಟಿಶರು ಹೊಂದಿದ್ದರು. ಈ ಹಿನ್ನೆಲೆಯಲ್ಲಿ ಮೊದಲ ಬಾರಿಗೆ ಕ್ರಿ.ಶ ೧೮೫೬ರಲ್ಲಿ ಲಾಲ್‌ಬಾಗ್‌ನಲ್ಲಿ ತೋಟಗಾರಿಕೆಯ ಪ್ರದರ್ಶವನ್ನು ಏರ್ಪಡಿಸಲಾಯಿತು. ಪ್ರದರ್ಶನದ ವೇಳೆಯಲ್ಲಿ ಆಧುನಿಕ ಕೃಷಿ

ಸಾಧನಗಳನ್ನು ರೈತರಿಗೆ ಪರಿಚಯಿಸುವ ಯೋಜನೆಯನ್ನು ಸಹ ಹೊಂದಿದ್ದರು. ಈ ರೀತಿಯ ಪ್ರದರ್ಶನಗಳು ಕೇವಲ ವಾಣಿಜ್ಯ ಬೆಳೆಗಳಾದ ಕಬ್ಬು, ಹತ್ತಿ, ಹಿಪ್ಪುನೇರಳೆ, ದ್ರಾಕ್ಷಿಗಳಿಗೆ ಮಾತ್ರ ಸೀಮಿತವಾಗಿರದೇ ಉತ್ತಮ ತಳಿ ಕೋಳಿ, ಹಸು, ಕುದುರೆಗಳನ್ನು ಸಹ ಪ್ರದರ್ಶಿಸಲಾಗುತ್ತಿತ್ತು.[೧೮] ಈ ಪ್ರದರ್ಶನದ ಸಂದರ್ಭದಲ್ಲಿ ಸ್ಥಳೀಯ ರೈತರಿಗೆ ಪ್ರದರ್ಶನದಲ್ಲಿ ಭಾಗವಹಿಸಲು ಅವಕಾಶ ಕಲ್ಪಿಸಿಕೊಟ್ಟರಲ್ಲದೇ ಗೆದ್ದವರಿಗೆ ಬಹುಮಾನವನ್ನು ನೀಡಲಾಗುತಿತ್ತು. ಬಹುಮಾನವು ನಗದು ಬಹುಮಾನವಾಗಿರದೇ ಕೃಷಿಯನ್ನು ಪ್ರೋತ್ಸಾಹಿಸಲು ಕೃಷಿ ಬೀಜಗಳನ್ನು ಬಹುಮಾನವಾಗಿ ನೀಡು ತ್ತಿದ್ದರು ಎಂಬ ಅಂಶ ಅದರ ಹಿಂದಿನ ಉದ್ದೇಶವನ್ನು ಸ್ಪಷ್ಟಪಡಿಸುತ್ತದೆ. ಮೇಲ್ನೋಟಕ್ಕೆ ಇದು ಆಧುನಿಕತೆಯ ಪ್ರದರ್ಶನದಂತೆ ಕಂಡರೂ ಬೆಂಗಳೂರಿನ ಲಾಲ್‌ಬಾಗ್‌ನಂತಹ ಶಾಖೆಗಳು ಬ್ರಿಟಿಶರ ಕೃಷಿ ವಾಣಿಜ್ಯೀಕರಣದ ಕೇಂದ್ರಗಳಾಗಿ ಕಾರ್ಯನಿರ್ವಹಿಸುತ್ತಿದ್ದವು. ೧೮೦೦ರ ಬೆಂಗಳೂರು ಸಾರ್ವಜನಿಕರನ್ನು ಆಕರ್ಷಿಸುವ ಉದ್ಯಾನವನವಾಗಿರದೆ ಏನಾದರೊಂದು ಬೆಳೆ ಬೆಳೆಯುವ ಪ್ರದೇಶ ಆಗಿತ್ತು ಎಂದು ಬುಕಾನನ್ ಹೇಳಿಕೆಯಿಂದ ತಿಳಿಯಬಹುದಾಗಿದೆ.[೧೯]

೧೮೬೦ರ ದಶಕದಲ್ಲಿ ಕಂಡುಬಂದ ಅಮೆರಿಕಾದ ಕಾಟನ್‌ಬೂಬಿನ ಸಂದರ್ಭದಲ್ಲಿ ಹಿಪ್ಪುನೇರಳೆ ಮತ್ತು ಹತ್ತಿ ತಳಿಗಳನ್ನು ಬೆಂಗಾಲ್ ಮತ್ತು ಇನ್ನಿತರ ಪ್ರದೇಶಗಳಿಂದ ತರಿಸಿ ಈ ಕೃಷಿಯಲ್ಲಿ ನೈಪುಣ್ಯತೆಯನ್ನು ಹೊಂದಿದ್ದ ಯುರೋಪಿನ ದೇಶಗಳ ತಜ್ಞರನ್ನು ಇಲ್ಲಿಗೆ ಕರೆತಂದು ಅವರಿಗೆ ವಾಣಿಜ್ಯ ಬೆಳೆಗಳನ್ನು ಬೆಳೆಯಲು ಸೌಲಭ್ಯವನ್ನು ನೀಡಿದರು ಹಾಗೂ ಅವರ ನೇತೃತ್ವದಲ್ಲಿ ಸ್ಥಳೀಯ ರೈತರು ವಾಣಿಜ್ಯ ಬೆಳೆಗಳನ್ನು ಬೆಳೆಯುವಂತೆ ಪ್ರೋತ್ಸಾಹಿಸಲಾಯಿತು. ಈ ಅವಧಿಯಲ್ಲಿ ದೊಡ್ಡ ದೊಡ್ಡ ಭೂ ಹಿಡುವಳಿಗಳು ಬ್ರಿಟಿಶ್ ಪ್ರಭುತ್ವದ ಬೆಂಬಲವನ್ನು ಹೊಂದಿದ್ದ ಯುರೋಪಿನ ವರ್ತಕರು ಮತ್ತು ಸ್ಥಳೀಯ ಶ್ರೀಮಂತ ವರ್ತಕರು, ಜಮೀನ್ದಾರರು ಅಧಿಕಾರವನ್ನು ಹೊಂದಿದ್ದರು. ಭೂ ಹಿಡುವಳಿಯು ಬ್ರಿಷಶರ ಆಧುನಿಕ ಪರಿಕಲ್ಪನೆಯ ಹಿನ್ನೆಲೆಯಲ್ಲಿ ಎಸ್ಟೇಟ್ ಮತ್ತು ಪ್ಲಾಂಟೇಶನ್ ಎಂದು ಕರೆಯಲಾಗಿತ್ತು. ಆರ್ಥಿಕ ಪ್ರಾಬಲ್ಯವನ್ನು ಹೊಂದಿದ್ದ ಸ್ಥಳೀಯ ರೈತಾಪಿವರ್ಗಗಳಾದ ರೆಡ್ಡಿ, ಗೌಡ ಮತ್ತು ಇನ್ನಿತರ ಶ್ರೀಮಂತ ವರ್ತಕರು ಸಹ ಹಣವನ್ನು ಭೂಮಿಯ ಮೇಲೆ ಹೂಡಿಕೆ ಮಾಡುವ ಪದ್ಧತಿಯು ಕಂಡುಬಂದಿತ್ತು. ಇವರು ಎಸ್ಟೇಟ್ ಮಾಲಿಕರಾಗಿ ಮತ್ತು ಪ್ಲಾಂಟರುಗಳಾಗಿ ಪರಿವರ್ತನೆಗೊಂಡರು. ಬ್ರಿಟಿಶರು ಭಾರತದಲ್ಲಿ ಜಾರಿಗೊಳಿಸಿದ ಕಂದಾಯ ವ್ಯವಸ್ಥೆಯು ಸಹ ಕೃಷಿ ವಾಣಿಜ್ಯೀಕರಣ ಕಾರ್ಯತಂತ್ರದ ಬೆಳವಣಿಗೆಯಿಂದ ಪೂರಕವಾಗಿಯೇ ರೂಪಿಸಲಾಗಿತ್ತು. ಇವೆಲ್ಲ ಅಂಶಗಳು ಭಾರತದ ಸಾಂಪ್ರದಾಯಿಕ ಉತ್ಪಾದನಾ ಕ್ಷೇತ್ರದಲ್ಲಿ ಬಂಡವಾಳದ ಪ್ರವೇಶಕ್ಕೆ ಅವಕಾಶವನ್ನು ಕಲ್ಪಿಸಿತು. ಸಣ್ಣ ಭೂ ಹಿಡುವಳಿದಾರರು ಶೋಷಣೆಗೆ ಒಳಗಾಗಿ ತಮ್ಮ ಭೂಮಿಯನ್ನು ಕಳೆದುಕೊಂಡು ಕೂಲಿ ಕಾರ್ಮಿಕರಾದರು. ಸಣ್ಣ ಭೂ ಹಿಡುವಳಿದಾರರಿಗೆ ಕೃಷಿ ಚಟುವಟಿಕೆಯನ್ನು ಮಾಡಲು ಹಣಕಾಸಿನ ಸೌಲಭ್ಯವನ್ನು ನೀಡುವ ವ್ಯಕ್ತಿಗಳಾಗಿ ಮಾರ್ವಾಡಿಗಳೂ, ಜೈನರು ಮುಖ್ಯವಾಹಿನಿಗೆ

ಬಂದು ಪ್ರಬಲ ಬ್ಯಾಂಕರುಗಳಾಗಿ ಹೊರಹೊಮ್ಮಿದರು.

ಬೆಂಗಳೂರು ಪ್ರದೇಶದಲ್ಲಿ ಬಹುಪಾಲು ದೊಡ್ಡ ದೊಡ್ಡ ಎಸ್ಟೇಟ್‌ಗಳು ಇದ್ದವು. ಇದೇ ವಿಚಾರವನ್ನು ಗ್ಲೇನ್ ಹ್ಯಿಚ್ಕೆನ್‌ರವರು ತಮ್ಮ ಗ್ರಂಥವಾದ ಬ್ಯೂಟಿಫುಲ್ ಬೆಂಗಳೂರ್‌ನಲ್ಲಿ ಉಲ್ಲೇಖಿಸಿರುವಂತೆ ಗಂಗೇನಹಳ್ಳಿ ಎಸ್ಟೇಟಿನ ಯಜಮಾನ ಎಂ. ಸಿ. ಐಸಾಕ್ ಎಂಬುವವರ ಅಧೀನದಲ್ಲಿ ೨೨ ಹೆಕ್ಟೇರ್ ವಿಸ್ತೀರ್ಣದ ಸೇಬಿನ ತೋಟವಿತ್ತು. ಇದಲ್ಲದೇ, ಜಕ್ಕೂರು, ಬನಶಂಕರಿ, ಕೆಂಗೇರಿ, ಕೃಷ್ಣರಾಜಪುರಂ ಹಾಗೂ ತಾವರೆಕೆರೆ ಪ್ರಮುಖ ಎಸ್ಟೇಟ್‌ಗಳಿದ್ದ ಪ್ರದೇಶವಾಗಿದ್ದವು ಎಂಬುದನ್ನು ಸ್ಪಷ್ಟೀಕರಿಸುತ್ತದೆ.[೨೦] ಈ ವರದಿಗಳು ಕೃಷಿ ವಾಣಿಜ್ಯೀಕರಣದ ನೆಲೆಯಲ್ಲಿ ಬೆಂಗಳೂರು ಪ್ರದೇಶದ ಪರಿವರ್ತನೆಯ ಬೆನ್ನಲ್ಲೇ ಉತ್ಪಾದನೆ, ನೌಕರಶಾಹಿ ವ್ಯವಸ್ಥೆ, ವಿವಿಧ ವೃತ್ತಿಪರ ಚಟುವಟಿಕೆಗಳು, ವ್ಯಾಪಾರ ಸಂಪರ್ಕದ ವೃದ್ಧಿ ಇತ್ಯಾದಿ ಅಂಶಗಳ ಮೂಲಕ ನಗರೀಕರಣ ಪೂರಕವಾಗಿ ಅದರ ಪ್ರಕ್ರಿಯೆಯನ್ನು ಚುರುಕುಗೊಳಿಸಿತು.

ಹೀಗೆ ಕಂಪನಿಯ ಪ್ರಭುತ್ವದಿಂದ ಬ್ರಿಟಿಶ್ ಸಾಮ್ರಾಜ್ಯಶಾಹಿ ಹಂತ ಹಂತವಾಗಿ ಬ್ರಿಟಿಶ್ ಸಾಮ್ರಾಜ್ಯಶಾಹಿಯ ಪ್ರತಿನಿಧಿಯಾಗಿ ಅಥವಾ ಏಜೆಂಟಾಗಿ ಪರಿವರ್ತನೆಗೊಂಡಿತು. ೧೮೫೭ರ ದಂಗೆಯ ನಂತರದಲ್ಲಿ ಭಾರತವು ಬ್ರಿಟಿಶ್ ಸಾಮ್ರಾಜ್ಯಶಾಹಿಯ ಸಂಪೂರ್ಣ ನಿಯಂತ್ರಣಕ್ಕೆ ಒಳಗಾಯಿತು. ಈ ಪ್ರಕ್ರಿಯೆಯ ಪ್ರತಿ ಹಂತದಲ್ಲೂ ಸಹ ವಿದೇಶಿ ವರ್ತಕರು ಮತ್ತು ಭಾರತೀಯ ವರ್ತಕರ ಪಾತ್ರವು ಮಹತ್ವದಾಗಿದೆ. ಬ್ರಿಟಿಶ್ ಪ್ರಭುತ್ವ ಬೀಸಿದ ಬೌದ್ಧಿಕ ವಲಯದ ಬಲೆಗೆ ಮೊದಲು ಬಿದ್ದವರು ಬೂರ್ಶ್ವಾ ಸಮುದಾಯ ಮತ್ತು ಪ್ರಬಲ ವರ್ತಕ ಸಮುದಾಯಗಳು. ಈ ಅವಧಿಗಾಗಲೇ ಇವರು ಭಾರತೀಯ ಸಮಾಜದ ಮುಖ್ಯವಾಹಿನಿಯಲ್ಲಿ ಆರ್ಥಿಕ ಮತ್ತು ಸಾಮಾಜಿಕವಾಗಿ ಪ್ರಬಲರಾಗಿದ್ದರು. ಇವರು ಬ್ರಿಟಿಶ್ ಸಾಮ್ರಾಜ್ಯಶಾಹಿ ನೀತಿಯ ಪೂರಕವಾಗಿಯೇ ಕಾರ್ಯ ಪ್ರವೃತ್ತರಾದರು. ಉದಾಹರಣೆಗೆ, ಪಾರ್ಸಿ, ಗುಜರಾತಿ, ಮಾರ್ವಾಡಿ, ಬನಿಯಾ ವರ್ತಕ ಸಮುದಾಯಗಳು. ವಸಾಹತು ಮತ್ತು ಸಾಮ್ರಾಜ್ಯಶಾಹಿ ಕಾಲಾವಧಿಯಲ್ಲಿ ಆಧುನಿಕ ವರ್ತಕ ಸಮುದಾಯಗಳಾಗಿ ಹೊರ ಹೊಮ್ಮಿದರು. ಇವರು ಬ್ರಿಟಿಶ್ ವರ್ತಕ ಸಮುದಾಯ ಅಥವಾ ವಿದೇಶಿ ವರ್ತಕ ಸಮುದಾಯಗಳಿಗೆ ಭಾರತದಿಂದ ಕಚ್ಚಾ ವಸ್ತುಗಳನ್ನು ರವಾನಿಸುವ ಮತ್ತು ಸಿದ್ಧವಸ್ತುಗಳನ್ನು ಮಾರಾಟ ಮಾಡುವ ಮಧ್ಯವರ್ತಿ ಎಂಬ ಸೇತುವೆಯಂತೆ ಪಾತ್ರ ನಿರ್ವಹಿಸಿದರು.

**ಕೊನೆಟಿಪ್ಪಣಿಗಳು**

೧. ಫಿರೋಜ್ ಹೈ ಸರ್‌ವರ್, **ಯುರೋಪಿಯನ್ ಐಡಿಯೊಲಾಜಿಸ್: ಇಂಪಿರಿಯಲ್ ಡಮಿನೇಷನ್ ಅಂಡ್ ಸೋಶಿಯಲ್ ರಿಫ್ರಾಮ್ ಇನ್ ಇಂಡಿಯಾ**, ೧೭೭೩–೧೮೫೭, ವ್ಯಾಲ್ಯೂಮ್ ೨, ಇಸ್ಯು ೮, ಆಗಸ್ಟ್ ೨೦೧೨, ಪು.೧

೨. ಅದೇ, ಪು.೨

೩. ಅದೇ, ಪು.೩

೪. http://www.historydiscussion.net/britishindia/

೫. charteractsofcompany1793to1858anditscriticism/ ೫೯೪೨. ಪು.೬

೬. ಫಿರೋಜ್ ಹೈ ಸರ್‌ವರ್, ಪೂರ್ವೋಕ್ತ, ಪು.೪

೭. ಆಂಟೋನಿ ವೆಬ್‌ಸ್ಟರ್, ಬ್ರಿಟಿಸ್ ಬುಸಿನೆಸ್ಸ್ ನೆಟ್‌ವರ್ಕ್ ಅಂಡ್ ಕಾಲೋನಿಯಲ್ ಎಕೋನಾಮಿಕ್ ಪಾಲಿಸ್ ಇನ್ ಇಂಡಿಯಾ ೧೮೩೦–೧೮೪೪, ಪು.೪೦೪

೮. ಹೃಷಿಕೇಶ್ ಬ್ರಹ್ಮ, ದಿ ಚಾರ್ಟರ್ ಆಕ್ಟ್ ಆಫ್ ೧೮೩೩: ಎ ಸ್ಟಡಿ, ಜರ್ನಲ್ಸ್ ಅಂಡ್ ಸೋಷಿಯಲ್ ಸೈನ್ಸ್, ವಾಲ್ಯೂಮ್ ೧, ಇಸ್ಯು–೪ ಎಪ್ರಿಲ್ ೨೦೧೩. ಪು.೨೧೨.

೯. ಗೌತಮ್ ಚಟರ್ಜಿ, ಪಾಲಿಸಿಸ್ಸ್ ಅಂಡ್ ಪಾಲಿಟಿಕ್ಸ್ ಆಫ್ ಇಂಡಿಯನ್ ರೈಲ್ವೆ ೧೮೫೩–೧೯೪೭, ಪು.೬೭

೧೦. ಪೌಲ್ ಎ. ಗಿಲ್ಜೆ, ಫ್ರೀ ಟ್ರೇಡ್ ಅಂಡ್ ಸೇಲರ್ ರೈಟ್ ಇನ್ ದಿ ವರ್ ಆಫ್ ೧೮೧೨, ೨೦೧೩, ಕೇಂಬ್ರಿಜ್ ಯುನಿರ್ವಸಿಟಿ ಪ್ರೆಸ್, ಪು.೧೩.

೧೧. ಪೀಟರ್ ಕೈನ್, ಫ್ರೀ ಟ್ರೇಡ್ ಅಂಡ್ ಪ್ರೋಟೆಕ್ಷನ್, ೧೯೯೬, ಬ್ರಿಸ್ಟೋಲ್ ತಿಯೋಮ್ಮೆಸ್ ಪ್ರೆಸ್, ಪು.೪ http://www.encyclopedia.com/history/modern-europe/british-and-irish-history/corn-laws

೧೨. ಅನಿತಾ ಎಂ. ಎಸ್., ಆಧುನಿಕ ಮೈಸೂರಿನ ಇತಿಹಾಸದಲ್ಲಿ ನಾಲ್ವಡಿ ಕೃಷ್ಣದೇವರಾಜ ಒಡೆಯರ್, ೨೦೧೨, ಪ್ರಿಯದರ್ಶಿನಿ ಪ್ರಕಾಶನ, ಮೈಸೂರು, ಪು.೨೧೪

೧೩. ಫ್ರಂಕೆಲ್, "ಲೇಜರ್ ಫೇರ್ ಇನ್ ನೈಟೀನ್ ಸೆಂಚುರಿ ಬ್ರಿಟನ್: ಫಕ್ಟ್ ಆರ್ ಮಿಥ್?", ೧೯೮೦, ವ್ಯಾಲೂಮ್ ೩, ನಂ. ೪, ಇನ್‌ಸ್ಟಿಟ್ಯೂಟ್ ಫಾರ್ ಹ್ಯುಮನ್ ಸ್ಟಡಿಸ್, ಪು.೫–೩೮.

೧೪. ಆಂಟೋನಿ ವೆಬ್‌ಸ್ಟರ್, ಪೂರ್ವೋಕ್ತ, ಪು.೪೦೪.

೧೫. ಯಶೋದ ಪಿ.(ಲೇ), ಟಿಪ್ಪು ಸುಲ್ತಾನ್ ಹಾಗೂ ಬ್ರಿಟಿಶ್ ಆಳ್ವಿಕೆಯ ಅವಧಿಯಲ್ಲಿ ಬೆಂಗಳೂರಿನಲ್ಲಿ ನಡೆದ ಕೃಷಿ ವಾಣಿಜ್ಯೀಕರಣದ ಪ್ರಯೋಗಗಳು, ಕೆ. ಮೋಹನ್‌ಕೃಷ್ಣ ರೈ (ಸಂ). ಚರಿತ್ರೆ ಅಧ್ಯಯನ, ಸಂ–೭, ಸಂಚಿಕೆ ೧ ಜುಲೈ–೨೦೧೧, ಪು.೧೫೧.

೧೬. ಅದೇ, ಪು.೧೫೨

೧೭. ಫ್ರಾನ್ಸಿಸ್ ಬುಕಾನನ್, ೧೮೦೭, ಎ **ಜರ್ನಿ ಫ್ರಂ ಮದ್ರಾಸ್ ಥ್ರೂ ದ ಕಂಟ್ರೀಸ್ ಆಫ್ ಮೈಸೂರು, ಕೆನರಾ ಆ್ಯಂಡ್ ಮಲಬಾರ್, ಮೂರು ಸಂಪುಟಗಳು**, ಲಂಡನ್ (ಮರುಮುದ್ರಣ ೨೦೧೦), ಕರ್ನಾಟಕ ಸ್ಟೇಟ್ ಗ್ಯಾಸೆಟಿಯರ್ ಡಿಪಾರ್ಟ್‌ಮೆಂಟ್, ಬೆಂಗಳೂರು. ಪು.೪೭

೧೮.ಅರ್ನಾಲ್ಡ್ ರೈಟ್, **ಸದರನ್ ಇಂಡಿಯಾ ಇಟ್ಸ್ ಹಿಸ್ಟರಿ, ಪೀಪಲ್, ಕಾಮರ್ಸ್ ಅಂಡ್ ಇಂಡಸ್ಟ್ರಿಯಲ್ ರಿಸೋರ್ಸಸ್**, ೧೯೧೪, ದಿ ಫಾರಿನ್ ಅಂಡ್ ಕೊಲೊನಿಯಲ್ ಕಂಪಿಲಿಂಗ್ ಅಂಡ್ ಪಬ್ಲಿಷಿಂಗ್ ಕೋ. ಲಂಡನ್, ಪು.೨೧೯.

೧೯. ವೇಮೂಗಲ್ ಸೋಮಶೇಖರ್, **ಮಾರ್ಚ್ ಆಫ್ ಕರ್ನಾಟಕ**, ಜನವರಿ ೧೯೯೧, ಪು–೨೬

೨೦. ಯಶೋದ ಪಿ, **ಪೂರ್ವೋಕ್ತ**, ಪು.೧೫೪

೨೧. ಹಿಕೇನ್ ಗ್ಲೆನ್, **ಬ್ಯೂಟಿಫುಲ್ ಬ್ಯಾಂಗಳೂರ್**, ಬೆಂಗಳೂರು: ಗುಡ್ ಶಿಪ್‌ಯಾರ್ಡ್ ಪ್ರೆಸ್, ೧೯೨೯, ಹಿಸ್ಟೋರಿಕಲ್ ಪಬ್ಲಿಕೇಷನ್ಸ್, ಬೆಂಗಳೂರು. ಪು.೪೯–೫೦

# ಅಧ್ಯಾಯ ನಾಲ್ಕು

## ವರ್ತಕ ಸಮುದಾಯಗಳು

೪.೧. ಉತ್ಪಾದನಾ ವರ್ತಕ ಸಮುದಾಯಗಳು

೪.೨. ವಿನಿಮಯ ವರ್ತಕ ಸಮುದಾಯಗಳು

೪.೩. ಹೊರ ರಾಜ್ಯದ ಪ್ರಮುಖ ವರ್ತಕ ಸಮುದಾಯಗಳು

೪.೪. ವಿದೇಶಿ ವರ್ತಕ ಸಮುದಾಯಗಳು

## ಅಧ್ಯಾಯ ನಾಲ್ಕು

# ವರ್ತಕ ಸಮುದಾಯಗಳು

ಯಾವುದೇ ಪ್ರದೇಶವು ಹಳ್ಳಿಯ ಸ್ವರೂಪದಿಂದ ಪಟ್ಟಣ-ನಗರವಾಗಿ ಹೊರ ಹೊಮ್ಮುವ ಹಂತದಲ್ಲಿ ಅನೇಕ ಅಂಶಗಳು ಪ್ರಮುಖ ಪಾತ್ರವಹಿಸುತ್ತದೆ. ಅವುಗಳಲ್ಲಿ ಆ ಪ್ರದೇಶದ ಜನಸಂಖ್ಯೆ, ಭೌಗೋಳಿಕ ಲಕ್ಷಣಗಳು ಎಷ್ಟು ಮುಖ್ಯವೋ, ಅದರಷ್ಟೇ ಮುಖ್ಯವಾದ ಅಂಶವೆಂದರೆ, ಅಲ್ಲಿಯ ಉತ್ಪಾದಿತ-ವರ್ತಕರು ಮತ್ತು ವಿನಿಮಯ ವರ್ತಕರಾಗಿರುತ್ತಾರೆ. ಈ ಎರಡು ವರ್ಗದ ವರ್ತಕರ ನಡುವಿನ ಸಾಮರಸ್ಯಕರ ಸಂಬಂಧ ಸಹ ಇದಕ್ಕೆ ಪೂರಕವಾಗಿರಬೇಕು. ಉತ್ಪಾದಕ ಮತ್ತು ವಿನಿಮಯ ವರ್ತಕರ ನಡುವಿನ ಸಂಬಂಧಗಳು ಗ್ರಾಮ ಪಟ್ಟಣವಾಗಿ ಮಾರ್ಪಡುವ ಹಂತದಲ್ಲಿ ಬಹಳ ಮುಖ್ಯವೆನಿಸುತ್ತದೆ. ಆರ್ಥಿಕತೆಯ ಮೂಲ ಅಂಶಗಳಾದ ಉತ್ಪಾದನೆ, ವಿನಿಮಯ, ವಿತರಣೆ ಪ್ರತಿ ಹಂತದಲ್ಲೂ ಶ್ರಮ ವಿಭಜನೆಗೊಂಡಿರುತ್ತದೆ. ಈ ಹಂತದಲ್ಲಿ ಪ್ರತಿಯೊಂದು ವರ್ತಕ ಸಮುದಾಯವು ತನ್ನದೇ ಆದ ವೃತ್ತಿ ನೈಪುಣ್ಯತೆಯನ್ನು ಹೊಂದಿರುತ್ತದೆ. ಉತ್ಪಾದಿಸುವ ಉತ್ಪನ್ನ ಅಥವಾ ಮಾರಾಟ ಮಾಡುವ ಉತ್ಪನ್ನಗಳ ಹಿನ್ನೆಲೆಯಲ್ಲಿ ಆಯಾ ಪ್ರದೇಶಗಳು ಗುರುತಿಸಿಕೊಂಡಿರುತ್ತದೆ. ಅದಷ್ಟೇ ಅಲ್ಲದೇ ಪ್ರತಿಯೊಂದು ಪ್ರದೇಶದಲ್ಲಿರುವ ಉತ್ಪಾದಕ ಮತ್ತು ವಿನಿಮಯ ವರ್ತಕ ಸಮುದಾಯಗಳ ನೈಪುಣ್ಯತೆಯು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಪ್ರದೇಶವು ಪ್ರಮುಖ ವ್ಯಾಪಾರಿ ಕೇಂದ್ರವಾಗಿಯೊ ಅಥವಾ ವಸ್ತು ವಿನಿಮಯ ಮಾಡುವ ಕೇಂದ್ರವಾಗಿಯೊ(ಇಂಟರ್ ಪೋರ್ಟ್ ಸಿಟಿ) ಗುರುತಿಸಿಕೊಂಡಿರುತ್ತದೆ. ಪ್ರಭುತ್ವವು ತಮ್ಮ ಪ್ರದೇಶದ ಅಭಿವೃದ್ಧಿಗಾಗಿ ಮತ್ತು ವೃತ್ತಿಯಲ್ಲಿ ವೈವಿಧ್ಯತೆಯನ್ನು ಹೆಚ್ಚಿಸುವ ಸಲುವಾಗಿ ಅನೇಕ ಕಾರ್ಯಗಳನ್ನು ಕೈಗೊಳ್ಳುತ್ತಿರುತ್ತದೆ. ಅದರಲ್ಲಿ ಮುಖ್ಯವಾದುದು ಸ್ಥಳೀಯ ಕುಶಲಕರ್ಮಿಗಳ ಕೌಶಲ್ಯತೆಯನ್ನು ಬೆಳೆಸಲು ಬೇರೆ ಬೇರೆ ಪ್ರದೇಶಗಳಿಗೆ ಕಳುಹಿಸುವ ಅಥವಾ ಬೇರೆ ರಾಜ್ಯಗಳಿಂದ ಉತ್ಪಾದನಾ-ವಿನಿಮಯ ವರ್ತಕ ಸಮುದಾಯದವರನ್ನು ಬಂದು ನೆಲೆಸುವಂತೆ ಪ್ರೋತ್ಸಾಹಿಸುವುದು ಕೂಡ ಆಗಿದೆ.

ಈ ಉದ್ದೇಶದಿಂದಲೇ ಉತ್ಪಾದನಾ-ವಿನಿಮಯ ವರ್ತಕರಿಗೆ ಪ್ರಭುತ್ವವು ಸ್ಥಳೀಯವಾಗಿ ಹಲವು ಸೌಲಭ್ಯಗಳನ್ನು ಕಲ್ಪಿಸಿಕೊಟ್ಟಿರುವುದನ್ನು ಪ್ರಾಚೀನ ಕಾಲದಿಂದಲೂ ನೋಡಬಹುದು. ಇದು ಉತ್ಪನ್ನಗಳಲ್ಲಿ ವೈವಿಧ್ಯತೆಯನ್ನು ಮಾತ್ರ ಮೂಡಿಸದೇ ಉತ್ಪಾದನಾ-ವಿನಿಮಯ ವರ್ತಕ ಸಮುದಾಯಗಳಲ್ಲಿ ಕೌಶಲ್ಯತೆಯನ್ನು ಉತ್ತಮ ಪಡಿಸುತ್ತದೆ. ಇದರ ಬೆನ್ನಲೇ ಉತ್ಪನ್ನದ ಗುಣಮಟ್ಟವನ್ನೂ ಹೆಚ್ಚಿಸುತ್ತದೆ. ಈ ತೆರನಾದ ಪ್ರಕ್ರಿಯೆಯಲ್ಲಿ ಈ ವರ್ಗಗಳಿಗೆ ಪೂರಕವಾಗಿರುವ ಆಯಾ ಪ್ರದೇಶದ ಭೌಗೋಳಿಕ ಅಂಶಗಳನ್ನು ಕಡೆಗಣಿಸುವಂತಿಲ್ಲ. ವಿವಿಧ ಉತ್ಪಾದನಾ-ವಿನಿಮಯ ವರ್ತಕ ಸಮುದಾಯಗಳು ಆರ್ಥಿಕ ಮತ್ತು ರಾಜಕೀಯವಾಗಿ ಸಬಲಗೊಳ್ಳುತ್ತಾ ಸಾಗಿದಂತೆ ಆ ಪ್ರದೇಶದ ಸಾಂಸ್ಕೃತಿಕ, ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರದ ಬೆಳವಣಿಗೆಗೆ ತಮ್ಮದೇ ಆದ ಕೊಡುಗೆ ನೀಡಿರುವುದನ್ನು ಕಾಣಬಹುದಾಗಿದೆ. ಇದು ಆ ಪ್ರದೇಶದಲ್ಲಿ ಸಾಮಾಜಿಕ-ಸಾಂಸ್ಕೃತಿಕ ಸಮ್ಮಿಲನಕ್ಕೆ ಕಾರಣವಾಗುತ್ತದೆ. ಈ ರೀತಿಯ ಅಂಶಗಳು ಒಂದು ಪ್ರದೇಶದ ನಗರೀಕರಣ ಪ್ರಕ್ರಿಯೆಯಲ್ಲಿ ಪ್ರಮುಖ ಪಾತ್ರವಹಿಸಿರುತ್ತದೆ ಎಂಬುದು ಗಮನಾರ್ಹ. ಇದರ ಹಿನ್ನೆಲೆಯಲ್ಲಿ ಉತ್ಪಾದನಾ-ವಿನಿಮಯ ವರ್ತಕ ಸಮುದಾಯಗಳ ಅಧ್ಯಯನ ಮಹತ್ವದೆನಿಸುತ್ತದೆ.

ಭಾರತೀಯ ಸಮಾಜದಲ್ಲಿ ವೃತ್ತಿಯ ಆಧಾರದ ಮೇರೆಗೆ ಕೃಷಿ ಸಮುದಾಯ, ಕರಕುಶಲ ಕರ್ಮಿಗಳ ಸಮುದಾಯ, ವರ್ತಕ ಸಮುದಾಯವೆಂದು ಗುರುತಿಸಲಾಗಿದೆ. ಆದರೆ ಪ್ರಮುಖವಾಗಿ ೧೨ನೇ ಶತಮಾನದ ಭಕ್ತಿ ಚಳುವಳಿಯ ಕಾಲದಲ್ಲಿ ಉತ್ಪಾದನೆಯಲ್ಲಿ ಶ್ರಮ ವಿಭಜನೆಗೊಂಡು ವೃತ್ತಿಯು ಜಾತಿಯ ಹೆಸರಿನಲ್ಲಿ ವಿಭಜನೆಗೊಂಡಿರುವುದರ ಬಗ್ಗೆ ಹೆಚ್ಚು ಉಲ್ಲೇಖ ಸಿಗುತ್ತದೆ.[೧] ಈ ಸಂದರ್ಭದಲ್ಲಿ ವೃತ್ತಿಯ ಆಧಾರದ ಮೇಲೆ ಬಲಗೈ ಮತ್ತು ಎಡಗೈ ಎಂದು ಎರಡು ಬಣಗಳಾಗಿ ವಿಂಗಡಿಸಲಾಗಿದೆ. ಹಾಗೆ ಒಂದರಲ್ಲಿ ಸಂಖ್ಯೆಯನ್ನು ೧೮ಕ್ಕೆ ಸಿಮೀತಗೊಳಿಸಲಾಗಿದೆ. ಇನ್ನೊಂದರಲ್ಲಿ ೯ಕ್ಕೆ ಸಿಮೀತಗೊಳಿಸಲಾಗಿದೆ. ಹಲವು ಜಾತಿ ಮತ್ತು ಉಪಜಾತಿಗಳ ಒಂದಲ್ಲ ಒಂದು ಬಣಕ್ಕೆ ಸೇರಿಸಲಾಗಿದ್ದರೂ ಸಹ ಯಾವುದೇ ಬಣಕ್ಕೆ ಸೇರದೆ ಇದರಿಂದ ಹೊರ ಉಳಿದ ಜಾತಿಗಳೂ ಉಂಟು. ಇಲ್ಲಿ ಪ್ರಮುಖವಾಗಿ ಬ್ರಾಹ್ಮಣ, ಕ್ಷತಿಯ ಮತ್ತು ಶೂದ್ರರನ್ನು ಕೈ ಬಿಡಲಾಗಿದೆ. ಈ ರೀತಿಯ ಸಾಮಾಜಿಕ ವ್ಯವಸ್ಥೆಯಲ್ಲಿ ಶ್ರಮ ವಿಭಜನೆಗೊಂಡ ಸ್ವರೂಪ ಮತ್ತು ಪ್ರಕ್ರಿಯೆಯನ್ನು ಎರಡನೆಯ ಅಧ್ಯಾಯದಲ್ಲಿ ಈಗಾಗಲೇ ಚರ್ಚಿಸಲಾಗಿದೆ. ಬಲಗೈ ಮತ್ತು ಎಡಗೈಯಲ್ಲಿರುವ ಉತ್ಪಾದನಾ-ವಿನಿಮಯ ವರ್ತಕ ಸಮುದಾಯಗಳು ಕೆಳಗಿನಂತಿವೆ:

| ಬಲಗೈ | ಎಡಗೈ |
| --- | --- |
| ಬಣಜಿಗ- ವರ್ತಕ | ಪಂಚಾಲರು- ಬಡಗಿ, ಕಂಚುಗಾರ, ಕಮ್ಮಾರ, ಕಲ್ಲು ಕುಟಿಗ, ಅಕ್ಕಸಾಲಿ |

ಒಕ್ಕಲಿಗ–ಕೃಷಿಕ

ಗಾಣಿಗ–ಎಣ್ಣೆ ತೆಗೆಯುವವ

ರಂಗಾರಿ–ಬಣ್ಣ ಹಾಕುವುದು

ಲಾಡ –ಮರಾಠ ವರ್ತಕ

ಗುಜರಾತಿ–ಗುಜರಾತಿ ವರ್ತಕ

ಕೋಮಾಟಿ–ವರ್ತಕರು

ಜೈನ–ವರ್ತಕರು

ಕುರುಬ–ಕುರಿಮೇಯಿಸುವವರು

ಕುಂಬಾರ–ಮಡಿಕೆ ಮಾಡುವವರು

ಅಗಸ–ಬಟ್ಟೆ ಒಗೆಯುವವರು

ಬೆಸ್ತ–ಮೀನು ಹಿಡಿಯುವವರು

ಪದ್ಮಸಾಲಿ–ನೇಯ್ಗೆಯವರು

ನಾಯಿಂದ–ಕ್ಷೌರಿಕ

ಉಪ್ಪಾರ–ಉಪ್ಪು ತಯಾರಿಸುವವರು

ಚಿತ್ರಗಾರ–ಬಣ್ಣ ಬಳಿಯುವವರು

ಗೊಲ್ಲ–ಹಸು ಮೇಯಿಸುವವರು

ಹೊಲೆಯ–ಬಲಗೈಯಲ್ಲಿ ಕೆಳವರ್ಗಕ್ಕೆ ಸೇರಿದವರು

ಭೇರಿ–ನಗರ್ತ ವರ್ತಕರು

ದೇವಾಂಗ–ನೇಯ್ಗೆಯವರು

ಹೆಗ್ಗಣಿಗ–ಎಣ್ಣೆ ತೆಗೆಯುವವರು

ಗೊಲ್ಲ– ಧನ ಮೇಯಿಸುವವರು

ಬೇಡ–ಬೇಟೆಯಾಡುವವರು

ಯಾಕುಲ–ಕೃಷಿಯಲ್ಲಿ ತೊಡಗಿರುವವರು

ಪಲ್ಲಿ ಅಥವಾ ತಿಗಳ–ತೋಟಗಾರಿಕೆಯಲ್ಲಿ ತೊಡಗಿದವರು

ಮಾದಿಗ–ಎಡಗೈ ಬಣದ ಕೆಳವರ್ಗ

ವೀರ ಬಣಜಿಗರು ಬಲಗೈಯಲ್ಲಿರುವ ೧೮ ಪಂಗಡಗಳಿಗೆ ಮುಖ್ಯಸ್ಥರ ಸ್ಥಾನವನ್ನು ಹೊಂದಿದ್ದರೆ, ಅದರಂತೆ ಎಡಗೈಯಲ್ಲಿ ೯ ಪಂಗಡಗಳಿದ್ದು ಅವರಿಗೆ ಪಂಚಾಲರು ಅಥವಾ ನಗರ್ತರು ಮುಖ್ಯಸ್ಥರಾಗಿದ್ದರು.[೨] ಬಲಗೈ, ಎಡಗೈ ಸಮುದಾಯಗಳು ಆರ್ಥಿಕ, ಸಾಮಾಜಿಕ, ಧಾರ್ಮಿಕ ವಿಚಾರಗಳಿಗೆ ಸಂಬಂಧಿಸಿದ ಸಮಸ್ಯೆಗಳನ್ನು ತಮ್ಮ ತಮ್ಮ ಮುಖ್ಯಸ್ಥರ ಮೂಲಕ ಬಗೆಹರಿಸಿಕೊಳ್ಳುತ್ತಿದ್ದರು. ಈ ತೆರನಾದ ಅಂಶಗಳು ವಿವಿಧ ಉತ್ಪಾದನಾ–ವಿನಿಮಯ ಸಮುದಾಯಗಳ ನಡುವೆ ವ್ಯವಸ್ಥಿತವಾಗಿ ಕಾರ್ಯ ನಿರ್ವಹಿಸಲು, ಉತ್ತಮವಾದ ಬಾಂಧವ್ಯವನ್ನು ಮಾತ್ರ ಮೂಡಿಸದೇ, ಸಾಂಸ್ಕೃತಿಕ ಸಮ್ಮಿಲನಕ್ಕೂ ಕಾರಣವಾಯಿತು. ಇದರ ಫಲವಾಗಿ ಇವೆಲ್ಲವು ಆರ್ಥಿಕ ಚಟುವಟಿಕೆಯಲ್ಲಿ ಸಕಾರಾತ್ಮಕ ವಾತಾವರಣವನ್ನು ಹುಟ್ಟುಹಾಕುವುದರಿಂದ ವ್ಯಾಪಾರ–ವಾಣಿಜ್ಯ ಚಟುವಟಿಕೆಯ ಅಭಿವೃದ್ಧಿಗೆ ಕಾರಣವಾಯಿತು. ವಸಾಹತು ಕಾಲಘಟ್ಟಕ್ಕೆ ಶ್ರಮ ವಿಭಜನೆಯು ಉತ್ಪಾದನೆಯ ಪ್ರತಿಹಂತದಲ್ಲಿಯೂ

ಕಾಣಿಸಿಕೊಂಡವು. ಉದಾಹರಣೆಗೆ, ಜವಳಿ ಉದ್ಯಮಕ್ಕೆ ಸಂಬಂಧಿಸಿದಂತೆ ದೇವಾಂಗ, ಖತ್ರಿ, ಪದ್ಮಸಾಲಿಗಳನ್ನು ಬಿಟ್ಟು ನೀಲಗಾರರು, ರಂಗಿನವರು, ತೋಗಟರು, ಗೋಣಿಗರು, ಪಿಂಗಾರಿಗರು ಮೊದಲಾದ ಹೊಸ ವರ್ಗಗಳು ಸಾಮಾಜಿಕ ವ್ಯವಸ್ಥೆಯಲ್ಲಿ ಸೇರ್ಪಡೆ ಗೊಂಡಿರುವುದು ಕಂಡುಬರುವುದು. ಈ ತೆರನಾದ ಅಂಶಗಳು ಕಂಡುಬರಲು ಅಂದಿನ ಉತ್ಪಾದನಾ ವಿಧಾನದ ವೈವಿಧ್ಯತೆ ಮತ್ತು ಸಾಮಾಜಿಕ ಪರಿಸ್ಥಿತಿ ಕಾರಣವಾದವು. ಮುಂದೆ ೧೯ನೇ ಮತ್ತು ೨೦ನೇ ಶತಮಾನದ ಹೊತ್ತಿಗೆ ಈ ವ್ಯವಸ್ಥೆಯಲ್ಲಿ ಸ್ವಲ್ಪಮಟ್ಟಿಗೆ ಪರಿವರ್ತನೆಗಳು ಕಂಡುಬಂದವು. ಈ ಪರಿವರ್ತನೆಗೆ ಪೂರಕವಾಗಿ ಕಾರ್ಯನಿರ್ವಹಿಸುವ ರೈತಾಪಿ ಸಮುದಾಯ, ಗಾಣಿಗರ ಸಮುದಾಯಗಳ ವ್ಯವಸ್ಥೆಯಲ್ಲಿ ಪರಿವರ್ತನೆಗಳು ಕಾಣಿಸಿಕೊಂಡವು. ಹೀಗೆ ಪ್ರತಿ ಒಂದು ಉತ್ಪಾದಿತ ಸಮುದಾಯಗಳು ಇನ್ನೊಂದು ಸಮುದಾಯ ಗಳೊಂದಿಗೆ ಅವಲಂಬನೆ ಮತ್ತು ಪೂರಕವಾಗಿ ಕಾರ್ಯವೆಸಗುವುದು ಅನಿವಾರ್ಯವಾಗ ತೊಡಗಿದವು. ಜೊತೆಗೆ ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯಲ್ಲಿ ಇವುಗಳು ವಹಿಸಿರುವುದನ್ನು ಕಾಣಬಹುದು. ಬ್ರಿಟಿಶ್ ಭಾರತದ ಆಡಳಿತ ವ್ಯವಸ್ಥೆ ಮತ್ತು ಅವರ ಆರ್ಥಿಕ ನೀತಿಗಳು ಭಾರತೀಯ ಸಾಮಾಜಿಕ ವ್ಯವಸ್ಥೆ, ಆರ್ಥಿಕತೆ, ಸಂಸ್ಕೃತಿ ಮತ್ತು ಇನ್ನಿತರ ವ್ಯವಸ್ಥೆಗಳಲ್ಲಿ ಮಹತ್ತರ ಬದಲಾವಣೆಯನ್ನು ಮೂಡಿಸಿತು. ಪರಿಣಾಮವಾಗಿ ಒಂದೊಂದು ಕಾಲಘಟ್ಟದಲ್ಲಿ ಒಂದೊಂದು ವರ್ತಕ ಸಮುದಾಯಗಳು ಬೆಂಗಳೂರು ಪ್ರದೇಶದ ಮುಖ್ಯವಾಹಿನಿಯಲ್ಲಿ ಗುರುತಿಸಿಕೊಂಡಿರುವುದನ್ನು ಕಾಣಬಹುದಾಗಿದೆ.

ಬೆಂಗಳೂರು ನಗರವು ಕೆಂಪೇಗೌಡನಿಂದ ಟಿಪ್ಪುವಿನವರೆಗೆ ಪ್ರಮುಖ ಉತ್ಪಾದನಾ ಕೇಂದ್ರವಾಗಿ ಬೆಳೆಯಿತು. ನಂತರ ಬ್ರಿಟಿಶರ ಕಾಲಾವಧಿಯಲ್ಲಿ ಬೆಂಗಳೂರು ಪೇಟೆ ಮತ್ತು ದಂಡು ಪ್ರದೇಶಗಳನ್ನು ಒಳಗೊಂಡಂತೆ ಒಳನಾಡಿನ ವಿನಿಮಯ ಕೇಂದ್ರವಾಗಿ (ಇಂಟರ್ ಪೋರ್ಟ್) ಗುರುತಿಸಿಕೊಂಡಿತು.[೩] ಈ ಸಂದರ್ಭದಲ್ಲಿಯೇ ಆಡಳಿತಾತ್ಮಕ ಮತ್ತು ವ್ಯಾಪಾರದ ಹಿನ್ನೆಲೆಯಲ್ಲಿ ಬೆಂಗಳೂರು ಪ್ರದೇಶಕ್ಕೆ ಬರುವ ವಲಸಿಗರ ಸಂಖ್ಯೆಯು ಸಹ ವರ್ಷದಿಂದ ವರ್ಷಕ್ಕೆ ಏರುಮುಖವಾಗಿದೆ. ಇದು ಮೈಸೂರು ರಾಜ್ಯದ ಇತರ ಪ್ರದೇಶಗಳೊಡನೆ ಹೋಲಿಕೆ ಮಾಡಿದರೆ ಈ ಪ್ರದೇಶದ ಜನಸಂಖ್ಯೆಯು ಹೆಚ್ಚಾಗಿರುವುದನ್ನು ಗುರುತಿಸಬಹುದು. ೧೮೪೯–೫೦ರಲ್ಲಿ ಬೆಂಗಳೂರು ದಂಡು ಪ್ರದೇಶದ (ಅಂದಿನ ಸಂದರ್ಭದ ಹಳ್ಳಿಗಳಾದ ಸೂಲೆ ಮತ್ತು ಹಲಸೂರನ್ನು ಒಳಗೊಂಡಂತೆ) ಜನಸಂಖ್ಯೆಯು ೯೩,೩೩೮ ಇದ್ದರೆ, ಬೆಂಗಳೂರು ಪೇಟೆಯ ವಿಸ್ತೀರ್ಣ ೫೬೩ ಸಂಖ್ಯೆ ೪೧,೬೬೪ರಷ್ಟಿತ್ತು.[೪] ಅದರಂತೆ ೧೮೬೮–೬೯ರ ಹೊತ್ತಿಗೆ ಜನಸಂಖ್ಯೆಯು ೧೩೨,೦೦೦ ರಷ್ಟಿದೆ. ಅದರಲ್ಲಿ ಬೆಂಗಳೂರು ದಂಡು ಪ್ರದೇಶದ ಜನಸಂಖ್ಯೆಯು ೭೯,೦೦೦ ಆಗಿದ್ದರೆ, ಬೆಂಗಳೂರು ಪೇಟೆಯ ಸಂಖ್ಯೆಯು ೫೩,೦೦೦ ಇರುವುದನ್ನು ನೋಡಬಹುದು.[೫] ಆದರೆ ಸಾಂಕ್ರಾಮಿಕ ರೋಗದ ಪರಿಣಾಮವಾಗಿ ೧೮೭೦ರ ದಶಕದಲ್ಲಿ ಜನಸಂಖ್ಯೆ

ಕಡಿಮೆಯಾಗಿ ಕಾಣಿಸಿಕೊಂಡಿತು. ಈ ದಶಕದಲ್ಲಿ ವಲಸಿಗರ ಬರುವಿಕೆಯ ಪ್ರಮಾಣದಲ್ಲಿ ಕಡಿಮೆಗೊಂಡಿದಲ್ಲದೇ, ಈ ಪ್ರದೇಶದಲ್ಲಿ ತಾತ್ಕಾಲಿಕವಾಗಿ ನೆಲೆನಿಂತಿದ್ದ ಜನ ವಲಸೆಹೋದರು. ಬೆಂಗಳೂರು ಪೇಟೆಯಲ್ಲಿನ ಜನಸಂಖ್ಯೆಯ ಏರುಪೇರುಗಳನ್ನು ಗುರುತಿಸಬಹುದು. ಆದರೆ ಬೆಂಗಳೂರು ದಂಡಿನಲ್ಲಿ ನಿರಂತರವಾಗಿ ಜನಸಂಖ್ಯೆ ಏರಿಕೆ ಆಗಿರುವುದು ಕಂಡುಬರುತ್ತದೆ. ಇದಕ್ಕೆ ಮುಖ್ಯ ಕಾರಣ ಅಲ್ಲಿಯ ವ್ಯವಸ್ಥಿತ ಆಡಳಿತ ವ್ಯವಸ್ಥೆ ಎನ್ನಬಹುದಾಗಿದೆ. ಬೆಂಗಳೂರು ಪೇಟೆಯಲ್ಲಿ ನಂತರದ ದಶಕಗಳಲ್ಲಿ ಮತ್ತೆ ಜನಸಂಖ್ಯೆ ಏರಿಕೆಯಾಗಿರುವುದನ್ನು ಕಾಣಬಹುದಾಗಿದೆ. ಅಂದರೆ, ೧೮೯೧ರ ಜನಸಂಖ್ಯೆಯು ೮೦,೨೮೫ಯಿದ್ದದ್ದು, ೧೯೦೧ರ ವೇಳೆಗೆ ೬೯,೪೭೭ ಇಳಿಕೆ ಕಂಡಿತ್ತು. ನಂತರ ಏಕಾಏಕಿಯಾಗಿ ೧೯೧೧ರ ಹೊತ್ತಿಗೆ ೮೮,೫೫೧ಕ್ಕೆ ಏರಿಕೆಗೊಂಡಿದೆ. ಅಂದರೆ ಸ್ಥಳೀಯ ಜನಸಂಖ್ಯೆಯಲ್ಲಿ ಈ ಏರಿಕೆಗೆ ಕಾರಣ ಸಾಂಕ್ರಾಮಿಕ ರೋಗ ಹರಡುತ್ತಿದ್ದ ಸಂದರ್ಭದಲ್ಲಿ ವಲಸೆ ಹೋದವರು ಬಂದಿರುವ ಸಾಧ್ಯತೆಯನ್ನು ತೋರಿಸುತ್ತದೆ. ಅಲ್ಲದೆ ಬೆಂಗಳೂರಿಗೆ ಜನ ವಲಸೆ




ಬರುವ ಮತ್ತು ವಲಸೆ ಹೊಗುವ ಪ್ರವೃತ್ತಿಯನ್ನು ಕಾಣಬಹುದಾಗಿದೆ.[೬]

*೧೯೧೧ರ ಜನಗಣತಿಯನ್ನು ಆಧಾರಿಸಿ,

ಬೆಂಗಳೂರು ಪ್ರದೇಶದ ಸ್ಥಳೀಯರು ನಿರಂತರವಾಗಿ ಒಂದಲ್ಲೊಂದು ಉತ್ಪಾದನೆ ಅಥವಾ ವ್ಯಾಪಾರ ವೃತ್ತಿಯಲ್ಲಿ ನಿರತರಾದ ಸಮುದಾಯವಾಗಿದೆ. ಇನ್ನು ಬೆಂಗಳೂರು ನಗರ ಮತ್ತು ಬ್ರಿಟಿಶ್‌ರ ದಂಡುಪ್ರದೇಶದ ಅಧಿಕಾರಿವರ್ಗದ ವಿಚಾರಕ್ಕೆ ಬರುವುದಾದರೆ ಮೇಲ್ನೋಟಕ್ಕೆ ಈ ವರ್ಗ ಆಡಳಿತಾತ್ಮಕವಾಗಿ ಕಂಡುಬಂದರು ಸಹ ಇವರು ವರ್ತಕ ಸಮುದಾಯಕ್ಕೆ ಸೇರಿದವರೇ ಆಗಿರುತ್ತಿದ್ದರು. ಈ ವರ್ಗ ಸಣ್ಣ ಅಥವಾ ದೊಡ್ಡ ಮಟ್ಟದ ಬಂಡವಾಳಗಾರರಾಗಿ, ಸ್ಥಳೀಯ ಉದ್ಯಮಗಳಲ್ಲಿ ಬಂಡವಾಳದ ಹೂಡಿಕೆದಾರರಾಗಿ, ಅಥವಾ ವ್ಯಾಪಾರದಲ್ಲಿ ತೊಡಗಿಸಿಕೊಂಡಿರುತ್ತಿದ್ದರು. ಬೆಂಗಳೂರು ನಗರದ ಒಟ್ಟು ಜನಸಂಖ್ಯೆಯಲ್ಲಿ ಉದ್ಯಮ ಮತ್ತು ವ್ಯಾಪಾರ-ವಾಣಿಜ್ಯದಲ್ಲಿ ತೊಡಗಿದವರ ಸಂಖ್ಯೆ

ಹೆಚ್ಚಾಗಿ ಕಂಡುಬರುತ್ತದೆ. ಇದಲ್ಲದೆ ಕೃಷಿ, ಸಾರ್ವಜನಿಕ ರಕ್ಷಣಾ ಪಡೆ, ಸಾರ್ವಜನಿಕ ಆಡಳಿತ, ಇತರೆ(ಪೂಜಾರಿ, ಸಂನ್ಯಾಸಿ, ಸಂಗೀತರಾರರು, ಅನುತ್ಪಾದಿತರು, ತಮ್ಮ ಆದಾಯದಲ್ಲಿ ಜೀವಿಸುವವರು ಇತ್ಯಾದಿ) ವೃತ್ತಿಯ ಜನರನ್ನೂ ಕಾಣಬಹುದಾದರೂ ಮೇಲಿನದಕ್ಕೆ ಹೋಲಿಸಿದರೆ ಕಡಿಮೆ ಪ್ರಮಾಣವಾಗಿದೆ. ೧೯೧೧ ರಿಂದ ೧೯೩೧ರ ವರೆಗಿನ ಜನಗಣತಿಯ ಸಮೀಕ್ಷೆಯ ಮೂಲಕ ದಶಕದಿಂದ ದಶಕಕ್ಕೆ ವಿವಿಧ ಕ್ಷೇತ್ರಗಳಲ್ಲಿ ಅಥವಾ ವೃತ್ತಿಗಳಲ್ಲಿ ತೊಡಗಿಕೊಂಡಿದ್ದವರನ್ನು




ಗುರುತಿಸಬಹುದು.

*೧೯೧೧, ೧೯೨೧, ೧೯೩೧ರ ಜನಗಣತಿಯ ಆಧಾರಿಸಿದೆ.

ಈ ಮೇಲಿನ ಕೋಷ್ಟಕವನ್ನು ಗಮನಿಸಿದರೆ ಬೆಂಗಳೂರಿನ ಒಟ್ಟು ಜನಸಂಖ್ಯೆಯಲ್ಲಿ ಉದ್ಯಮದಲ್ಲಿ ತೊಡಗಿಸಿಕೊಂಡವರ ಸಂಖ್ಯೆ ಗಮನಾರ್ಹವಾಗಿ ಹೆಚ್ಚಾಗಿದೆ. ಇದರಲ್ಲಿ ಉತ್ಪಾದನೆಗೆ ಬೇಕಾದ ಕಚ್ಚಾವಸ್ತುಗಳನ್ನು ಪೂರೈಸುವವರಿಂದ ಹಿಡಿದು ಉತ್ಪನ್ನವು ತಯಾರಾಗುವವರೆಗೆ ಎಲ್ಲಾ ಹಂತದ ಉದ್ಯಮದವರನ್ನು ಒಳಗೊಂಡಿದೆ. ಹಾಗೇ ಎರಡನೇ ಸ್ಥಾನದಲ್ಲಿ ವ್ಯಾಪಾರ ವ್ಯವಹಾರದಲ್ಲಿ ತೊಡಗಿಸಿಕೊಂಡವರು ಹೆಚ್ಚಾಗಿದ್ದಾರೆ. ೧೯೧೧ ಮತ್ತು ೧೯೨೧ರ ನಡುವೆ ಬೃಹತ್ ಬೆಳವಣಿಗೆಯನ್ನು ಗುರುತಿಸಬಹುದು. ಆದರೆ ೧೯೨೧ ಮತ್ತು ೧೯೩೧ರ ನಡುವೆ ಇದನ್ನು ಕಾಣಲು ಸಾಧ್ಯವಾಗುವುದಿಲ್ಲ. ಇಲ್ಲಿಯು ಬೆಳವಣಿಗೆ ಏರುಮುಖವಾಗಿದ್ದರೂ ಅದು ಸಣ್ಣ ಪ್ರಮಾಣದಲ್ಲಿದೆ. ಆಡಳಿತ ವರ್ಗ ಮೂರನೆಯ ಸ್ಥಾನದ ನೆಲಸಿಗರಾಗಿರುವುದನ್ನು ಗಮನಿಸಬೇಕು. ಜೊತೆಗೆ ಕೃಷಿ ಚಟುವಟಿಕೆಯಲ್ಲಿ ತೊಡಗಿಸಿಕೊಂಡವರ ಸಂಖ್ಯೆ ಅತ್ಯಂತ ಕಡಿಮೆಯಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ೧೯೧೧, ೧೯೨೧ ಮತ್ತು ೧೯೩೧ರಲ್ಲಿ ಕ್ರಮವಾಗಿ ಆಡಳಿತ ವರ್ಗದ ಸಂಖ್ಯೆ ಏರುಮುಖವಾಗಿ

ಸಾಗಿದೆ. ಆದರೆ ಕೃಷಿ ೧೯೧೧ರಿಂದ ೧೯೨೧ರಲ್ಲಿ ಏರುಮುಖ ಕಂಡರೂ ೧೯೩೧ರ ಹೊತ್ತಿಗೆ ಇಳಿಮುಖವಾಗಿದೆ. ಒಟ್ಟಾಗಿ ೧೯೧೧ರಿಂದ ೧೯೨೧ರ ದಶಕ ಬೆಂಗಳೂರಿನ ನಗರೀಕರಣದಲ್ಲಿ ಮುಖ್ಯ ಪಾತ್ರವಹಿಸಿರುವಂತಿದೆ. ಈ ದಶಕದಲ್ಲಿ ಉದ್ದಿಮೆ, ವ್ಯಾಪಾರ-ವಾಣಿಜ್ಯ, ಆಡಳಿತ ವರ್ಗಗಳಲ್ಲಿ ಮತ್ತು ಕೃಷಿ ಎಲ್ಲವೂ ಏರುಮುಖ ಬೆಳವಣಿಗೆಯನ್ನು ಕಂಡವು. ೧೯೨೧ರಿಂದ ೧೯೩೧ರ ದಶಕವೂ ಹಿನ್ನಡೆಯನ್ನು ಅನುಭವಿಸಿದೆ ಸುಸ್ಥಿತಿಯನ್ನು ಮತ್ತು ಸಣ್ಣ ಪ್ರಮಾಣದ ಬೆಳವಣಿಗೆಯನ್ನು ಗುರುತಿಸಬಹುದು. ಆದರೆ ಕೃಷಿ ಪ್ರಮಾಣ ಮಾತ್ರ ಇಳಿತವಾಗಿದೆ. ಈ ಲಕ್ಷಣಗಳು ಎಲ್ಲ ನಗರ ಪ್ರದೇಶಗಳಲ್ಲಿಯೂ ಕಂಡುಬರುವ ಸರ್ವಸಾಮಾನ್ಯ ಲಕ್ಷಣಗಳೇ ಆಗಿವೆ. ಆದರೂ ಈ ಸಂದರ್ಭದ ಹೊತ್ತಿಗೆ ಬೆಂಗಳೂರು ಅತ್ಯಂತ ಪ್ರಮುಖ ನಗರಗಳಲ್ಲಿ ಒಂದಾಗಿ ಗುರುತಿಸಿಕೊಂಡಿತ್ತು ಎಂಬುದನ್ನು ಮರೆಯುವಂತಿಲ್ಲ. ಇದಕ್ಕೆ ಪೂರಕವಾಗಿ ದಕ್ಷಿಣ ಭಾರತದ ಪ್ರಮುಖ ನಗರವಾದ ಮದ್ರಾಸಿನ ನಂತರದ ಸ್ಥಾನವನ್ನು ಬೆಂಗಳೂರು ಪ್ರದೇಶ ಹೊಂದಿದೆ ಎಂದು ಎಲ್. ಬಿ. ಬೌರಿಂಗ್ ತಮ್ಮ ಆಡಳಿತದ ಅನುಭವಗಳನ್ನು ಈಸ್ಟ್ರನ್ ಎಕ್ಸ್‌ಪೀರಿಯನ್ಸ್‌ನಲ್ಲಿ ವ್ಯಕ್ತಪಡಿಸಿರುವುದು ಸ್ಪಷ್ಟಪಡಿಸುತ್ತದೆ. ಇಂತಹ ಲಕ್ಷಣವನ್ನು ಬೆಂಗಳೂರು ಪೇಟೆಯಲ್ಲಷ್ಟೇ ಅಲ್ಲದೇ ನಾವು ಬೆಂಗಳೂರು ದಂಡು ಪ್ರದೇಶದಲ್ಲೂ ಕಾಣಬಹುದಾಗಿದೆ. ೧೯೧೧ರ ಜನಗಣತಿಯ ಪ್ರಕಾರ ಬೆಂಗಳೂರು ಪ್ರದೇಶ ಅಂದರೆ, ನಗರ ಮತ್ತು ಬೆಂಗಳೂರು ದಂಡು ಪ್ರದೇಶವನ್ನು ಒಳಗೊಂಡಂತೆ ಒಟ್ಟು ಜನಸಂಖ್ಯೆಯಲ್ಲಿ ಒಂದು ಮೈಲಿಗೆ ೬೫ ಜನ ವ್ಯಾಪಾರ-ವಾಣಿಜ್ಯದಲ್ಲಿ ತೊಡಗಿಸಿಕೊಂಡಿದ್ದರು. ಹಾಗೆ ಉದ್ಯಮಗಳಲ್ಲಿ ಕಾರ್ಯನಿರ್ವಹಿಸುವ ಮತ್ತು ಕೈಗಾರಿಕೆಗಳಿಗೆ ಕಚ್ಚಾವಸ್ತುಗಳನ್ನು ಪೂರೈಕೆ ಮಾಡುವವರು ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೭.೬ರಷ್ಟು ಇದ್ದರು ಎಂಬುದು ಸಹ ಮೇಲಿನ ವಾದಕ್ಕೆ ಪೂರಕವಾಗಿದೆ.[೨]

ನಗರೀಕರಣ ಪ್ರಕ್ರಿಯೆಯಲ್ಲಿ ಉತ್ಪಾದನಾ-ವಿನಿಮಯ ಸಮುದಾಯದವರ ಪಾತ್ರ ಅತ್ಯಂತ ಮಹತ್ವದಾಗಿರುತ್ತದೆ. ಇದನ್ನು ಗಮನಿಸುತ್ತ ಪ್ರಸ್ತುತ ಅಧ್ಯಾಯದಲ್ಲಿ ಬೆಂಗಳೂರು ಪ್ರದೇಶಕ್ಕೆ ಸಂಬಂಧಿಸಿದಂತೆ ಕೆಲವು ಪ್ರಮುಖ ಉತ್ಪಾದಕ ಮತ್ತು ವಿನಿಮಯ ವರ್ತಕ ಸಮುದಾಯಗಳ ಚಾರಿತ್ರಿಕ ಹಿನ್ನೆಲೆಯನ್ನು ನೋಡಲಾಗಿದೆ. ಜೊತೆಗೆ ಈ ಸಮುದಾಯಗಳು ವಲಸೆ ಬರಲು ಕಾರಣ ಹಾಗೂ ಆ ಸಮುದಾಯವರ ವೃತ್ತಿ ಚಟುವಟಿಕೆಗಳನ್ನು ಚರ್ಚಿಸಲು ಪ್ರಯತ್ನಿಸಿದೆ. ಇದರೊಂದಿಗೆ ಬೆಂಗಳೂರಿನಲ್ಲಿ ವಲಸೆ ಬಂದು ನೆಲೆಸಿದವರ ನೆಲೆ, ಸಂಖ್ಯೆ ಮತ್ತು ಈ ವರ್ಗಕ್ಕೆ ಪ್ರಭುತ್ವದ ಪ್ರೋತ್ಸಾಹವನ್ನು ಗುರುತಿಸಲು ಪ್ರಯತ್ನಿಸಿದೆ. ಹಾಗೇ ಸ್ಥಳೀಯವಾಗಿ ಗುರುತಿಸಿಕೊಂಡಿರುವ ಪ್ರಮುಖ ವರ್ತಕರನ್ನು ಕುರಿತು ಚರ್ಚಿಸುವ ಮೂಲ ಉದ್ದೇಶವನ್ನು ಹೊಂದಿದೆ. ಈ ಮೇಲಿನ ವಿಚಾರಗಳನ್ನು ಪ್ರಧಾನವಾಗಿ ಎರಡು ಭಾಗಗಳಾಗಿ ನೋಡಲಾಗಿದೆ. ಅವುಗಳೆಂದರೆ, ಉತ್ಪಾದನಾ ವರ್ತಕ ಸಮುದಾಯ ಗಳು ಮತ್ತು ವಿನಿಮಯ ವರ್ತಕ ಸಮುದಾಯಗಳು.

## ೪.೧ ಉತ್ಪಾದನಾ ವರ್ತಕ ಸಮುದಾಯಗಳು

ಉತ್ಪನ್ನಗಳನ್ನು ತಾವೇ ಉತ್ಪಾದಿಸಿ ಮಾರಾಟ ಮಾಡುವ ಪ್ರಕ್ರಿಯೆಯಲ್ಲಿ ತೊಡಗಿಸಿಕೊಂಡಿರುವ ಸಮುದಾಯದವರನ್ನು ಉತ್ಪಾದನಾ ವರ್ತಕರೆಂದು ಕರೆಯಲಾಗಿದೆ. ಇದರಲ್ಲಿ ಎರಡು ಬಗೆಯನ್ನು ಕಾಣಬಹುದು. ಒಂದು ಕೃಷಿಯನ್ನಾಧರಿಸಿದ ವೃತ್ತಿನಿರತ ವರ್ಗ. ಉದಾಹರಣೆಗೆ ತಿಗಳರು, ಉಪ್ಪಾರರು, ಒಕ್ಕಲಿಗರು, ಗೊಲ್ಲರು, ಕುರುಬರು ಇತ್ಯಾದಿ. ಎರಡನೆಯದು ಕೃಷಿ ಉತ್ಪನ್ನಗಳನ್ನು ಆಧಾರಿಸಿದ ಅಥವಾ ಕೈಗಾರಿಕೆಯಲ್ಲಿ ವೃತ್ತಿನಿರತ ವರ್ಗ. ಉದಾಹರಣೆಗೆ ದೇವಾಂಗ, ಕಮ್ಮಾರ, ಬಡಿಗ, ಗಾಣಿಗ ಇತ್ಯಾದಿ. ಬೆಂಗಳೂರು ಪ್ರದೇಶದಲ್ಲಿ ಕಂಡುಬರುವ ಪ್ರಮುಖ ಉತ್ಪಾದನಾ ವರ್ತಕ ಸಮುದಾಯಗಳನ್ನು ಮಾತ್ರ ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

### ತಿಗಳರು

ಬೆಂಗಳೂರಿನ ಉತ್ಪಾದಕ–ವಿನಿಮಯ ವರ್ತಕ ಸಮುದಾಯಗಳಲ್ಲಿ ತಿಗಳ ಸಮುದಾಯವು ಪ್ರಮುಖವಾಗಿದೆ. ಇವರ ಪ್ರಧಾನ ವೃತ್ತಿ ತೋಟಗಾರಿಕೆಯಾಗಿದೆ. ಬೆಂಗಳೂರಿನ ಸಂಸ್ಕೃತಿ ಮತ್ತು ಸಾಂಪ್ರದಾಯಗಳಿಗೆ ಇವರು ನೀಡಿದ ಸಾಂಸ್ಕೃತಿಕ ಕೊಡುಗೆ ಮಹತ್ವ ಪೂರ್ಣವಾದುದು. ಇವರು ಬೆಂಗಳೂರಿಗೆ ಯಾವಾಗ ಬಂದರು ಎಂಬುದರ ಬಗ್ಗೆ ಭಿನ್ನ ಅಭಿಪ್ರಾಯಗಳಿವೆ. ತಮಿಳುನಾಡಿನ ಕಾಂಚಿಪುರಂ, ಚಿದಂಬರಂ, ಕಾವೇರಿಪಟ್ಟಣ ಮೊದಲಾದ ಕಡೆಗಳಿಂದ ಬಂದವರು ಎಂದು ಹಲವು ಸಂಶೋಧಕರು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಕರ್ನಾಟಕದಲ್ಲಿ ಗುರುತಿಸಿಕೊಂಡಿರುವ ತಿಗಳ ಎಂಬ ಪದವು ತಮಿಳುನಾಡಿನಲ್ಲಿ ಕಂಡುಬರುವುದಿಲ್ಲ. ಇವರು ತಮ್ಮನ್ನು ವಹ್ನಿಕುಲದವರು ಎಂದು ಗುರುತಿಸಿಕೊಳ್ಳುತ್ತಾರೆ. ಇವರು ಮೂಲತಃ ತಮಿಳುನಾಡಿನವರು ಎಂಬುದು ಮಾತ್ರ ಸ್ಪಷ್ಟವಾಗುತ್ತದೆ. ೧೬ನೇ ಶತಮಾನದಲ್ಲಿ ಅಂದರೆ ಕೆಂಪೇಗೌಡನ ಕಾಲದಲ್ಲಿ ಬಂದರೆಂದು ಮತ್ತು ೧೮ನೇ ಶತಮಾನದಲ್ಲಿ ಅಂದರೆ ಹೈದರಾಲಿಯ ಕಾಲಕ್ಕೆ ಬಂದರೆಂಬ ಅಭಿಪ್ರಾಯಗಳಿವೆ.[೮] ಆದರೆ ಇಲ್ಲಿ ನಾವು ಗಮನಿಸಬೇಕಾದ ವಿಚಾರವೆಂದರೆ, ಕನ್ನಡನಾಡಿನ ಮತ್ತು ತಮಿಳುನಾಡಿನ ನಡುವೆ ರಾಜಕೀಯ ಹೋರಾಟಗಳು ಸಾಮಾನ್ಯವಾಗಿ ಕಂಡುಬಂದಿತ್ತು. ಒಂದನೆಯದಾಗಿ, ಬೆಂಗಳೂರಿನ ಪ್ರದೇಶವು ಚೋಳರ ಆಳ್ವಿಕೆಗೆ ಒಳಪಟ್ಟಿತ್ತು. ಎರಡನೆಯದಾಗಿ, ಪ್ರದೇಶದಿಂದ ಪ್ರದೇಶಕ್ಕೆ ಶ್ರಮಿಕರ ಕೌಶಲ್ಯತೆ ವಿಭಿನ್ನವಾಗಿರುತ್ತದೆ. ಇದರ ಹಿನ್ನೆಲೆಯಲ್ಲಿ ತಿಗಳರು ಜನಪ್ರಿಯತೆ ಮತ್ತು ಪ್ರಭುತ್ವದ ಮನ್ನಣೆಯನ್ನು ಪಡೆದಿದ್ದರು ಎಂಬುದು ಗಮನಾರ್ಹ. ಹಾಗಾಗಿ ಚೋಳರ ಕಾಲದಲ್ಲಿಯೇ ಇವರು ಬೆಂಗಳೂರು ಪ್ರದೇಶಕ್ಕೆ ವಲಸೆ ಬಂದಿರುವ ಸಾಧ್ಯತೆಗಳಿವೆ. ತೋಟಗಾರಿಕೆಯಲ್ಲಿ ಪರಿಣಿತ ವರ್ಗವಾಗಿದ್ದು, ಬೆಂಗಳೂರು ಪ್ರದೇಶದ ಭೌಗೋಳಿಕ ಮತ್ತು ಪರಿಸರವು ಉತ್ತಮವಾಗಿದ್ದು ವಲಸೆ ಬರಲು ಇವರಿಗೆ ಪ್ರೇರಣೆ ಆಗಿರಬಹುದು. ಎರಡನೆಯದಾಗಿ, ಹೈದರ್ ತೋಟಗಾರಿಕೆಯಲ್ಲಿ ಹೆಚ್ಚು

ಆಸಕ್ತಿಯನ್ನು ಹೊಂದಿದ್ದ ವ್ಯಕ್ತಿಯಾಗಿದ್ದನು. ಈತನ ಆಳ್ವಿಕೆಯಲ್ಲಿ ವಿವಿಧ ರೀತಿಯ ಹಣ್ಣು, ತರಕಾರಿ, ಹೂಗಳ ತೋಟಗಳನ್ನು ಬೆಳೆಸುವ ಸಲುವಾಗಿ ತೋಟಗಾರಿಕೆಯಲ್ಲಿ ಕೌಶಲ್ಯತೆ ಹೊಂದಿದ್ದ ತಿಗಳರನ್ನು ತಿರುಚಿನಾಪಳ್ಳಿ ಮತ್ತು ಆರ್ಕಾಟ್ ಪ್ರಾಂತ್ಯದಿಂದ ಕರೆತಂದನು ಎಂದು ಹೇಳಲಾಗಿದೆ.

ಈ ಸಮುದಾಯದಲ್ಲಿ ಒಳ ಪಂಗಡಗಳು ಸಹ ಕೃಷಿಯಾಧಾರಿತವಾದ ಉತ್ಪನ್ನಗಳಿಂದ ಗುರುತಿಸಿಕೊಂಡಿರುವುದನ್ನು ಕಾಣಬಹುದು. ಇವರಲ್ಲಿ ಹುರುಳಿ ತಿಗಳರು, ಎಲೆ ತಿಗಳರು, ಅರವು ತಿಗಳರು, ಮುಳ್ಳು ತಿಗಳರು ಮತ್ತು ನಾಮಧಾರಿ ತಿಗಳರೆಂದು ಕೆಲವು ಒಳ ಪಂಗಡಗಳಿವೆ. ಬ್ರಿಟಿಶರು ಬೆಂಗಳೂರಿನಲ್ಲಿ ದಂಡುಪ್ರದೇಶವನ್ನು ನಿರ್ಮಿಸಿದ ನಂತರ ಅದನ್ನು ತಮ್ಮ ವಾಸದ ನೆಲೆಯಾನ್ನಾಗಿಸಿದರು. ಈ ಸಂದರ್ಭದಲ್ಲಿ ಮನೆಗಳ ಮುಂದೆ ಉದ್ಯಾನವನಗಳನ್ನು ಬೆಳೆಸುವ ಹವ್ಯಾಸವು ಸ್ಥಳಿಯ ಶ್ರೀಮಂತರಲ್ಲೂ ಮೂಡಿತ್ತು. ಇದರ ಹಿನ್ನೆಲೆಯಲ್ಲಿ ತಿಗಳರು ಬೆಂಗಳೂರು ನಗರ ಪ್ರದೇಶಗಳಾದ ನಗರ್ತಪೇಟೆ, ಅಲಸೂರು, ದಂಡು ಪ್ರದೇಶ, ಕಲಾಸಿಪಾಳ್ಯಗಳಲ್ಲಿ ನೆಲನಿಂತರು. ೧೮೯೧ರ ಜನಗಣತಿಯ ಪ್ರಕಾರ ಬೆಂಗಳೂರು ಪ್ರದೇಶದಲ್ಲಿ ತಿಗಳ ಸಮುದಾಯದ ಜನಸಂಖ್ಯೆಯು ಒಟ್ಟು ಜನಸಂಖ್ಯೆಯಲ್ಲಿ ೧.೧೫ರಷ್ಟಿದ್ದರು. ಇಂದಿಗೂ ಈ ಸಮುದಾಯಗಳು ಮೇಲೆ ಹೇಳಿದ ಸ್ಥಳಗಳಲ್ಲಿ ನೆಲೆಸಿರುವುದನ್ನು ಕಾಣಬಹುದಾಗಿದೆ. ಜೊತೆಗೆ ಬೆಂಗಳೂರಿನ ಗ್ರಾಮಾಂತರ ಪ್ರದೇಶಗಳಾದ ಆನೇಕಲ್ಲು, ಕನಕಪುರ, ನೆಲಮಂಗಲ, ಮಾಗಡಿ, ಹೊಸಕೋಟೆ, ದೇವನಹಳ್ಳಿ, ದೊಡ್ಡಬಳ್ಳಾಪುರಗಳಲ್ಲಿ ಇವರ ನೆಲೆಗಳು ಕಂಡುಬರುತ್ತದೆ.[೯] ಯಾವುದೇ ನಗರವು ಅಭಿವೃದ್ಧಿಯಾಗ ಬೇಕಾದರೆ ಆ ನಗರ ಪ್ರದೇಶದ ಸುತ್ತಲು ಇರುವ ಕೃಷಿ ಚಟುವಟಿಕೆ ಪ್ರಧಾನ ಪಾತ್ರ ನಿರ್ವಹಿಸುತ್ತದೆ ಎಂಬ ಅಂಶ ಗಮನಾರ್ಹವಾಗಿದೆ. ಇದು ಬೆಂಗಳೂರು ನಗರ ಪ್ರದೇಶಕ್ಕೂ ಅನ್ವಯವಾಗುವುದು. ಈ ನಿಟ್ಟಿನಲ್ಲಿ ಬೆಂಗಳೂರು ನಗರ ವಿಸ್ತರಣೆಯಲ್ಲಿ ತಿಗಳರ ಪಾತ್ರ ಹಿರಿದಾಗಿದೆ. ಅದಷ್ಟೇ ಅಲ್ಲದೆ, ನಗರದ ವಿಸ್ತರಣೆಗಾಗಿ ಹಲವು ಕೃಷಿಕರು ತಮ್ಮ ಭೂಮಿಯನ್ನು ಬಿಟ್ಟುಕೊಡಬೇಕಾಗಿತ್ತು ಎಂಬುದು ಇನ್ನೊಂದು ಪ್ರಮುಖ ಅಂಶವಾಗಿದೆ.

**ಉಪ್ಪಾರ ಸಮುದಾಯ**

ಉಪ್ಪು ತಯಾರಕರನ್ನು ಉಪ್ಪಾರರೂ ಎಂದು ಕರೆಯಲಾಗಿದೆ. ಕರಾವಳಿ ಪ್ರದೇಶದಲ್ಲಿ ಈ ಸಮುದಾಯದವರನ್ನು ಅಗೇರರು, ಖಾರ್ವಿಗಳು ಎಂದು ಕರೆಯಲಾಗಿದೆ. ಒಳನಾಡಿನ ಉಪ್ಪು ತಯಾಕರನ್ನು ಮೇಲು ಸಕ್ಕರೆಯವರು ಎಂದು ಸಹ ಕರೆಯಲಾಗಿದೆ.[೧೦] ಇವರು ಶೈವ ಮತ್ತು ವೈಷ್ಣವ ಪಂಥದ ಆರಾಧಕರಾಗಿರುವರು. ಇವರ ಕುಲದೇವರು ಚೆನ್ನಕೇಶವ. ಇವರು ತಮ್ಮ ಹೆಸರಿನ ಜೊತೆ ಸೆಟ್ಟಿ ಮತ್ತು ಗೌಡ ಎಂಬ ಪದನಾಮವನ್ನು ಸೇರಿಸಿಕೊಳ್ಳುವರು. ಇವರಲ್ಲಿ ಎರಡು

ಗುಂಪುಗಳಿವೆ. ಒಂದು ತೆಲುಗು ಉಪ್ಪಾರರು, ಮತ್ತೊಂದು ಕನ್ನಡ ಉಪ್ಪಾರರು. ಉಪ್ಪಾರರು ಉಪ್ಪನ್ನು ಎರಡು ವಿಧಾನಗಳ ಮೂಲಕ ತಯಾರಿಸುತ್ತಾರೆ. ಒಂದನೆಯದಾಗಿ, ಸಮುದ್ರದ ನೀರಿನಿಂದ ಮತ್ತು ಎರಡನೆಯದಾಗಿ, ಮಣ್ಣಿನಲ್ಲಿ ನೀರನ್ನು ಹಾಯಿಸಿ ಪಾಟಿಕಟ್ಟಿ ಉಪ್ಪು ತಯಾರಿಸುತ್ತಾರೆ. ಮೈಸೂರು ರಾಜ್ಯ ಪರೋಕ್ಷವಾಗಿ ಬ್ರಿಟಿಶ್‌ರ ಅಧೀನಕ್ಕೆ ಬಂದಾಗ ಎರಡನೆಯ ವಿಧಾನವನ್ನು ನಿಷೇಧಿಸಿದರು. ಇದರಿಂದಾಗಿ ಐದನೆಯ ಒಂದು ಭಾಗದ ಜನರು ತಮ್ಮ ಮೂಲ ವೃತ್ತಿಯನ್ನು ಬಿಟ್ಟು ನಂತರದಲ್ಲಿ ಇಟ್ಟಿಗೆ ತಯಾರಕರಾಗಿ, ಸುಣ್ಣದ ಭಟ್ಟಿ ಕಾರ್ಯದಲ್ಲಿ ತೊಡಗಿಸಿಕೊಂಡರು. ಇನ್ನು ಕೆಲವರು ಜನಸಾಮಾನ್ಯರ ಮನೆಗಳ ನಿರ್ಮಾಣ ಕಾರ್ಯದಲ್ಲಿ ತೊಡಗಿಕೊಂಡರು.[೧೧] ಹೀಗೆ ಕೆರೆ ದುರಸ್ಥಿ ಮತ್ತು ಸಾರ್ವಜನಿಕ ಕಟ್ಟಡ ನಿರ್ಮಾಣದ ಕಾರ್ಯಗಳಲ್ಲಿ ತೊಡಗಿಸಿಕೊಂಡರು.[೧೨] ಇವರು ಬೆಂಗಳೂರಿನ ನಗರದ ಉಪ್ಪಾರ ಪೇಟೆಯಲ್ಲಿ ನೆಲೆಸಿದ್ದರು. ನಂತರದಲ್ಲಿ ಬೆಂಗಳೂರು ಪ್ರದೇಶದ ಹಲವು ಕಡೆ ವೃತ್ತಿಯನ್ನು ಅರಿಸಿ ಹೋಗಿ ನೆಲೆನಿಂತರು.

### ಗಾಣಿಗರು

ಗಾಣಿಗರು ಉತ್ಪಾದನಾ ವರ್ತಕ ಸಮುದಾಯಗಳಲ್ಲಿ ಒಂದು ಪ್ರಮುಖ ಸಮುದಾಯವಾಗಿದೆ. ಇವರು ಎಣ್ಣೆ ತಯಾರಿಕೆಯಲ್ಲಿ ನಿರತರಾದ ಸಮುದಾಯದವರು. ಎತ್ತು, ಕಲ್ಲು ಮತ್ತು ಗಾಣಗಳ ನೆರವಿನಿಂದ ಹುಚ್ಚೆಳ್ಳು, ಹರಳೆಣ್ಣೆ, ಕೊಬ್ಬರಿ, ಇಪ್ಪೆ ಎಣ್ಣೆ, ಹೊಂಗೆ ಎಣ್ಣೆ, ಎಳ್ಳೆಣ್ಣೆ ಹೀಗೆ ವಿವಿಧ ಧಾನ್ಯ ಮತ್ತು ಬೀಜಗಳ ಎಣ್ಣೆಗಳನ್ನು ಉತ್ಪಾದಿಸುತ್ತಿದ್ದರು. ಈ ಸಮುದಾಯದವರು ಯಾವಾಗ ಬೆಂಗಳೂರಿಗೆ ಬಂದರು ಎಂಬುದರ ಬಗ್ಗೆ ಸ್ಪಷ್ಟತೆಯಿಲ್ಲ. ೧೮೯೧ರ ಮೈಸೂರು ಜನಗಣತಿ ವರದಿಯಲ್ಲಿ ತಿಳಿಸುವಂತೆ ಬಹಳ ಹಿಂದೆ ಉತ್ತರದಿಂದ ಬಂದ ಗಾಣಿಗರಿಗೆ ಮತ್ತು ನಗರ್ತರಿಗೆ ಅಂದಿನ ಮೈಸೂರಿನ ಅಧಿಕಾರಿಯಾದ ಮಲ್ಲರಾಜ ಹಲವು ರಿಯಾಯಿತಿಯನ್ನು ನೀಡಿ ಬೆಂಗಳೂರಿನಲ್ಲಿ ನೆಲೆಸಲು ಅವಕಾಶವನ್ನು ಮಾಡಿಕೊಟ್ಟನು. ನಂತರ ಅವರನ್ನು ಇಲ್ಲಿಯ ಸೆಟ್ಟಿ ಅಥವಾ ಯಜಮಾನ ಪಟ್ಟಕಟ್ಟಿ ಮುಖ್ಯಸ್ಥರನ್ನಾಗಿ ನೇಮಿಸಿದನು ಎಂದು ಉಲ್ಲೇಖಿಸಲಾಗಿದೆ.[೧೩] ಇವರು ಸಿರಿಯಾಳ ಶೆಟ್ಟಿಯನ್ನು ಆರಾಧಿಸುತ್ತಾರೆ. ವೃತ್ತಿಯಾಧಾರದ ಮೇಲೆ ಗಾಣಿಗರಲ್ಲಿ ಲಿಂಗಾಯಿತರನ್ನು 'ಎಣ್ಣೆ ಮಾರುವವರು' (Oil vendors) ಮತ್ತು ಮೊಗೇರರನ್ನು ಎಣ್ಣೆ ಹಿಂಡುವವರು (Oil Presers) ಎಂದು ಕರೆಯಲಾಗಿದೆ. ಈ ಸಮುದಾಯದವರಿಗಾಗಿಯೆ ಬೆಂಗಳೂರಿನ ಪೇಟೆಗಳಲ್ಲಿ ಗಾಣಿಗರ ಪೇಟೆ ಬೀದಿಯಿದೆ. ಇದೇ ಗಾಣಿಗರ ಪ್ರಭಾವಕ್ಕೆ ಸಾಕ್ಷಿಯು ಸಹ ಆಗಿದೆ. ಹಾಗೆ ಹಲವು ಗಾಣಿಗರು ಬೆಂಗಳೂರು ಪೇಟೆಯಲ್ಲಿ ನೆಲೆನಿಂತರೆ, ಕೆಲವು ಶ್ರೀಮಂತ ಗಾಣಿಗರು ಬೆಂಗಳೂರು ದಂಡು ಪ್ರದೇಶದಲ್ಲಿ ನೆಲೆಸಿದ್ದರು. ಇವರು ಸಾಹಸಿ ವರ್ತಕ ಸಮುದಾಯ. ೧೯ನೇ ಶತಮಾನದ ಉತ್ತರಾರ್ಧದಲ್ಲಿ

ಉಂಟಾದ ಅನೇಕ ಬದಲಾವಣೆಗಳು ಈ ವರ್ಗಕ್ಕೆ ದೊಡ್ಡ ಪೆಟ್ಟು ನೀಡಿತು. ಈ ಸಂದರ್ಭದಲ್ಲಿಯೇ ಸೀಮೆ ಎಣ್ಣೆಯ ಬಳಕೆ ಮತ್ತು ಆಧುನಿಕ ಯಂತ್ರೋಪಕರಣಗಳ ಬಳಕೆ ಸಹ ಆರಂಭವಾಯಿತು. ಇದಕ್ಕೆ ಹೋಲಿಸಿದರೆ ಗಾಣದ ಎಣ್ಣೆಯು ದುಬಾರಿಯಾಗಿತ್ತು. ಪರಿಣಾಮವಾಗಿ ರಾತ್ರಿ ದೀಪ ಬೆಳಗುವ ಪರಿಪಾಠದಲ್ಲಿ ಗಾಣದ ಎಣ್ಣೆಯ ಬದಲಾಗಿ ಇನ್ನಿತರ ಇಂಧನಗಳ ಬಳಕೆ ಆರಂಭಗೊಂಡಿತು. ಇದರಿಂದಾಗಿ ಗಾಣಿಗರ ವೃತ್ತಿಗೆ ಭಾರಿ ಹೊಡೆತ ಬಿತ್ತು. ಇಲ್ಲಿ ಸಮಕಾಲೀನ ರಾಜಕೀಯ ಮತ್ತು ತಾಂತ್ರಿಕ ಬದಲಾವಣೆಗಳನ್ನು ಗಮನಿಸುವುದು ಅಗತ್ಯ. ಗಾಣಿಗರು ಸ್ಥಳೀಯ ಉತ್ಪಾದಕರು ಮತ್ತು ವರ್ತಕರು. ಸೀಮೆ ಎಣ್ಣೆ ವಿದೇಶಿ ಮಾರುಕಟ್ಟೆಯಿಂದ ಬರುತ್ತಿದ್ದ ಮಾರಾಟದ ವಸ್ತು. ೧೮೫೪ರಲ್ಲಿ ಸೀಮೆ ಎಣ್ಣೆಯನ್ನು ಮೊದಲ ಭಾರಿಗೆ ಮಾರುಕಟ್ಟೆಗಾಗಿ ಬೃಹತ್ ಪ್ರಮಾಣದಲ್ಲಿ ಉತ್ಪಾದಿಸುವುದು ಆರಂಭವಾಯಿತು. ಸೀಮೆ ಎಣ್ಣೆ ಪೆಟ್ರೋಲ್‌ನ ಒಂದು ಉಪ ಉತ್ಪಾದಕ. ಭಾರತ ಆ ಸಂದರ್ಭದಲ್ಲಿ ಬ್ರಿಟಿಶರ ವಸಾಹತು ಆಗಿತ್ತು ಎನ್ನುವುದು ಸಹ ಗಮನಾರ್ಹ. ಇತರ ಎಲ್ಲ ವಸ್ತುಗಳಂತೆ ಇದು ಸಹ ಬ್ರಿಟನ್‌ನ ಉತ್ಪಾದನೆಯಾಗಿ ಭಾರತದಲ್ಲಿ ಪ್ರಭುತ್ವದ ಮನ್ನಣೆಯಿಂದಾಗಿ ವ್ಯಾಪಕವಾಗಿ ಹರಡಿತು. ಅದೇ ಸಂದರ್ಭದಲ್ಲಿ ಇಲ್ಲಿನ ಗಾಣಿಗರು ಎಣ್ಣೆ ತಯಾರಿಸಲು ಕೃಷಿಯನ್ನು ಅವಲಂಬಿಸಿದ್ದರು ಎಂಬುದನ್ನು ಮರೆಯುವಂತಿಲ್ಲ. ಈ ಕಾಲದಲ್ಲಿ ಮಳೆ ಕೊರತೆ, ಬರ, ಆಡಳಿತ ವರ್ಗದ ನಿರುತ್ಸಾಹ, ಹೆಚ್ಚಿನ ತೆರಿಗೆ ಮೊದಲಾದ ಕಾರಣಗಳಿಂದಾಗಿ ಕೃಷಿ ಉತ್ಪಾದನೆಯು ಇಳಿಮುಖವಾಗಿತ್ತು. ಕಚ್ಚಾಪದಾರ್ಥದ ಕೊರತೆಯು ಸಹ ಗಾಣದ ಎಣ್ಣೆಯ ಬೆಲೆ ಹೆಚ್ಚಲು ಕಾರಣವಾಗಿತ್ತು. ಹಾಗೆ ಗಾಣಿಗರು ಬಳಸುತ್ತಿದ್ದ ಉಪಕರಣಗಳು ಸಹ ಆಧುನಿಕವಾಗಿರದೆ ಹೆಚ್ಚಿನ ಶ್ರಮ ಬಯಸುತ್ತಿತ್ತು.

ಸೀಮೆ ಎಣ್ಣೆಯಿಂದಾಗಿ ಸ್ಥಳೀಯ ಗಾಣಿಗರಿಗೆ ಭಾರಿ ಪೆಟ್ಟು ಬಿದ್ದಿತು. ಹಾಗಾಗಿ ಎಲ್ಲ ಬಗೆಯ ಎಣ್ಣೆ ತಯಾರಿಕೆಯಲ್ಲಿ ತೊಡಗಿಸಿಕೊಂಡಿದ್ದ ಈ ಸಮುದಾಯದವರು ಆರ್ಥಿಕ ಸ್ಥಿತ್ಯಂತರಕ್ಕೆ ಒಳಗಾದರು. ಈ ಸಂದರ್ಭದಲ್ಲಿ ಕೆಲವು ಗಾಣಿಗರು ಆಧುನಿಕ ಯಂತ್ರೋಪಕರಣಗಳನ್ನು ಬಳಸಿ ಮುಂಚೆಗಿಂತ ಶ್ರೀಮಂತರಾದರು. ಬಡ ಗಾಣಿಗರು ಸಾಂಪ್ರದಾಯಿಕ ರೀತಿಯಲ್ಲಿ ಉತ್ಪಾದನೆ ಕಾರ್ಯದಿಂದ ಜೀವನ ನಡೆಸಲು ಸಾಧ್ಯವಾಗದೆ ಆಧುನಿಕ ಶಿಕ್ಷಣ ಮತ್ತು ಆಡಳಿತ ವ್ಯವಸ್ಥೆಯತ್ತ ಮುಖಮಾಡಿ ತಮ್ಮ ವೃತ್ತಿಯಲ್ಲಿ ಬದಲಾವಣೆಯನ್ನು ಮಾಡಿಕೊಂಡರು.[೧೪] ಈ ಸಮುದಾಯದ ಪ್ರಮುಖ ವರ್ತಕರು ಎಂದರೆ ದೊಡ್ಡಣ್ಣ ಶೆಟ್ಟಿಯವರು. ಇವರು ೧೯೦೦ರ ಹೊತ್ತಿಗೆ ಬೆಂಗಳೂರು ಪೇಟೆಯ ಜನಪ್ರಿಯ ವ್ಯಾಪಾರಿ ಎನಿಸಿಕೊಂಡವರು. ಇವರ ಸೇವಾಕಾರ್ಯವನ್ನು ಮೆಚ್ಚಿದ ಮೈಸೂರಿನ ಮಹಾರಾಜರು ಇವರಿಗೆ ಜನೋಪಕಾರಿ ದೊಡ್ಡಣ್ಣ ಸೆಟ್ಟಿಯೆಂದು ಕರೆದು ಗೌರವಿಸಿದರು.[೧೫] ಇದು ಗಮನಾರ್ಹವಾದುದು. ಈ ತೆರನಾದ ಸಮಾಜ ಸೇವಾ ಕಾರ್ಯದಲ್ಲಿ ಕೆಂಪಣ್ಣ ಸೆಟ್ಟಿ[೧೬] ಮೊದಲಾದವರನ್ನು ಗಾಣಿಗರ ಸಮುದಾಯದಲ್ಲಿ ಕಾಣಬಹುದಾಗಿದೆ. ಇವೆಲ್ಲವೂ ಗಾಣಿಗ ಸಮುದಾಯವು ಎಲ್ಲ ಏರುಪೇರು

ಗಳೊಡನೆಯು ಬೆಂಗಳೂರು ನಗರದಲ್ಲಿ ಪ್ರಮುಖವಾಗಿ ಕಂಡುಬಂದ ವರ್ತಕ ಸಮುದಾಯ ಎಂಬುದಕ್ಕೆ ಒತ್ತು ನೀಡುತ್ತದೆ.

**ನೇಯ್ಗೆಗಾರರು**

ಬೆಂಗಳೂರು ಪ್ರದೇಶದ ಶಾಸನಗಳಲ್ಲಿ ಮಗ್ಗದೆರೆ ಎಂಬ ಉಲ್ಲೇಖವು ಬಹಳ ಹಿಂದೆಯೇ ಕಂಡುಬರುವುದು. ಇದು ಇಲ್ಲಿಯ ಕೈಮಗ್ಗಗಳ ಮೇಲೆ ತೆರಿಗೆ ಹಾಕಿದ ಬಗೆಗೆ ತಿಳಿಸುತ್ತದೆ. ಅಂದರೆ ಇಲ್ಲಿ ಜವಳಿ ಉದ್ಯಮ ಬಹಳ ಹಿಂದಿನಿಂದಲೂ ಇತ್ತೆಂಬುದನ್ನು ಇದು ಸ್ಪಷ್ಟಪಡಿಸುತ್ತದೆ. ಚಿಕ್ಕದೇವರಾಯರ ಕಾಲದಲ್ಲಿ ಜವಳಿ ಉದ್ಯಮವು ಹೆಚ್ಚಿನ ಪ್ರೋತ್ಸಾಹವನ್ನು ಪಡೆಯಿತು. ಇವರು ಈ ಉದ್ಯಮದ ಕುರಿತು ವಿಶೇಷ ಆಸಕ್ತಿಯನ್ನು ಹೊಂದಿದ್ದು, ನೇಯ್ಗೆಯಲ್ಲಿ ನೈಪುಣ್ಯತೆಯುಳ್ಳ ವಿವಿಧ ಉತ್ಪಾದಿತ–ವಿನಿಮಯ ವರ್ತಕ ಸಮುದಾಯದವರನ್ನು ಇಲ್ಲಿಗೆ ಆಹ್ವಾನ ನೀಡಿದರು. ಆಗ ಬೆಂಗಳೂರಲ್ಲಿ ೧೨,೦೦೦ ನೇಕಾರ ಕುಟುಂಬಗಳು ನೆಲೆಸಿದ್ದರು.[೧೭] ಈ ಕಾಲಘಟ್ಟ ಭಾರತದಾದ್ಯಂತ ಜವಳಿ ಉದ್ಯಮ ಉದಯೋನ್ಮುಖ ಉದ್ಯಮವೆಂದು ಗುರುತಿಸಿಕೊಂಡಿದ್ದು, ಎಲ್ಲ ಆಡಳಿತಗಾರರು ಇದಕ್ಕೆ ಹೆಚ್ಚಿನ ಒತ್ತು ಕೊಡುತ್ತಿದ್ದದ್ದನ್ನು ಗುರುತಿಸಬಹುದು. ನಂತರ ಹೈದರ್ ಮತ್ತು ಟಿಪ್ಪು ಕಾಲಾವಧಿಯಲ್ಲಿ ಜವಳಿ ಉದ್ಯಮಕ್ಕೆ ಇನ್ನೂ ಹೆಚ್ಚಿನ ಆದ್ಯತೆಯನ್ನು ನೀಡಲಾಯಿತು. ಟಿಪ್ಪು ಮರಣದ ನಂತರ ಸಮೀಕ್ಷೆಯನ್ನು ನಡೆಸಿದ ಬುಕಾನನ್ ಬೆಂಗಳೂರು ಪ್ರದೇಶದಲ್ಲಿ ವಿವಿಧ ವರ್ಗದ ವೃತ್ತಿ ನಿರತ ನೇಕಾರರ ಸಮುದಾಯವನ್ನು ಕಂಡಿದ್ದು, ಜವಳಿ ಉತ್ಪನ್ನದ ಬಗೆ ಮತ್ತು ಅವುಗಳ ಉತ್ಪಾದನಾ ವಿಧಾನದ ಬಗೆಗೆ ವಿವರಿಸಿದ್ದಾನೆ.[೧೮] ಬೆಂಗಳೂರು ಪ್ರದೇಶದಲ್ಲಿ ಜವಳಿ ಉದ್ಯಮ ಅಭಿವೃದ್ಧಿಗೊಂಡಂತೆ ವಿವಿಧ ಬಟ್ಟೆಗಳನ್ನು ತಯಾರಿಸುವ ಅನೇಕ ಬಗೆಯ ಸಮುದಾಯಗಳು ಕಂಡುಬಂದವು. ಪ್ರತಿ ಬಗೆಯ ಜವಳಿ ಉತ್ಪಾದನೆಯ ವಿವಿಧ ಹಂತಗಳಲ್ಲಿ ಒಂದೊಂದು ವರ್ಗ ಸಮುದಾಯಗಳು ಪಾಲ್ಗೊಂಡಿದ್ದವು. ಬೀಜದಿಂದ ಹತ್ತಿಯನ್ನು ಬೇರ್ಪಡಿಸುವ, ನೂಲನ್ನು ತೆಗೆಯುವ, ನೇಯ್ಗೆ ಮಾಡುವ, ಬಣ್ಣ ಹಾಕುವ ಹೀಗೆ ಪ್ರತಿ ಹಂತದಲ್ಲೂ ಶ್ರಮ ವಿಭಜನೆಗೊಂಡಿದಿದ್ದನ್ನು ನೋಡಬಹುದಾಗಿದೆ. ಈ ಹಂತದಲ್ಲಿ ತಮ್ಮ ವೃತ್ತಿಯಲ್ಲಿ ಕಾರ್ಯನಿರತರಾದ ವಿವಿಧ ಉತ್ಪಾದನಾ–ವಿನಿಮಯ ವರ್ತಕ ಸಮುದಾಯಗಳು ಸಾಮಾಜಿಕ ವ್ಯವಸ್ಥೆಯಲ್ಲಿ ಕಾಣಿಸತೊಡಗಿದ್ದರು. ೧೮೯೧ರ ಬೆಂಗಳೂರು ಪ್ರದೇಶದ ಒಟ್ಟು ಜನಸಂಖ್ಯೆಯಲ್ಲಿ ನೇಯ್ಗೆ ಕಾರ್ಯದಲ್ಲಿ ನಿರತರಾದವರ ಸಂಖ್ಯೆ ೧/೪ ರಷ್ಟಿದೆ ಎಂಬುದು ಪ್ರಮುಖವಾಗಿದೆ.[೧೯] ಇದು ಈ ಸಂದರ್ಭದಲ್ಲಿಯೂ ಬೆಂಗಳೂರು ವಸ್ತ್ರ ಉತ್ಪಾದನೆಯಲ್ಲಿ ಪ್ರಮುಖವಾದ ಸ್ಥಾನ ಹೊಂದಿದ್ದಕ್ಕೆ ಸಾಕ್ಷಿಯಾಗಿದೆ. ಬೆಂಗಳೂರು ಪ್ರದೇಶದಲ್ಲಿ ಕಂಡುಬರುವ ಪ್ರಮುಖ ನೇಯ್ಗೆ ಸಮುದಾಯಗಳೆಂದರೆ, ದೇವಾಂಗ, ಪದ್ಮಸಾಲಿ, ಕುರುಹಿನ ಶೆಟ್ಟಿ ಮೊದಲಾದವರು.

## ದೇವಾಂಗ

ಇಂದು ಬೆಂಗಳೂರು ಪ್ರದೇಶದಲ್ಲಿ ಅಧಿಕ ಸಂಖ್ಯೆಯಲ್ಲಿ ದೇವಾಂಗ ಸಮುದಾಯದವರು ಕಂಡುಬರುತ್ತಾರೆ. ಇವರು ಸಾಂಪ್ರದಾಯಿಕ ನೇಕಾರರು. ಹತ್ತಿ ಬಟ್ಟೆಗಳನ್ನು ನೇಯುವಲ್ಲಿ ತುಂಬ ಹೆಸರುವಾಸಿಯಾದವರು ಎಂದು ಬುಕಾನನ್ ತಿಳಿಸಿದ್ದಾನೆ. ಇವರನ್ನು ನೇಯ್‌ಕಾರರು, ನೇಕಾರರು, ಜಾಡರು, ಜೇಡರು, ಹಟಗಾರರು, ಮಗ್ಗದವರು ಎಂದು ಕರೆಯಲಾಗಿದೆ.[೨೦] ಹೇಮಕೂಟದ ಶ್ರೀ ಗಾಯಿತ್ರಿ ಪೀಠವು ಇವರ ಗುರು ಪೀಠವಾಗಿದೆ. ನಂದೀ ಧ್ವಜ ಇವರ ಧರ್ಮ ಲಾಂಛನವಾಗಿದೆ. ಚೌಡೇಶ್ವರಿ ಇವರ ಮನೆದೇವತೆ. ಇವರಲ್ಲಿ ಕನ್ನಡ ಮತ್ತು ತೆಲುಗು ಭಾಷಿಕರಿದ್ದಾರೆ.[೨೧] ದೇವಾಂಗ ಪೇಟೆಯು ಇವರ ಪ್ರಧಾನ ನೆಲೆಯಾಗಿದೆ. ಮಾರ್ಕ್ ಕಬ್ಬನ್ ಕಾಲದಲ್ಲಿ ಈ ಸಮುದಾಯವು ಅತ್ಯಂತ ಪ್ರಮುಖ ಸ್ಥಾನ ಪಡೆಯಿತು. ಆ ಸಂದರ್ಭದಲ್ಲಿ ಮಾರುಕಟ್ಟೆಯಲ್ಲಿ ಪ್ರಮುಖರಾಗಿದ್ದ ವರ್ತಕ ಸಮುದಾಯವೆಂದರೆ ಬಣಜಿಗರಾಗಿದ್ದರು. ಇವರನ್ನು ಬದಿಗೊತ್ತಿ ದೇವಾಂಗ ಸಮುದಾಯವು ಸಾಮಾಜಿಕ ಮತ್ತು ಆರ್ಥಿಕ ವ್ಯವಸ್ಥೆಯ ಮುಖ್ಯವಾಹಿನಿಯಲ್ಲಿ ಸ್ಥಾನ ಪಡೆದರು. ಈ ದಿಸೆಯಲ್ಲಿ ರಾಜಕೀಯ ಪಲ್ಲಟಗಳು ಮುಖ್ಯ ಪಾತ್ರವಹಿಸಿದೆ. ಮಾರ್ಕ್ ಕಬ್ಬನ್ ಬೆಂಗಳೂರು ದಂಡು ಪ್ರದೇಶದ ಬೆಳವಣಿಗೆಗೆ ಆದ್ಯತೆ ನೀಡಿದರು. ಹಾಗೆಯೇ ಬೆಂಗಳೂರಿನ ಶಾಂತಿ ಮತ್ತು ಭದ್ರತೆಗಾಗಿ ಅನೇಕ ಬದಲಾವಣೆಗಳನ್ನು ಮಾಡಿದರು. ಅವುಗಳಲ್ಲಿ ಒಂದು ಹೊಸ ನ್ಯಾಯಾಂಗ ಪದ್ಧತಿಯ ಪರಿಚಯ. ಬಣಜಿಗರು ಹಿಂದಿನಿಂದ ಸ್ಥಳೀಯವಾಗಿದ್ದ ಪ್ರಮುಖ ವರ್ತಕ ಸಮುದಾಯವಾಗಿತ್ತು. ಹಿಂದಿನ ಆಡಳಿತ ಮತ್ತು ಆರ್ಥಿಕ ವ್ಯವಸ್ಥೆಯ ವಿನಾಶವು ಈ ಸಮುದಾಯ ಹಿಂದೆ ಸರಿಯಲು ಹಾಗೂ ದೇವಾಂಗ ಸಮುದಾಯ ಮುಖ್ಯವಾಹಿನಿಯಲ್ಲಿ ಮುಂದೆ ಬರಲು ಕಾರಣವಾಯಿತು. ನರೇಂದ್ರ ಪಾಣಿಯವರ ಪ್ರಕಾರ '೧೯ನೇ ಶತಮಾನದ ಪ್ರಾರಂಭದವರೆಗೂ ಬಣಜಿಗರು ಜವಳಿ ಉದ್ಯಮದಲ್ಲಿ ಕೌಶಲ್ಯತೆಯನ್ನು ಪಡೆದ ವರ್ತಕ ಸಮುದಾಯವಾಗಿ ಕಾಣಿಸಿಕೊಂಡರೆ, ೧೯ನೇ ಶತಮಾನದಲ್ಲಿ ದೇವಾಂಗ ಮತ್ತು ಪದ್ಮಶಾಲಿ ವರ್ತಕ ಸಮುದಾಯಗಳು ಕಾಣಿಸಿಕೊಂಡವು. ಈ ಸಮುದಾಯಗಳಲ್ಲಿ ಕೆಲವರು ಹತ್ತಿ ಬಟ್ಟೆಯ ನೇಯ್ಗೆಯಲ್ಲಿ ಆಧುನಿಕತೆಗೆ ತಕ್ಕಂತೆ ಹೊಸ ತೆರನಾದ ಉತ್ಪಾದನೆಯಲ್ಲಿ ತೊಡಗಿ ಕೌಶಲ್ಯತೆಯನ್ನು ಪಡೆದರು. ಹತ್ತಿಗಳನ್ನು ನೂಲುವ ಮತ್ತು ಕಚ್ಚಾ ಹತ್ತಿಗಳ ಮಾರಾಟದಲ್ಲಿಯೂ ತೊಡಗಿಸಿಕೊಂಡರು. ಆಧುನಿಕತೆಯ ಹೆಸರಿನಲ್ಲಿ ಬದಲಾದ ವಸ್ತ್ರವಿನ್ಯಾಸ, ಆಧುನಿಕ ಶಿಕ್ಷಣ ಮತ್ತು ನ್ಯಾಯಾಂಗ ವ್ಯವಸ್ಥೆಯ ಬದಲಾವಣೆಗಳು ದೇವಾಂಗ ಸಮುದಾಯವನ್ನು ಮುಖ್ಯವಾಹಿನಿಗೆ ತಂದಿತ್ತು'.[೨೨] ಇದು ಸಹ ಮೇಲಿನ ವಾದಕ್ಕೆ ಪೂರಕವಾಗಿದೆ. ಜೊತೆಗೆ ಕಚ್ಚಾ ಹತ್ತಿಯ ಮಾರಾಟದಲ್ಲಿ ತೊಡಗಿಕೊಂಡಿದ್ದರು ಎಂಬುದು ಮುಖ್ಯವಾಗಿ ಗಮನಿಸಬೇಕಾದುದು. ಆದರೆ ಈ ತೆರನಾದ ಪರಿಸ್ಥಿತಿಗಳು ಮುಂದುವರಿಯಲಿಲ್ಲ. ೨೦ನೇ ಶತಮಾನದ ಉತ್ತರಾರ್ಧದಲ್ಲಿ ಯಂತ್ರೋಪಕರಣಗಳ

ಸಹಾಯದಿಂದ ತಯಾರಿಸಲ್ಪಟ್ಟ ಜವಳಿಗಳು ಬರತೊಡಗಿತು. ಸಾಂಪ್ರದಾಯಿಕ ಕೈ ಮಗ್ಗಗಳಲ್ಲಿ ಹಲವು ಬದಲಾವಣೆಗಳು ಕಂಡುಬಂದವು. ಇಂಜಿನ್‌ನಿಂದ ಚಲಿಸುವ ಯಂತ್ರಗಳ ಸಹಾಯದಿಂದ ಉತ್ಪಾದಿಸುವ ಜವಳಿ ಉದ್ಯಮಗಳು ಬೆಂಗಳೂರು ಪ್ರದೇಶದಲ್ಲಿ ಕಾಣಿಸಿಕೊಂಡಿತು. ಈ ಉತ್ಪನ್ನಗಳು ಕೈ ಮಗ್ಗದ ಉತ್ಪನ್ನಗಳಿಗೆ ಸ್ಪರ್ಧಿಯಾಗಿ ಬಂದಿದ್ದವು. ಅದನ್ನು ಎದುರಿಸುವ ಶಕ್ತಿ ಕೈಮಗ್ಗಗಳಿಗೆ ಇರಲಿಲ್ಲ.

ದೇವಾಂಗದವರು ಆರಂಭದಲ್ಲಿ ದೇವಾಂಗ ಪೇಟೆ ಮತ್ತು ಕಮಿಷನರ್‌ಗಳ ಆಳ್ವಿಕೆಯ ಸಂದರ್ಭದಲ್ಲಿ ಕಾಟನ್‌ಪೇಟೆ ಪ್ರದೇಶದಲ್ಲಿ ನೆಲೆಸಿದ್ದರು. ಸ್ವಾತಂತ್ರ್ಯ ಬಂದ ನಂತರ ಬೆಂಗಳೂರು ನಗರ ವಿಸ್ತರಣೆಯೊಂದಿಗೆ ಬೆಂಗಳೂರಿನ ಎಲ್ಲ ಪ್ರದೇಶಗಳಲ್ಲಿಯೂ ನೆಲೆಸಿದ್ದಾರೆ. ಈ ಸಮುದಾಯದ ಪ್ರಮುಖ ವ್ಯಕ್ತಿಗಳೆಂದರೆ, ಯಜಮಾನ್ ಎಣ್ಣೆಗೆರೆ ಚಿಕ್ಕವೆಂಕಟಪ್ಪ, ಮರಡಿ ಸುಬ್ಬಯ, ಮುನಿಸುಬ್ಬರಾಯಪ್ಪ, ಸೌದೆ ಅಂಗಡಿ ಚೌಡಪ್ಪ, ಮಹಡಿಮನೆ ಯಜಮಾನ್ ಮುನಿಶಂಕರಪ್ಪ, ಚಾಮರಾಜಪೇಟೆ ಬಸಯ್ಯ, ಗಂಟೆ ದೊಡ್ಡಣ್ಣ, ಶ್ರೀ ರಾಮಲಿಂಗ, ಹೊಸಮನೆ ಕೆಂಚಪ್ಪ, ಕೆ.ವಿ. ವೀರಭದ್ರಯ್ಯ, ಡಿ.ಆದೆಪ್ಪ, ಡಿ.ತಾರಗಿರಿಯಪ್ಪ, ಸಿ. ಚಿಕ್ಕ ವೆಂಕಟಪ್ಪ, ಸಿ.ಕೆ.ಹುಚ್ಚಪ್ಪ, ಎನ್.ಪಿ.ಗುರಪ್ಪ, ಡಿ.ಸಿ.ಸುಬ್ಬರಾಯಪ್ಪ, ಡಿ.ಕಾಲೇಟಪ್ಪ, ಯ॥ ಮಹಡಿಮನೆ ಶಂಕರಪ್ಪ, ಕೆ.ಎನ್.ರಾಮಚಂದ್ರಯ್ಯ, ಕೆ.ವಿ.ನಂಜಪ್ಪ, ಸಪ್ಪೆ ವೈ. ನರಸಿಂಹಣ್ಣ, ಪಿ.ಸುಬ್ರಮಣ್ಯಶಾಸ್ತ್ರಿ, ಕೆ.ಆರ್.ಚೌಡಪ್ಪ ಮೊದಲಾದವರು.[೨೩] ಇವರೆಲ್ಲರೂ ಬೆಂಗಳೂರು ನಗರ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರವಹಿಸಿರುವರು. ಇಂದು ಬೆಂಗಳೂರು ನಗರದ ಸಬ್ ಅರ್ಬನ್ ಪ್ರದೇಶವಾಗಿ ಗುರುತಿಸಿಕೊಂಡಿರುವ ದೊಡ್ಡಬಳ್ಳಾಪುರ ದಲ್ಲೂ ಈ ಸಮುದಾಯದವರು ಪ್ರಧಾನವಾಗಿ ಕಂಡುಬರುತ್ತಾರೆ.

**ತೊಗಟರು**

ತೊಗಟರು ಸಹ ಉತ್ಪಾದನಾ ವರ್ತಕ ಸಮುದಾಯದವರು. ಇವರು ತೆಲಗು ನೇಯ್ಗೆಯ ಸಮುದಾಯದವರು ಮತ್ತು ವಿಷ್ಣುವಿನ ಆರಾಧಕರು. ಅವರ ಕುಲದೇವರು ಶ್ರೀ ವಿಷ್ಣು. ಚೌಡೇಶ್ವರಿ ಅವರ ಕುಲದೇವತೆ ಎಂದು ಹೇಳುವರು. ಇವರು ದಪ್ಪವಾದ ಮತ್ತು ಧೀರ್ಘಕಾಲ ಬಾಳುವ ಕೆಂಪು ಅಂಚಿನ ಬಿಳಿಯ ವಸ್ತ್ರಗಳನ್ನು ಉತ್ಪಾದಿಸುತ್ತಿದ್ದರು. ಇದು ಕೆಳದರ್ಜೆಯ ಬಟ್ಟೆಯಾಗಿತ್ತು. ಹಾಗಾಗಿ ಇದನ್ನು ಬಡಜನರು ಉಪಯೋಗಿಸುತ್ತಿದ್ದರು.[೨೪] ಇವರು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಪ್ರಾಬಲ್ಯವನ್ನು ಹೊಂದಿದ ವರ್ಗವಾಗಿದ್ದರು. ೧೬ನೇ ಶತಮಾನದ ಹೊತ್ತಿಗೆ ಆಗಲೇ ವಸ್ತ್ರೋದ್ಯಮ ಉದಯೋನ್ಮುಖ ಉದ್ಯಮವಾಗಿ ಗುರುತಿಸಿಕೊಂಡಿತ್ತು. ಹಾಗಾಗಿ ಎಲ್ಲ ಬಗೆಯ ನೇಕಾರರು ಪ್ರಭುತ್ವದಿಂದ ಮಾನ್ಯರಾಗಿದ್ದರು. ಪ್ರಭುತ್ವಗಳು ಆರ್ಥಿಕ ಅಭಿವೃದ್ಧಿಗಾಗಿ ತಾವೇ ನೇಕಾರರನ್ನು

ಬರಮಾಡಿಕೊಂಡರೆ ಕೆಲವೊಮ್ಮೆ ಪ್ರಸಿದ್ಧವಾದ ಸ್ಥಳಗಳಿಗೆ ನೇಕಾರರೆ ವಲಸೆ ಹೋಗುವುದು ಮುಂದಿನ ಶತಮಾನಗಳಲ್ಲಿ ಸಾಮಾನ್ಯವಾಗಿತ್ತು. ಇಂತಹದೆ ಒಂದು ಸಮುದಾಯ ತೊಗಟರು ಎನ್ನಬಹುದು. ಈ ಸಮುದಾಯದವರು ಮೂಲತಃ ಕಡಪ ಜಿಲ್ಲೆಯಿಂದ ಬಂದವರು. ಆದರೆ ಯಾವಾಗ ಬೆಂಗಳೂರು ಪ್ರದೇಶಕ್ಕೆ ವಲಸೆ ಬಂದರು ಎಂಬುದರ ಬಗ್ಗೆ ಖಚಿತ ಮಾಹಿತಿ ದೊರೆಯುವುದಿಲ್ಲ. ಒಟ್ಟಿನಲ್ಲಿ ವೃತ್ತಿಯನ್ನು ಅರಸಿ ಬೆಂಗಳೂರಿಗೆ ಬಂದ ವರ್ಗವಾಗಿದೆ. ಈ ಸಮುದಾಯವು ಬೆಂಗಳೂರಿನ ಪೇಟೆಯ ಮನವರ್ತಪೇಟೆಯಲ್ಲಿ ನೆಲೆನಿಂತರು. ನಂತರ ಬೆಂಗಳೂರಿನ ನಗರೀಕರಣ ಪ್ರಕ್ರಿಯೆಯಲ್ಲಿ ಇಲ್ಲಿನ ಪ್ರಮುಖ ಪ್ರದೇಶಗಳಲ್ಲಿ ನೆಲೆನಿಂತರು.

**ಸೇಣಿಗರು**

ನೇಯ್ಗಾರಿಕೆಯಲ್ಲಿ ನಿರತರಾದ ಸಮುದಾಯದವರಲ್ಲಿ ಸೇಣಿಗರು ಒಬ್ಬರು. ಇವರನ್ನು ಜಮಖಾನವಾಲ ಎಂದೇ ಜನಪ್ರಿಯರಾಗಿದ್ದರು. ತಮಿಳುನಾಡಿನಲ್ಲಿ ಇವರನ್ನು ಸೇಣಿಯಾನ್ಸ್ ಎಂದು ಕರೆಯುತ್ತಾರೆ. ಇವರಲ್ಲಿ ಲಿಂಗಾಯಿತ ಮತ್ತು ವೈಷ್ಣವ ಧರ್ಮದವನ್ನಾಚರಿಸುವ ಎರಡು ಪಂಗಡಗಳಿವೆ. ಈ ಸಮುದಾಯದವರು ಉತ್ತಮ ದರ್ಜೆಯ ಉಣ್ಣೆ ಮತ್ತು ಹತ್ತಿಯಿಂದ ಮಾಡಿದ ಜಮಖಾನವನ್ನು ತಯಾರಿಸುವುದರಲ್ಲಿ ಸಿದ್ಧಹಸ್ತರು. ಎಲೆ ಹಸಿರು ಬಣ್ಣದ ಶಾಲನ್ನು ತಯಾರಿಸುತ್ತಿದ್ದರು. ಜೊತೆಗೆ ರೇಷ್ಮೆ ಮತ್ತು ಹತ್ತಿ ತಯಾರಿಕೆಯಲ್ಲೂ ಪ್ರಸಿದ್ಧರಾಗಿದ್ದರು. ಇವರ ಮೂಲದ ಕುರಿತು ಉತ್ತರ ಭಾರತದಿಂದ ಬಂದು ಮದ್ರಾಸ್‌ನಲ್ಲಿ ನೆಲೆನಿಂತವರು ಎಂದು ಗುರುತಿಸುವರು. ಮದ್ರಾಸ್‌ನಲ್ಲಿ ಇವರನ್ನು ಪಟ್ನಿಸ್ ಎಂದು ಕರೆಯಲಾಗುತ್ತಿತ್ತು. ಪಟ್ನಿಸ್ ಎಂದರೆ ಹತ್ತಿ ಮತ್ತು ರೇಷ್ಮೆಯ ನೇಕಾರರು ಎಂದರ್ಥ. ನಂತರ ಕರ್ನಾಟಕ ಪ್ರದೇಶಕ್ಕೆ ಬಂದು ನೆಲೆಸಿದರು.[೨೬] ಮುಂದೆ ಅನೇಕ ಭಾಗಗಳಿಗೆ ವಲಸೆ ಹೋದರು. ಇವರು ಉತ್ಪಾದಿಸುತ್ತಿದ್ದ ವಸ್ತ್ರಗಳಲ್ಲಿ ಸೀರೆ ಮತ್ತು ಕುಪ್ಪಸಗಳು ಪ್ರಸಿದ್ಧವಾಗಿದ್ದವು. ಇವುಗಳಲ್ಲಿ ಸ್ತ್ರೀಯರು ಧರಿಸುವ ಉತ್ತಮ ದರ್ಜೆಯ ಬೆಲೆಯುಳ್ಳ ಕುಪ್ಪಸ ಮತ್ತು ಸೀರೆಯನ್ನು ಕುಟ್ನಿಸ್ ಎಂದು ಕರೆಯುತ್ತಿದ್ದರು. ಇದಲ್ಲದೆ ಇನ್ನೊಂದು ಬಗೆಯ ವಸ್ತ್ರವಾದ ರೇಷ್ಮೆ ವಸ್ತ್ರವನ್ನು ಉತ್ಪಾದಿಸುತ್ತಿದ್ದರು. ಇದನ್ನು ಅಧಿಕ ಸಂಖ್ಯೆಯಲ್ಲಿ ಮುಸ್ಲಿಂರು ಕೊಳ್ಳುತ್ತಿದ್ದು ಪಂಜೆಯಾಗಿ ತೊಡುತ್ತಿದ್ದರು. ಹೈದರಾಲಿಯು ಒಮ್ಮೆ ಮದ್ರಾಸ್‌ನ ಮೇಲೆ ದಂಡಯಾತ್ರೆ ಕೈಗೊಂಡು ಹಿಂದಿರುಗುವ ಸಂದರ್ಭದಲ್ಲಿ ಇವರನ್ನು ಕರೆತಂದನು. ತಂಜಾವೂರಿನಿಂದ ೨೫ ಕುಟುಂಬಗಳನ್ನು ಒತ್ತಾಯ ಪೂರ್ವವಾಗಿ ಕರೆತಂದು ಶ್ರೀರಂಗಪಟ್ಟಣದ ಬಳಿಯಿದ್ದ ಹೊಸನಗರವಾದ ಗಂಜಾಂನಲ್ಲಿ ನೆಲೆನಿಲ್ಲುವಂತೆ ವ್ಯವಸ್ಥೆ ಮಾಡಿದನು. ಇದಲ್ಲದೇ, ಅವರಿಗೆ ರೇಷ್ಮೆ ಮತ್ತು ಮಖ್‌ಮಲ್ ಬಟ್ಟೆಗಳನ್ನು ಉತ್ಪಾದಿಸುವಂತೆ ಪ್ರೋತ್ಸಾಹಿಸಿದನು. ಅದಕ್ಕಾಗಿ ತೆರಿಗೆಯಿಂದ ರಿಯಾಯಿತಿಯನ್ನು ನೀಡಿದನು. ಈ ಉದ್ಯಮವು ಶ್ರೀರಂಗಪಟ್ಟಣದ ಅವನತಿಯವರೆಗೂ ಪ್ರಭುತ್ವದ ಆಶ್ರಯದಲ್ಲಿ ಅಸ್ತಿತ್ವದಲ್ಲಿತ್ತು. ನಂತರ ಅವರಲ್ಲಿ

ಕೆಲವರು ಬೆಂಗಳೂರು ನಗರಕ್ಕೆ ವಲಸೆ ಬಂದು ನೆಲೆ ನಿಂತರು. ಇವರು ಮರಾಠಿ, ಗುಜುರಾತಿ, ತೆಲಗು, ಕನ್ನಡ ಭಾಷೆಗಳ ಮಿಶ್ರಣ ಭಾಷೆಯನ್ನು ಬಳಸುವರು. ಕನ್ನಡದಲ್ಲಿ ಬರೆಯುತ್ತಾರೆ. ಅಂದರೆ ಈ ಸಮುದಾಯ ೧೮ ಮತ್ತು ೧೯ನೇ ಶತಮಾನದ ವೇಳೆಗೆ ವಸ್ತ್ರೋದ್ಯಮ ಪ್ರಬಲವಾಗಿದ್ದ ಎಲ್ಲ ಪ್ರದೇಶಗಳಲ್ಲಿಯೂ ಹರಡಿತ್ತು. ಇಲ್ಲಿರುವ ಈ ಸಮುದಾಯದವರು ತಾತಾಚಾರ್ ಮತ್ತು ಭಟ್ಟಚಾರ್‌ರ ಅನುಯಾಯಿಯಾಗಿರುವರು. ಜೊತೆಗೆ ಇವರು ಇತರ ನೇಕಾರರೊಂದಿಗೆ ವೈವಾಹಿಕ ಸಂಬಂಧವನ್ನು ಮಾಡಿಕೊಳ್ಳುತ್ತಾರೆ.[೨೭]

## ಸೌರಾಷ್ಟ್ರಿಯರು

ಸೌರಾಷ್ಟ್ರಿಯರು ಉತ್ಪಾದನಾ ವರ್ತಕ ಸಮುದಾಯದವರು. ಹೆಸರೇ ಸೂಚಿಸುವಂತೆ ಹೊರಗಿನಿಂದ ಬಂದು ನೆಲೆಸಿದ ನೇಯ್ಗೆ ಸಮುದಾಯ. ಸೌರಾಷ್ಟ್ರ ಎಂಬ ಪ್ರದೇಶವನ್ನು ಇಂದಿನ ಗುಜರಾತಿನಲ್ಲಿ ಗುರುತಿಸಬಹುದಾಗಿದೆ. ಇಂದಿಗೂ ಗುಜರಾತ್ ವಸ್ತ್ರೋದ್ಯಮದಲ್ಲಿ ಪ್ರಸಿದ್ಧವಾಗಿದೆ. ಮೊಗಲರ ಕಾಲದಲ್ಲಿಯೂ ಗುಜರಾತ್ ಮತ್ತು ಬಂಗಾಳ ಬಟ್ಟೆ ಉತ್ಪಾದನಾ ನೆಲೆಯಲ್ಲಿ ಪ್ರಸಿದ್ಧ ತಾಣವಾಗಿತ್ತು ಎಂಬುದು ಗಮನಾರ್ಹ. ಇವರು ಸಹ ಸೇಣಿಗರಂತೆ ಜಮಖಾನಗಳ ತಯಾರಿಕೆಯಲ್ಲಿ ಪ್ರಸಿದ್ಧರಾದವರು. ಪಟ್ನುಲಿ ಮತ್ತು ಜಮಖಾನವಾಲ ಎಂದು ಸಹ ಈ ಸಮುದಾಯದವರನ್ನು ಕರೆಯಲಾಗಿದೆ.[೨೮] ಸೌರಾಷ್ಟ್ರ ಪೇಟೆ ಬೆಂಗಳೂರಿನ ಪೇಟೆ–ಬೀದಿಗಳಲ್ಲಿ ಒಂದಾಗಿದೆ. ಈ ಪೇಟೆಯು ಇವರ ನೆಲೆಯಾಗಿತ್ತು. ಇಂದು ಬೆಂಗಳೂರಿನ ಪ್ರಮುಖ ವ್ಯಾಪಾರಿ ಪ್ರದೇಶಗಳಲ್ಲಿ ನೆಲೆಸಿದ್ದಾರೆ. ಇವರು ಹಸಿರು ಬಣ್ಣದ ಹತ್ತಿ ಮತ್ತು ರೇಷ್ಮೆ ಮಿಶ್ರಿತ ಶಾಲುಗಳು, ಹತ್ತಿಯ ಕಾರ್ಪೆಟ್, ಗಟ್ಟಿಯಾದ ಮತ್ತು ಒಂದು ಬಗೆಯ ಉತ್ತಮ ಉಣ್ಣೆಯ ಬಟ್ಟೆಗಳ ತಯಾರಿಕೆಯಲ್ಲಿ ಹೆಸರುವಾಸಿಯಾದ ಸಮುದಾಯವಾಗಿದೆ.

## ಸಾಲೆ

ಇವರು ಉತ್ಪಾದನಾ ವರ್ತಕ ಸಮುದಾಯವರಾಗಿದ್ದು, ನೇಯ್ಗೆಗಾರಿಕೆಯಲ್ಲಿ ಕಂಡುಬರುವ ಒಂದು ಪಂಗಡವಾಗಿದೆ. ಇವರಲ್ಲಿ ಪದ್ಮಸಾಲಿ, ಪಟ್ಟುಸಾಲಿ, ಸಂಕುಸಾಲಿ ಎಂದು ಮೂರು ಉಪ ಪಂಗಡಗಳಿವೆ. ವಿಜಯನಗರದದಿಂದ ಕೆಂಪೇಗೌಡನ ಕಾಲದಲ್ಲಿ ಇಲ್ಲಿಗೆ ವಲಸೆ ಬಂದರು. ಬೆಂಗಳೂರು ಪ್ರದೇಶದಲ್ಲಿ ನೆಲೆಸಿರುವ ನೇಯ್ಗಾರರಲ್ಲಿ ಅತ್ಯಂತ ಹಳೆಯ ಸಮುದಾಯ ಎಂದು ಗುರುತಿಸಬಹುದಾಗಿದೆ. ಇವರ ಕುಲದೇವತೆ ಚೌಡೇಶ್ವರಿ. ಇವರು ತಮ್ಮ ಹೆಸರಿನೊಂದಿಗೆ ಸೆಟ್ಟಿ, ಅಯ್ಯ, ಅಪ್ಪ ಎಂಬ ಪದನಾಮಗಳನ್ನು ಇರಿಸಿಕೊಳ್ಳುತ್ತಾರೆ. ಪದ್ಮಸಾಲಿ ಉತ್ಪಾದಕ ವರ್ತಕ ಸಮುದಾಯದವರು ತೆಲುಗು ಭಾಷೆ ಮಾತನಾಡಿದರೆ. ಇನ್ನುಳಿದ ಪಂಗಡದವರು ಕನ್ನಡ ಭಾಷೆ ಮಾತನಾಡುತ್ತಾರೆ.[೨೯]

## ಪಟ್ಟೆಗಾರರು ಮತ್ತು ಖತ್ರಿ

ಇಲ್ಲಿ ಕಂಡುಬರುವ ಪ್ರಮುಖ ಉತ್ಪಾದನಾ-ವಿನಿಮಯ ಸಮುದಾಯಗಳಲ್ಲಿ ಪಟ್ಟೆಗಾರರು ಸಹ ಒಬ್ಬರು. ಇವರು ಗುಜರಾತಿ ಮತ್ತು ಹಿಂದಿ ಸಮ್ಮಿಶ್ರ ಭಾಷೆಯನ್ನಾಡುತ್ತಾರೆ. ಬೆಂಗಳೂರು ಪ್ರದೇಶವು ಮರಾಠರ ಆಳ್ವಿಕೆಗೆ ಒಳಪಟ್ಟ ಸಂದರ್ಭದಲ್ಲಿ ಇವರು ಬಂದಿರುವ ಸಾಧ್ಯತೆಗಳಿವೆ ಎಂದು ವಿದ್ವಾಂಸರು ಅಭಿಪ್ರಾಯಪಡುವರು. ಇವರು ಆಡುವ ಭಾಷೆಯು ಮರಾಠಿ ಭಾಷೆಯೊಂದಿಗೆ ಸಾಮ್ಯತೆಯನ್ನು ಹೊಂದಿದೆ. ಇವರು ರೇಷ್ಮೆ ನೇಯ್ಗಾರರು. ಜೊತೆಗೆ ಇವರು ಬಿಳಿ ಮಸ್ಲಿನ್ ಮತ್ತು ಹಸಿರು ಮಸ್ಲಿನ್ ಬಟ್ಟೆಗಳನ್ನು ನೇಯುವಲ್ಲಿ ಸಿದ್ಧಹಸ್ತರು. ಅಷ್ಟೇ ಅಲ್ಲದೇ ಸ್ತ್ರೀಯರು ಧರಿಸುವ ವಿವಿಧ ರೀತಿಯ ಆರು ಬಗೆಯ ಬಟ್ಟೆಗಳನ್ನು ಉತ್ಪಾದಿಸುತ್ತಿದ್ದರು. ಇವುಗಳಲ್ಲಿ ಚಿನ್ನದ ಜರಿಯ ವಿವಿಧ ವಿನ್ಯಾಸವನ್ನು ಮಾಡುತ್ತಿದ್ದರು. ಅಂದರೆ ಶ್ರೀಮಂತರು ಮತ್ತು ಪ್ರಭುತ್ವದೊಡನೆ ಒಡನಾಟ ಹೊಂದಿದ ವರ್ಗ ಬಳಸುವ ಐಷಾರಾಮಿ ಬಟ್ಟೆಗಳನ್ನು ಉತ್ಪಾದಿಸುತ್ತಿದ್ದರು. ಇವರು ಉತ್ಪಾದಿಸುತ್ತಿದ್ದ ಬಟ್ಟೆಗಳಿಗೆ ಹಳದಿ, ಕಿತ್ತಳೆ ಬಣ್ಣಗಳನ್ನು ಬಳಸುತ್ತಿದ್ದು, ಈ ಬಣ್ಣಗಳನ್ನು ತಾವೇ ತಯಾರಿಸಿಕೊಳ್ಳು ತ್ತಿದ್ದರೆಂದು ಬುಕಾನನ್ ತಿಳಿಸಿದ್ದಾನೆ.[೩೦] ಆದರೆ ನೀಲಿ ಬಣ್ಣದ ಬಟ್ಟೆಯ ಉತ್ಪಾದನೆಗೆ ಇವರು ನೀಲಿಗರ ಮೇಲೆ ಅವಲಂಬಿಸಿದ್ದರು. ಇವರು ಹೆಚ್ಚಿನ ಸಂಖ್ಯೆಯಲ್ಲಿ ಬೆಂಗಳೂರು ಪ್ರದೇಶದಲ್ಲಿ ನೆಲೆಸಿರುತ್ತಾರೆ. ಖತ್ರಿ ಸಮುದಾಯದವರು ಸಹ ರೇಷ್ಮೆ ನೇಕಾರರು. ಪಟ್ಟೇಗಾರರಿಗಿಂತ ಉನ್ನತ ದರ್ಜೆ ವಸ್ತ್ರಗಳನ್ನು ತಯಾರಿಸುತ್ತಿದ್ದರು. ಇವರ ಆಚಾರ-ವಿಚಾರ ಉಡುಗೆ-ತೊಡುಗೆ ಎಲ್ಲವೂ ಪಟ್ಟೇಗಾರರಂತೆ ಇರುತ್ತದೆ. ಆದರೆ ಅವರೊಂದಿಗೆ ವೈವಾಹಿಕ ಸಂಬಂಧಗಳನ್ನು ಹೊಂದಿರುವುದಿಲ್ಲ.[೩೧]

## ಕುರುವಿನ ಬಣಜಿಗರು

ಇವರನ್ನು ಉತ್ಪಾದನಾ ವರ್ತಕ ಸಮುದಾಯದ ನೇಕಾರರಲ್ಲಿ ಬಿಳಿಮಗ್ಗದವರು ಎಂದು ಗುರುತಿಸುವರು. ನೇಯ್ಗಾರಿಕೆಯಲ್ಲಿ ಇವರು ಒಂದು ಉಪ ಪಂಗಡದವರಾಗಿರುತ್ತಾರೆ. ಇವರನ್ನು ಕುರುವಿನ ಬಣಜಿಗ, ಕುರುವಿನ ಸೆಟ್ಟಿಯೆಂದು ಸಹ ಕರೆಯುತ್ತಾರೆ. ಇವರು ಬಿಳಿ ಬಣ್ಣದ ಮಸ್ಲಿನ್ ಬಟ್ಟೆಯನ್ನು ನೇಯ್ಗೆ ಮಾಡುತ್ತಾರೆ. ಅಷ್ಟೇ ಅಲ್ಲದೆ ಇನ್ನಿತರ ಬಗೆಯ ಬಟ್ಟೆಗಳನ್ನು ನೇಯುತ್ತಾರೆ. ಇವರು ದೇವಾಂಗದವರಂತೆ ಸ್ಥಳೀಯರಾಗಿದ್ದು ಕನ್ನಡ ಮಾತನಾಡುತ್ತಾರೆ. ಇವರಲ್ಲಿ ಕೆಲವರು ಲಿಂಗಾಯಿತ ಸಮುದಾಯಕ್ಕೆ ಸೇರಿದವರಾಗಿದ್ದರೆ. ಮತ್ತೆ ಇನ್ನು ಕೆಲವರು ಲಿಂಗಾಯಿತ ಸಮುದಾಯಕ್ಕೆ ಸೇರದೆ ಇರುವವರು ಇದ್ದಾರೆ. ಇವರು ಹಂಪಿ, ವಿರುಪಾಕ್ಷ, ಉಜ್ಜೈನಿ, ಚಿತ್ರದುರ್ಗದ ಲಿಂಗಾಯಿತ ಮಠದ ಸದಸ್ಯರಾಗಿರುತ್ತಾರೆ. ಸಂಗಮೇಶ್ವರ ಇವರ ಕುಲ ದೇವರು. ಇವರು ತಮ್ಮ ಹೆಸರಿನೊಂದಿಗೆ ಸೆಟ್ಟಿ ಎಂಬ ಪದನಾಮವನ್ನು ಇಟ್ಟುಕೊಳ್ಳುತ್ತಾರೆ.[೩೨] ಇವರು ಬೆಂಗಳೂರಿನ ಪೇಟೆಯ ಸಮೀಪವಲ್ಲಿ ನೆಲೆಸಿದ್ದರು. ಇಂದು ಆ ಪ್ರದೇಶವನ್ನು ವಿಶ್ವೇಶ್ವರಪುರಂ ಎಂದು ಕರೆಯಲಾಗಿದೆ.[೩೩]

## ಗೋಣಿಗರು

ಗೋಣಿಗರ ಉತ್ಪಾದನಾ-ವಿನಿಮಯ ಸಮುದಾಯದ ಮತ್ತೊಂದು ಬಗೆಯ ನೇಕಾರರು. ಜನಪಾಸ್ ಮತ್ತು ಸಾದುವಂಶಸ್ಥದ ಉಪ ಪಂಗಡದವರು. ಇವರು ವೃತ್ತಿವಾಚಿ, ವಸ್ತುವಾಚಿ ರೂಪದ ಹಿನ್ನೆಲೆಯ ಉತ್ಪಾದನ ಸಮುದಾಯವಾಗಿದೆ. ಮುಖ್ಯವಾಗಿ ಇವರು ಸೆಣಬು ಮತ್ತು ಜಂಬು ಜಾತಿಯ ವಸ್ತುಗಳಿಂದ ಬಟ್ಟೆ ತಯಾರಿಸುವರು. ಇದನ್ನು ಉತ್ಪಾದಿಸಲು ಇವರು ಸೆಣಬು ಮತ್ತು ಜಂಬು ಜಾತಿಯ ಹುಲ್ಲನ್ನು ಬೆಳೆದು, ಅದನ್ನು ಒಣಗಿಸುತ್ತಿದ್ದರು. ಅನಂತರ ಅದನ್ನು ನೀರಿನಲ್ಲಿ ನೆನಸಿ ಸಂಸ್ಕರಿಸುತ್ತಿದ್ದರು. ಈ ಸಂಸ್ಕರಿತ ವಸ್ತುವಿನಿಂದ ದಾರವನ್ನು ತಯಾರಿಸಿ, ಆ ದಾರವನ್ನು ಒರಟಾದ ಮಗ್ಗಗಳ ನೆರವಿನಿಂದ ಗಟ್ಟಿಯಾದ ಗೋಣಿಚೀಲ ಮತ್ತು ಹಗ್ಗ ಮೊದಲಾದ ಉತ್ಪಾದನೆಗಳನ್ನು ಮಾಡುವ ಉದ್ಯಮದಲ್ಲಿ ತೊಡಗಿಕೊಂಡಿದ್ದರು. ಗೋಣಿ ಬಟ್ಟೆಗಳನ್ನು ತಯಾರಿಸುತ್ತಿದ್ದರು.[೩೪] ಮತ್ತೆ ಕೆಲವರು ಕೃಷಿ ಚಟುವಟಿಕೆಯಲ್ಲಿ ತೊಡಗಿಸಿಕೊಂಡಿದ್ದರು. ಬೆಂಗಳೂರು ನಗರದಲ್ಲಿ ಹಲವರು ದವಸ-ಧಾನ್ಯಗಳಿಗೆ ಮೂಟೆ ಕಟ್ಟಲು ಬೇಕಾದ ಚೀಲಗಳನ್ನು ತಯಾರಿಸಿಕೊಡುವ, ಮೂಟೆ ಹೊರುವ ಕಾರ್ಯದಲ್ಲಿಯೂ ನಿರತರಾಗಿದ್ದರು. ಇವರ ವಲಸೆಗೆ ಇರುವ ಕಾರಣದ ಬಗೆಗೆ ಇನ್ನೂ ಅಧ್ಯಯನದ ಅಗತ್ಯವಿದೆ. ಒಳನಾಡಿನ ವ್ಯಾಪಾರಿ ಕೇಂದ್ರಗಳು ಹೆಚ್ಚಿದ ಹಿನ್ನೆಲೆಯಲ್ಲಿ ಈ ಸಮುದಾಯವು ರಚಿತಗೊಂಡಿರಬಹುದು ಎಂಬುದನ್ನು, ಇವರ ವೃತ್ತಿಯ ಆಧಾರದ ಮೇಲೆ ಊಹಿಸಬಹುದಾಗಿದೆ. ೧೮೯೧ರ ಪ್ರಕಾರ ಇವರ ಸಂಖ್ಯೆಯು ಶೇಕಡ ೦.೦೩ರಷ್ಟಿತ್ತು. ಅಂದರೆ ಬೆಂಗಳೂರು ಪ್ರದೇಶದ ಒಂದು ಸಣ್ಣ ಸಮುದಾಯ ಎನ್ನಬಹುದು.

ಬೆಂಗಳೂರು ಪ್ರದೇಶದಲ್ಲಿ ವಿವಿಧ ಬಗೆಯ ನೇಕಾರ ಸಮುದಾಯದವರನ್ನು ಕಾಣಬಹುದಾಗಿದೆ. ಇಲ್ಲಿ ಚರ್ಚೆಗೊಳಗಾದ ನೇಕಾರ ಸಮುದಾಯಗಳಲ್ಲಿ ದಕ್ಷಿಣ ಭಾರತದ ಮೂಲದ ಮತ್ತು ಮಧ್ಯ ಭಾರತ ಹಾಗೂ ಪಶ್ಚಿಮ ಭಾರತದ ಮೂಲದ ನೇಕಾರರನ್ನು ಕಾಣಬಹುದು. ಇವರಲ್ಲಿ ಮುಖ್ಯವಾಗಿ ಸೇಣಿಗರು, ಸೌರಾಷ್ಟ್ರಿಯರು, ಪಟ್ಟೆಗಾರರು ಮತ್ತು ಖತ್ರಿಗಳನ್ನು ನೋಡಬಹುದು. ಇವರ ಕುರಿತ ಮಾಹಿತಿಗಳನ್ನು ಗಮನಿಸಿದರೆ ಮರಾಠ, ಗುಜರಾತಿ ಭಾಷೆಯೊಡನೆ ಸಂಬಂಧವನ್ನು ಕಾಣಬಹುದು. ಸೇಣಿಗರನ್ನು ಹೊರತುಪಡಿಸಿದಂತೆ ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಬೆಂಗಳೂರು ೧೭ನೇ ಶತಮಾನದ ಉತ್ತರಾರ್ಧದಲ್ಲಿ ಸ್ವಲ್ಪ ಕಾಲದ ಮಟ್ಟಿಗಾದರೂ ಬಿಜಾಪುರದ ಆದಿಲ್ ಶಾಹಿಗಳು ಹಾಗೂ ಮೊಗಲರ ಆಳ್ವಿಕೆಗೆ ಒಳಗಾಗಿತ್ತು ಎಂಬುದಾಗಿದೆ. ಮೊಗಲರಿಗಿಂತ ಬಿಜಾಪುರದ ಆದಿಲ್‌ಶಾಹಿಗಳ ಆಳ್ವಿಕೆಯ ಪ್ರಭಾವ ಈ ದಿಸೆಯಲ್ಲಿ ಹೆಚ್ಚಾಗಿ ಗುರುತಿಸಬಹುದು. ಅವರ ಆಳ್ವಿಕೆಯ ಪ್ರದೇಶವು ಇಂದಿನ ಉತ್ತರ ಕರ್ನಾಟಕ, ಆಂಧ್ರಪ್ರದೇಶ, ಮತ್ತು ಮಹಾರಾಷ್ಟ್ರದ ಕೆಲವು ಭಾಗಗಳನ್ನು ಒಳಗೊಂಡಿತ್ತು ಎಂಬುದು. ಈ ಮೇಲಿನ ಸಮುದಾಯಗಳು ಬೆಂಗಳೂರಿಗೆ ವಲಸೆ ಬರಲು

ಒಂದಲ್ಲ ಒಂದು ರೀತಿಯಲ್ಲಿ ನೇರವಾಗಿ ಮತ್ತು ಪರೋಕ್ಷವಾಗಿ ಹಾದಿ ಮಾಡಿಕೊಟ್ಟವು. ಈ ನಾಲ್ಕು ಸಮುದಾಯದವರ ಉತ್ಪಾದನೆಯ ಬಟ್ಟೆಗಳು ಅತ್ಯುತ್ತಮ ಗುಣಮಟ್ಟದವು ಮತ್ತು ಶ್ರೀಮಂತಿಕೆಯಿಂದ ಕೂಡಿದ್ದವು ಎಂಬುದು ಗಮನಾರ್ಹ. ಇನ್ನು ದಕ್ಷಿಣ ಭಾರತದ ವಿವಿಧ ಮೂಲಗಳಲ್ಲಿ ಸಾಮಾನ್ಯವಾಗಿ ಪ್ರಸಿದ್ಧವಾಗಿ ಕಂಡುಬರುವ ಮೂಲಗಳೆಂದರೆ ವಿಜಯನಗರ ಮತ್ತು ತಮಿಳುನಾಡಿನೊಡನೆ ಗುರುತಿಸಿಕೊಳ್ಳುವುದು. ವಿಜಯನಗರ ೧೬ನೇ ಶತಮಾನದವರೆಗೂ ಅತ್ಯಂತ ಉಚ್ಛ್ರಾಯ ಸ್ಥಿತಿಯಲ್ಲಿದ್ದ ದಕ್ಷಿಣ ಭಾರತದ ಒಂದು ರಾಜಮನೆತನ. ಜೊತೆಗೆ ಈ ಸಂದರ್ಭದಲ್ಲಿ ವಿದೇಶಿ ವ್ಯಾಪಾರ ವೃದ್ಧಿಯಾದ ನೆಲೆಯಲ್ಲಿ ಒಳನಾಡಿನ ವ್ಯಾಪಾರವು ಹೆಚ್ಚಿತು. ಅನೇಕ ಹೊಸ ನಗರಗಳು, ಪಟ್ಟಣಗಳು ಬೆಳೆದವು. ಇಂತಹ ನಗರ, ಪಟ್ಟಣಗಳಲ್ಲಿ ಅಂದಿನ ಪ್ರಮುಖ ಉದ್ಯಮವಾದ ಬಟ್ಟೆ ತಯಾರಕ ವರ್ಗದವರಾದ ನೇಕಾರರಿಗೆ ಮುಖ್ಯವಾದ ಸ್ಥಾನವಿರುತ್ತಿತ್ತು. ಶೈವ ಮತ್ತು ವೈಷ್ಣವ ಪಂಥದವರಿಬ್ಬರು ಈ ಉದ್ಯಮದಲ್ಲಿ ತೊಡಗಿಕೊಂಡಿದ್ದಕ್ಕೆ ಮೇಲಿನ ಅಂಶಗಳು ಕನ್ನಡಿಯಾಗಿವೆ. ಹಾಗೆ ಅನೇಕ ಸಂದರ್ಭದಲ್ಲಿ ಲಿಂಗಾಯಿತ ನೇಕಾರರು ಎಂಬುದನ್ನು ಕಾಣಬಹುದು. ಇಂದು ಕರ್ನಾಟಕದ ಸಮಾಜದಲ್ಲಿ ಲಿಂಗಾಯಿತರು ಅತ್ಯಂತ ಪ್ರಬಲ ಪ್ರಭಾವಿ ಸಮುದಾಯಗಳಲ್ಲಿ ಒಂದು ಹಾಗೂ ಸಾಮಾಜಿಕವಾಗಿ ಮೇಲ್ವರ್ಗ ಎಂದು ಗುರುತಿಸಲ್ಪಡುವುದು. ಅಂದರೆ ಸಮಾಜದ ಬಹುತೇಕ ವರ್ಗಗಳು ಅಂದು ಉದಯೋನ್ಮುಖ ಉದ್ಯಮವಾಗಿದ್ದ ವಸ್ತ್ರೋದ್ಯಮದ ಕಡೆಗೆ ಮುಖ ಮಾಡಿದ್ದರು ಎನ್ನಬಹುದು. ಜೊತೆಗೆ ದಕ್ಷಿಣ ಭಾರತದ ಮೂಲ ಗುರುತಿಸುವ ಬಹುತೇಕ ನೇಕಾರ ಸಮುದಾಯದವರು ಅವರನ್ನು ಸೆಟ್ಟಿ ಎಂಬ ಪದವನ್ನು ತಮ್ಮ ಹೆಸರಿನೊಂದಿಗೆ ಸೇರಿಸಿಕೊಳ್ಳುತ್ತಿದ್ದರು ಎಂದು ನೋಡುತ್ತೇವೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಸೆಟ್ಟಿ ಎಂಬುದು ಪ್ರಮುಖ ವ್ಯಾಪಾರಿ ಮತ್ತು ಉತ್ಪಾದಕ ಸಮುದಾಯವನ್ನು ಹಾಗೂ ವ್ಯಕ್ತಿಗಳನ್ನು ಗುರುತಿಸಲು ಬಳಸುತ್ತಿದ್ದ ಪದವಾಚಕ. ಹೊಯ್ಸಳರ ಕಾಲದ ಶಾಸನಗಳಲ್ಲಿಯೂ ಆರ್ಥಿಕ ವಿಚಾರಗಳ ಮಾಹಿತಿಯಲ್ಲಿ ಇದರ ಬಳಕೆ ಮೇಲಿನ ವಾದವನ್ನು ಸ್ಪಷ್ಟಪಡಿಸುವುದು. ಒಟ್ಟಿನಲ್ಲಿ ಇವೆಲ್ಲವೂ ಬೆಂಗಳೂರು ನಗರೀಕರಣ ಪ್ರಕ್ರಿಯೆಯ ಕುರಹುಗಳಾಗಿವೆ.

### ಮಾದಿಗರು

ಚರ್ಮದ ಉತ್ಪನ್ನಗಳ ತಯಾರಿಕೆಯಲ್ಲಿ ವೃತ್ತಿ ನಿರತವಾದ ಸಮುದಾಯವಾಗಿದೆ. ಇವರು ಸ್ಥಳೀಯ ಉತ್ಪಾದನಾ ವರ್ತಕ ಸಮುದಾಯದವರು. ನಗರ ಪ್ರದೇಶದಲ್ಲಿ ಇವರು ಕಪ್ಪು ಮತ್ತು ಕೆಂಪು ಬಣ್ಣದ ಚರ್ಮದ ವಸ್ತುಗಳನ್ನು ಉತ್ಪಾದಿಸುತ್ತಿದ್ದರು. ಇವರು ಚರ್ಮವನ್ನು ಉತ್ತಮವಾಗಿ ಹದಗೊಳಿಸುವ ಮತ್ತು ಪಾದರಕ್ಷೆಗಳ ತಯಾರಿಕೆಯಲ್ಲಿ ತೊಡಗಿದವರಾಗಿದ್ದರು. ಚರ್ಮದ ವಸ್ತುಗಳು

ತುಂಬ ಬೆಲೆಬಾಳುತ್ತಿದ್ದಿದ್ದರಿಂದ ತೊಗಲು ಚರ್ಮವನ್ನು ಪೂರೈಸುವ ಕಾರ್ಯದಲ್ಲಿ ನಿರತರಾಗಿರುತ್ತಾರೆ.[೨೫] ಈ ಸಮುದಾಯವನ್ನು ಪ್ರಮುಖವಾಗಿ ಎರಡು ಭಾಗವಾಗಿ ವಿಂಗಂಡಿಸಲಾಗಿದೆ. ದೇಶಾಭಾಗ ಮತ್ತು ಇತರೆ. ಇವರ ನಡುವೆ ಪರಸ್ಪರ ವೈವಾಹಿಕ ಸಂಬಂಧವಿರುವುದಿಲ್ಲ. ದೇಶಾಭಾಗದಲ್ಲಿ ಆರು ಉಪ–ಪಂಗಂಡಗಳಿವೆ. ಬೆಂಗಳೂರು ಪ್ರದೇಶದಲ್ಲಿ ಹೆಚ್ಚಾಗಿ ದೇಶಾಭಾಗದ ಮಾದಿಗರನ್ನು ಕಾಣಬಹುದಾಗಿದೆ.

**ಕುರುಬ**

ಬುಡಕಟ್ಟು ಹೆಸರಾದ ಕುರುಬ ಸಮುದಾಯವು ಒಂದು ಪ್ರಮುಖವಾದ ಉತ್ಪಾದನಾ ಸಮುದಾಯವಾಗಿದೆ. ಇವರು ಇಲ್ಲಿಯ ಮೂಲನಿವಾಸಿಗರು. ಕುರಿ ಕಾಯುವುದು ಇವರ ಪ್ರಧಾನ ವೃತ್ತಿ. ಇವರಲ್ಲಿ ಕಾಡು ಕುರುಬ, ಜೇನು ಕುರುಬ ಮತ್ತು ಊರು ಕುರುಬರು ಎಂಬ ಪಂಗಂಡಗಳಿವೆ. ಬಯಲು ಪ್ರದೇಶಕ್ಕೆ ವಲಸೆ ಬಂದವರು ಕಾಲಾಂತರದಲ್ಲಿ ಇತರೇ ಜನರಂತೆ ಕೃಷಿಯಲ್ಲಿ ತೊಡಗಿದರು. ಇನ್ನು ಕೆಲವರು ತಮ್ಮ ಮೂಲವೃತ್ತಿಯಾದ ಕುರಿ ಪಾಲನೆಯಲ್ಲಿ ನಿರತರಾದರು. ಈ ಸಮುದಾಯವನ್ನು ಊರು ಕುರುಬರು ಎಂದು ಕರೆಯಲಾಗಿದೆ. ಇವರು ಉದ್ಯಮಶೀಲರು. ಇವರು ಕುರಿಗಳನ್ನು ಮೇಯಿಸುವುದು, ಮೇವು ಸಂಗ್ರಹಿಸುವುದು, ಉಣ್ಣೆ ಕತ್ತರಿಸುವುದು, ಉಣ್ಣೆ ಹಿಂಡಿ ನೂಲು ತೆಗೆಯುವುದು, ಉಣ್ಣೆಯ ನೂಲಿನಿಂದ ಕಂಬಳಿ ನೇಯುವುದು ಹಾಗೂ ನೇಯ್ದ ಕಂಬಳಿಗಳನ್ನು ಪೇಟೆಯಲ್ಲಿ ಮಾರಾಟ ಮಾಡುವುದು ಇವರ ವೃತ್ತಿಯಾಗಿದೆ.[೨೬] ಕುರುಬರು ಉತ್ತಮ ದರ್ಜೆಯ ಕಂಬಳಿಗಳನ್ನು ತಯಾರಿಸುತ್ತಿದ್ದರು. ೧೮೯೧ರ ಜನಗಣತಿಯ ಪ್ರಕಾರ ಇವರ ಸಂಖ್ಯೆಯು ಬೆಂಗಳೂರು ಪ್ರದೇಶದಲ್ಲಿ ಶೇಕಡ ೭.೦೧ರಷ್ಟಿತ್ತು. ಅಂದರೆ ಬೆಂಗಳೂರು ಪ್ರದೇಶದಲ್ಲಿ ಸಾಕಷ್ಟು ಗಣನೀಯವಾಗಿ ಹರಡಿದ್ದರು ಎನ್ನಬಹುದು.

**ಪಂಚಾಲರು**

ಬೆಂಗಳೂರು ಪ್ರದೇಶದಲ್ಲಿ ಕಂಡುಬರುವ ಮತ್ತೊಂದು ಪ್ರಮುಖ ಉತ್ಪಾದನಾ ವರ್ತಕ ಸಮುದಾಯಕ್ಕೆ ಸೇರಿದವರು ಪಂಚಾಲರು. ಇವರನ್ನು ೧೯೩೧ರ ಜನಗಣತಿಯಲ್ಲಿ ವಿಶ್ವಕರ್ಮ ಸಮುದಾಯವೆಂದು ಗುರುತಿಸಲಾಗಿದೆ. ಕರಕುಶಲಕರ್ಮಿಗಳ ಸಮುದಾಯವನ್ನು ಪ್ರಾಚೀನ ಕಾಲದಿಂದಲೂ ಪಾಂಚಾಲರು ಎಂದು ಕರೆಯಲಾಗುತಿತ್ತು. ಇವರಲ್ಲಿ ಐದು ವರ್ಗಗಳನ್ನು ಕಾಣಬಹುದು. ಅವುಗಳೆಂದರೆ., ಬಡಗಿ, ಕಂಚುಗಾರ, ಕಮ್ಮಾರ, ಅಕ್ಕಸಾಲಿಗ, ಕಲ್ಲುಗಾರ. ಈ ವರ್ಗಗಳು ಪ್ರತಿನಿಧಿಸುವ ವೃತ್ತಿಗಳು ನಗರದ ಪ್ರತಿ ಹಂತದ ಬೆಳವಣಿಗೆಗೆ ಬೆನ್ನೆಲ್ಲುಬಾಗಿರುವ ಸಮುದಾಯವಾಗಿದೆ. ಈ ಉತ್ಪಾದನಾ ಸಮುದಾಯದವರಲ್ಲಿ ಅಕ್ಕಸಾಲಿಗರು ಮುಖ್ಯಸ್ಥರಾಗಿರುವರು. ಮುಖ್ಯಸ್ಥರ ಅಧಿಕಾರವು ವಂಶ ಪರಂಪರೆಯಾಗಿ ಮುಂದುವರೆಯುತ್ತದೆ. ತಮ್ಮಲ್ಲಿನ ಸಮಸ್ಯೆ,

ಸಂಘರ್ಷಗಳಿಗೆ ಅಕ್ಕಸಾಲಿಗಳೇ ನ್ಯಾಯಾಧೀಶರಾಗಿರುತ್ತಾರೆ. ಈ ಐದು ಪಂಗಡಗಳು ಒಂದೇ ಮೂಲ ಪುರುಷನಿಂದ ಹುಟ್ಟಿಬಂದರೆಂದು ಪೌರಾಣಿಕ ಕಥೆಯಲ್ಲಿ ಹೇಳಲಾಗಿದೆ. ಆದರೂ ಇವರ ವೃತ್ತಿಯು ಬೇರೆ ಬೇರೆಯಾಗಿದೆ. ಜೊತೆಗೆ ಇವರಲ್ಲಿ ಶೈವ ಮತ್ತು ವೈಷ್ಣವ ಪಂಥದವರು ಎಂಬ ಭಿನ್ನತೆಯನ್ನು ಕಾಣಬಹುದು. ಲಿಂಗ ಧರಿಸುವ ಅಕ್ಕಸಾಲಿಗರು ಪಂಚಮ ಬಣಜಿಗರೊಂದಿಗೆ ಯಾವುದೇ ವೈವಾಹಿಕ ಸಂಬಂಧವನ್ನು ಹೊಂದುವುದಿಲ್ಲ. ವಿಶ್ವಕರ್ಮಿಗಳಲ್ಲಿ ಅಕ್ಕಸಾಲಿಗರೇ ಮುಂದುವರೆದ ಸಮುದಾಯವಾಗಿದೆ. ಇದಕ್ಕೆ ಕಾರಣ ಇವರು ಬಹುಪಾಲು ನಗರ-ಪಟ್ಟಣಗಳಲ್ಲಿ ನೆಲೆನಿಂತಿದ್ದು. ಜೊತೆಗೆ ಅಲ್ಲಿನ ಶ್ರೀಮಂತರಿಗೆ ಆಭರಣಗಳನ್ನು ತಯಾರಿಸುವ ಕಾರ್ಯದಲ್ಲಿ ತೊಡಗಿದೆ. ತಮ್ಮ ಹೆಸರಿನೊಂದಿಗೆ ಆಚಾರ್/ಆಚಾರಿ ಎಂಬ ಪದನಾಮವನ್ನಿಟ್ಟುಕೊಳ್ಳುತ್ತಾರೆ.[೩೭] ೧೮೯೧ರ ಜನಗಣತಿಯ ಪ್ರಕಾರ ಅಕ್ಕಸಾಲಿಗರ ಸಂಖ್ಯೆಯು ಬೆಂಗಳೂರಿನಲ್ಲಿ ೧.೯೯ರಷ್ಟಿತ್ತು. ಹಾಗೆ ಕ್ರಮವಾಗಿ ಕಮ್ಮಾರ, ಬಡಿಗ ಮತ್ತು ಕಂಚುಗಾರರ ಸಂಖ್ಯೆಯು ೦.೧೩, ೦.೧೭, ಮತ್ತು ೦೧ರಷ್ಟಿತ್ತು. ಸಂಖ್ಯಾವಾರು ಸಹ ಅಕ್ಕಸಾಲಿಗರು ಉಳಿದವರಿಗಿಂತ ಹೆಚ್ಚಾಗಿರುವುದನ್ನು ಗುರುತಿಸಬಹುದು.

**ಕಮ್ಮಾರರು**

ಕಮ್ಮಾರ, ಬಡಗಿ ಮತ್ತು ಅಕ್ಕಸಾಲಿಗರು ಈ ಮೂರು ಸಮುದಾಯಗಳು ಸಹ ಒಬ್ಬರಿಗೊಬ್ಬರು ಪೂರಕವಾಗಿ ಕಾರ್ಯನಿರ್ವಹಿಸುತ್ತಾರೆ. ಕೃಷಿ ಚಟುವಟಿಕೆಗಳಿಗೆ ಬೇಕಾದ ಉಪಕರಣಗಳನ್ನು ಇವರು ತಯಾರಿಸಿಕೊಡುತ್ತಾರೆ ಮತ್ತು ಮನೆಗೆ ಬೇಕಾದ ವಸ್ತುಗಳನ್ನು ತಯಾರಿಸಿಕೊಡುತ್ತಾರೆ. ಬೆಂಗಳೂರು ಪ್ರದೇಶದಲ್ಲಿ ಮುಸ್ಲಿಂ ಸಮುದಾಯವು ಕಬ್ಬಿಣದ ಉಪಕರಣಗಳ ತಯಾರಿಕೆಯಲ್ಲಿ ತೊಡಗಿಸಿ ಕೊಂಡಿರುವುದನ್ನು ಕಾಣಬಹುದು. ೧೯ನೇ ಶತಮಾನದಲ್ಲಿ ಆಧುನಿಕ ಯಂತ್ರಗಳ ಮೂಲಕ ತಯಾರಿಗೊಂಡ ನೇಗಿಲಾದ ಕೋಲಾರ್ ಮಿಷನ್ ನೇಗಿಲು ಎಂದೇ ಖ್ಯಾತಿ ಹೊಂದಿದ್ದ ನೇಗಿಲುಗಳನ್ನು ಅಮೆರಿಕದಿಂದ ಆಮದು ಮಾಡಿಕೊಂಡು ಮೈಸೂರಿನ ಪ್ರದೇಶಗಳಲ್ಲಿ ಮಾರಾಟ ಮಾಡಲಾಗುತ್ತಿತ್ತು. ಆಗ ಜನಪ್ರಿಯಗೊಂಡಿದ್ದ ಕೋಲಾರ್ ಮಿಷನ್ ನೇಗಿಲು ಮಾದರಿಯನ್ನು ಬೆಂಗಳೂರಿನ ಕಮ್ಮಾರರು ಅನುಸರಿಸಿ ಸ್ಥಳೀಯವಾಗಿ ತಾವೇ ತಯಾರಿಸಿ ಪ್ರತಿವರ್ಷ ಹೆಚ್ಚಿನ ಸಂಖ್ಯೆಯ ನೇಗಿಲುಗಳನ್ನು ಮಾರಲಾರಂಭಿಸಿದರು. ನೇಗಿಲಿನ ಬಿಡಿಭಾಗಗಳನ್ನು ಕಮ್ಮಾರರು ಮಾಡಿ ಮಾರಾಟ ಮಾಡುತ್ತಿದ್ದರು.[೩೮] ಇದೆಲ್ಲವು ಬೆಂಗಳೂರು ಪ್ರದೇಶದ ಕಮ್ಮಾರರ ನೈಪುಣ್ಯತೆಗೆ ಉದಾಹರಣೆ. ಅಲ್ಲದೇ ಬುಕನಾನ್ ಕೂಡ ಮೈಸೂರು ರಾಜ್ಯದ ಕಮ್ಮಾರರ ಕೌಶಲ್ಯತೆಯನ್ನು ವರದಿ ಮಾಡಿರುವುದನ್ನು ಗಮನಿಸಬಹುದು.

**ಬಡಗಿ**

ವಿಶ್ವಕರ್ಮಿಗಳಲ್ಲಿ ಬಡಗಿಗಳು ಸಹ ಒಂದು ಉಪಪಂಗಡವಾದ್ದು, ಗ್ರಾಮ ಮತ್ತು ಪಟ್ಟಣಗಳಲ್ಲಿ ಬಹಳ ಬೇಡಿಕೆ ಇರುವ ಉತ್ಪಾದಕ ವಿನಿಮಯ ಸಮುದಾಯವಾಗಿದೆ. ಇವರು ಸಹ ಅಕ್ಕಸಾಲಿಗರಿಗೆ

ಮತ್ತು ಕಮ್ಮಾರರಿಗೆ ಪೂರಕವಾಗಿ ಕಾರ್ಯನಿರತರಾಗಿರುತ್ತಾರೆ. ಬೆಂಗಳೂರು ನಗರದಲ್ಲಿ ಕೆಲವು ಮುಸ್ಲಿಂ ಸಮುದಾಯದವರು ಮರಗೆಲಸದಲ್ಲಿ ತೊಡಗಿಸಿಕೊಂಡಿದ್ದರು. ಬೆಂಗಳೂರು ಪ್ರದೇಶದಲ್ಲಿ ೧೮೭೧ರ ಜನಗಣತಿಯ ಪ್ರಕಾರ, ಅಕ್ಕಸಾಲಿಗರ ಸಂಖ್ಯೆ ಒಟ್ಟು ಜನಸಂಖ್ಯೆ ಶೇಕಡ ೧.೯. ಹಾಗೆ ಬಡಗಿಗಳ ಸಂಖ್ಯೆ ೦.೧೭. ಅಂದರೆ ಬಡಗಿಗಳು ಸಂಖ್ಯಾವಾರು ಕಡಿಮೆ ಕಂಡುಬರುವರು. ಆದರೆ ಇಲ್ಲಿ ಗಮನಿಸಬೇಕಾದ ವಿಚಾರವೆಂದರೆ ವಿಶ್ವಕರ್ಮಿ ಸಮುದಾಯದ ಬಹುತೇಕ ಕಾರ್ಯಗಳಲ್ಲಿ ಸ್ಥಳೀಯ ಮುಸ್ಲಿಂ ಸಮುದಾಯವು ಕೌಶಲ್ಯವನ್ನು ಸಾಧಿಸಿದ್ದವು. ಹಲವರು ಈ ಕಾರ್ಯಗಳಲ್ಲಿ ತೊಡಗಿ ಕೊಂಡಿದ್ದರು.

### ದರ್ಜಿ

ಇವರು ಮಹಾರಾಷ್ಟ್ರದಿಂದ ವಲಸೆ ಬಂದವರು. ವಿಠೋಬನನ್ನು ಆರಾಧಿಸುವವರು. ಇವರಲ್ಲಿ ನಾಮ್‌ದೇವ್, ಚಿಪ್ಪಿಗ, ರಂಗಾರೆ ಎಂಬ ಅನೇಕ ಉಪ ಪಂಗಡಗಳಿವೆ. ಇವರು ಬಣ್ಣ ಹಾಕುವುದು, ಕ್ಯಾಲಿಯೋ ಚಿತ್ರಬಿಡುವುದು, ಹೊಲಿಯುವುದು ಮತ್ತಿತರ ಕೆಲಸಗಳನ್ನು ಪ್ರಮುಖ ವೃತ್ತಿಯಾಗಿಸಿ ಕೊಂಡಿರುವರು.[೩೯] ಬೆಂಗಳೂರು ಪ್ರದೇಶದಲ್ಲಿ ದರ್ಜಿ ಸಮುದಾಯಗಳು ಸಹ ಒಂದು ಪ್ರಮುಖ ಸಮುದಾಯವಾಗಿದೆ. ಬಿಜಾಪುರ ಆದಿಲ್‌ಶಾಹಿಗಳು ಬೆಂಗಳೂರನ್ನು ವಶಪಡಿಸಿಕೊಂಡ ಸಂದರ್ಭದಲ್ಲಿ ಮರಾಠ ಸಮುದಾಯಕ್ಕೆ ಸೇರಿದ ಅನೇಕ ರೀತಿಯ ಕಸುಬುಗಾರರು ಬೆಂಗಳೂರಿಗೆ ವಲಸೆ ಬಂದರು. ಅವರಲ್ಲಿ ಮೇಲೆ ಹೇಳಿದ ಉಪಪಂಗಡಗಳ ಪ್ರಧಾನ ವೃತ್ತಿ ಬಟ್ಟೆ ಹೊಲಿಯುವುದು. ಇವರಲ್ಲಿ ರಂಗಾರಿಗಳು ಬಟ್ಟೆಗಳಿಗೆ ಬಣ್ಣಹಾಕುವ ಕಾರ್ಯದಲ್ಲಿ ನಿರತರಾಗಿರುತ್ತಾರೆ. ಈ ಸಮುದಾಯಗಳು ಬೆಂಗಳೂರು ನಗರದ ದರ್ಜಿ ಪೇಟೆಯಲ್ಲಿ ಕಂಡುಬರುವರು. ಬೆಂಗಳೂರು ಪೇಟೆಗಳಲ್ಲಿ ದರ್ಜಿ ಪೇಟೆಯು ಒಂದು ಪ್ರಮುಖ ಪೇಟೆಯಾಗಿತ್ತು ಎಂಬುದು ಗಮನಾರ್ಹ. ಇವರು ಬೆಂಗಳೂರಿನ ಸೈನಿಕರು ಮತ್ತು ಶ್ರೀಮಂತರಿಗೆ ಬೇಕಾದ ರೀತಿಯ ಬಟ್ಟೆಗಳನ್ನು ಹೊಲಿದು ಕೊಡುತ್ತಿದ್ದರು. ಅಂದರೆ ಬೆಂಗಳೂರು ಪೇಟೆ ಮತ್ತು ದಂಡಿನ ಪ್ರದೇಶದ ಅಗತ್ಯಗಳನ್ನು ಪೂರೈಸಲು ಬಂದು ನೆಲೆಸಿದ ವರ್ಗ ಎನ್ನಬಹುದು.

### ಕೊರಮರು

ಈ ಪ್ರದೇಶದಲ್ಲಿ ಕಂಡುಬರುವ ಉತ್ಪಾದನಾ ವರ್ತಕ ಸಮುದಾಯವಾಗಿದೆ. ಇವರು ಬುಟ್ಟಿ ತಯಾರಿಕೆಯಲ್ಲಿ ನಿರತರಾದ ಸಮುದಾಯವಾಗಿದೆ. ಜನ ಸಾಮಾನ್ಯರಿಗೆ ಮತ್ತು ಕೃಷಿಕರಿಗೆ ಬೇಕಾದ ದೊಡ್ಡ ಮಕ್ಕರಿ, ಬುಟ್ಟಿ, ಮೊರ, ಸಿಬ್ಬಿಲು ತಯಾರಕರು.[೪೦] ಇವರಲ್ಲಿ ಕೆಲವರು ಉಪ್ಪು ಮಾರಾಟದಲ್ಲಿಯೂ ತೊಡಗಿಸಿಕೊಂಡಿದ್ದರು. ಹಣ್ಣು, ತರಕಾರಿ, ಧಾನ್ಯಗಳು ಮತ್ತಿತರ ವಸ್ತುಗಳ

ಸಾಗಾಣಿಕೆಯ ಸಂದರ್ಭದಲ್ಲಿ ದೊಡ್ಡ ದೊಡ್ಡ ಮಕ್ಕರಿ, ಬುಟ್ಟಿಗಳನ್ನು ಅವಲಂಬಿಸ ಬೇಕಾಗುತ್ತಿತ್ತು. ಈ ಹಿನ್ನೆಲೆಯಲ್ಲಿ ಕೊರಮ ಉತ್ಪಾದನಾ ವರ್ತಕ ಸಮುದಾಯವು ಇತರ ಎಲ್ಲ ಸಮುದಾಯಗಳಂತೆ ಬೆಂಗಳೂರು ನಗರ ಪ್ರದೇಶದ ನಗರೀಕರಣ ಪ್ರಕ್ರಿಯೆಯಲ್ಲಿ ಪ್ರಮುಖ ಪಾತ್ರ ವಹಿಸಿದೆ. ಇವರು ಬೆಂಗಳೂರು ಪೇಟೆ ಮತ್ತು ದಂಡು ಪ್ರದೇಶದ ಸಮೀಪ ನೆಲೆಸುತ್ತಿದ್ದರು. ಈ ವಸ್ತುಗಳು ಸಾಗಾಣಿಕೆ ಮಾತ್ರವಲ್ಲದೇ ಆ ಸಂದರ್ಭದಲ್ಲಿ ಗೃಹ ಉಪಯೋಗದಲ್ಲಿಯೂ, ವಸ್ತುಗಳ ಸಂಗ್ರಹಣೆಗೂ ಬೇಕಾಗುತ್ತಿತ್ತು. ದೊಡ್ಡ ದೊಡ್ಡ ಆಳಿನೆತ್ತರದ ಗೂಡೆಗಳಲ್ಲಿ ಆಹಾರವನ್ನು ಸಂಗ್ರಹಿಸುವುದು ಹಳ್ಳಿಗಳಲ್ಲಿ ಇಂದಿಗೂ ಅಲ್ಲಲ್ಲಿ ಕಂಡುಬರುವ ಸಂಗ್ರಹಣಾ ವಿಧಾನವಾಗಿದೆ.

### ೪.೨. ವಿನಿಮಯ ವರ್ತಕ ಸಮುದಾಯಗಳು

ವಿನಿಮಯ ವ್ಯಾಪಾರ ವೃತ್ತಿಯಿಂದಲೇ ಬದುಕನ್ನು ನಡೆಸುತ್ತಿರುವ ವರ್ತಕರನ್ನು ವಿನಿಮಯ ವರ್ತಕರೆಂದು ಕರೆಯಲಾಗಿದೆ. ಉತ್ಪಾದನಾ ವರ್ತಕ ಸಮುದಾಯಗಳಿಗಿಂತ ವಿನಿಮಯ ವರ್ತಕ ಸಮುದಾಯವು ಪ್ರಬಲವಾದ ಸಮುದಾಯವಾಗಿದೆ. ಉತ್ಪಾದನಾ ವರ್ತಕ ಸಮುದಾಯಗಳು ಬಹುಪಾಲು ವಿನಿಮಯ ವರ್ತಕ ಸಮುದಾಯಗಳ ಹಿಡಿತದಲ್ಲಿರುತ್ತಾರೆ. ಕಾರಣ ಉತ್ಪಾದನಾ ವರ್ತಕ ಸಮುದಾಯದ ಉತ್ಪಾದನೆಗಳನ್ನು ಗ್ರಾಹಕರಿಗೆ ತಲುಪಿಸುವ ಕಾರ್ಯವನ್ನು ವಿನಿಮಯ ವರ್ತಕರು ನಿರ್ವಹಿಸುವರು. ಅಲ್ಲದೆ, ಅವರ ಉತ್ಪಾದನೆಗೆ ಬಂಡವಾಳವನ್ನು ಒದಗಿಸುವ ಕಾರ್ಯವನ್ನು ನಿರ್ವಹಿಸುತ್ತಾರೆ. ಈ ವಿಚಾರವನ್ನು ಬುಕಾನನ್ ತನ್ನ ವರದಿಯಲ್ಲಿ ಸವಿಸ್ತಾರವಾಗಿ ವಿವರಿಸಿದ್ದಾನೆ. ಪ್ರಭುತ್ವವು ಸಹ ಈ ವರ್ಗ ಸಮುದಾಯಗಳಿಗೆ ವಿಶೇಷ ಸೌಲಭ್ಯಗಳನ್ನು ನೀಡಿ ಪ್ರೋತ್ಸಾಹಿಸುತ್ತದೆ. ಈ ವರ್ತಕ ಸಮುದಾಯಗಳು ಸ್ಥಳೀಯವಾಗಿ ವ್ಯಾಪಾರ ಮಾಡುವ ಮತ್ತು ಪ್ರದೇಶದಿಂದ ಪ್ರದೇಶಗಳಿಗೆ ತೆರಳಿ ಉತ್ಪಾದನೆಗಳನ್ನು ವಿಕ್ರಯಿಸುವ ಕಾರ್ಯದಲ್ಲಿ ನಿರತವಾಗಿರುತ್ತದೆ. ಈ ಪ್ರಬಂಧವು ವಸಹಾತು ಕಾಲಘಟ್ಟದ ಬೆಂಗಳೂರನ್ನು ಕುರಿತು ಮುಖ್ಯವಾಗಿ ಅಧ್ಯಯನಕ್ಕೆ ಒಳಪಡಿಸಿದೆ. ಈ ಅಧ್ಯಯನದ ಅನುಕೂಲಕ್ಕಾಗಿ ಬೆಂಗಳೂರಿನ ವಿನಿಮಯ ವರ್ತಕ ಸಮುದಾಯಗಳನ್ನು ಎರಡು ಭಾಗವಾಗಿ ವರ್ಗೀಕರಿಸಲಾಗಿದೆ. ಮೊದಲನೆಯದು ಹೊರ ರಾಜ್ಯಗಳ ವಿನಿಮಯ ವರ್ತಕರ ಸಮುದಾಯಗಳು ಮತ್ತು ಎರಡನೆಯದು ವಿದೇಶಿಯ ವಿನಿಮಯ ವರ್ತಕ ಸಮುದಾಯಗಳು. ಈ ಸಮುದಾಯಗಳು ವಸಹಾತು ಕಾಲಘಟ್ಟದಲ್ಲಿ ಬೆಂಗಳೂರು ಪ್ರದೇಶದಲ್ಲಿ ಕಂಡುಬರುವುದು ಈ ಪ್ರದೇಶವನ್ನು ಒಂದು ವಿನಿಮಯ ಕೇಂದ್ರವಾಗಿ (ಇಂಟರ್ ಪೋರ್ಟ್) ಬೆಳವಣಿಗೆ ಹೊಂದಿರುವ ಲಕ್ಷಣಕ್ಕೆ ಕನ್ನಡಿಯಾಗಿದೆ. ಈ ಕಾಲಾವಧಿಯಲ್ಲಿ ಹೊರ ರಾಜ್ಯಗಳಿಂದ ವಲಸೆ ಬರುವ ವಿನಿಮಯ ವರ್ತಕ ಸಮುದಾಯಗಳ ಸಂಖ್ಯೆಯು ಹೆಚ್ಚಿತು. ಇದಕ್ಕೆ ಕಾರಣ ಅನುಕೂಲಕರವಾದ ವಾತಾವರಣ, ಉತ್ತಮ ಸಾರಿಗೆ–ಸಂಕರ್ಪ, ರಾಜಧಾನಿಯ ಪಟ್ಟ, ದಂಡು ಪ್ರದೇಶ, ಉತ್ತಮ ಆಡಳಿತ ವ್ಯವಸ್ಥೆ ಮುಂತಾದವುಗಳು

ಎಂದು ಉಲ್ಲೇಖಿಸಬಹುದಾಗಿದೆ. ಆರಂಭದಲ್ಲಿ ಹೊರ ರಾಜ್ಯಗಳಿಂದ ಬರುವ ವಿನಿಮಯ ವರ್ತಕರು ವ್ಯಾಪಾರವನ್ನು ಮಾಡಿ ತಮ್ಮ ಮೂಲ ಸ್ಥಳಕ್ಕೆ ಹಿಂದಿರುಗುತ್ತಿದ್ದರು. ಇದರಿಂದಾಗಿ ಜನಗಣತಿಯ ಸಂದರ್ಭದಲ್ಲಿ ಇವರ ಬಗೆಗೆ ಹೆಚ್ಚು ಅಂಕಿ–ಸಂಖ್ಯೆಗಳು ಸಿಗುವುದಿಲ್ಲ, ಇದು ಅವರ ಸಂಖ್ಯೆ ಮತ್ತು ವ್ಯಾಪಾರ ವಹಿವಾಟಿನ ಪ್ರಮಾಣದ ಬಗೆಗೆ ನಿಖರವಾಗಿ ತಿಳಿಯಲು ಇರುವ ಪ್ರಮುಖ ತೊಡಕಾಗಿದೆ. ಆದರೆ ಸ್ಥಳೀಯ ವರ್ತಕರಂತೆ ಅಂಕಿ ಸಂಖ್ಯೆಗಳನ್ನು ನೀಡದಿದ್ದರೂ ಈ ಸಮುದಾಯದ ವಿಚಾರಗಳು ಸಮಕಾಲೀನ ಜನಗಣತಿಯಲ್ಲಿ ಉಲ್ಲೇಖಿತಗೊಂಡಿದೆ. ಈ ಸಮುದಾಯಗಳು ಬೆಂಗಳೂರು ಪ್ರದೇಶದ ಆರ್ಥಿಕತೆಯ ಮೇಲೆ ಹೊಂದಿದ್ದ ಹಿಡಿತ ಮತ್ತು ಪ್ರಾಮುಖ್ಯತೆಯನ್ನು ತಿಳಿಸುತ್ತದೆ. ಕೆಲವೊಮ್ಮೆ ಅಂಕಿ ಅಂಶ ದೊರೆಯುವುದಾದರೂ ಅತ್ಯಂತ ಕಡಿಮೆ ಇದ್ದು, ಅದರಿಂದ ನಿಖರವಾದ ನಿರ್ಧಾರಕ್ಕೆ ಬರಲು ಸಾಧ್ಯವಾಗುವುದಿಲ್ಲ. ಜೊತೆಗೆ ಹಲವು ಬಗೆಯ ಸಮಕಾಲೀನ ಸಾಹಿತ್ಯ, ಪ್ರವಾಸಿ ಕಥನಗಳಲ್ಲಿ ಹೊರರಾಜ್ಯಗಳಿಂದ ಬಂದ ಈ ವಲಸಿಗರ, ವ್ಯಾಪಾರಸ್ಥರ ಬಗೆಗೆ ಸಾಕಷ್ಟು ಮಾಹಿತಿ ಸಿಗುತ್ತವೆ. ಆದರೂ ಇವು ಸಹ ಪ್ರತಿ ಸಮುದಾಯಗಳ ಅಂಕಿ–ಸಂಖ್ಯೆಯನ್ನು ನೀಡುವುದಿಲ್ಲ. ಹೀಗೆ ಹೊರ ರಾಜ್ಯಗಳಿಂದ ಬಂದ ವಿನಿಮಯ ವರ್ತಕರಲ್ಲಿ ಕೆಲವು ಸಮುದಾಯಗಳು ಪ್ರಭುತ್ವದೊಡನೆ ಉತ್ತಮ ಸಂಬಂಧವನ್ನು ಸಾಧಿಸುವಲ್ಲಿ ಯಶಸ್ವಿಯಾದವು. ಅವು ಪ್ರಭುತ್ವದಿಂದ ಅನೇಕ ಬಗೆಯ ಸೌಕರ್ಯ ಸೌಲಭ್ಯಗಳನ್ನು ಪಡೆದ ಪರಿಣಾಮವಾಗಿ ವ್ಯಾಪಾರ–ವಾಣಿಜ್ಯ ಅಭಿವೃದ್ಧಿ ಹೊಂದಿತು. ಉತ್ತಮ ರೂಪದಲ್ಲಿ ವ್ಯಾಪಾರ ವಾಣಿಜ್ಯ ಗರಿಗೆದರಿದ ನಂತರ ಇಲ್ಲೇ ಪೂರ್ಣ ರೂಪದಲ್ಲಿ ನೆಲೆ ನಿಂತರು. ಇದನ್ನು ಸಮಕಾಲೀನ ಆಡಳಿತದ ಅನೇಕ ದಾಖಲೆಗಳು ಸ್ಪಷ್ಟಪಡಿಸುತ್ತವೆ. ಇಂತಹ ಸಮುದಾಯಗಳಿಗೆ ಉದಾಹರಣೆಗಳೆಂದರೆ ಗುಜರಾತಿಗಳು, ಮಾರ್ವಾಡಿ, ಪಾರ್ಸಿ, ಮೊದಲಿಯಾರ್, ಪಠಾನ, ಲಬ್ಬೆ ಮೊದಲಾದವರು. ೨೦ನೇ ಶತಮಾನದ ಜನಗಣತಿಯಲ್ಲಿ ಈ ಸಮುದಾಯಗಳ ಸಂಖ್ಯೆ ಏರುಮುಖವಾಗಿ ಸಾಗುವುದನ್ನು ಕಾಣಬಹುದಾಗಿದೆ.

ಈ ಅಧ್ಯಯನದಲ್ಲಿ ಕಂಡುಬರುವ ಮತ್ತೊಂದು ಪ್ರಮುಖ ತೊಡಕು ಎಂದರೆ ಪ್ರಮುಖ ವಿನಿಮಯ ವರ್ತಕರು ವಲಸಿಗರಾಗಿರುವುದು. ಹಾಗಾದರೆ ಸ್ಥಳೀಯ ವಿನಿಮಯ ವರ್ತಕರು ಇರಲಿಲ್ಲವೇ ಮತ್ತು ವಲಸಿಗರನ್ನು ಬೆಂಗಳೂರು ಪ್ರದೇಶದ ವಿನಿಮಯ ವರ್ತಕರು ಎಂದು ಗುರುತಿಸುವುದು ಸರಿಯೇ ಎಂಬ ಪ್ರಶ್ನೆ ಉದ್ಭವಿಸುವುದು. ಜೊತೆಗೆ ಸ್ಥಳೀಯವಾಗಿದ್ದ ಕೆಲವು ಪ್ರಮುಖ ಉತ್ಪಾದನಾ ವರ್ತಕರು ವಿನಿಮಯ ವರ್ತಕರಾಗಿರಲಿಲ್ಲವೇ ಎಂಬುದಾಗಿದೆ. ಉದಾಹರಣೆಗೆ ನಗರ್ತರು, ಶೆಟ್ಟರು, ಬಣಜಿಗರು. ಇವರ ಕಾರ್ಯ ಚಟುವಟಿಕೆಗಳನ್ನು ಕಂಡಾಗ ಸ್ಥಳೀಯ ವಿನಿಮಯ ವರ್ತಕರ ರೂಪದಲ್ಲಿ ಕಂಡುಬರುವರು. ಈ ಅಧ್ಯಯನದಲ್ಲಿ ಬೆಂಗಳೂರು ಕೆಂಪೇಗೌಡನಿಂದ ಸ್ಥಾಪಿತಗೊಂಡ ಕಾಲದಿಂದ ಆರಂಭಿಕ ಒಡೆಯರ ಕಾಲದಲ್ಲಿ ಶಾಸನಗಳಲ್ಲಿ, ಇನ್ನಿತರ ದಾಖಲೆಗಳಲ್ಲಿ

ಗುರುತಿಸಿಕೊಂಡಿರುವ ವಿನಿಮಯ ವರ್ತಕರನ್ನು ಸ್ಥಳೀಯರೆಂದು ವಿನಿಮಯ ವರ್ತಕರೆಂದು ಪರಿಗಣಿಸಲಾಗಿದೆ. ಇವರು ಒಂದು ಕಾಲದಲ್ಲಿ ಬೇರೆ ಕಡೆಯಿಂದ ವಲಸೆ ಬಂದಿದ್ದು, ಇಲ್ಲಿ ನೆಲೆನಿಂತವರೇ ಆಗಿರುವರು. ಆದರೆ ಇವರ ಕಾರ್ಯಚಟುವಟಿಕೆಯ ವಿಸ್ತೀರ್ಣ ಕಡಿಮೆ ಇದೆ. ಒಟ್ಟಾರೆಯಾಗಿ, ವಿನಿಮಯ ವರ್ತಕ ಸಮುದಾಯಗಳು ವಲಸೆಗಾರರಾಗಿಯೇ ಇರುವುದು ಸರ್ವೆಸಾಮಾನ್ಯವಾಗಿ ಕಂಡುಬರುವ ಒಂದು ಲಕ್ಷಣ. ಜೊತೆಗೆ ಉತ್ಪಾದನಾ ವರ್ತಕರು ಮತ್ತು ವಿನಿಮಯ ವರ್ತಕರನ್ನು ಪೂರ್ಣವಾಗಿ ವಿಂಗಡಿಸಲು ಸಾಧ್ಯವಾಗುವುದಿಲ್ಲ. ಕೆಲವೊಮ್ಮೆ ಉತ್ಪಾದನಾ ವರ್ತಕರಲ್ಲಿನ ಕೆಲವು ಸಮುದಾಯಗಳು ವಿನಿಮಯ ವರ್ತಕರಾಗಿಯು ಕಾರ್ಯ ನಿರ್ವಹಿಸುದ್ದವು. ಇವುಗಳನ್ನು ಗಮನಿಸುತ್ತಾ ಬೆಂಗಳೂರು ಪ್ರದೇಶದ ನಗರೀಕರಣದಲ್ಲಿ ವಿನಿಮಯ ವರ್ತಕ ಸಮುದಾಯಗಳ ಪಾತ್ರವನ್ನು ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

**ಬಣಜಿಗ**

ಬಣಜಿಗರು ಬೆಂಗಳೂರು ಪ್ರದೇಶದಲ್ಲಿ ಪ್ರಧಾನವಾಗಿ ಕಂಡುಬರುತ್ತಾರೆ. ಬಣಜಿಗ ಎಂಬ ಪದವು ವಣಿಕ, ವಾಣಿಜ್ಯ, ವರ್ತಕ ಎಂಬ ಅರ್ಥವನ್ನು ನೀಡುತ್ತದೆ. ಇವರಲ್ಲಿ ಶೇಕಡ ೬೨ರಷ್ಟು ಭಾಗ ವ್ಯಾಪಾರ-ವ್ಯವಹಾರಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಈ ಸಮುದಾಯವನ್ನು ಪ್ರಮುಖವಾಗಿ ೩ ಪಂಗಂಡಗಳಾಗಿ ವಿಂಗಡಿಸಲಾಗಿದೆ. ಅವುಗಳೆಂದರೆ., ಪಂಚಮ ಬಣಜಿಗರು, ಜೈನ ಬಣಜಿಗರು ಮತ್ತು ತೆಲುಗು ಬಣಜಿಗರು. ಬೆಂಗಳೂರು ಪ್ರದೇಶದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ತೆಲುಗು ಮತ್ತು ಪಂಚಮ ಬಣಜಿಗರು ಕಂಡುಬರುವವರು ಹಾಗೂ ಹೆಚ್ಚು ಪ್ರಾಮುಖ್ಯತೆಯನ್ನು ಹೊಂದಿದ್ದ ವರ್ಗವಾಗಿದೆ. ಅದರಲ್ಲಿಯೂ ತೆಲುಗು ಬಣಜಿಗರಲ್ಲಿ ಶೇಕಡ ೬೪ರಷ್ಟು ಭಾಗ ವ್ಯಾಪಾರ ವಾಣಿಜ್ಯದಲ್ಲಿ ತೊಡಗಿಸಿ ಕೊಂಡಿತ್ತಾರೆ.[೪೧] ಇವರು ಕನ್ನಡ ಮತ್ತು ತೆಲುಗು ಭಾಷೆಯನ್ನಾಡುವ ವರ್ತಕ ಸಮುದಾಯದವರು. ಬಹುಪಾಲು ಇವರಲ್ಲಿ ವರ್ತಕ ವೃತ್ತಿಯನ್ನು ಪಾಲಿಸುವವರು. ಕೆಲವರು ಮಾತ್ರ ಕೃಷಿಕರಾಗಿದ್ದರು. ತೆಲುಗು ಬಣಜಿಗರಲ್ಲಿ ಹಲವು ಉಪಪಂಗಂಡಗಳಿವೆ. ೧. ದಾಸ ಬಣಜಿಗರು, ೨. ಎಲೆ ಅಥವಾ ತೋಟ ಬಣಜಿಗರು, ೩. ದುಡಿ ಬಣಜಿಗರು(ಇವರು ಹತ್ತಿ ವ್ಯಾಪಾರ ಮಾಡುವವರು), ೪. ಗಾಜಿಲ ಬಣಜಿಗರು(ಬಳೆ ಮಾರಾಟಗಾರರು). ಇವರಲ್ಲಿ ಎಲೆ ಮತ್ತು ದಾಸ ಬಣಜಿಗರು ಇವರು ವೀಳ್ಯದೆಲೆಯ ಬೆಳೆಗಾರರು ಮತ್ತು ಮಾರಾಟಗಾರರಾಗಿದ್ದು, ಇದರ ಉಪ ಪಂಗಡದವರು ಹೆಚ್ಚಾಗಿ ಕನ್ನಡ ಮಾತನಾಡುತ್ತಾರೆ. ಬಣಜಿಗರು ಬಲಗೈ ವರ್ತಕ ಸಮುದಾಯಗಳಿಗೆ ಮುಖ್ಯಸ್ಥರಾಗಿದ್ದು. ಸಮಾಜದಲ್ಲಿ ಪ್ರಬಲ ವರ್ಗವಾಗಿತ್ತು. ಇವರನ್ನು ದೇಶದ ಸೆಟ್ಟಿ ಎಂದು ಕರೆಯಲಾಗಿತ್ತಿತ್ತು.[೪೨] ಇವರು ಬೆಂಗಳೂರು ಪೇಟೆಯ ಪ್ರಮುಖ ವ್ಯಾಪಾರಿ ಪೇಟೆ ಬೀದಿಗಳಾದ ನಗರ್ತ ಪೇಟೆ ಮತ್ತು ಮನವಾರ್ತ ಪೇಟೆಗಳಲ್ಲಿ ನೆಲೆಸಿ ನಂತರ ದಂಡು ಪ್ರದೇಶ ಹಾಗೂ ಬೆಂಗಳೂರಿನ ಪ್ರಮುಖ

ವ್ಯಾಪಾರಿ ಪ್ರದೇಶಗಳಲ್ಲಿ ನೆಲೆನಿಂತರು. ಬಳೆ ಪೇಟೆ ಮತ್ತು ಅರಳೇ ಪೇಟೆ ಒಳಗೊಂಡಂತೆ ಬೆಂಗಳೂರು ಪೇಟೆಯ ಪ್ರಮುಖ ಬೀದಿಗಳಲ್ಲಿ ಕಚ್ಚಾ ಹತ್ತಿ, ರೇಷ್ಮೆ, ಬಳೆ ಮುಂತಾದವುಗಳ ಆಮದು, ರಫ್ತು ಮತ್ತು ಸಾಗಾಣಿಕೆ ಮಾಡುವ ವ್ಯವಹಾರದಲ್ಲಿ ತೊಡಗಿಸಿಕೊಂಡಿರುತ್ತಾರೆ. ಬೆಂಗಳೂರು ಪೇಟೆಯಲ್ಲಿ ಕಂಡುಬರುವ ಪ್ರಧಾನ ವರ್ತಕರಾಗಿ ಕಂಡುಬರುತ್ತಾರೆ. ಇವರಲ್ಲಿ ಸೆಟ್ಟಿಗಳೆಂಬ ಪದನಾಮ ಹೊಂದಿದ್ದರು, ಬಟ್ಟೆ ವ್ಯಾಪಾರದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುತ್ತಾರೆ.[೪೩] ಬೆಂಗಳೂರಿನ ಪ್ರದೇಶದಲ್ಲಿ ೧೯ನೇ ಶತಮಾನದ ಆರಂಭದವರೆಗೂ ಬಣಜಿಗರ ಸಮುದಾಯವು ಪ್ರಮುಖವಾದ ವಿನಿಮಯ ವರ್ತಕ ಸಮುದಾಯವಾಗಿತ್ತು. ನರೇಂದ್ರ ಪಾಣಿಯವರು ತಿಳಿಸುವಂತೆ ಜವಳಿ ಉದ್ಯಮದಲ್ಲಿ ಪ್ರಬಲ ವ್ಯವಹಾರಸ್ಥರೆಂದು ಕರೆಸಿಕೊಂಡಿದ್ದರು. ಬೆಂಗಳೂರು ಪ್ರದೇಶವು ಕಮಿಷನರ್‌ಗಳ ಆಳ್ವಿಕೆಗೆ ಒಳಪಟ್ಟಾಗ, ಅವರು ಜಾರಿಗೊಳಿಸಿದ ನ್ಯಾಯಾಂಗ ವ್ಯವಸ್ಥೆ, ಬೆಂಗಳೂರು ಪೇಟೆ ಮತ್ತು ದಂಡು ಪ್ರದೇಶದ ನಡುವಿನ ಪರಸ್ಪರ ಒಡನಾಟಗಳು ಈ ಸಮುದಾಯದ ನಾಯಕತ್ವವನ್ನು ಹಿಂದಕ್ಕೆ ದೂಡಿತು. ಈಗಾಗಲೇ ಚರ್ಚಿಸಿರುವಂತೆ ಅಲ್ಲಿಯವರೆಗೆ ಈ ಸಮುದಾಯಕ್ಕಿದ್ದ ಪ್ರಾಮುಖ್ಯತೆಯನ್ನು ನಂತರ ದೇವಾಂಗ ಸಮುದಾಯ ಪಡೆದುಕೊಂಡವು. ೧೯ನೇ ಶತಮಾನದಲ್ಲಿ ದೇವಾಂಗ ಸಮುದಾಯವು ಜವಳಿ ಉದ್ಯಮಕ್ಕೆ ಬೇಕಾದ ಕಚ್ಚಾ ವಸ್ತುಗಳನ್ನು ಪೂರೈಸುವ ಕಾರ್ಯವನ್ನು ನಡೆಸುತ್ತಿದ್ದದ್ದನ್ನು ಗುರುತಿಸಿರುತ್ತಾರೆ.[೪೪] ಬಣಜಿಗರು ಹಿಂದಿನ ಪ್ರಭುತ್ವದೊಡನೆ ಉತ್ತಮ ಸಂಬಂಧ ಹೊಂದಿತ್ತು ಎಂಬುದು ಸಹ ಈ ಪಲ್ಲಟಕ್ಕೆ ಕಾರಣವಾಗಿದೆ. ಟಿಪ್ಪು ಮರಣದ ನಂತರ ಅಧಿಕೃತವಾಗಿ ವಸಾಹತುಶಾಹಿ ವ್ಯವಸ್ಥೆಗೆ ಬೆಂಗಳೂರು ಪ್ರದೇಶವು ತೆರೆದುಕೊಂಡಿತು. ಈ ಸಂದರ್ಭದಲ್ಲಿ ಕಂಪನಿ ಮತ್ತು ನಂತರ ಬ್ರಿಟಿಶ್ ಸಾಮ್ರಾಜ್ಯದ ನೇರ ಆಳ್ವಿಕೆಯಲ್ಲಿ ಸ್ಥಳೀಯವಾಗಿದ್ದ ವಸ್ತ್ರೋದ್ಯಮವನ್ನು ದಮನ ಮಾಡುವ, ಉತ್ಪಾದನೆಗೆ ಬೇಕಾದ ಕಚ್ಚಾ ವಸ್ತು ಮತ್ತು ಉತ್ಪಾದಿತ ವಸ್ತುಗಳಿಗೆ ಬೇಕಾದ ಮಾರುಕಟ್ಟೆಯನ್ನು ಸೃಷ್ಟಿಸುವ ಕಾರ್ಯವು ಹಲವು ರೂಪದಲ್ಲಿ ನಡೆದವು. ಆ ಪ್ರಕ್ರಿಯೆಯ ಒಂದು ಭಾಗವಾಗಿ ಬೆಂಗಳೂರು ಪ್ರದೇಶದಲ್ಲಿ ಬಣಜಿಗ ಸಮುದಾಯದ ಹಿನ್ನಡೆಯನ್ನು ಗುರುತಿಸಬಹುದು.

**ಕುಂಚಿಗರು**

ಇವರು ಬಹಳ ಸಂಖ್ಯೆಯಲ್ಲಿ ಬೆಂಗಳೂರು ಪೇಟೆಯಲ್ಲಿ ನೆಲೆಸಿದ್ದಾರೆ. ಈ ಸಮುದಾಯದವರು ಉತ್ತಮ ನೈಪುಣ್ಯತೆಯುಳ್ಳ ಮರಗೆಲಸಗಾರರು, ಪ್ರಮುಖ ಗುತ್ತಿಗೆದಾರರು ಮತ್ತು ಲೇವಾದೇವಿ ವ್ಯವಹಾರಿಗಳು ಆಗಿದ್ದರು. ಇವರು ತಮ್ಮ ಹೆಸರಿನೊಂದಿಗೆ ಗೌಡ ಎಂಬ ಪದನಾಮವನ್ನು ಸೇರಿಸಿಕೊಳ್ಳುತ್ತಾರೆ.[೪೫] ೧೯ ಮತ್ತು ೨೦ನೇ ಶತಮಾನದಲ್ಲಿ ಬೆಂಗಳೂರು ನಗರ ಮತ್ತು ದಂಡು ಪ್ರದೇಶದಲ್ಲಿ ಬಹಳ ಬೇಡಿಕೆ ಹೊಂದಿದ್ದ ಸಮುದಾಯವಾಗಿದೆ. ಇವರ ಬಗೆಗೆ ಹೆಚ್ಚಿನ ದಾಖಲೆಗಳು ಸಿಗುವುದಿಲ್ಲ. ಆದರೆ ಸರಳವಾಗಿ ಗುರುತಿಸಬಹುದಾದ ವಿಚಾರ ಎಂದರೆ ನಗರ ಮತ್ತು ದಂಡು

ಪ್ರದೇಶದ ಶ್ರೀಮಂತ ಮನೆಗಳ ನಿರ್ಮಾಣ ಕಾರ್ಯ ಹಾಗೂ ಸಾರ್ವಜನಿಕ ಕಟ್ಟಡಗಳ ನಿರ್ಮಾಣಗಳಲ್ಲಿಯೂ ಪ್ರಮುಖ ಪಾತ್ರ ವಹಿಸುತ್ತಿದ್ದ ಸಮುದಾಯವಾಗಿದೆ. ಅದರೊಡನೆ ಮರಗೆಲಸವನ್ನು ನಿರ್ವಹಿಸಬಲ್ಲವರಾಗಿದ್ದರು. ಇದರೊಡನೆ ಲೇವಾದೇವಿಗಾರರು ಎಂದರೆ ಅವಶ್ಯಕ ಸಂದರ್ಭದಲ್ಲಿ ಹಣ ಸಾಲ ನೀಡುವ ಶಕ್ತಿಯನ್ನು ಹೊಂದಿದ್ದರು ಎಂದು ಊಹಿಸಬಹುದಾಗಿದೆ. ಇದೆಲ್ಲವನ್ನು ಗಮನಿಸಿದಾಗ ಬೆಂಗಳೂರು ಪ್ರದೇಶದ ಅಭಿವೃದ್ಧಿಯಲ್ಲಿ ಪರೋಕ್ಷವಾಗಿ ಇವರ ಪಾತ್ರ ಹಿರಿದಾಗಿದೆ. ಆದರೆ ಈ ಕಾರ್ಯಚಟುವಟಿಕೆಯನ್ನು ಗುರುತಿಸುವುದು ಕಷ್ಟಕರವಾಗಿರುವುದರಿಂದ ಕುಂಚಿಗರು ಗೌಣರಾಗಿ, ತೆರೆಮರೆಯಲ್ಲಿ ಕಂಡುಬರುವರು. ಈ ದಿಸೆಯಲ್ಲಿ ಸಾಂಪ್ರದಾಯಿಕ ಆಕರಗಳೊಂದಿಗೆ ಬೇರೆ ಬಗೆಯ ಆಕರಗಳನ್ನು ಸಮೀಕರಿಸಿ ಅಧ್ಯಯನ ಮಾಡುವುದು ಅಗತ್ಯವಾಗಿದೆ.

## ೪.೩. ಹೊರ ರಾಜ್ಯದ ಪ್ರಮುಖ ವರ್ತಕ ಸಮುದಾಯಗಳು

ವಿನಿಮಯ ವರ್ತಕ ಸಮುದಾಯದವರು ಬಹುಪಾಲು ವ್ಯಾಪಾರದ ಹಿನ್ನೆಲೆಯಲ್ಲಿ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಚಲಿಸುತ್ತಿರುತ್ತಾರೆ. ಕೆಲವೊಮ್ಮೆ ಪ್ರಭುತ್ವದ ಆಡಳಿತ ನೀತಿಯು ಇವರನ್ನು ಬಂದು ನೆಲೆಸುವಂತೆಯು ಪ್ರೋತ್ಸಾಹಿಸುತ್ತದೆ. ಕೆಲವೊಮ್ಮೆ ಇವರು ಬೇರೆ ಪ್ರದೇಶಗಳಲ್ಲಿ ತಾತ್ಕಾಲಿಕವಾಗಿ ನೆಲೆಸಿ ನಂತರ ತಮ್ಮ ಪ್ರದೇಶಗಳಿಗೆ ಹಿಂದಿರುಗುತ್ತಿರುತ್ತಾರೆ. ಕೆಲವೊಮ್ಮೆ ಆ ಪ್ರದೇಶವು ಅವರಿಗೆ ಅನುಕೂಲಕರವೆನಿಸಿದರೆ ಅಥವಾ ಅಲ್ಲೆ ನೆಲೆಸ ಬೇಕಾದ ಅಗತ್ಯತೆ ಉಂಟಾದರೆ ಸ್ಥಳೀಯರಂತೆ ನೆಲೆನಿಲ್ಲುತ್ತಾರೆ. ಇಲ್ಲಿ ಕ್ರಮೇಣ ಬೆಂಗಳೂರು ಪ್ರದೇಶದಲ್ಲಿ ನೆಲೆನಿಂತ ಹೊರ ರಾಜ್ಯದ ವಿನಿಮಯ-ವರ್ತಕ ಸಮುದಾಯಗಳನ್ನು ಮಾತ್ರ ಚರ್ಚಿಸಲಾಗಿದೆ. ಹೊರ ರಾಜ್ಯದ ವಿನಿಮಯ ವರ್ತಕರು ಎಂದು ವಿಂಗಡಿಸುವುದು ಮತ್ತೊಂದು ಕ್ಲಿಷ್ಟ ಪ್ರಶ್ನೆಯೇ ಆಗಿದೆ. ಈ ಕಾಲಘಟ್ಟದಲ್ಲಿ ಮೈಸೂರು ರಾಜ್ಯವನ್ನು ಹೊರತುಪಡಿಸಿ ಉಳಿದ ಭಾಗಗಳೆಲ್ಲವನ್ನು ಇಲ್ಲಿ ಹೊರ ರಾಜ್ಯವೆಂಬ ಪರಿಕಲ್ಪನೆಯಲ್ಲಿ ನೋಡಲಾಗಿದೆ. ಇಂದಿನ ಕರ್ನಾಟಕದ ಅನೇಕ ಭಾಗಗಳು ಸಹ ಇಲ್ಲಿ ಹೊರ ರಾಜ್ಯಗಳೇ ಆಗುತ್ತವೆ ಎಂಬುದನ್ನು ಗಮನಿಸಬೇಕಾಗಿದೆ.

### ನಗರ್ತರು

ವಿನಿಮಯ ವರ್ತಕ ಸಮುದಾಯಗಳಲ್ಲಿ ನಗರ್ತರು ಪ್ರಮುಖರು. ಇವರು ಬಹುತೇಕ ನಗರ ಪಟ್ಟಣಗಳಲ್ಲಿ ನೆಲೆಸಿರುವುರಿಂದಾಗಿ ನಗರ್ತ ಎಂದು ಕರೆಯಲಾಗಿದೆ. ಚಂಪಕಲಕ್ಷ್ಮಿ ಮತ್ತು ಹೀರೆಮಠರವರು ನಕರರನ್ನೇ ಮುಂದೆ ನಗರ್ತ ಎಂದು ಕರೆದಿರಬಹುದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ೧೮೦೦ರಲ್ಲಿ ಸಮೀಕ್ಷೆಯನ್ನು ನಡೆಸಿದ ಬುಕಾನಾನ್ ವರದಿಯಲ್ಲಿ ಹಲವು ವ್ಯಾಪಾರಿ ಮಾರ್ಗಗಳನ್ನು ಗುರುತಿಸಬಹುದು. ಬುಕಾನಾನ್ ಪ್ರಯಾಣಿಸುವಾಗ ಬೆಂಗಳೂರು, ಚಿಕ್ಕಬಳ್ಳಾಪುರ ಮತ್ತು ದೊಡ್ಡಬಳ್ಳಾಪುರ ಪ್ರದೇಶಗಳಲ್ಲಿ (ಭೇರಿ) ನಗರ್ತರನ್ನು ನೋಡಿದುದಾಗಿ ದಾಖಲಿಸಿದ್ದಾನೆ.

ಭೇರಿ ಜನಾಂಗದವರು ವ್ಯಾಪಾರಿಗಳಾಗಿದ್ದು, ಅವರು ತಮ್ಮನ್ನು ನಗರ್ತರು ಎಂದು ಕರೆದುಕೊಳ್ಳುತ್ತಾರೆ. ಈ ನಗರ್ತರಲ್ಲಿ ಎರಡು ಪಂಗಡಗಳಿವೆ. ಮೊದಲನೆಯದು ಶಿವನನ್ನು ಆರಾಧಿಸುವವರನ್ನು ಶಿವಾಚಾರಿ ನರ್ಗತರು ಮತ್ತು ವಿಷ್ಣುವನ್ನು ಆರಾಧಿಸುವವರನ್ನು ನಾಮಧಾರಿ ನಗರ್ತರು, ಇವರಲ್ಲಿ ಶಿವನ ಆರಾಧಕರು ವಿನಿಮಯ-ವರ್ತಕರಾಗಿರುವರು. ಇವರಲ್ಲಿ ಬಹುಪಾಲು ವಂಶಪಾರಂಪರ್ಯವಾಗಿ ವ್ಯಾಪಾರಸ್ಥರಾಗಿರುತ್ತಾರೆ. ಔಷಧಗಳು, ಹತ್ತಿ, ದವಸ-ಧಾನ್ಯಗಳು, ಬಟ್ಟೆಗಳು ಮೊದಲಾದ ವ್ಯಾಪಾರ ವ್ಯವಹಾರಗಳಲ್ಲಿ ತೊಡಗಿಕೊಂಡಿರುತ್ತಾರೆ.[೪೬] ಜೊತೆಗೆ ಲೇವಾದೇವಿಯನ್ನು ಮಾಡುತ್ತಾರೆ. ವಿಷ್ಣುವಿನ ಆರಾಧಕರು ವ್ಯವಸಾಯ ಮಾಡುವವರು. ೧೯೦೧ರ ಮದರಾಸಿನ ಜನಗಣತಿಯ ವರದಿಯಂತೆ ಈ ಸಮುದಾಯದ ನಗರ್ತ, ನಗರ್ತಾರ್, ನಗರ ಕುಮಲ್ ಜಾತಿಗಳನ್ನು ಚೆಟ್ಟಿ ಜಾತಿಯ ಉಪಜಾತಿ ಸೇರಿದವರು ಎಂದು ದಾಖಲಿಸಿದೆ. ಚಿದಾನಂದಮೂರ್ತಿ ಅವರು ವರ್ತಕ ಶ್ರೇಣಿಯ ಕುರಿತಂತೆ ಚರ್ಚಿಸುವಾಗ ಪಟ್ಟಣಗಳ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ನಗರ್ತರು ಪ್ರಮುಖ ಪಾತ್ರವನ್ನು ವಹಿಸುತ್ತಿದ್ದರು ಎಂದಿರುವರು. ಜೊತೆಗೆ ಇವರ ಮೂಲವನ್ನು ಅಯೋಧ್ಯ ನಗರದೊಡನೆ ಗುರುತಿಸುವರು. ನಗರ ಅಥವಾ ನಕರ ಎಂಬ ವರ್ತಕ ಶ್ರೇಣಿಯನ್ನು ಹೀರೆಮಠರವರು ಗುರುತಿಸಿರುತ್ತಾರೆ. ನಗರ್ತರನ್ನು ಪ್ರಾಚೀನ ತಮಿಳುನಾಡಿನ ನಗರತ್ತರ್ ಎಂಬ ವರ್ತಕ ಸಂಘಕ್ಕೆ ಸೇರಿದ್ದವರು ಎಂದು ಚಂಪಕ ಲಕ್ಷ್ಮಿಯವರು ಅಭಿಪ್ರಾಯ ಪಟ್ಟಿದ್ದಾರೆ.[೪೭] ಹಾಗೆ ಶಾಸನಗಳಲ್ಲಿ ಇವರನ್ನು ಪಟ್ಟಣ ಸೆಟ್ಟಿ ಅಥವಾ ಪಟ್ಟಣಸ್ವಾಮಿ ಎಂದು ಉಲ್ಲೇಖಿಸಲಾಗಿದೆ. ಪ್ರಾಚೀನ ಕಾಲದಿಂದಲೂ ಈ ಸಮುದಾಯ ಪ್ರಧಾನ ವೃತ್ತಿ ವಿನಿಮಯ ವರ್ತಕರಾಗಿದ್ದವರು. ಇದೇ ಅಭಿಪ್ರಾಯವನ್ನು ಹಿರೇಮಠರವರು ಸಹ ತಿಳಿಸುತ್ತಾ, ನಕರರು ಸಂತೆ-ಪೇಟೆಗಳಿಗೆ ಬಂದ ವಿವಿಧ ಸರಕುಗಳನ್ನು ಖರೀದಿಸಿ ಬಯಲು ಅಂಗಡಿ ಹಾಗೂ ಮಳಿಗೆಗಳಲ್ಲಿ ಮಾರಾಟ ಮಾಡುತ್ತಿದ್ದರು ಎನ್ನುವರು. (ಡಿಬಿ-೩೧) ಇವರನ್ನು ಕೆಲವೆಡೆ ನಕರ ಮುಮ್ಮರಿದಂಡ, (ಕೆನ್-೬೫)ರಲ್ಲಿ ನಗರತ್ತರ್ ಪಂಚಾಳರೆಂದು ಉಲ್ಲೇಖಿಸಲಾಗಿದೆ. ೧೮೯೧ರ ಮೈಸೂರು ಜನಗಣತಿಯ ವರದಿಯಲ್ಲಿ ಇವರ ಮೂಲವನ್ನು ಕಾಂಜಿಪುರಂನಿಂದ ಬಂದವರು ಎಂದು ಗುರುತಿಸಲಾಗಿದೆ. ಇವರು ಪ್ರಾಚೀನ ಕಾಲದಿಂದಲೂ ರಾಜಕೀಯವಾಗಿ ಪ್ರಾಬಲ್ಯ ಹೊಂದಿದ ಸಮುದಾಯವಾಗಿದ್ದವು. ರಾಜ ಮಲ್ಲರಾಜನ ಕಾಲದಲ್ಲಿ ಇವರು ಬೆಂಗಳೂರಿಗೆ ಬಂದಾಗ ಯಜಮಾನ, ಸೆಟ್ಟಿಯ ಸ್ಥಾನ ನೀಡುವುದರೊಂದಿಗೆ ತೆರಿಗೆ ರಿಯಾಯಿತಿ ಮತ್ತು ನೆಲೆಸಲು ಎಲ್ಲಾ ತೆರನಾದ ಸೌಲಭ್ಯಗಳನ್ನು ನೀಡಿದನೆಂದು ೧೮೯೧ರ ಜನಗಣತಿಯಲ್ಲಿ ಉಲ್ಲೇಖಿಸಲಾಗಿದೆ. ಬೆಂಗಳೂರು ಪ್ರದೇಶದ ೧೮೯೧ರ ಜನಗಣತಿಯ ಪ್ರಕಾರ ನಗರ್ತರ ಒಟ್ಟು ಸಂಖ್ಯೆ ೫೦೬೯. ಅಂದರೆ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೧೩ರಿಂದ ೩೫ರಷ್ಟಿದ್ದರು. ೧೯೦೧ ರಲ್ಲಿ ೪೮೯೪ರಷ್ಟಿದ್ದರು. ಸಂಖ್ಯಾವಾರು ಗಮನಿಸಿದರೆ ೧೮೯೧ಕ್ಕಿಂತ ೧೯೦೧ರ ಜನಗಣತಿಯಲ್ಲಿ ಇಳಿಮುಖವಾಗಿದೆ. ೧೮೯೦ರ ದಶಕದಲ್ಲಿ

ಬೆಂಗಳೂರು ಪ್ಲೇಗ್ ಮತ್ತಿತರ ಸಾಂಕ್ರಾಮಿಕ ರೋಗಗಳು ಹರಡಿತ್ತು. ಆ ಸಂದರ್ಭದಲ್ಲಿ ಬೆಂಗಳೂರಿನಿಂದ ಬೇರೆ ಪ್ರದೇಶಗಳಿಗೆ ವಲಸೆ ಹೋಗುವುದು ಸಾಮಾನ್ಯವಾಗಿತ್ತು. ಹಾಗಿದ್ದು ಇಷ್ಟು ಸಂಖ್ಯೆಯಲ್ಲಿ ನಗರ್ತರು ಕಂಡುಬರುವುದನ್ನು ಗಮನಿಸಿದರೆ ಅವರು ಅಧಿಕ ಸಂಖ್ಯೆಯಲ್ಲಿ ಬೆಂಗಳೂರು ಪ್ರದೇಶದಲ್ಲಿ ನೆಲೆಸಿದ್ದರು ಎಂದು ಹೇಳಬಹುದಾಗಿದೆ.

**ಗೋಸಾಯಿ**

ಬೆಂಗಳೂರು ನಗರದಲ್ಲಿನ ಪ್ರಮುಖ ವಿನಿಮಯ ವರ್ತಕ ಸಮುದಾಯಗಳಲ್ಲೊಂದಾಗಿದೆ. ಇಲ್ಲಿ ಗೋಸಾಯಿ ಎಂಬುದು ಒಂದು ಜಾತಿಯಲ್ಲ, ವರ್ತಕ ಸಮುದಾಯ. ಗೋಸಾಯಿ ಎಂಬ ಪದದ ಅರ್ಥ ಭಕ್ತ ಎಂದಾಗಿದೆ. ಇವರು ಚೈತನ್ಯನ ಅನುಯಾಯಿಗಳಾಗಿದ್ದು, ಧಾರ್ಮಿಕ ಜೀವನವನ್ನು ಮಾಡುವವರಾಗಿದ್ದು ನಿರ್ಜನ ಪ್ರದೇಶದಲ್ಲಿ ನೆಲೆ ನಿಲ್ಲುತ್ತಾರೆ. ಆದರೆ ಇವರು ಅಲೆಮಾರಿ ಜನರಾಗಿದ್ದರು. ಒಂದು ಪ್ರದೇಶದಿಂದ ವಿವಿಧ ವಸ್ತುಗಳನ್ನು ಇನ್ನೊಂದು ಪ್ರದೇಶಕ್ಕೆ ತಂದು ವ್ಯವಹರಿಸುತ್ತಿದ್ದರು. ಬೆಂಗಳೂರು ಪ್ರದೇಶದಲ್ಲಿ ಈ ಸಮುದಾಯದ ಕೆಲವರು ವ್ಯಾಪಾರ ವಾಣಿಜ್ಯ, ಲೇವಾದೇವಿ ವ್ಯವಹಾರ ಮೊದಲಾದವುಗಳ ಮೂಲಕ ಪ್ರಬಲ ಶ್ರೀಮಂತ ವರ್ತಕರಾಗಿ ಕಾಣಿಸಿಕೊಂಡಿದ್ದಾರೆ. ಇವರು ತಮ್ಮನ್ನು ಪಶ್ಚಿಮ ಭಾರತ ಮತ್ತು ಉತ್ತರ ಭಾರತದಿಂದ ಬಂದವರು ಎಂದು ಹೇಳಿಕೊಳ್ಳುವರು. ಇದಕ್ಕೆ ಪೂರಕವಾಗಿ ಚೈತನ್ಯನ ಆರಾಧಕರು ಎಂಬುದು ಸಹ ಇದಕ್ಕೆ ಒತ್ತು ಕೊಡುವುದು. ಜೊತೆಗೆ ೧೬ನೇ ಶತಮಾನದಲ್ಲಿ ಮರಾಠರ ಷಾಜಿಯ ಆಳ್ವಿಕೆಯ ಸಂದರ್ಭದಲ್ಲಿ ಅನೇಕ ಮರಾಠಿ ವರ್ತಕ ಸಮುದಾಯಗಳು ಬೆಂಗಳೂರಿಗೆ ಬಂದವು. ಈ ಸಂದರ್ಭದಲ್ಲಿ ಈ ಸಮುದಾಯವು ಸಹ ಪೂನಾದಿಂದ ಶಾಲು, ಕಾಶ್ಮೀರದಿಂದ ಕುಂಕುಮದ ಹೂವುಗಳನ್ನು ಅಥವಾ ಕೇಸರಿಯನ್ನು, ಸೂರತ್‌ನಿಂದ ಪರ್ಷಿಯಾದ ಬೆಲೆಬಾಳುವ ಹರಳುಗಳನ್ನು, ಹೈದರಾಬಾದ್ ಮತ್ತು ಪಠಾಣಗಳಿಂದ ಆಭರಣ ಹಾಗೂ ಬೆಲೆಬಾಳುವ ಕಸೂತಿ ಕೆಲಸದಿಂದ ಕೂಡಿದ ವಸ್ತ್ರಗಳನ್ನು ತಂದು ಬೆಂಗಳೂರಿನಲ್ಲಿ ಮಾರಾಟ ಮಾಡಲು ಆರಂಭಿಸಿದರು.[೪೮] ಅವರಲ್ಲಿ ಇಲ್ಲಿ ನೆಲೆ ನಿಂತ ಗೋಸಾಯಿಗಳು ಬೆಂಗಳೂರು ನಗರದ ಗವಿಪುರ ಪ್ರದೇಶದಲ್ಲಿ ಪ್ರಬಲರಾಗಿದ್ದರು. ಇದಕ್ಕೆ ಸಾಕ್ಷಿಯಾಗಿ ಬಹಳ ಹಿಂದೆಯೇ ಗವಿ ಗಂಗಾಧರ ದೇವಾಲಯದ ಪಕ್ಕದಲ್ಲಿ ಗೋಸಾಯಿ ಮಠವನ್ನು ಸ್ಥಾಪಿಸಿದ್ದರು. ಆ ಮಠ ಇಂದಿಗೂ ಇದೆ.[೪೯] ೧೮೯೧ರ ಜನಗಣತಿಯ ಪ್ರಕಾರ ಅವರ ಸಂಖ್ಯೆಯು ಬೆಂಗಳೂರಿನ ಒಟ್ಟು ಜನ ಸಂಖ್ಯೆಯ ಶೇಕಡ ೦.೦೧ರಷ್ಟಿದ್ದರು.

**ಕೋಮಟಿಗರು**

ಬೆಂಗಳೂರಿನ ವಿನಿಮಯ ವರ್ತಕರಲ್ಲಿ ಪ್ರಮುಖವಾದ ವರ್ತಕ ಸಮುದಾಯಗಳಲ್ಲಿ ಕೋಮಟಿಗರು ಪ್ರಧಾನವಾಗಿ ಕಂಡುಬರುತ್ತಾರೆ. ವೈಶ್ಯ ಸಮುದಾಯದ ಕೋಮಟಿಗರನ್ನು ಶ್ರೇಷ್ಠಿಗರು

ಅಥವಾ ಶೆಟ್ಟಿಗರು ಎಂದೂ ಕರೆಯಲಾಗಿದೆ. ಇವರು ಆಂಧ್ರದಿಂದ ವಲಸೆ ಬಂದವರಾಗಿದ್ದಾರೆ. ಇವರ ಪ್ರಧಾನ ವೃತ್ತಿ ವ್ಯಾಪಾರ. ಕೋಮಟಿಗರ ಒಂದು ಗುಂಪು ವ್ಯಾಪಾರ ವಾಣಿಜ್ಯಕ್ಕಾಗಿಯೇ ಬೆಂಗಳೂರಿಗೆ ಬಂದು ನೆಲೆಸಿದರು. ಈ ಸಮುದಾಯದ ಹೆಜ್ಜೆ ಗುರುತನ್ನು ಬೆಂಗಳೂರಿನ ಆರಂಭಿಕ ಹಂತದಿಂದಲೂ ಗುರುತಿಸಬಹುದು. ಕೆಂಪೇಗೌಡನ ಕಾಲದಲ್ಲಿಯೇ ಈ ಸಮುದಾಯ ಬೆಂಗಳೂರಿನೊಡನೆ ವ್ಯಾಪಾರ ವಾಣಿಜ್ಯ ಸಂಬಂಧ ಹೊಂದಿತ್ತಲ್ಲದೇ, ಈ ಪ್ರದೇಶದಲ್ಲಿ ಪ್ರಮುಖರಾಗಿ ಕೂಡ ಕಂಡುಬರುವರು. ಮುತ್ಯಾಲಪೇಟೆಯ ರಂಗನಾಥ ದೇವಾಲಯದಲ್ಲಿರುವ ಈ ಶಾಸನದ ಕೆಳ ಭಾಗದಲ್ಲಿ ಬೆಂಗಳೂರು ಪೇಟೆಯ ನಾಲ್ಕು ಜನ ಶೆಟ್ಟರುಗಳಾದ ಪೆದ್ದ ಚಿಕ್ಕಣ್ಣ ಸೆಟ್ಟಿ, ತಿರುಮಲ ಸೆಟ್ಟಿ, ದಾನಣ್ಣ ಸೆಟ್ಟಿ ಮೊದಲಾದವರ ಹೆಸರುಗಳಿವೆ.[೫೦] ಇವರು ದೇವರ ಪೂಜೆ ಮತ್ತು ಧರ್ಮ ಕಾರ್ಯಗಳಿಗೆ ಸಾಮಗ್ರಿಗಳನ್ನು ಕೊಡಲು ಒಪ್ಪಿ ಹಾಕಿಸಿದ್ದಾಗಿದೆ. ನಂತರದ ಕಾಲದ ಮತ್ತೊಂದು ಶಾಸನವು ಕೊಮ್ಮಟಿಗರ ಪ್ರಾಮುಖ್ಯತೆ ಹೆಚ್ಚಿರುವುದಕ್ಕೆ ಪೂರಕವಾಗಿದೆ. ಚಿಕ್ಕದೇವರಾಜರ ಕಾಲದಲ್ಲಿ ಕೊಮ್ಮಟಿಗರಿಗೆ ಹೆಚ್ಚಿನ ಪ್ರಧಾನ್ಯತೆ ದೊರೆತಿದ್ದಕ್ಕೆ ಈ ಶಾಸನವು ಪುಷ್ಟಿ ನೀಡುತ್ತದೆ. ಆ ಸಂದರ್ಭದಲ್ಲಿ ಚಿಕ್ಕದೇವರಾಜರ ಅಡಿಯಲ್ಲಿ ಬೆಂಗಳೂರಿನ ಪಾರುಪತ್ತೆದಾರರಾಗಿದ್ದ ಮಾಲಾರಂಗಯ್ಯ ಮತ್ತು ನಂಜರಾಜಯ್ಯರು ಬೇರೆ ಬೇರೆ ಪ್ರದೇಶಗಳಿಂದ ವರ್ತಕ ಸಮುದಾಯಗಳು ಬಂದು ನೆಲೆಸಲು ಪ್ರೋತ್ಸಾಹಿಸಿದನು. ಆಗ ಆಂಧ್ರ ಪ್ರದೇಶದ ಶ್ರೇಷ್ಠಿಗ ಗುಂಪೊಂದು ಬಂದು ನೆಲೆಸಿದರು.[೫೧] ಹೀಗೆ ಕೆಂಪೇಗೌಡನ ಕಾಲದಿಂದ ಮೈಸೂರು ಒಡೆಯರ ತನಕ ಬಂದ ಅರಸರೆಲ್ಲರು ಈ ಸಮುದಾಯ ದವರನ್ನು ಪ್ರಮುಖ ವಾಣಿಜ್ಯೋದ್ಯಮಿಗಳಾಗಿ ಗುರುತಿಸಿದ್ದು, ಬೆಂಗಳೂರಿಗೆ ಬಂದು ನೆಲೆಸಲು ಆಹ್ವಾನಿಸಿರುವುದನ್ನು ನೋಡಬಹುದು. ಪ್ರಭುತ್ವದ ಆಶ್ರಯವನ್ನು ಪಡೆದ ಕೊಮ್ಮಟಿಗರು ಮೈಸೂರು ಒಡೆಯರ ಕಾಲದಲ್ಲಿ ಆಡಳಿತ ಮತ್ತು ಆರ್ಥಿಕತೆಯಲ್ಲಿ ಪ್ರಬಲರಾಗಿ ಕಂಡುಬರುತ್ತಾರೆ. ಈ ಸಮುದಾಯವು ಆ ಸಂದರ್ಭದಲ್ಲಿ ದೊಡ್ಡ ಪೇಟೆಯಲ್ಲಿ ನೆಲೆ ನಿಂತರು. ಮುಂದೆ ಈ ವರ್ತಕ ಸಮುದಾಯದವರ ಸಂಖ್ಯೆ ಹೆಚ್ಚಿದಂತೆ ಇವರ ವ್ಯಾಪಾರ–ವ್ಯವಹಾರವಿದ್ದ ಬೀದಿಯನ್ನು ಕೊಮ್ಮಟಿ ಪೇಟೆಯೆಂದು ಕರೆಯಲಾಯಿತು.[೫೨] ಇದೇ ಕೋಮಟಿಗರ ಪ್ರಾಮುಖ್ಯತೆ ಮತ್ತು ಪ್ರಾಬಲ್ಯಕ್ಕೂ ಸಾಕ್ಷಿಯಾಗಿದೆ. ಇಪ್ಪತ್ತನೇ ಶತಮಾನದ ಆರಂಭದಲ್ಲಿ ವಿ. ವಿ ಪುರಂ ಎಂಬ ಬಡಾವಣೆ ಮತ್ತು ಮಲ್ಲೇಶ್ವರಂ ರೂಪುಗೊಂಡ ನಂತರ ಆ ಸ್ಥಳಗಳಲ್ಲಿ ಈ ಸಮುದಾಯದವರು ನೆಲೆ ನಿಂತರು. ಈಗ ಇವರು ಬೆಂಗಳೂರು ನಗರದ ಪ್ರಮುಖ ನಗರ ಪ್ರದೇಶಗಳಾದ ವಿಜಯನಗರ, ಮಲ್ಲೇಶ್ವರಂ, ಜಯನಗರ ಮುಂತಾದ ಸ್ಥಳಗಳಲ್ಲಿ ನೆಲೆಸಿದ್ದಾರೆ. ೧೮೯೧ರ ಜನಗಣತಿಯ ಪ್ರಕಾರ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೩೧ರಷ್ಟು ಕೋಮಟಿಗರು ಬೆಂಗಳೂರು ಪ್ರದೇಶದಲ್ಲಿ ನೆಲೆಸಿದ್ದರು. ಇದು ಸಹ ಮೇಲಿನ ವಾದಕ್ಕೆ ಪೂರಕವಾದ ಮತ್ತೊಂದು ಆಕರವಾಗಿದೆ.

## ಮೊದಲಿಯಾರ್ ವರ್ತಕ ಸಮುದಾಯ

ಮೊದಲಿಯಾರ್ ಸಮುದಾಯವು ಬೆಂಗಳೂರಿನ ಪ್ರದೇಶದಲ್ಲಿ ಕಂಡುಬರುವ ಪ್ರಮುಖ ವರ್ತಕರ ಸಮುದಾಯವಾಗಿದೆ. ಮುದ್ದಲಿ(ಮೆಲ್ಲಾಲ), ಮೊದಲಿ ಎಂದು ಕರೆಯಲ್ಪಡುವ ಮೊದಲಿಯಾರುಗಳು ತಮಿಳುನಾಡಿನ ಉತ್ಪಾದಕ ಮತ್ತು ವಿನಿಮಯ ವರ್ತಕ ಸಮುದಾಯದವರು. ಇವರು ಯಾವಾಗ ಬೆಂಗಳೂರಿಗೆ ವಲಸೆ ಬಂದರು ಎಂಬುದರ ಬಗ್ಗೆ ಅಸ್ಪಷ್ಟತೆಯಿದೆ. ಬೆಂಗಳೂರು ನಗರವಾಗಿ ಗುರುತಿಸಿಕೊಳ್ಳುವ ಮೊದಲೇ ಬಂದಿರುವ ಸಾಧ್ಯತೆಗಳು ಇವೆ. ಏಕೆಂದರೆ ಚೋಳರು ಸ್ವಲ್ಪ ಕಾಲ ಬೆಂಗಳೂರು ಪ್ರದೇಶವನ್ನು ಒಳಗೊಂಡಂತೆ ಕರ್ನಾಟಕದ ಕೆಲವು ಭಾಗವನ್ನು ಆಳಿದರು. ಇವರ ಆಳ್ವಿಕೆಯ ಸಂದರ್ಭದಲ್ಲಿ ಮೊದಲಿಯಾರ್‌ಗಳು ಇಲ್ಲಿಗೆ ಬಂದಿರುವ ಸಾಧ್ಯತೆಗಳು ಹೆಚ್ಚಾಗಿವೆ. ಆದರೆ ಇದಕ್ಕೆ ಪೂರಕವಾದ ಆಧಾರಗಳ ಕೊರತೆಯಿರುವುದು. ಈ ದಿಸೆಯಲ್ಲಿ ಇನ್ನು ಹೆಚ್ಚಿನ ಅಧ್ಯಯನ ಅಗತ್ಯವಿದೆ.

ಮುದ್ದಲಿ ಎಂದರೆ ನೇಯ್ಗೆಗಿಯವರು ಎಂದರ್ಥ. ಮೊದಲಿಯಾರ್‌ಗಳನ್ನು ಮುದ್ದಲಿ ಎಂದು ಗುರುತಿಸುವ ಮೂಲಕ ಆ ಸಂದರ್ಭದ ಉದಯೋನ್ಮುಖ ಕೈಗಾರಿಕೆಯಾದ ವಸ್ತ್ರೋದ್ಯಮದೊಡನೆ ಇದ್ದ ಸಂಬಂಧವನ್ನು ಗುರುತಿಸಬಹುದು. ಈ ಸಮುದಾಯ ವಲಸೆ ಬಂದ ಬಗ್ಗೆ ಸರಿಯಾದ ಸ್ಪಷ್ಟತೆ ಇಲ್ಲದಿದ್ದರೂ ೧೮ನೇ ಶತಮಾನದ ಉತ್ತರಾರ್ಧದಲ್ಲಿ ಈ ಭಾಗದಲ್ಲಿ ಪ್ರಾಮುಖ್ಯತೆ ಹೆಚ್ಚಿತು ಎನ್ನಬಹುದಾಗಿದೆ. ಇದಕ್ಕೆ ಪೂರಕವಾಗಿ ಹೈದರಾಲಿಯು ಕ್ರಿ.ಶ ೧೭೮೦ರಲ್ಲಿ ಆರ್ಕಾಟನ್ನು ವಶಪಡಿಸಿಕೊಂಡು, ತಂಜಾವೂರಿನ ಮೇಲೆ ದಂಡೆತ್ತಿ ಹೋದ. ಈ ಸಂದರ್ಭದಲ್ಲಿ ನೇಯ್ಗೆಯಲ್ಲಿ ನೈಪುಣ್ಯತೆಯನ್ನು ಹೊಂದಿದ್ದ ಮೊದಲಿಯಾರರನ್ನು ಗಮನಿಸಿ, ಅವರನ್ನು ಕುಟುಂಬಗಳ ಸಮೇತ ಕರೆತಂದು ಬೆಂಗಳೂರಿನಲ್ಲಿ ನೆಲೆಸುವಂತೆ ಮಾಡಿದನು.[೫೩] ಆ ಸಂದರ್ಭದಲ್ಲಿ ಮದ್ರಾಸ್ ಇಂಗ್ಲಿಷ್ ವರ್ತಕರ ನೆಲೆಯಾಗಿತ್ತು. ಈ ಸಮುದಾಯ ಮದ್ರಾಸ್‌ನಲ್ಲಿ ಬ್ರಿಟಿಶ್ ಈಸ್ಟ್ ಇಂಡಿಯ ಕಂಪನಿಗೆ ಪೂರಕವಾಗಿ ಕಾರ್ಯನಿರ್ವಹಿಸಿತು. ಈ ಮೂಲಕ ಕಂಪನಿಯೊಂದಿಗೆ ಸಖ್ಯ ಪಡೆದು ಅವರ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಪ್ರಮುಖ ಸ್ಥಳೀಯ ವರ್ತಕ ಸಮುದಾಯವಾಗಿ ಪ್ರಸಿದ್ಧರಾದರು. ಮುಂದೆ ಟಿಪ್ಪು ಪತನದ ನಂತರ ಬೆಂಗಳೂರು ಸಹ ಕಂಪನಿಯ ಆಳ್ವಿಕೆಗೆ ಒಳಪಟ್ಟಾಗ ಇಲ್ಲಿಯು ಪ್ರಮುಖ ವರ್ತಕ ಸಮುದಾಯದವರಾದರು. ಅಷ್ಟೇ ಅಲ್ಲದೆ ಕಮೀಷನರುಗಳ ಆಡಳಿತದ ಸಂದರ್ಭದಲ್ಲಿ ವಿವಿಧ ಕಾಮಗಾರಿಗಳ ಕಾರ್ಯಗಳಲ್ಲಿ ಗುತ್ತಿಗೆದಾರರಾಗಿ, ದಲ್ಲಾಲಿಗಳಾಗಿ ಮತ್ತು ಒಪ್ಪಂದದಾರರುಗಳಾಗಿ ವಿವಿಧ ರೂಪದ ಕಾರ್ಯ ಚಟುವಟಿಕೆಗಳ ಮೂಲಕ ಪ್ರಭುತ್ವದೊಂದಿಗೆ ಗುರುತಿಸಿಕೊಂಡರು. ಹಾಗೇ ಈ ಎಲ್ಲ ರೂಪದ ಕೆಲಸ ನಿರ್ವಹಿಸುವ ಮೂಲಕ ಅಧಿಕ ಲಾಭ ಪಡೆದು ಶ್ರೀಮಂತರಾದರು. ಇವರು ತಮ್ಮನ್ನು ಆರ್ಕಾಟ್, ವೆಲ್ಲೂರು ಮತ್ತು ತಮಿಳುನಾಡಿನ ಇನ್ನಿತರ ಕಡೆಗಳಿಂದ ಬಂದವರು

ಎಂದು ಗುರುತಿಸಿಕೊಳ್ಳುವರು.[೫೪] ೧೮೯೧ರ ಜನಗಣತಿ ಪ್ರಕಾರ ಒಟ್ಟು ಜನ ಸಂಖ್ಯೆಯಲ್ಲಿ ಶೇಕಡ ೦.೧೧ರಷ್ಟು ಇದ್ದದ್ದು, ೧೯೧೧ರಲ್ಲಿ ೧.೨ರಷ್ಟಾಗಿತ್ತು. ಇದು ಬೆಂಗಳೂರಿನಲ್ಲಿ ಈ ಸಮುದಾಯದವರು ಪ್ರಮಾಣ ಏರಿಕೆಗೊಂಡಿರುವುದನ್ನು ಸೂಚಿಸುವುದು. ಜೊತೆಗೆ ಇವರು ಬೆಂಗಳೂರು ನಗರ ಮತ್ತು ಬೆಂಗಳೂರು ದಂಡು ಪ್ರದೇಶದ ಸಾರ್ವಜನಿಕ ಕಾಮಗಾರಿಗಳು ಮತ್ತು ಮನೆಗಳ ನಿರ್ಮಾಣದ ಗುತ್ತಿಗೆಯನ್ನು ಹೆಚ್ಚಿನ ಸಂಖ್ಯೆಯಲ್ಲಿ ಪಡೆಯುತ್ತಿದ್ದರು. ಹೈದರಾಲಿಯ ಕಾಲದಲ್ಲಿ ವಸ್ತ್ರೋದ್ಯಮದೊಡನೆ ಗುರುತಿಸಿಕೊಂಡ ಈ ವರ್ಗವು, ಬ್ರಿಟಿಷ್ ಆಳ್ವಿಕೆಯಲ್ಲಿ ಆರಂಭಿಕ ಹಂತದಲ್ಲಿ ಗುತ್ತಿಗೆದಾರರಾಗಿ ಕಂಡುಬರುವರು. ಮುಂದೆ ಇವರು ಯಾವುದೇ ಒಂದು ಉದ್ಯಮದೊಡನೆ ಗುರುತಿಸಿಕೊಳ್ಳದೇ ವಿವಿಧ ಉದ್ಯಮಗಳಲ್ಲಿ ತೊಡಗಿಸಿಕೊಂಡಿರುವುದನ್ನು ಗುರುತಿಸಬಹುದು. ಈ ಸಮುದಾಯದಲ್ಲಿ ಕಂಡುಬರುವ ಪ್ರಮುಖ ವ್ಯಕ್ತಿಗಳೆಂದರೆ., ಅಣ್ಣಾಸ್ವಾಮಿ ಮೊದಲಿಯಾರ್, ನಾರಾಯಣಸ್ವಾಮಿ ಮೊದಲಿಯಾರ್, ಚಿನ್ನಸ್ವಾಮಿ ಮೊದಲಿಯಾರ್, ಧರ್ಮರಾಜ ಮೊದಲಿಯರ್, ತಿರುವೇಂಗಸ್ವಾಮಿ ಮೊದಲಿಯರ್ ಮುಂತಾದವರು.

ಅಣ್ಣಾಸ್ವಾಮಿ ಮೊದಲಿಯಾರ್ ಅವರು ರೈಲ್ವೆ ವಿಭಾಗದಲ್ಲಿ ಸಿವಿಲ್ ಗುತ್ತಿಗೆದಾರರಾಗಿದ್ದರು. ಇವರು ಹಳೆಯ ರೈಲು ನಿಲ್ದಾಣ ಮತ್ತು ಮೇಯೋ ಹಾಲ್ ನಿರ್ಮಿಸಿದ ಪ್ರಮುಖರು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ೧೮೫೮ರ ನಂತರದಲ್ಲಿ ಭಾರತದಾದ್ಯಂತ ರೈಲು ಮಾರ್ಗವನ್ನು ವ್ಯಾಪಕವಾಗಿ ಹೆಚ್ಚಿಸುವ ಕೆಲಸವನ್ನು ಬ್ರಿಟಿಷರು ಉದ್ದೇಶಪೂರ್ವಕವಾಗಿ ಮಾಡಿದರು. ಅಂದರೆ ಬ್ರಿಟಿಷರ ಅನುಕೂಲ ಮತ್ತು ಅಗತ್ಯಗಳಿಗನುಸಾರವಾಗಿ ಕೆಲವು ಪಟ್ಟಣ, ನಗರಗಳು ರೈಲ್ವೆ ಮಾರ್ಗದೊಳಗೆ ಬಂದವು. ಇದು ಸಂಪೂರ್ಣವಾಗಿ ಹಳೆಯ ವ್ಯಾಪಾರಿ ಮಾರ್ಗಕ್ಕೆ ಪೆಟ್ಟನ್ನು ನೀಡಿತು. ಅಷ್ಟೇ ಅಲ್ಲದೆ ಈ ಮಾರ್ಗದೊಳಗೆ ಬಂದ ಪ್ರದೇಶಗಳು ಮುಂದೆ ನಗರೀಕರಣ ಪ್ರಕ್ರಿಯೆಗೊಳಗಾಗಿ ಪ್ರಮುಖ ಪ್ರದೇಶಗಳಾದವು. ಇದು ಬ್ರಿಟಿಷರು ಬೆಂಗಳೂರನ್ನು ಪ್ರಮುಖ ಪ್ರದೇಶಗಳಲ್ಲೊಂದಾಗಿ ಗುರುತಿಸದ್ದಕ್ಕೆ ಮತ್ತು ಈ ಪ್ರದೇಶದ ಪ್ರಾಮುಖ್ಯತೆಗೆ ಹಿಡಿದ ಕನ್ನಡಿಯಾಗಿದೆ. ಈ ರೈಲ್ವೆ ಮಾರ್ಗವೇ ಇಂದಿಗೂ ಅನೇಕ ಪ್ರದೇಶಗಳ ವ್ಯಾಪಾರಿಗಳು, ವಿವಿಧ ರೀತಿಯ ಉದ್ಯೋಗಿಗಳ ಸಂಚಾರಕ್ಕೆ ಅಡಿಪಾಯವಾಗಿದೆ. ಅಣ್ಣಸ್ವಾಮಿ ಮೊದಲಿಯಾರ್ ಅವರು ರೈಲ್ವೆ ಹಳಿ ಹಾಕುವ ಪ್ರಮುಖ ಗುತ್ತಿಗೆದಾರರಾಗಿದ್ದದ್ದು ಪ್ರಭುತ್ವದೊಡನೆ ಅವರಿಗಿದ್ದ ಸಂಬಂಧವನ್ನು ತೋರಿಸುವುದು. ಹಾಗೇ ಇವರ ಖ್ಯಾತಿಗೆ ಮತ್ತೊಂದು ಕಾರಣ ಅವರು ಗಳಿಸಿದ ಆಸ್ತಿಯ ಮೂರನೆ ಒಂದು ಭಾಗವನ್ನು ಸೇವಾ ಕಾರ್ಯಗಳಿಗೆ ವ್ಯಯಿಸಿದರು ಎನ್ನಲಾಗುವುದು. ಬಿ. ಪಿ ಅಣ್ಣಾಸ್ವಾಮಿ ಮೊದಲಿಯಾರ್ ಪಬ್ಲಿಕ್ ಚಾರಿಟಿಸ್ ಎಂಬ ಸಂಸ್ಥೆಯ ಅಡಿಯಲ್ಲಿ ಅನೇಕ ವಿದ್ಯಾಸಂಸ್ಥೆಗಳನ್ನು ತೆರೆದರು. ಇವು ಅಂದಿನಿಂದ ಇಂದಿನವರೆಗೆ ಗುರುತಿಸಲ್ಪಟ್ಟ ಬಡವರಿಗೆ ವಿದ್ಯಾ ದಾನ ಮಾಡುತ್ತಿದೆ. ಒಟ್ಟಿನಲ್ಲಿ ಬೆಂಗಳೂರಿನಲ್ಲಿ ಆಧುನಿಕ ಶಿಕ್ಷಣ ಪ್ರಚಾರಕಾರ್ಯದಲ್ಲಿ ಇವರ ಪಾತ್ರವು ಮುಖ್ಯವಾಗಿದೆ. ಅಲ್ಲದೆ

ಮೂರ್ ಮಾರುಕಟ್ಟೆಗಾಗಿ ೨೩೦೦ ಚದರ ಅಡಿ ಜಾಗವನ್ನು ನೀಡಿದರು. ಹೊಸ ಮಾರುಕಟ್ಟೆಯೊಂದರ ನಿರ್ಮಾಣಕ್ಕೆ ಸ್ಥಳ ನೀಡುವುದು ಮತ್ತು ಮಾರುಕಟ್ಟೆಯ ನಿರ್ಮಾಣ ನಗರೀಕರಣ ವಿಶಾಲ ಗೊಂಡುದುದರ ಹೆಗ್ಗುರುತಾಗಿದೆ. ಮೂರ್‌ರು ಎಂದರೆ ಮುಸ್ಲಿಂರು ಎಂದರ್ಥ. ಯುರೋಪಿಯನ್ನರು ೧೫ನೇ ಶತಮಾನಕ್ಕಿಂತ ಹಿಂದಿನಿಂದಲೂ ಏಷ್ಯಾದ ಮುಸ್ಲಿಂ ವರ್ತಕರೊಡನೆ ವ್ಯಾಪಾರ ವಾಣಿಜ್ಯವನ್ನು ಹೊಂದಿದ್ದರು. ಈ ಸಮುದಾಯವನ್ನು ಮೂರ್ ಎಂದು ಗುರುತಿಸುತ್ತಿದ್ದರು. ಯುರೋಪಿಯನ್ನರು ಭಾರತವನ್ನು ವಸಾಹತುವನ್ನಾಗಿಸಿ ಕೊಂಡ ನಂತರವು ಅವರ ಕಥನಗಳು ಮತ್ತಿನ್ನಿತರ ಬರವಣಿಗೆಗಳಲ್ಲಿ ಭಾರತೀಯ ಮುಸ್ಲಿಂರನ್ನು ಮೂರ್‌ರು ಎಂದೇ ಬಹುಪಾಲು ಗುರುತಿಸಲಾಗುತ್ತಿತ್ತು. ಹಾಗೆ ಅಣ್ಣಾ ಸ್ವಾಮಿ ಮೊದಲಿಯಾರ್ ಅವರು ಫ್ರೇಸರ್ ಟೌನಿನಲ್ಲಿರುವ ಧನ್ವಂತರಿ ಆಸ್ಪತ್ರೆಗೆ ಸ್ಥಳ ನೀಡಿದರು. ಇವರು ಸಲ್ಲಿಸಿದ ಸೇವೆಗಳನ್ನು ಗಮನಿಸಿ ಬ್ರಿಟಿಶರು ಸಿ.ಐ.ಇ ಬಿರುದನ್ನು ನೀಡಿ ಗೌರವಿಸಿದರು. ಇವರ ನೆನಪಿಗಾಗಿ ಅಲಸೂರು ಕೆರೆಯ ಪಕ್ಕದ ರಸ್ತೆಗೆ ಅಣ್ಣಾಸ್ವಾಮಿ ಮೊದಲಿಯಾರ್ ರಸ್ತೆ ಎಂದು ನಾಮಕರಣ ಮಾಡಲಾಗಿದೆ. ಒಟ್ಟಿನಲ್ಲಿ ನಗರವೊಂದು ಬೆಳೆಯಲು ಬೇಕಾಗುವ ಶಿಕ್ಷಣ ವ್ಯವಸ್ಥೆ, ಮಾರುಕಟ್ಟೆ ಮತ್ತು ಆರೋಗ್ಯ ರಕ್ಷಣೆಯ ನೆಲೆಯಲ್ಲಿ ಆಸ್ಪತ್ರೆಗಳ ನಿರ್ಮಾಣದಲ್ಲಿ ಕಂಡುಬರುವ ಮೂಲಕ ಈ ಪ್ರದೇಶದ ಬೆಳವಣಿಗೆಗೆ ಕಾಣಿಕೆ ನೀಡಿದರು ಎನ್ನಬಹುದು. ಇದರೊಡನೆ ಈ ಸಮುದಾಯದವರ ಶ್ರೀಮಂತಿಕೆ ಹಾಗೂ ಪ್ರಭಾವವನ್ನು ಸೂಚಿಸುವುದು.

ಈ ಸಮುದಾಯದ ಮತ್ತೊಬ್ಬ ಪ್ರಮುಖ ವಾಣಿಜ್ಯೋದ್ಯಮಿ ಆರ್ಕಾಟ್ ನಾರಾಯಣಸ್ವಾಮಿ ಮೊದಲಿಯಾರ್. ಇವರು ಮೂಲತಃ ಶ್ರೀಮಂತರಾಗಿರದೆ ಬಡಕುಟುಂಬದಿಂದ ಬಂದವರು. ಆರಂಭಿಕ ಹಂತದಲ್ಲಿ ಸಣ್ಣ ವ್ಯಾಪಾರಿಯಾಗಿದ್ದರು. ಬೆಂಗಳೂರು ಪ್ರದೇಶದಿಂದ ತರಕಾರಿಯನ್ನು ಮದ್ರಾಸಿಗೂ ಮತ್ತು ಮದ್ರಾಸಿನಿಂದ ಉಪ್ಪನ್ನು ಬೆಂಗಳೂರಿಗೆ ತಂದು ಮಾರಾಟ ಮಾಡುತ್ತಿದ್ದರು. ೧೯ನೇ ಶತಮಾನದ ಪೂರ್ವಾರ್ಧದಲ್ಲಿ ಸಣ್ಣ ವ್ಯಾಪಾರಿಯಾಗಿದ್ದ ಇವರು ಉತ್ತರಾರ್ಧದ ಹೊತ್ತಿಗೆ ಅತ್ಯಂತ ಶ್ರೀಮಂತ ವಾಣಿಜ್ಯೋದ್ಯಮಿಗಳಲ್ಲಿ ಒಬ್ಬರಾಗಿದ್ದರು. ಇದಕ್ಕೆ ಸಾಕ್ಷಿಯಾಗಿ ಮುಂದಿನ ಘಟನೆಯನ್ನು ಕಾಣಬಹುದು. ಕ್ರಿ.ಶ ೧೮೫೨ರಲ್ಲಿ ಕ್ಯಾವರ್ಲಿ ರಸ್ತೆಯಲ್ಲಿ ಇವರು ಒಂದು ಎಂಪೋರಿಯಂ ತೆರೆದಾಗ, ಇವರ ವ್ಯಾಪಾರ ಎಷ್ಟರ ಮಟ್ಟಿಗೆ ವೃದ್ಧಿಸಿತೆಂದರೆ ಮಹಾರಾಜರೆ ಎಂಪೋರಿಯಂಗೆ ಭೇಟಿನೀಡುವಷ್ಟು ಜನಪ್ರಿಯತೆಯನ್ನು ಪಡೆದಿದ್ದರು ಎನ್ನಲಾಗುವುದು. ಅಂದರೆ ಪ್ರಭುತ್ವದೊಡನೆ ಅತ್ಯಂತ ಉತ್ತಮ ಸಂಬಂಧವಿತ್ತು ಎನ್ನಬಹುದು. ಮುಂದೆ ಪ್ರಮುಖ ಗುತ್ತಿಗೆದಾರರಾಗಿಯೂ ಕಂಡುಬರುವರು. ಕಬ್ಬನ್ ಪಾರ್ಕಿನ ಬಳಿ ಇರುವ ಆಡಳಿತ ಕಛೇರಿಯನ್ನು ನಿರ್ಮಿಸಿದ ಗುತ್ತಿಗೆದಾರರು. ಹಾಗೆ ಇವರು ಅನೇಕ ಸಾಮಾಜಿಕ ಮತ್ತು ಧಾರ್ಮಿಕ ಕ್ಷೇತ್ರದಲ್ಲಿ ಸೇವೆಯನ್ನು ಸಲ್ಲಿಸಿದರು. ಈ ಸೇವೆಗಳನ್ನು ಮೆಚ್ಚಿ ಬ್ರಿಟಿಶರು ರಾಯಬಹದ್ದೂರ್ ಎಂಬ ಬಿರುದನ್ನು ನೀಡಿ ಗೌರವಿಸಿತು. ಸಿವಿಲ್ ಸ್ಟೇಷನ್ ಮತ್ತು ಅಲಸೂರಿನಲ್ಲಿ ಬಡವರಿಗಾಗಿ ಉಚಿತ ಶಾಲೆಗಳನ್ನು ಆರಂಭಿಸಿದರು. ಇದರೊಂದಿಗೆ

ಆಧುನಿಕ ವೃತ್ತಿಪರ ಶಿಕ್ಷಣದಲ್ಲಿ ಸ್ಥಳೀಯರಿಗೆ ತರಬೇತಿ ನೀಡುವ ಸಲುವಾಗಿ ಟೆಕ್ನಿಕಲ್ ಶಾಲೆಗಳನ್ನು ಸ್ಥಾಪಿಸಿದರು. ಜೊತೆಗೆ ನಿರಾಶ್ರಿತರಿಗಾಗಿ ಮನೆ ಮತ್ತು ಛತ್ರಗಳನ್ನು ನಿರ್ಮಿಸಿದರು. ಇವರ ವಿದ್ಯಾ ಸಂಸ್ಥೆಯಲ್ಲಿ ವಿದ್ಯಾಭ್ಯಾಸ ಮಾಡಿದ ಪ್ರಮುಖರಲ್ಲಿ ಸ್ವಾತಂತ್ರ್ಯ ಹೋರಾಟಗಾರರಾದ ಬಿಪಿನ್ ಚಂದ್ರಪಾಲ್ ಅವರೂ ಒಬ್ಬರು ಎಂಬುದು ಗಮನಾರ್ಹವಾಗಿದೆ.

ಇಪ್ಪತ್ತನೇ ಶತಮಾನದಲ್ಲಿ ಕಂಡುಬರುವ ಇದೇ ಸಮುದಾಯದ ಮತ್ತೊಬ್ಬ ಪ್ರಮುಖ ವಾಣಿಜ್ಯೋದ್ಯಮಿ ತೈಲದೊರೆ ಎಂದೇ ಜನಪ್ರಿಯತೆಯನ್ನು ಹೊಂದಿದ್ದ ವಿ. ಎಸ್. ತಿರುವೇಂಗಡಸ್ವಾಮಿ. ಇವರು ಹಲವಾರು ಕಂಪನಿಗಳ ಮಾಲೀಕರಾಗಿದ್ದರು. ವಿಶೇಷವಾಗಿ ಎಣ್ಣೆ ವ್ಯಾಪಾರದಲ್ಲಿ ಪ್ರಸಿದ್ಧಿ ಪಡೆದವರು. ಇವರು ಅನೇಕ ಪೆಟ್ರೋಲ್ ಪಂಪ್, ಇಂಡಿಯಾ ಗ್ಯಾರೇಜ್‌ಗಳು ಹಾಗೂ ವಿ.ಎಸ್.ಟಿ ಗ್ರೂಪ್ ಆಫ್ ಇಂಡಸ್ಟ್ರೀಸ್‌ನ ಸಂಸ್ಥಾಪಕರು. ಮಹಾಯುದ್ಧದ ಸಂದರ್ಭದಲ್ಲಿ ನಗರದ ಎಲ್ಲಾ ಕಡೆ ಎಣ್ಣೆ ಮತ್ತು ಪೆಟ್ರೋಲ್ ಮಾರಾಟ ಮಾಡಲು ಇವರಿಗೆ ಅವಕಾಶ ಸಿಕ್ಕಿತು. ಇದರ ಮೂಲಕ ಅತ್ಯಂತ ಶ್ರೀಮಂತ ವಾಣಿಜ್ಯೋದ್ಯಮಿಗಳಲ್ಲೊಬ್ಬರಾಗಿ ಪ್ರಸಿದ್ಧಿಗೆ ಬಂದರು. ಮುಂದೆ ಇವರು ಇಂದಿನ ಶಿವಾಜಿನಗರ ಮತ್ತು ಕ್ವೀನ್ಸ್ ರಸ್ತೆಯಲ್ಲಿ ಶಾಲೆಗಳನ್ನು ತೆರೆದರು. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಮೊದಲಿಯರ್ ಸಮುದಾಯದ ಪ್ರಮುಖ ವರ್ತಕರನೇಕರು ಬೆಂಗಳೂರು ಪ್ರದೇಶದಲ್ಲಿ ಅನೇಕ ಆಧುನಿಕ ಶಿಕ್ಷಣ ಸಂಸ್ಥೆಗಳು, ಮಾರುಕಟ್ಟೆಗಳು, ಆಸ್ಪತ್ರೆಗಳು ಹಾಗೂ ಛತ್ರಗಳನ್ನು ನಿರ್ಮಿಸಿರುವರು. ಇವೆಲ್ಲವು ಸಾರ್ವಜನಿಕ ಸೇವೆಗಳಾಗಿದ್ದು, ಈ ಪ್ರದೇಶದ ಜನ ಸಾಮಾನ್ಯರಿಗೆ ಅನೇಕ ಬಗೆಯ ಮೂಲಭೂತ ಅವಶ್ಯಕತೆಗಳನ್ನು ಒದಗಿಸಿಕೊಡುವುದು. ಇದರ ಮೂಲಕ ಬೆಂಗಳೂರು ಪ್ರದೇಶದಲ್ಲಿ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಿ ನಗರೀಕರಣ ಪ್ರಕ್ರಿಯೆಯಲ್ಲಿ ತೀವ್ರತೆಯನ್ನು ಹೆಚ್ಚಿಸಿದರು. ಹಾಗೇ ಆಧುನಿಕ ಶಿಕ್ಷಣ ಮತ್ತು ತಾಂತ್ರಿಕ ಶಿಕ್ಷಣಕ್ಕೆ ಒತ್ತು ಕೊಟ್ಟಿರುವುದು ಸಹ ಗಮನಾರ್ಹವಾಗಿದೆ. ಇಲ್ಲಿ ಉದಾಹರಿಸಿರುವವರಷ್ಟೇ ಅಲ್ಲದೆ ಇನ್ನೂ ಅನೇಕ ಪ್ರಮುಖ ವಾಣಿಜ್ಯೋದ್ಯಮಿಗಳನ್ನು ಗುರುತಿಸಬಹುದು. ಆದರೆ ಅವರಲ್ಲಿ ಅನೇಕರ ಬಗೆಗೆ ಮಾಹಿತಿ ದೊರೆಯುವುದಿಲ್ಲ. ಆದರೆ ಅಂತಹ ಅನೇಕರ ಹೆಸರುಗಳು ಬೆಂಗಳೂರಿನ ದಂಡುಪ್ರದೇಶದ ಹಲವು ರಸ್ತೆಗಳಿಗೆ ಇಡಲಾಗಿದೆ. ಇದು ಆ ವ್ಯಕ್ತಿಗಳ ಪ್ರಾಮುಖ್ಯತೆ, ಶ್ರೀಮಂತಿಕೆ ಮತ್ತು ಅಂದಿನ ಸಂದರ್ಭದಲ್ಲಿ ನೀಡಿರುವ ಕೊಡುಗೆಗಳಿಗೆ ಗುರುತುಗಳಾಗಿವೆ. ಉದಾಹರಣೆಗೆ., ಧರ್ಮರಾಜ ಮೊದಲಿಯರ್, ಚಲುವರಾಜ ಮೊದಲಿಯರ್, ಅರುಣಾಚಲ ಮೊದಲಿಯರ್, ಮಾಣಿಕ್ಯವೇಲು ಮೊದಲಿಯರ್, ರಾಮಲಿಂಗಂ ಮೊದಲಿಯಾರ್ ಮೊದಲಾದವರ ಹೆಸರುಗಳಿರುವ ಬೀದಿಗಳನ್ನು ಕಾಣಬಹುದು.[೫೫]

ಈ ವರ್ತಕ ಸಮುದಾಯದವರು ಕಮಿಷನರ್‌ಗಳ ಅವಧಿಯಲ್ಲಿ ಬೆಂಗಳೂರು ದಂಡು ಪ್ರದೇಶದಲ್ಲಿ ಕಂಡುಬರುವ ಪ್ರಬಲ ವರ್ತಕ ಸಮುದಾಯವಾಗಿದೆ. ಬ್ರಿಟಿಶ್ ವರ್ತಕರು ಮತ್ತು

ಪ್ರಭುತ್ವದೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದರು ಎಂಬುದು ಅವರು ಪಡೆದ ಬಿರುದುಗಳು ಸ್ಪಷ್ಟಪಡಿಸುವುದು. ಇದೇ ನಿಟ್ಟಿನಲ್ಲಿ ಅವರು ಸಾಮಾಜಿಕ ಮತ್ತು ಧಾರ್ಮಿಕ ರಂಗದಲ್ಲಿ ಹಲವು ಹತ್ತು ಕಾರ್ಯಗಳನ್ನು ಮಾಡಬೇಕಾದರೆ ಸ್ಥಳೀಯರೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಇದಕ್ಕೆ ಶತಮಾನಗಳು ಕಳೆದರು ಸಹ ಇಂದಿಗೂ ಅವರುಗಳ ಹೆಸರುಗಳುಳ್ಳ ರಸ್ತೆಗಳು ಕನ್ನಡಿಗಳಾಗಿವೆ. ಜೊತೆಗೆ ಅವರು ಸಲ್ಲಿಸಿದ ಸೇವೆಗೆ ಸಾಕ್ಷಿಯಾಗಿವೆ. ಬೆಂಗಳೂರಿನ ನಗರಾಭಿವೃದ್ಧಿಯಲ್ಲಿ ಈ ಸಮುದಾಯದ ಪಾತ್ರದ ಮೇಲೆ ಈ ಮೇಲಿನ ವಿಚಾರಗಳು ಬೆಳಕು ಬೀರುವುದು.

### ಮುಸ್ಲಿಂ ವರ್ತಕ ಸಮುದಾಯ

ಬೆಂಗಳೂರಿನ ಪ್ರಮುಖ ವರ್ತಕ ಸಮುದಾಯಗಳಲ್ಲಿ ಮುಸ್ಲಿಂ ವರ್ತಕ ಸಮುದಾಯವು ಮುಖ್ಯವಾಗಿದೆ. ಈ ಸಮುದಾಯವು ಅಧಿಕ ಸಂಖ್ಯೆಯಲ್ಲಿ ಕರಕುಶಲಕರ್ಮಿ ಮತ್ತು ವ್ಯಾಪಾರಿಗಳನ್ನು ಒಳಗೊಂಡಿದೆ. ಈ ಅಧ್ಯಯನದಲ್ಲಿ ಮುಸ್ಲಿಂ ವರ್ತಕರ ನಡುವಿರುವ ಶಿಯಾ, ಸುನ್ನಿ ಎಂಬ ಎರಡು ಪಂಗಡಗಳನ್ನು ಭಿನ್ನವಾಗಿ ಪರಿಗಣಿಸಿಲ್ಲ. ಬದಲಾಗಿ ವ್ಯಾಪಾರ– ವಾಣಿಜ್ಯದ ಹಿನ್ನೆಲೆಯಲ್ಲಿ ಗುರುತಿಸಿಕೊಂಡಿರುವ ಮುಸ್ಲಿಂ ವರ್ತಕ ಸಮುದಾಯಗಳು ಎಂದು ಗಮನಿಸಲಾಗಿದೆ. ೯ ಮತ್ತು ೧೦ನೇ ಶತಮಾನದಲ್ಲಿಯೇ ಅರಬ್ಬರೊಡನೆ ವಿದೇಶಿ ವ್ಯಾಪಾರವು ಕರಾವಳಿ ತೀರದಲ್ಲಿ ಕಂಡುಬಂದಿತು. ಈ ವರ್ಗ ನೇರವಾಗಿ ಬೆಂಗಳೂರಿನೊಡನೆ ಸಂಪರ್ಕ ಹೊಂದಿತ್ತೋ ಇಲ್ಲವೋ ಎಂದು ಗುರುತಿಸುವುದು ಕಷ್ಟಕರ. ಮುಂದೆ ಅಲ್ಲಾವುದ್ದೀನ್ ಖಿಲ್ಜಿಯ ಕಾಲದಲ್ಲಿ ದಕ್ಷಿಣ ಭಾರತದ ಬಹುಭಾಗವನ್ನು ಯುದ್ಧದಲ್ಲಿ ಗೆಲ್ಲುವುದನ್ನು ನೋಡಬಹುದು. ಈ ಪ್ರದೇಶಗಳು ನೇರ ಆಳ್ವಿಕೆಗೆ ಒಳಪಡದಿದ್ದರು, ಮುಸ್ಲಿಂ ವರ್ತಕರಿಗೆ ಪರಿಚಿತವಾಗಿರುವ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ. ಆದರೆ ಆ ಸಂದರ್ಭದಲ್ಲಿ ಬೆಂಗಳೂರು ಇನ್ನೂ ಪ್ರಮುಖ ತಾಣವಾಗಿರಲಿಲ್ಲ. ವಿಜಯನಗರದ ಕಾಲದಲ್ಲಿ ಅವರ ಸಾಮಂತರಾದ ಕೆಂಪೇಗೌಡನು ಈ ಪ್ರದೇಶವನ್ನು ನಗರ ಪ್ರದೇಶವನ್ನಾಗಿ ಬೆಳೆಸಿರುವುದು ತಿಳಿದಿರುವ ಸಂಗತಿಯೇ ಆಗಿದೆ. ಅದೇ ಸಂದರ್ಭದಲ್ಲಿ ಬಹಮನಿ ಸುಲ್ತಾನರು, ನಂತರ ಬಿಜಾಪುರದ ಆದಿಲ್ ಶಾಹಿಗಳು ಪ್ರಮುಖರಾಗಿ ಕಂಡುಬರುವರು. ೧೬೩೮ರಲ್ಲಿ ಬಿಜಾಪುರದ ರಣದುಲ್ಲಾಖಾನನು ಬೆಂಗಳೂರಿನ ಮೇಲೆ ಆಕ್ರಮಣ ಮಾಡಿದ ನಂತರ ಮುಸ್ಲಿಂ ವರ್ತಕರು ಬಂದರೆಂದು ಅಧಿಕೃತವಾಗಿ ತಿಳಿಸಬಹುದು. ಹಾಗೆಂದ ಮಾತ್ರಕ್ಕೆ ಇದಕ್ಕೂ ಪೂರ್ವದಲ್ಲಿ ಮುಸ್ಲಿಂ ವರ್ತಕ ಸಮುದಾಯಗಳೊಡನೆ ಸಂಪರ್ಕವಿರಲಿಲ್ಲ ಎಂದು ತಳ್ಳಿ ಹಾಕುವುದು ಸಾಧ್ಯವಿಲ್ಲ. ಆದರೆ ಅದಕ್ಕೆ ಪೂರಕವಾದ ಆಕರಗಳ ಕೊರತೆ ಇದೆ. ಇಲ್ಲಿಂದ ಆಚೆಗೆ ಮುಸ್ಲಿಂ ವರ್ತಕ ಸಮುದಾಯಗಳ ಕುರಿತು ಆಕರಗಳು ದೊರೆಯುತ್ತವೆ. ಬಿಜಾಪುರದ ಆದಿಲ್‌ಶಾಹಿಗಳು ಬೆಂಗಳೂರನ್ನು ವಶಪಡಿಸಿಕೊಳ್ಳುವ ಮೂಲಕ ಈ ಪ್ರದೇಶವು ಮರಾಠರು,

ಮುಸ್ಲಿಂರು, ಅನೇಕ ಉತ್ತರ ಪ್ರದೇಶದ ವರ್ತಕ ಸಮುದಾಯಗಳಿಗೆ ನೇರವಾಗಿ ಬಾಗಿಲು ತೆರೆಯಿತು. ಹಾಗೇ ಮುಂದೆ ಬೆಂಗಳೂರು ಮೊಗಲರ ವಶವಾದಾಗ ಈ ಪ್ರದೇಶವು ಎಲ್ಲ ಬಗೆಯ ವರ್ತಕರನ್ನು ತನ್ನೆಡೆಗೆ ಆಕರ್ಷಿಸಿತು. ಮೊಗಲರ ಅಡಿಯಲ್ಲಿ ಹೆಚ್ಚು ಕಾಲ ಆಳ್ವಿಕೆಗೆ ಒಳಪಡದಿದ್ದರು ಮೊಗಲರ ದಕ್ಷಿಣದ ರಾಜಧಾನಿ ನಿರ್ಧಾರವಾಗುವವರೆಗೆ ಪ್ರಮುಖ ತಾಣವಾಗಿ ಮಾರ್ಪಟ್ಟಿತ್ತು. ಮೊಗಲರ ದಕ್ಷಿಣದ ರಾಜಧಾನಿಯಾಗಿ ಶಿರಾ ಆಯ್ಕೆಯಾದ ನಂತರ ನೆಲೆಸಿದ್ದ ಹಲವಾರು ವರ್ತಕ ಸಮುದಾಯ ಗಳು ಬೆಂಗಳೂರು ಬಿಟ್ಟು ವಲಸೆ ಹೋಗುವ ಕುರಿತು ಈಗಾಗಲೇ ಚರ್ಚಿಸಲಾಗಿದೆ.[೫೬] ಹೀಗೆ ವರ್ತಕರು ದೊಡ್ಡ ಪ್ರಮಾಣದಲ್ಲಿ ವಲಸೆ ಹೋದೊಡನೆ ಈ ಪ್ರದೇಶದೊಡನಿದ್ದ ವಾಣಿಜ್ಯ ಸಂಪರ್ಕ ಪೂರ್ಣವಾಗಿ ನಿಲ್ಲುವುದಿಲ್ಲ ಎಂಬುದು ಗಮನಾರ್ಹ. ಈ ಪ್ರಕ್ರಿಯೆಯು ಸಹ ಮುಸ್ಲಿಂ ವರ್ತಕ ಸಮುದಾಯದೊಡನೆ ಬೆಂಗಳೂರಿನ ಸಂಪರ್ಕವನ್ನು ಹೆಚ್ಚಿಸುವುದು. ಇದು ಮೈಸೂರು ಒಡೆಯರ ಆಳ್ವಿಕೆಯ ಕಾಲದಲ್ಲಿಯೂ ಮುಂದುವರೆಯಿತಾದರೂ ಹೈದರಾಲಿ ಮತ್ತು ಟಿಪ್ಪುವಿನ ಕಾಲದಲ್ಲಿ ಹೆಚ್ಚಿನ ಪ್ರೋತ್ಸಾಹವನ್ನು ಪಡೆಯಿತು. ಅಂದರೆ ೧೮ನೇ ಶತಮಾನದ ಉತ್ತರಾರ್ಧದಲ್ಲಿ ಈ ವರ್ತಕ ಸಮುದಾಯವು ಮುಖ್ಯವಾಹಿನಿಗೆ ಬಂದರೆಂದು ಹೇಳಬಹುದು. ಬೆಂಗಳೂರು ಪ್ರದೇಶದಲ್ಲಿ ಈ ವರ್ತಕ ಸಮುದಾಯದ ಶೇಖ್, ಪರ್ಶಿಯನ್, ಪಠಾಣ್, ಅರಬ್, ಕಾಂದಹಾರಿ, ಬಲೂಚಿ, ಕಚ್ ಮೆಮನ್, ದಖನಿ, ಸೈಯದ್, ಲಬ್ಬೆ, ಪಿಂಜಾರಿ ಎಂಬ ಅನೇಕ ಪಂಗಡದವರನ್ನು ಕಾಣಬಹುದು. ಈ ಹೆಸರುಗಳು ಮುಸ್ಲಿಂ ವರ್ತಕ ಸಮುದಾಯದ ಸ್ಥಳಗಳ ನೆಲೆಯಲ್ಲಿರುವುದು ಗಮನಾರ್ಹ. ಈ ಮುಸ್ಲಿಂ ವರ್ತಕ ಸಮುದಾಯಗಳು ಆ ಕಾಲದ ಅತ್ಯಂತ ಲಾಭದಾಯಕ ವ್ಯಾಪಾರವಾಗಿದ್ದ ಕುದುರೆ ಮತ್ತು ಬಟ್ಟೆ ವ್ಯವಹಾರದಲ್ಲಿ ಬಹುತೇಕವಾಗಿ ತೊಡಗಿಸಿಕೊಂಡವರಾಗಿದ್ದರು. ಬೆಂಗಳೂರಿನ ಪ್ರದೇಶದಲ್ಲಿ ಪ್ರಮುಖವಾಗಿ ಕಂಡುಬರುವ ಮುಸ್ಲಿಂ ವರ್ತಕ ಸಮುದಾಯಗಳ ವ್ಯಾಪಾರ–ವಾಣಿಜ್ಯ ಚಟುಚಟಿಕೆಗಳನ್ನು ಈ ಮುಂದೆ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.

**ಕಚ್ ಮೆಮನ್**

ವಸಹಾತು ಕಾಲಘಟ್ಟದಲ್ಲಿ ಪ್ರಬಲವಾಗಿದ್ದ ಮುಸ್ಲಿಂ ವರ್ತಕ ಸಮುದಾಯವಾಗಿದೆ. ಮೆಮನ್ ಎಂಬ ಪದ ಅರೆಬಿಕ್ ಭಾಷೆಯ ಮೂಲವನ್ನು ಹೊಂದಿದೆ. ಇದರ ಅರ್ಥ ದೇವರ ಆಶೀರ್ವಾದ ಪಡೆದವರು ಎಂದಾಗಿದೆ. ಇವರು ಮೂಲತಃ ಸಿಂಧಿನ ಲೋಹನ ಸಮುದಾಯಕ್ಕೆ ಸೇರಿದವರು. ಕಾಲಾಂತರದಲ್ಲಿ ಇಸ್ಲಾಂ ಧರ್ಮದ ಅನುಯಾಯಿಗಳಾಗಿರುವರು. ಇವರು ಕ್ರಿಶ ೧೪೭ರಲ್ಲಿ ಗುಜರಾತಿನ ಕಚ್ ಪ್ರದೇಶಕ್ಕೆ ವಲಸೆ ಬಂದರು. ಕಾಲಾಂತರದಲ್ಲಿ ವೃತ್ತಿಯ ಆಧಾರದ ಮೇಲೆ ಈ ಸಮುದಾಯದೊಳಗೆ ಅನೇಕ ಉಪ ಪಂಗಡಗಳು ಹುಟ್ಟಿಕೊಂಡವು. ಕಚ್ ಪ್ರದೇಶವನ್ನು ೧೮೧೩ರಲ್ಲಿ ಬ್ರಿಟಿಶ್ ಈಸ್ಟ್ ಇಂಡಿಯ ಕಂಪನಿ ವಶಪಡಿಸಿಕೊಂಡಿತು. ನಂತರದ ಕಾಲದಲ್ಲಿ ಕಂಪನಿಯ ನೆಲೆಗಳಾದ ಕಲ್ಕತ್ತ,

ಬಾಂಬೆ, ಮದ್ರಾಸ್ ಮೊದಲಾದ ಪ್ರದೇಶಗಳಲ್ಲಿ ಮೆಮನ್ ಸಮುದಾಯವು ಹೋಗಿ ನೆಲೆಸಿತು. ಈ ಹಿನ್ನೆಲೆಯಲ್ಲಿ ಮೆಮನ್ ಸಮುದಾಯವು ಶೈಕ್ಷಣಿಕ ಸೌಲಭ್ಯಗಳನ್ನು ಪಡೆದ ವರ್ಗವಾಗಿದ್ದು, ಪ್ರಬಲ ವಾಣಿಜ್ಯೋದ್ಯಮಿಗಳಿಂದ ಕೂಡಿತ್ತು. ಈ ಪ್ರಕ್ರಿಯೆಯ ಭಾಗವಾಗಿ ಕಂಪನಿಯ ವಶವಾಗಿದ್ದ ಬೆಂಗಳೂರಿನ ದಂಡು ಪ್ರದೇಶಕ್ಕೆ ಬಂದು ನೆಲೆಸಿದರು.[೫೭] ಈ ಪ್ರದೇಶದಲ್ಲಿ ಕಂಡುಬರುವ ಅತ್ಯಂತ ಪ್ರಮುಖ ವರ್ತಕ ಸಮುದಾಯವಾಗಿದೆ. ಈ ಸಮುದಾಯದಲ್ಲಿ ಹಜೀ ಸರ್ ಇಸ್ಮಾಯಿಲ್ ಸೇಟ್ ಬೆಂಗಳೂರಿನ ದಂಡು ಪ್ರದೇಶದಲ್ಲಿ ನೆಲೆಸಿದ್ದ ಪ್ರಮುಖ ವಾಣಿಜ್ಯೋದ್ಯಮಿ. ಇವರು ಬ್ಯಾಂಕಿಂಗ್ ವ್ಯವಹಾರ, ಜವಳಿ ಉದ್ಯಮದ ಮಾಲೀಕರಾಗಿದ್ದರು. ಇದರೊಡನೆ ರೇಸ್ ಕುದುರೆಗಳ ಆಮದು-ರಫ್ತುಗಾರರು ಮತ್ತು ಹಲವು ಉದ್ಯಮಗಳ ಮಾಲೀಕರಾಗಿದ್ದರು. ಇಸ್ಮಾಯಿಲ್ ಹಜೀ ಸಾರ್ ಸೇಟ್ ಅವರ ಬಂಕಿಂಗ್ ಹ್ಯಾಂ ಅರಮನೆಯಲ್ಲಿ ನೀಡಿದ ಸೇವೆಯನ್ನು ಪರಿಗಣಿಸಿ ಐದನೇ ಜಾರ್ಜ್ 'ಕೈಸರ್-ಇ-ಹಿಂದ್' ಎಂಬ ಬಿರುದನ್ನು ನೀಡಿ ಗೌರವಿಸಿದರು. ಅದಷ್ಟೇ ಅಲ್ಲದೆ, ಮೈಸೂರಿನ ಅರಸರು ಸಹ ಇವರಿಗೆ 'ಪ್ರೈಡ್ ಆಫ್ ಮರ್ಚೇಂಟ್' ಎಂಬ ಬಿರುದನ್ನು ನೀಡಿದ್ದರು.[೫೮] ಜೊತೆಗೆ ಇವರು ಮದ್ರಾಸ್ ಶಾಸಕಾಂಗದ ಸದಸ್ಯತ್ವವನ್ನು ಹೊಂದಿದ್ದರು. ಇವೆಲ್ಲವನ್ನು ಗಮನಿಸಿದಾಗ ಇವರ ಶ್ರೀಮಂತಿಕೆ ಹಾಗೂ ಮೆಮನ್ ಸಮುದಾಯದ ಪ್ರಾಬಲ್ಯವನ್ನು ಊಹಿಸಬಹುದಾಗಿದೆ. ಬೆಂಗಳೂರು ಪ್ರದೇಶದಲ್ಲಿ ಇವರ ಸಂಖ್ಯೆ ಕಡಿಮೆಯಿದ್ದರೂ ಸಹ ವಾಣಿಜ್ಯದ ಬೆಳವಣಿಗೆಯಲ್ಲಿ ಈ ಸಮುದಾಯದ ಪಾತ್ರ ದೊಡ್ಡದಾಗಿದೆ. ಇವರು ಭಾರತದ ಪ್ರಮುಖ ನಗರಗಳಾದ ಬಾಂಬೆ, ಕಲ್ಕತ್ತ, ಮದ್ರಾಸ್‌ಗಳಲ್ಲಿಯೂ ವಾಣಿಜ್ಯದಲ್ಲಿ ನಿರತವಾಗಿದ್ದ ಸಮುದಾಯ. ಜೊತೆಗೆ ಅಲ್ಲಿರುವ ತಮ್ಮ ಸಮುದಾಯಗಳ ವರ್ತಕ ಸಂಘಟನೆಗಳೊಡನೆ ಸಂಪರ್ಕ ಹೊಂದಿರುವ ಸಾಧ್ಯತೆ ಇದೆ. ಆದರೆ ನೇರವಾಗಿ ಈ ಕುರಿತ ದಾಖಲೆಗಳು ದೊರೆಯುವುದು ದುರ್ಲಭವಾಗಿದೆ.

### ಶೇಖ್ ಮತ್ತು ಪಠಾಣ್

ಶೇಖ್ ಪಂಗಂಡವು ಅಬು ಬರ್ಕ್‌ನ ವಂಶಕ್ಕೆ ಸೇರಿದವರು ಮತ್ತು ಪಠಾಣರು ಅಫಘನ್ ಮೂಲದವರು. ಈ ಸಮುದಾಯಗಳ ಪ್ರಮುಖ ವೃತ್ತಿ ವ್ಯಾಪಾರ. ಮುಖ್ಯವಾಗಿ ಪಶ್ಚಿಮ ಕರಾವಳಿ ಪ್ರದೇಶದೊಂದಿಗೆ ಸಂಪರ್ಕಹೊಂದಿದ್ದರು. ಇವರು ಬೆಂಗಳೂರು ಪ್ರದೇಶದಲ್ಲಿ ರೇಷ್ಮೆ ಬಟ್ಟೆ ವ್ಯಾಪಾರದಲ್ಲಿ ಚಟುವಟಿಕೆಯಿಂದ ಕೂಡಿದ್ದ ಸಮುದಾಯವಾಗಿವೆ.[೫೯]

### ಲಬ್ಬೆ

ಇವರು ದೊಡ್ಡ ಮಟ್ಟದ ಉದ್ಯಮಶೀಲ ವರ್ತಕರು. ವ್ಯಾಪಾರದ ಹಿನ್ನೆಲೆಯಲ್ಲಿ ಅರಬ್, ಪರ್ಷಿಯಾದಿಂದ ಬಂದ ಭಾರತಕ್ಕೆ ಬಂದ ವರ್ತಕ ಸಮುದಾಯ. ಅರಬ್ಬಿ ಮತ್ತು ಪರ್ಷಿಯನ್ನರು

ಭಾರತೀಯ ಮಹಿಳೆಯರನ್ನು ವಿವಾಹವಾದರು. ಇವರಿಗೆ ಜನಿಸಿದ ಮಕ್ಕಳು ಇಸ್ಲಾಂ ಧರ್ಮದ ಅನುಯಾಯಿಗಳಾಗಿದ್ದು, ಪ್ರಮುಖ ವರ್ತಕ ಸಮುದಾಯವಾಗಿದ್ದವು. ಈ ವರ್ಗವನ್ನು ಲಬ್ಬೆ ಸಮುದಾಯ ಎಂದು ಕರೆಯಲಾಗುವುದು. ಲಬ್ಬೆ ಸಮುದಾಯವು ಕೋರಮಂಡಲ ಕರಾವಳಿಯ ನಾಗಪಟ್ಟಣಂಗೆ ಸೇರಿದವರು. ಅದೇ ರೀತಿಯಲ್ಲಿ ಮಾಪಿಳ್ಳೆ ಸಮುದಾಯವು ಮಲಬಾರ್ ತೀರಪ್ರದೇಶಕ್ಕೆ ಸೇರಿದವರು. ಲಬ್ಬೆ ಔದ್ಯೋಗಿಕ ವಾಣಿಜ್ಯ ಸಮುದಾಯವಾಗಿದ್ದು, ನಗರ ಪ್ರದೇಶದಲ್ಲಿ ನೆಲೆ ನಿಲ್ಲುತ್ತಿದ್ದರು.[೬೦] ಇವರು ಬೆಂಗಳೂರು ಪೇಟೆ ಮತ್ತು ಬೆಂಗಳೂರಿನ ದಂಡು ಪ್ರದೇಶದಲ್ಲಿ ಎರಡು ಕಡೆ ನೆಲೆಸಿದ್ದರು. ಇಂದಿಗೂ ಬೆಂಗಳೂರು ಪೇಟೆಗೆ ಸಮೀಪದಲ್ಲಿ ಈ ಸಮುದಾಯಕ್ಕೆ ಸೇರಿದ ಮಸೀದಿಗಳನ್ನು ಕಾಣಬಹುದು. ಇವು ಅವರ ಪ್ರಾಬಲ್ಯಕ್ಕಿರುವ ಪ್ರಮುಖ ಗುರುತುಗಳಾಗಿವೆ. ಈ ಸಮುದಾಯದವರು ಮುಖ್ಯವಾಗಿ ಲೋಹದ ಯಂತ್ರ ಭಾಗಗಳನ್ನು ಮಾರುತ್ತಿದ್ದರು. ಜೊತೆಗೆ ಚರ್ಮದ ಕೈಗಾರಿಕೆಯಲ್ಲಿ ಪ್ರಮುಖರಾಗಿದ್ದರು. ಭಾರಿ ಮೊತ್ತದ ಚರ್ಮದ ಉತ್ಪನ್ನಗಳನ್ನು ಮಾರಾಟ ಮಾಡುತ್ತಿದ್ದರು. ಅಲ್ಲದೆ ಭಾರಿ ಮೊತ್ತದ ಕಾಫಿ ಉತ್ಪನ್ನಗಳ ಸಗಟು ಮಾರಾಟಗಾರರು ಸಹ ಆಗಿದ್ದರು. ೧೮೯೧ರ ಜನಗಣತಿಯ ಪ್ರಕಾರ ಒಟ್ಟು ಜನಸಂಖ್ಯೆಯಲ್ಲಿ ಇವರು ಶೇಕಡ ೦.೮೨ರಷ್ಟಿದ್ದರು.

### ಡೆಕ್ಕನಿ ಮುಸ್ಲಿಮರು

ಇವರನ್ನು ನವಯತ್ ಅಥವಾ ಮುಸ್ಲಿಂ ಕೊಂಕಣಿಗರು ಎಂದು ಕರೆಯಲಾಗಿದೆ. ನವಯತ್ ಎಂದರೆ ಅರಾಬಿಕ್ ಭಾಷೆಯಲ್ಲಿ ನಾವಿಕ ಎಂದರ್ಥ. ಇವರು ಇರಾಕ್ ದೇಶದ ಮೂಲದವ ರಾಗಿರುವರು. ಏಳನೆಯ ಶತಮಾನದ ಉತ್ತರಾರ್ಧದಲ್ಲಿ ಇರಾಕ್ ಪ್ರದೇಶದಲ್ಲಿ ಉಂಟಾದ ರಾಜಕೀಯ ಏರುಪೇರುಗಳಿಂದ ತೊಂದರೆಗೊಳಗಾಗಿ ಅಲ್ಲಿನ ಉಪಟಳವನ್ನು ತಡೆಯಲಾಗದೆ ಭಾರತದ ಭಟ್ಕಳ ಪರಿಸರದಲ್ಲಿ ನೆಲೆಸಿದರು. ನಂತರ ಕರಾವಳಿ ತೀರದಾದ್ಯಂತ ಹರಡಿದರು. ಮುಖ್ಯವಾಗಿ ಗೋವ, ಮಹರಾಷ್ಟ್ರಗಳಲ್ಲಿ ಬಂದು ನೆಲೆಸಿದರು. ಇವರ ಭಾಷೆಯು ಸ್ಥಳೀಯ ಭಾಷೆಯೇ ಆಗಿರುತ್ತದೆ. ಆದರೆ ವಾಕ್ಯಗಳಲ್ಲಿ ಅರಬಿಕ್ ಮತ್ತು ಪರ್ಷಿಯನ್ ಭಾಷೆಯ ಪದಗಳನ್ನು ಅಲ್ಲಲ್ಲಿ ಬಳಸುವರು. ಕೊಂಕಣಿಯನ್ನು ಅರಾಬಿಕ್ ಲಿಪಿಯಲ್ಲಿ ಬರೆಯುತ್ತಾರೆ.[೬೧] ೧೬ನೇ ಶತಮಾನದವರೆಗೂ ಅರಬರು ಮತ್ತು ಪರ್ಷಿಯನ್ನರು ಪ್ರಂಪಚದಲ್ಲಿಯೇ ಅತ್ಯಂತ ಪ್ರಬಲ ವರ್ತಕ ಸಮುದಾಯವಾಗಿದ್ದವು. ಅವರೊಂದಿಗೆ ತಮ್ಮನ್ನು ಗುರುತಿಸಿಕೊಳ್ಳುತ್ತಿದ್ದ ಈ ಸಮುದಾಯವು ಪ್ರಬಲರಾಗಿದ್ದರು.

### ರಾಜಾಸ್ಥಾನಿಗಳು

ರಾಜಾಸ್ಥಾನಿಗಳು ಭಾರತದ ವಿವಿಧ ಪ್ರದೇಶಗಳಲ್ಲಿ ನೆಲೆ ನಿಂತು ವಿಶಾಲವಾದ ವ್ಯಾಪಾರ ಜಾಲವನ್ನು ಹೊಂದಿದ ವರ್ತಕ ಸಮುದಾಯದವರಾಗಿದ್ದಾರೆ. ಬೆಂಗಳೂರು ಪ್ರದೇಶದಲ್ಲಿಯು ಈ ವರ್ತಕ ಸಮುದಾಯ ಮುಖ್ಯ ಪಾತ್ರವಹಿಸಿರುವುದನ್ನು ಗುರುತಿಸಬಹುದು. ಇದು ರಾಜಸ್ಥಾನದಿಂದ

ವಲಸೆ ಬಂದ ವರ್ತಕ ಸಮುದಾಯವಾಗಿದೆ. ಇವರು ಇಲ್ಲಿಗೆ ವಲಸೆ ಬರುವ ಕಾರಣಗಳು ಹಲವು. ಒಂದನೆಯದಾಗಿ, ರಾಜಸ್ಥಾನ ಹೆಚ್ಚಾಗಿ ಮರುಭೂಮಿ ಪ್ರದೇಶವನ್ನು ಹೊಂದಿದೆ. ಹಾಗಾಗಿ ನೀರಿನ ಅಭಾವ ಹಾಗೂ ಉತ್ತಮ ಸಾರಿಗೆ ವ್ಯವಸ್ಥೆಯ ಕೊರತೆ ಇದೆ. ಎರಡನೆಯದಾಗಿ, ವ್ಯವಸಾಯ ಮಾಡಲು ಯೋಗ್ಯವಾದ ವಾತಾವರಣವಿಲ್ಲದಿರುವುದು. ಮೂರನೆಯದಾಗಿ, ಬ್ರಿಟಿಶ್ ವರ್ತಕ ಕಂಪನಿಯು ಜೋಧ್‌ಪುರವನ್ನು ಒಳಗೊಂಡಂತೆ ಹಲವು ಮುಖ್ಯ ಪ್ರದೇಶಗಳನ್ನು ವಶಪಡಿಸಿಕೊಂಡರು. ಇದರಿಂದಾಗಿ ಪ್ರಮುಖ ವ್ಯಾಪಾರ–ವಾಣಿಜ್ಯ ಚಟುವಟಿಕೆಗಳು ಕಂಪನಿಯ ಅಧೀನಕ್ಕೆ ಒಳಪಟ್ಟಿತು. ನಾಲ್ಕನೆಯದಾಗಿ, ಸ್ಥಳೀಯವಾಗಿ ರಾಜಾಸ್ಥಾನದಲ್ಲಿ ವ್ಯಾಪಾರ ಸಮುದಾಯಗಳಲ್ಲಿ ಉಂಟಾದ ಪೈಪೋಟಿ. ಇವುಗಳು ವ್ಯಾಪಾರದ ಉದ್ದೇಶದಿಂದ ಬೇರೆ ಬೇರೆ ಪ್ರದೇಶಗಳಿಗೆ ವಲಸೆ ಹೋಗಲು ಪ್ರೋತ್ಸಾಹಿಸಿತು.[೬]

ಈ ವರ್ತಕ ಸಮುದಾಯವು ಬೆಂಗಳೂರಿಗೆ ಯಾವಾಗ ವಲಸೆ ಬಂದರು ಎಂಬುದರ ಬಗ್ಗೆ ನಿಖರ ಮಾಹಿತಿಗಳಿಲ್ಲ. ಆದರೆ ಇವರು ಮೂಲತಃ ಜೈನ ಧರ್ಮಾವಲಂಬಿಗಳು. ಜೈನ ಧರ್ಮ ಆರಂಭದಿಂದಲೂ ವರ್ತಕ ಸಮುದಾಯ ಅಥವಾ ವಾಣಿಜ್ಯ ವ್ಯಾಪಾರವನ್ನು ಪ್ರೋತ್ಸಾಹಿಸುತ್ತಿದ್ದ ಧರ್ಮ ಎನ್ನಬಹುದು. ಮತ್ತೊಂದು ವಿಚಾರವೆಂದರೆ ಹೊಯ್ಸಳರ ವಿಷ್ಣುವರ್ಧನನ ಕಾಲದವರೆಗೆ ಕರ್ನಾಟಕದ ಹಲವು ಅರಸು ಮನೆತನಗಳು ಜೈನ ಧರ್ಮಕ್ಕೆ ರಾಜಾಶ್ರಯ ನೀಡಿದ್ದವು. ೧೧ನೇ ಶತಮಾನದ ನಂತರ ಜೈನರ ಪ್ರಾಬಲ್ಯ ಕರ್ನಾಟಕದ ಪ್ರದೇಶದಲ್ಲಿ ಕಡಿಮೆಯಾಗತೊಡಗಿದ್ದನ್ನು ಗುರುತಿಸಬಹುದು. ಇನ್ನು ಫಜಲ್ ಹಸನ್ ಹೇಳುವಂತೆ ಬೆಂಗಳೂರಿನ ಗವಿಗಂಗಾಧರ ದೇವಾಲಯವು ಜೈನರ ಕೇಂದ್ರವಾಗಿತ್ತು. ಹಾಗೇ ಮತ್ತೊಂದು ಪ್ರಮುಖ ವಿಚಾರವೆಂದರೆ ಕೆಂಪೇಗೌಡನು ಅಚ್ಯುತರಾಯನ ಕಾಲದಲ್ಲಿ ಬಂಧನಕ್ಕೊಳಗಾದಾಗ ರಾಜಸ್ಥಾನಿ ಸ್ನೇಹಿತರ ಸಹಾಯದಿಂದ ಬಿಡುಗಡೆ ಹೊಂದಿದನು.[೬೩] ಈ ವಿಚಾರಗಳನ್ನು ಪರಿಶೀಲಿಸಿ ನೋಡಿದಾಗ ಕೆಂಪೇಗೌಡನಿಂದ ಬೆಂಗಳೂರು ಪ್ರದೇಶವು ರಾಜಧಾನಿಯಾಗಿ ನಿರ್ಮಾಣಗೊಳ್ಳುವುದಕ್ಕಿಂತ ಮೊದಲೇ ಜೈನರು ಬೆಂಗಳೂರಿನೊಂದಿಗೆ ಸಂಬಂಧವನ್ನು ಹೊಂದಿದ್ದರು ಎಂಬುದು ಖಚಿತವಾಗುತ್ತದೆ. ಈ ನಿಟ್ಟಿನಲ್ಲಿ ಅವರು ರಾಜಾಸ್ಥಾನಿ ವರ್ತಕರು ಸಹ ಆಗಿರುವ ಸಾಧ್ಯತೆ ಹೆಚ್ಚಿದೆ. ಹಾಗೇ ರಾಜಸ್ಥಾನಿ ವರ್ತಕರು ಈ ಪ್ರದೇಶದಲ್ಲಿ ಬಹಳ ಹಿಂದಿನಿಂದಲೂ ಇರುವುದಕ್ಕೆ ಸಾಕ್ಷಿ ಎಂಬಂತೆ ಇನ್ನೂರು ವರ್ಷಗಳಿಗಿಂತ ಹಳೆಯದಾದ ದಿಗಂಬರ ಜೈನದೇವಾಲಯವು ಬೆಂಗಳೂರು ಪ್ರದೇಶದಲ್ಲಿದೆ.

ರಾಜಾಸ್ಥಾನಿ ವರ್ತಕ ಸಮುದಾಯದವರಲ್ಲಿ ಮಹೇಶ್ವರಿ, ಅಗರ್‌ವಾಲ್, ದಿಂಗಬರ್, ಶ್ವೇತಾಂಬರ್, ಸ್ಥಾನಕ, ಓಸ್‌ವಾಲ್ ಜೈನರು, ಚೌದ್ರಿ, ರಜಪೂತ, ಸೋನಿ, ಪುರೋಹಿತ ಎಂಬ ಹಲವು ಪಂಗಡಗಳಿವೆ. ಇವರನ್ನು ಸಾಮಾನ್ಯವಾಗಿ ಮಾರ್ವಾಡಿ, ಸೇಟ್, ಶೆಕಾವತಿ ಎಂದು ಕರೆಯಲಾಗಿದೆ. ಮಾರ್ವಾಡಿ ಎಂದರೆ ಮಾರ್ವಾಡದ ನಿವಾಸಿಗಳು ಎಂದರ್ಥ. ಶೆಕಾವತಿ ಎಂದರೆ

ಮಾಂಡ್ವಾ, ಫತೇಪುರ್, ರಾಮಘರ್, ಬಿಸ್ಸೌ ಮತ್ತು ಚುರು ಪ್ರದೇಶಗಳಿಗೆ ಸೇರಿದವರು ಎಂದರ್ಥ. ಸೇಟ್ ಎಂದರೆ ವೈಶ್ಯರೆಂದರ್ಥ. ಈ ವರ್ತಕ ಸಮುದಾಯವು ದೇಶದ ಇತರ ಭಾಗಗಳಂತೆ ಕರ್ನಾಟಕದ ಎಲ್ಲ ನಗರಗಳಲ್ಲಿ ನೆಲೆಸಿದ್ದಾರೆ. ರಾಜಸ್ಥಾನಿಗಳಲ್ಲಿ ಜೈನ ಸಮುದಾಯದ ಶ್ವೇತಾಂಬರರು ಅಧಿಕ ಸಂಖ್ಯೆಯಲ್ಲಿದ್ದಾರೆ. ಬೆಂಗಳೂರಿನಲ್ಲಿ ಎಲ್ಲಾ ಪಂಗಡದವರು ನೆಲೆಸಿದ್ದು, ಇವರಲ್ಲಿ ಮುಖ್ಯವಾಗಿ ಮಹೇಶ್ವರಿ, ಅಗರ್‌ವಾಲ್ ಮತ್ತು ಓಸ್‌ವಾಲ್ ಜೈನರು ಹೆಚ್ಚಾಗಿರುವರು.[೬೪] ಮಹೇಶ್ವರಿ ಜೈನರು ಜೋಧಪುರ ಕಡೆಯವರು. ರಾಜಪೂತರು ಮತ್ತು ಅಗರವಾಲರು ಅಗೆಸೇನನ ವಂಶಿಕರು ಎಂದು ಹೇಳಿಕೊಳ್ಳುವರು. ಹಾಗೆ ಓಸ್‌ವಾಲ್ ಜೈನರು ಓಸಿಯಾನ್ ಎಂಬ ಪ್ರದೇಶದ ಶ್ವೇತಾಂಬರ ಜೈನರು. ಜೈನರು ಬೆಂಗಳೂರಿನಲ್ಲಿ ಆರಂಭದಿಂದಲೂ ತಾಮ್ರ ಮತ್ತು ಕಂಚಿನ ಪಾತ್ರೆಗಳ ವ್ಯಾಪಾರ ಮಾಡುವರು. ಜೊತೆಗೆ ಲೇವಾದೇವಿ, ವಜ್ರ, ಆಭರಣದ ವ್ಯಾಪಾರ ವಾಣಿಜ್ಯಗಳಲ್ಲಿ ತೊಡಗಿಸಿ ಕೊಂಡಿದ್ದರು. ಕೆಲವರು ದೊಡ್ಡ ದೊಡ್ಡ ಎಸ್ಟೇಟ್‌ಗಳ ಮಾಲೀಕರಾಗಿದ್ದರೆ, ಇನ್ನೂ ಕೆಲವರು ಉದ್ಯಮಶೀಲರಾಗಿ ಗುರುತಿಸಿಕೊಂಡಿರುವರು. ಇವರು ಹಲವು ಕೈಗಾರಿಕೆಗಳ ಮಾಲೀಕರಾಗಿ ಕಾರ್ಯ ನಿರತರಾಗಿದ್ದರು. ೧೮೯೧ರ ಜನಗಣತಿಯ ಪ್ರಕಾರ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೨೦ರಷ್ಟು ಬೆಂಗಳೂರು ಪ್ರದೇಶದಲ್ಲಿ ನೆಲೆಸಿದ್ದರು. ಇದು ಇವರ ಪ್ರಾಬಲ್ಯಕ್ಕೆ ಉದಾಹರಣೆಯಾಗಿದೆ.

ಟಿಪ್ಪುವಿನ ಮರಣದ ನಂತರ ಉಂಟಾದ ಹೊಸ ರಾಜಕೀಯ ಬದಲಾವಣೆಗಳು ಅನೇಕ ಶ್ರೀಮಂತ ವರ್ತಕರನ್ನು ಬೆಂಗಳೂರಿಗೆ ಸೆಳೆಯಿತು. ಏಕೆಂದರೆ ಟಿಪ್ಪು ತನ್ನ ರಾಜ್ಯದ ಪ್ರಮುಖ ವ್ಯಾಪಾರ ವಹಿವಾಟುಗಳನ್ನು ಸರ್ಕಾರದ ನಿಯಂತ್ರಣದಲ್ಲಿ ತರಲು ಪ್ರಯತ್ನಿಸಿದ್ದನು. ಹಾಗಾಗಿ ಖಾಸಗಿ ವಾಣಿಜ್ಯೋದ್ಯಮಿಗಳ ಪಾತ್ರ ಕುಸಿತಗೊಂಡಿತ್ತು. ಕ್ರಿ.ಶ ೧೮೦೯ರಲ್ಲಿ ಕಂಪನಿಯ ಸೈನ್ಯ ಬೆಂಗಳೂರಿನಲ್ಲಿ ನೆಲೆ ನಿಲ್ಲಲು ದಂಡುಪ್ರದೇಶವನ್ನು ನಿರ್ಮಿಸಲು ಆರಂಭಿಸಿತು. ಈ ಸಂದರ್ಭದಲ್ಲಿ ಬ್ಯಾರಕ್‌ಗಳನ್ನು ಕಟ್ಟಲು ಹಣದ ಕೊರತೆ ಉಂಟಾಗುವುದು. ಜೋಧ್‌ಪುರದ ಕಡೆಯಿಂದ ಎತ್ತಿನಗಾಡಿಗಳಲ್ಲಿ ವಲಸೆ ಬಂದಿದ್ದ ಮಾರ್‍ವಾಡಿಗಳು ಆಗ ಕಂಪನಿಯ ಸೈನಿಕರಿಗೆ ಬ್ಯಾಂಕರ್‌ಗಳಾಗಿ ಕಾರ್ಯನಿರ್ವಹಿಸಿದರು. ಜೊತೆಗೆ ಕ್ರಿ.ಶ ೧೮೬೪ರಲ್ಲಿ ಅಠಾರಾ ಕಛೇರಿಯನ್ನು ನಿರ್ಮಿಸಲು ಬನ್ಸೀಲಾಲ್ ಅಭೀರ್ ಚಂದ್ (ರತನ್ ಲಾಲ್) ಎಂಬ ಮಾರ್ವಾಡಿಗೆ ಕಟ್ಟಡದ ಗುತ್ತಿಗೆ ಕೊಡಲಾಯಿತು. ಈ ಕಛೇರಿಯನ್ನು ೧೮೬೮ರಲ್ಲಿ ಪೂರ್ಣ ಗೊಳಿಸಲಾಯಿತು. ಆದರೆ ಹಲವು ವರ್ಷಗಳು ಕಳೆದರು ಬ್ರಿಟಿಶ್ ಸರ್ಕಾರದವರು ಹಣ ಸಂದಾಯ ಮಾಡದೆ ಇದ್ದರು. ಆಗ ರತನ್ ಲಾಲ್ ಬ್ರಿಟಿಶ್ ಸರ್ಕಾರದವರು ತಕ್ಷಣವೇ ಹಣ ಸಂದಾಯ ಮಾಡಬೇಕು ಇಲ್ಲದಿದ್ದರೆ ಕಟ್ಟಡವನ್ನು ತನ್ನ ವಶಕ್ಕೆ ತೆಗೆದುಕೊಳ್ಳುತ್ತಾನೆ ಎಂದು ಬೆದರಿಕೆಯೊಡ್ಡುವ ಮೂಲಕ ಒತ್ತಡ ಹೇರಿದನು. ಅಲ್ಲದೆ ಈ ಕಟ್ಟಡವನ್ನು ತನ್ನ ಅಧೀನಕ್ಕೆ ತೆಗೆದುಕೊಂಡು ಬಾಕಿ ಹಣ ಸಂದಾಯ ಆಗುವವರೆಗೆ ತನ್ನ ಅಡಿಯಲ್ಲಿ ಕಾರ್ಯ

ನಿರ್ವಹಿಸುವ ಇನ್ನೂರಕ್ಕೂ ಹೆಚ್ಚು ಜನರ ವಸತಿಗೆ ಬಳಸಿಕೊಳ್ಳುತ್ತೇನೆ ಎಂದು ಬ್ರಿಟಿಶ್ ಕಮೀಷನರಿಗೆ ಹೇಳಿದನು. ಅಂದರೆ, ಆತ ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಎಷ್ಟು ಸಧೃಡವಾದ ವ್ಯಕ್ತಿಯಾಗಿದ್ದನೆಂಬುದು ತಿಳಿದುಬರುತ್ತದೆ. ಕ್ರಿ.ಶ ೧೮೫೦ರ ದಶಕದಲ್ಲಿ ಮಾರ್ವಾಡಿ ಬಜಾರ್‌ನ ಪ್ರಸಿದ್ಧ ವ್ಯಾಪಾರಿಗಳಲ್ಲಿ ಇರಾನ್ ಚಂದ್, ಚೋಗಾಲಾಲ್ ಜವತಾರಾಜ್ ಪ್ರಮುಖರಾಗಿ ಕಂಡುಬರುವರು. ೧೮೯೬–೯೯ರಲ್ಲಿ ಸರ್ ವಿನ್‌ಸ್ಟನ್ ಚರ್ಚಿಲ್ ದಂಡುಪ್ರದೇಶದಲ್ಲಿ ಕಾರ್ಯ ನಿರ್ವಹಿಸಲು ಬಂದಾಗ ಇಲ್ಲಿನ ಮಾರ್ವಾಡಿಗಳು ಲೇವಾದೇವಿ ಉದ್ಯಮದಲ್ಲಿ ತೊಡಗಿದ್ದು, ದಂಡುಪ್ರದೇಶದ ಸೈನಿಕರಿಗೆ ಹಣದ ಅವಶ್ಯಕತೆ ಉಂಟಾದಲ್ಲಿ ಸಾಲ ನೀಡಿ ಅಧಿಕ ಬಡ್ಡಿಯನ್ನು ಪಡೆಯುತ್ತಿದ್ದರು ಎಂದು ಉಲ್ಲೇಖಿಸಿರುವನು. ಚಿಕ್ಕಪೇಟೆಯಲ್ಲಿ ಕ್ರಿ.ಶ ೧೯೨೦ರಲ್ಲಿ ಚಮ್ನಾಜಿ ಡೂಂಗಾಜಿಯವರು ಜೈನ ಮಂದಿರ ಕಟ್ಟುವ ಕಾರ್ಯದ ನೇತೃತ್ವವನ್ನು ವಹಿಸಿಕೊಂಡರು.[೬೫] ಇವೆಲ್ಲವು ರಾಜಾಸ್ಥಾನದಿಂದ ಬಂದಿದ್ದ ಜೈನ ವರ್ತಕ ಸಮುದಾಯದ ಪ್ರಾಬಲ್ಯಕ್ಕೆ ಸಾಕ್ಷಿಯಾಗಿದೆ.

ಈ ಸಮುದಾಯ ಮೊದಲು ಚಿಕ್ಕಪೇಟೆಯಲ್ಲಿ ನೆಲೆನಿಂತರು. ನಂತರ ಕಂಟೋನ್ಮೆಂಟ್ ಸ್ಥಾಪನೆಗೊಂಡಾಗ ಅನೇಕ ಶ್ರೀಮಂತ ವರ್ತಕರು ಅಲ್ಲಿಗೆ ವಲಸೆಹೋದರು. ಕಂಟೋನ್ಮೆಂಟ್ ಪ್ರದೇಶದಲ್ಲಿ ಇವರ ವಸತಿ ನೆಲೆಯ ಕುರುಹುಗಳು ಇಂದಿಗೂ ಸಹ ಇದೆ. ಮುಂದೆ ಗಾಂಧಿನಗರ, ವಿಶ್ವೇಶ್ವರಪುರಂ, ಯಲಹಂಕ ಮೊದಲಾದ ಕಡೆ ನೆಲೆಸಿದರು. ಇಂದು ಅವರು ಎಲ್ಲೆಲ್ಲಿ ವ್ಯಾಪಾರ ನಡೆಯುತ್ತದೆಯೋ ಆ ಎಲ್ಲ ಪ್ರಮುಖ ಸ್ಥಳಗಳಲ್ಲಿ ಕಂಡುಬರುವರು. ೧೯ನೇ ಶತಮಾನದ ಹಾರ್ಡ್‌ವೇರ್, ಎಲೆಕ್ಟ್ರಾನಿಕ್ ವಸ್ತುಗಳು, ಬಟ್ಟೆ ವ್ಯಾಪಾರಗಳಲ್ಲಿ ತೊಡಗಿರುತ್ತಾರೆ. ಆರ್ಥಿಕವಾಗಿ ಲಾಭ ತರುವ ಸಗಟು ವ್ಯವಹಾರವನ್ನು ಮಾಡುತ್ತಾರೆ.

**ಗುಜರಾತಿಗಳು**

ಇವರು ಪ್ರಮುಖ ವಿನಿಮಯ–ವರ್ತಕ ಸಮುದಾಯವಾಗಿದೆ. ಭಾರತದ ವಿವಿಧ ಭಾಗಗಳಲ್ಲಿ ನೆಲೆನಿಂತು, ವ್ಯಾಪಾರ–ವಾಣಿಜ್ಯಗಳಲ್ಲಿ ಪ್ರಮುಖ ಸ್ಥಾನವನ್ನು ಹೊಂದಿದ್ದಾರೆ. ಗುಜರಾತ್ ಪ್ರದೇಶದ ಹಿನ್ನೆಲೆಯಲ್ಲಿ ಗುರುತಿಸಿಕೊಂಡಿರುವುದರಿಂದ ಇವರನ್ನು ಗುಜರಾತಿಗಳು ಎಂದು ಕರೆಯಲಾಗುತ್ತದೆ. ಬೆಂಗಳೂರು ಪ್ರದೇಶದಲ್ಲಿರುವ ಗುಜರಾತಿ ಸಮುದಾಯದವರು ಗುಜರಾತಿನ ವಿವಿಧ ಪ್ರದೇಶಗಳಿಂದ ಬಂದವರಾಗಿದ್ದಾರೆ. ಗುಜರಾತಿಗಳಲ್ಲಿ ಮುಖ್ಯವಾಗಿ ಪಟೇಲ್, ವಾಣಿಯಾ, ಬ್ರಾಹ್ಮಣ, ಬನಿಯಾ, ಅಂಬಾನಿ, ಗಾಮಿ ಮತ್ತು ಗಡವಿಗಳು ಪ್ರಮುಖರು.[೬೬] ಈ ಸಮುದಾಯ ದವರು ವ್ಯಾಪಾರ ಮತ್ತು ಉದ್ದಿಮೆಗಳಲ್ಲಿ ನಿಪುಣರು. ಗುಜರಾತಿಯರು ಚಿಕ್ಕದೇವರಾಜ ಒಡೆಯರರ ಕಾಲದಲ್ಲಿ ಬೆಂಗಳೂರು ಪ್ರದೇಶಕ್ಕೆ ಬಂದು ನೆಲೆಸಿದರು. ಇದಕ್ಕೆ ಪೂರಕವಾಗಿ ಬೆಂಗಳೂರು ಪೇಟೆಯಲ್ಲಿರುವ ಕಾಶಿ ವಿಶ್ವೇಶ್ವರ ದೇವಾಲಯವನ್ನು ಗುರ್ಜರ ಬ್ರಾಹ್ಮಣರು ಕಟ್ಟಿಸಿದರೆಂದು ಹೇಳಲಾಗಿದೆ.[೬೭] ಇದೆಲ್ಲವು ಗುಜರಾತಿಗಳು

೧೭೦೦ಕ್ಕೂ ಮುಂಚೆಯೇ ಬೆಂಗಳೂರು ಪ್ರದೇಶದಲ್ಲಿ ನೆಲೆಸಿದ್ದರು ಎಂಬುದನ್ನು ಪುಷ್ಟೀಕರಿಸುತ್ತದೆ. ಟಿಪ್ಪು ಸಹ ತನ್ನ ಕಾಲಾವಧಿಯಲ್ಲಿ ಈ ವರ್ತಕ ಸಮುದಾಯದವರನ್ನು ಆಹ್ವಾನಿಸಿ ಅನೇಕ ರೀತಿಯ ಸೌಲಭ್ಯಗಳನ್ನು ಮತ್ತು ರಿಯಾಯಿತಿಗಳನ್ನು ಒದಗಿಸಿದನು. ವಿದೇಶಿ ವರ್ತಕರಾದ ಬ್ರಿಟಿಶರಿಗೆ ವ್ಯಾಪಾರದಲ್ಲಿ ಹಾನಿ ಉಂಟುಮಾಡುವ ಉದ್ದೇಶದಿಂದ ದೇಶಿಯ ವ್ಯಾಪಾರಿಗಳನ್ನು ಪ್ರೋತ್ಸಾಹಿಸಲು ಮಾಡಿದ ಪ್ರಯತ್ನವಾಗಿತ್ತು. ತಂಜಾವೂರಿನಲ್ಲಿದ್ದ ಗುಜರಾತ್ ಪ್ರದೇಶದ ಖತ್ರಿ ಸಮುದಾಯದವರಲ್ಲಿ ನೇಯ್ಗೆಯವರು ಪ್ರಸಿದ್ಧರಾಗಿದ್ದು ಹೈದರ್ ಅವರನ್ನು ಬೆಂಗಳೂರು ಪ್ರದೇಶಕ್ಕೆ ಆಹ್ವಾನಿಸಿದ್ದನು. ಆದರೆ ಮುಂದೆ ಗುಜರಾತಿ ವರ್ತಕ ಸಮುದಾಯದವರು ಬ್ರಿಟಿಶರು, ಹೈದರಾಬಾದ್ ನಿಜಾಮ ಹಾಗೂ ಅರ್ಕಾಟ್‌ರೊಂದಿಗೆ ಮಧ್ಯವರ್ತಿ ವರ್ತಕರಾಗಿ ಕಾರ್ಯ ನಿರ್ವಹಿಸಲು ತೊಡಗಿದರು. ಆಗ ಈ ವರ್ತಕ ಸಮುದಾಯದವರ ವಾಣಿಜ್ಯ ಚುಟುವಟಿಕೆಯನ್ನು ಮೈಸೂರು ರಾಜ್ಯದಲ್ಲಿ ಟಿಪ್ಪು ನಿಷೇದಿಸಿದನು. ಇದರಿಂದ ಈ ವ್ಯಾಪಾರಿ ವರ್ಗ ಕಂಗಾಲಾದರು. ೧೭೯೯ರಲ್ಲಿ ಟಿಪ್ಪುವಿನ ಮರಣದ ನಂತರ ಹೈದರಾಬಾದ್ ಮತ್ತು ಗುಜರಾತ್‌ನಿಂದ ಪುನಃ ಬೆಂಗಳೂರಿಗೆ ಬಂದು ನೆಲೆಸಿದರು.[೬೮]

ಗುಜರಾತಿ ಸಮುದಾಯದ ವರ್ತಕರು ಬೆಂಗಳೂರು ಪ್ರದೇಶದ ಶ್ರೀಮಂತರು ಮತ್ತು ಮುಸ್ಲಿಂ ಅಧಿಕಾರಿಗಳಿಗೆ ಬೆಲೆಬಾಳುವ ಬಟ್ಟೆಯನ್ನು ಮಾರಾಟ ಮಾಡುತ್ತಿದ್ದರು. ಇದು ಮಕ್ಕಳ ಉಡುಪಾಗಿದ್ದು, ಕೆಂಪು ಬಣ್ಣದ ಹತ್ತಿ ಬಟ್ಟೆಯ ಮೇಲೆ ಚಿನ್ನ ಮತ್ತು ಬೆಳ್ಳಿಯ ಜರಿಗಳಿಂದ ಕೂಡಿದ ಸುಂದರ ವಸ್ತ್ರಗಳಾಗಿದ್ದವು. ಜೊತೆಗೆ ಇವರು ದಂಡುಪ್ರದೇಶದಲ್ಲಿಯು ಸಹ ನೆಲೆಸಿದ್ದು, ಲೇವಾದೇವಿದಾರರಾಗಿ ಕಾರ್ಯನಿರ್ವಹಿಸುತ್ತಿದ್ದರು. ಹೀಗೆ ಗುಜರಾತಿಗಳು ಬ್ರಿಟಿಶರ ಕಾಲದಲ್ಲಿ ಶ್ರೀಮಂತ ವರ್ತಕರಾಗಿ, ಮಧ್ಯವರ್ತಿಗಳಾಗಿ ಹಾಗೂ ಲೇವಾದೇವಿದಾರಾಗಿದ್ದರು. ಈ ವರ್ಗ ಹೆಚ್ಚಿನ ಸಂಖ್ಯೆಯಲ್ಲಿ ವಲಸೆ ಬರಲು ಕಾರಣ ಗುಜರಾತಿನಲ್ಲಿದ್ದ ಬರಗಾಲದ ಪರಿಸ್ಥಿತಿ. ಇದು ಉದ್ಯೋಗವನ್ನು ಅರಸುತ್ತಾ ಬಂದು ಇಲ್ಲಿಯ ಪ್ರಭುತ್ವದೊಂದಿಗೆ ಉತ್ತಮ ಒಡನಾಟವನ್ನು ಹೊಂದಲು ಅವಕಾಶ ಕಲ್ಪಿಸಿತು. ಬ್ರಿಟಿಶ್‌ರೊಂದಿಗಿನ ಸಂಪರ್ಕದಿಂದಾಗಿ ವ್ಯಾಪಾರ–ವಾಣಿಜ್ಯದಲ್ಲಿ ಪ್ರಮುಖ ಸಮುದಾಯದವರಾಗಿ ಕಂಡುಬಂದರು.

### ೪.೪. ವಿದೇಶಿಯ ವರ್ತಕ ಸಮುದಾಯಗಳು

ವ್ಯಾಪಾರದ ಉದ್ದೇಶದಿಂದ ಬೇರೆ ದೇಶದಿಂದ ಬೆಂಗಳೂರಿಗೆ ಬಂದ ವರ್ತಕ ಸಮುದಾಯಗಳನ್ನು ವಿದೇಶಿ ವರ್ತಕ ಸಮುದಾಯದವರು ಎಂದು ಇಲ್ಲಿ ಗುರುತಿಸಲಾಗಿದೆ. ಭಾರತದಲ್ಲಿ ಆಡಳಿತವನ್ನು ಮಾಡಲು ಬಂದ ಬಹುತೇಕ ಬ್ರಿಟಿಶ್ ಅಧಿಕಾರಿಗಳು ಸಹ ವ್ಯಾಪಾರಿ ಉದ್ದೇಶವನ್ನು ಹೊಂದಿದ್ದರು ಎಂಬುದನ್ನು ಮರೆಯುವಂತಿಲ್ಲ. ಭಾರತದಲ್ಲಿ ಆಡಳಿತಾಧಿಕಾರಿಗಳಾಗಿದ್ದ ಹಲವಾರು

ಯುರೋಪಿನ ಅಧಿಕಾರಿಗಳು ನಿವೃತ್ತಿ ಜೀವನವನ್ನು ಬೆಂಗಳೂರು ದಂಡು ಪ್ರದೇಶದಲ್ಲಿ ನಡೆಸಿದರು. ಇವರಲ್ಲಿ ಬಹುತೇಕ ನಿವೃತ್ತ ಅಧಿಕಾರಿಗಳು ಇಲ್ಲಿಯ ಎಸ್ಟೇಟ್‌ಗಳ ಮಾಲೀಕರಾಗಿಯೋ ಅಥವಾ ಸ್ಥಳೀಯ ಕೈಗಾರಿಕೆಯ ಉಪನಿರ್ದೇಶಕರಾಗಿಯೋ, ಹೂಡಿಕೆದಾರರಾಗಿಯೋ ಗುರುತಿಸಿಕೊಂಡಿದ್ದಾರೆ. ಬೆಂಗಳೂರು ಪ್ರದೇಶದಲ್ಲಿ ಇವರ ಸಂಖ್ಯೆಯು ಕಡಿಮೆಯಾಗಿ ಕಂಡುಬಂದರೂ ಆರ್ಥಿಕ ಚಟುವಟಿಕೆಯಲ್ಲಿ ಪ್ರಬಲ ಹಿಡಿತವನ್ನು ಹೊಂದಿದ್ದ ಸಮುದಾಯವಾಗಿದ್ದರು. ರಾಜಕೀಯದಲ್ಲಿ ಇವರು ತಮ್ಮದೇ ಆದ ಮಹತ್ವದ ಸ್ಥಾನವನ್ನು ಹೊಂದಿದ್ದರು. ಈ ನಿಟ್ಟಿನಲ್ಲಿ ಬೆಂಗಳೂರು ಪ್ರದೇಶದಲ್ಲಿ ಹಲವು ರಸ್ತೆಗಳನ್ನು ಇವರ ಹೆಸರಿನಿಂದ ಇಂದಿಗೂ ಗುರುತಿಸುವುದು ಕಂಡುಬರುತ್ತದೆ. ಬೆಂಗಳೂರು ಪ್ರದೇಶದಲ್ಲಿ ಕಂಡುಬರುವ ಪ್ರಮುಖ ವಿದೇಶಿಯ ವರ್ತಕ ಸಮುದಾಯಗಳ ಕುರಿತು ಈ ಕೆಳಗೆ ಚರ್ಚಿಸಲಾಗಿದೆ.

**ಯಹೂದಿ ವರ್ತಕ ಸಮುದಾಯಗಳು**

ವಿದೇಶಿ ವರ್ತಕ ಸಮುದಾಯಗಳಲ್ಲಿ ಯಹೂದಿ ವರ್ತಕ ಸಮುದಾಯಗಳು ಒಂದಾಗಿದೆ. ಯಹೂದಿಗಳು ದೊಡ್ಡ ಮಟ್ಟದ ಔದ್ಯೋಗಿಗಳು. ಮೊದಲ ಮಹಾಯುದ್ಧದ ನಂತರ ಹಿಟ್ಲರ್‌ನ ನಾಜಿ ವಿರೋಧಿ ನೀತಿಯಿಂದಾಗಿ ಹಲವು ಯಹೂದಿಗಳು ಭಾರತಕ್ಕೆ ಬಂದರು. ಹೀಗೆ ಬಂದವರಲ್ಲಿ ಪ್ರಮುಖವಾಗಿ ಬೆನ್ ಇಸ್ರೇಲಿಯರು, ಕೊಚಿನಿನವರು ಮತ್ತು ಬಾಗ್ದಾದಿಗಳು. ಇವರಲ್ಲಿ ಬೆನ್ ಇಸ್ರೇಲಿಗೆ ಸೇರಿದವರು ಬಹು ಸಂಖ್ಯೆಯಲ್ಲಿ ಪಶ್ವಿಮ ಕರಾವಳಿ ಮತ್ತು ಕೊಂಕಣಕ್ಕೆ ಬಂದು ನೆಲೆಸಿದರು. ನಂತರದಲ್ಲಿ ಮೈಸೂರು ರಾಜ್ಯಕ್ಕೆ ಬಂದರು. ಮೈಸೂರು ಮಹಾರಾಜರ ಬಳಿ ಸುಬೇದಾರ್ ಸವ್ಗಾಂವರ್ ಎಂಬ ಬೆನ್ ಇಸ್ರೇಲಿ ಯಹೂದಿಯೊಬ್ಬನು ಅವರ ಸಮುದಾಯಕ್ಕಾಗಿ ಬೆಂಗಳೂರಿನಲ್ಲಿ ಸ್ಮಶಾನ ನಿರ್ಮಿಸಲು ಸ್ಥಳವನ್ನು ಪಡೆದ ಎಂಬ ವಿಚಾರವು ತಿಳಿದುಬರುತ್ತದೆ. ಇದೇ ಬೆಂಗಳೂರಿನಲ್ಲಿ ಯಹೂದಿಗಳು ನೆಲೆಸಿದ್ದರು ಎಂಬುದಕ್ಕೆ ಸಾಕ್ಷಿಯಾಗಿದೆ. ಇವರ ಸಂಖ್ಯೆ ಅಲ್ಪವಾದರು ಇವರು ದೊಡ್ಡ ಮಟ್ಟದ ಯಶಸ್ವಿ ವ್ಯಾಪಾರಿಗಳು. ಯಹೂದಿ ಸಮುದಾಯದ ರೊಬನ್ ಬೆಂಗಳೂರಿನ ದೊಡ್ಡ ವ್ಯಾಪಾರಿಯಾಗಿದ್ದರು. ಈತ ಏಷಿಯಾದಲ್ಲೆ ಅತಿ ದೊಡ್ಡ ಶೂ ಕಂಪನಿಯಾದ ಮೋಸಸ್ ಅಂಡ್ ಸನ್ಸ್ ಎಂಬ ಕಂಪನಿಯನ್ನು ಕರ್ಮಷಿಯಲ್ ರಸ್ತೆಯಲ್ಲಿ ತೆರೆದರು. ಬೆಂಗಳೂರಿನಲ್ಲಿದ್ದ ಇವರ ಕಾರ್ಖಾನೆಯಲ್ಲಿ ಯಂತ್ರದಿಂದ ಶೂಗಳನ್ನು ತಯಾರಿಸಲಾಗುತ್ತಿತ್ತು. ಬೆಂಗಳೂರು ದಂಡಿನ ಬ್ರಿಟಿಶ್ ಸೈನಿಕರು ಮತ್ತು ಇಲ್ಲಿ ನೆಲೆಸಿದ್ದ ಶ್ರೀಮಂತ ವರ್ಗದವರು ಈ ಉತ್ಪಾದನೆಯ ಗ್ರಾಹಕರಾಗಿದ್ದರು. ಬಹುತೇಕ ಯಹೂದಿಗಳು ಬೆಂಗಳೂರಿನ ಕ್ಯಾವಲ್ರಿ ರಸ್ತೆಯಲ್ಲಿ ನೆಲೆಸಿದ್ದರು. ದ್ವಿತೀಯ ಮಹಾಯುದ್ಧದ ತರುವಾಯ ಹಲವರು ಯಹೂದಿಗಳು ತಮ್ಮ ದೇಶಗಳಿಗೆ ಹಿಂದುರುಗಿದರು.[೬೯] ಇಂದಿಗೂ ಯಹೂದಿಗಳ ಸಮಾಧಿಗಳು ಬೆಂಗಳೂರು ಪ್ರದೇಶವು ಇವರ ನೆಲೆಯಾಗಿತ್ತು ಎಂಬುದಕ್ಕೆ ಸಾಕ್ಷಿಯಾಗಿದೆ.

## ಕ್ರೈಸ್ತ ವರ್ತಕ ಸಮುದಾಯಗಳು

ಬೆಂಗಳೂರಿಗೆ ಕ್ರೈಸ್ತ ಧರ್ಮದ ಪ್ರವೇಶದೊಂದಿಗೆ ಕ್ರೈಸ್ತ ವರ್ತಕ ಸಮುದಾಯದವರ ಆಗಮನವನ್ನು ಗುರುತಿಸಲಾಗಿದೆ. ಯುರೋಪಿಯನ್ನರು ಭಾರತಕ್ಕೆ ಪ್ರವೇಶವನ್ನು ನೀಡಿದ್ದು ವ್ಯಾಪಾರದ ಉದ್ದೇಶದಿಂದಲೇ ಎಂಬ ವಿಚಾರವು ಇಲ್ಲಿ ಗಮನಾರ್ಹವಾಗಿದೆ. ಬೆಂಗಳೂರು ಪ್ರದೇಶದ ಅಭಿವೃದ್ಧಿಯಲ್ಲಿ ಈ ಸಮುದಾಯದ ಪಾತ್ರ ಹೆಚ್ಚು ಮಹತ್ವದ್ದಾಗಿದೆ. ಕ್ರೈಸ್ತ ವರ್ತಕ ಸಮುದಾಯಗಳಲ್ಲಿ ಬ್ರಿಟಿಶ್, ಡಚ್, ಪೋರ್ಚುಗೀಸ್, ಫ್ರೆಂಚ್, ಯುರೋಪಿಯನ್ಸ್, ಆಂಗ್ಲೋ–ಇಂಡಿಯನ್ಸ್ ಮೊದಲಾದ ವರ್ತಕ ಸಮುದಾಯಗಳು ಪ್ರಮುಖವಾದವುಗಳಾಗಿವೆ. ಈ ಸಮುದಾಯಗಳ ನೆಲೆಗಳನ್ನು ಗುರುತಿಸಲು ಸಾಧ್ಯವಾಗುವುದು ಅವರ ಚರ್ಚ್‌ಗಳ ಹಿನ್ನೆಲೆಯಲ್ಲಿ ಆಗಿದೆ. ಇವರು ವ್ಯಾಪಾರದೊಂದಿಗೆ ಧರ್ಮ ಪ್ರಚಾರದ ಕಾರ್ಯಗಳನ್ನು ಕೈಕೊಂಡಿದ್ದರು. ಈ ನಿಟ್ಟಿನಲ್ಲಿ ಹಲವು ಮಿಷನರಿಗಳು ಬಹಳ ಹಿಂದೆಯೇ ಬೆಂಗಳೂರಿಗೆ ಪ್ರವೇಶವನ್ನು ನೀಡಿತು. ಬೆಂಗಳೂರಿನಲ್ಲಿ ಬ್ರಿಟಿಶ್ ದಂಡು ಪ್ರದೇಶ ಸ್ಥಾಪನೆಗೊಂಡ ನಂತರದಲ್ಲಿ ಯೂರೋಪಿಯನ್ನರು ಅಧಿಕ ಸಂಖ್ಯೆಯಲ್ಲಿ ಇಲ್ಲಿ ನೆಲೆ ನಿಂತರು. ಈ ಅಂಶವನ್ನು ಎಲ್. ಬಿ. ಬೌರಿಂಗ್ ತನ್ನ ಈಸ್ಟ್ರನ್ ಎಕ್ಸ್‌ಪೀರಿಯನ್ಸ್‌ನಲ್ಲಿ ನಮೂದಿಸುತ್ತಾರೆ. ಆರಂಭಿಕ ಹಂತದಲ್ಲಿ ಈ ಸಮುದಾಯ ಬೆಂಗಳೂರು ಪ್ರದೇಶದೊಂದಿಗೆ ನೇರ ವ್ಯಾಪಾರದ ಸಂಪರ್ಕವನ್ನು ಹೊಂದಿರದೆ ಮಧ್ಯವರ್ತಿಗಳ ಮೂಲಕ ವಾಣಿಜ್ಯ ಚಟುವಟಿಕೆ ನಡೆಸುತ್ತಿತ್ತು. ಇದಕ್ಕೆ ಪೂರಕವಾಗಿ ಬುಕಾನನ್ ತನ್ನ ಸಮೀಕ್ಷೆಯ ಸಂದರ್ಭದಲ್ಲಿ ಗುಜರಾತಿ, ಮಾರ್ವಾಡಿ ವರ್ತಕರು ಇವರಿಗೆ ಮಧ್ಯವರ್ತಿಗಳಾಗಿದ್ದ ಬಗ್ಗೆ ಮಾಹಿತಿ ನಿಡುವನು. ಅಷ್ಟೇ ಅಲ್ಲದೆ ಈ ಸಮುದಾಯಗಳು ಬ್ರಿಟಿಶ್‌ರೊಂದಿಗೆ ಹೊಂದಿದ ಸಂಬಂಧದಿಂದಾಗಿ ಟಿಪ್ಪು ಇವರ ಮೇಲೆ ನಿರ್ಬಂಧವನ್ನು ಹೇರಿದ್ದನೆಂದು ತಿಳಿಸಿದ್ದಾನೆ. ಈ ಹಿನ್ನೆಲೆಯಲ್ಲಿ ಬೆಂಗಳೂರು ಪ್ರದೇಶದಲ್ಲಿ ಕಂಡುಬರುವ ಕ್ರೈಸ್ತ ವರ್ತಕ ಸಮುದಾಯಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ.

### ಆಂಗ್ಲೋ–ಇಂಡಿಯನ್ಸ್ ವರ್ತಕ ಸಮುದಾಯ

ಯೂರೋಪಿನ ಪುರುಷ ಮತ್ತು ಸ್ಥಳೀಯ ಮಹಿಳೆಯರಿಗೆ ಜನಿಸಿದ ಸಂಜಾತರನ್ನು ಆಂಗ್ಲೋ–ಇಂಡಿಯನ್ಸ್ ಎಂದು ಕರೆಯಲಾಗಿದೆ. ಬೆಂಗಳೂರು ದಂಡು ಪ್ರದೇಶದಲ್ಲಿ ಕಂಡುಬರುವ ಪ್ರಮುಖ ವರ್ತಕ ಸಮುದಾಯವಾಗಿದೆ. ಈ ಸಮುದಾಯಗಳು ಬಹುತೇಕ ಬ್ರಿಟಿಶ್ ವರ್ತಕ ಸಮುದಾಯಗಳಿಗೆ ಪೂರಕವಾಗಿ ಕಾರ್ಯನಿರ್ವಹಿಸುತ್ತಿದ್ದರು. ಆರ್ಥಿಕವಾಗಿ ಮತ್ತು ರಾಜಕೀಯವಾಗಿ ಪ್ರಾಬಲ್ಯತೆಯನ್ನು ಪಡೆದ ವರ್ಗವಾಗಿದೆ. ಇವರು ಔದ್ಯೋಗೊದ್ಯಮಿಗಳಾಗಿ, ವಾಣಿಜ್ಯೋದ್ಯಮಿಗಳಾಗಿ, ಮಧ್ಯವರ್ತಿಗಳಾಗಿ ಹಲವು ಹತ್ತು ಕೈಗಾರಿಕೆಗಳ ಬಂಡವಾಳಗಾರರಾಗಿ ಬೆಂಗಳೂರು ಪ್ರದೇಶದಲ್ಲಿ ಕಾಣಿಸಿಕೊಂಡಿದ್ದಾರೆ.

ಪ್ರಮುಖವಾಗಿ ಬೆಂಗಳೂರು ದಂಡು ಮತ್ತು ನಾಗರಿಕ ಪ್ರದೇಶದ ಆಸ್ಟೀನ್ ಟೌನ್, ರೀಚ್ಮಂಡ್ ಟೌನ್, ಬೆನ್ಸನ್ ಟೌನ್, ಪ್ರೇಸರ್ ಟೌನ್, ವೈಟ್ ಫಿಲ್ಡ್ ಮೊದಲಾದವು ಇವರ ನೆಲೆಯಾಗಿತ್ತು.[೨೦]

## ಫ್ರೆಂಚ್ ವರ್ತಕ ಸಮುದಾಯ

ಫ್ರೆಂಚ್ ಈಸ್ಟ್ ಇಂಡಿಯಾ ಕಂಪನಿಯು ೧೬೬೪ರಲ್ಲಿ ಸ್ಥಾಪಿತಗೊಂಡಿತು. ಈ ಹಿನ್ನೆಲೆಯಲ್ಲಿ ಭಾರತದಲ್ಲಿನ ವ್ಯಾಪಾರ ವ್ಯವಹಾರದಲ್ಲಿ ತೊಡಗಿಸಿಕೊಂಡರು. ಹೈದರ್, ಟಿಪ್ಪುವಿನ ಕಾಲದಿಂದಲೂ ಈ ವರ್ತಕ ಸಮುದಾಯವು ಬೆಂಗಳೂರಿನೊಂದಿಗೆ ನಂಟನ್ನು ಹೊಂದಿದ್ದರು ಎಂದು ಅಧಿಕೃತವಾಗಿ ತಿಳಿದುಬರುತ್ತದೆ. ೧೮೧೮ರಲ್ಲಿ ಫ್ರೆಂಚರು ತಮ್ಮ ನೆಲೆಯನ್ನು ಹಲಸೂರು ಕೆರೆಯ ಬಳಿ ಸ್ಥಾಪಿಸಿದರು. ಬೆಂಗಳೂರು ನಗರಾಭಿವೃದ್ದಿಯ ಬಗೆಗೆ ಮೊದಲು ಚಿಂತಿಸಿದವರಲ್ಲಿ ಟಿಪ್ಪು ಮತ್ತು ಫ್ರೆಂಚರು. ಇವರೇ ಹಲಸೂರು ಕೆರೆಯ ಅಭಿವೃದ್ಧಿಯನ್ನು ಮಾಡಿ ಲಾಲ್‌ಬಾಗ್‌ಗೆ ನೀರಾವರಿ ಸೌಲಭ್ಯವನ್ನು ಒದಗಿಸಿಕೊಟ್ಟರು. ಬೆಂಗಳೂರಿನ ನಗರ ಯೋಜನೆಯನ್ನು ರಚಿಸಿಕೊಟ್ಟರು. ಹಾಗೆ ಕೆಲವರು ಸ್ಥಳೀಯ ಜನರೊಂದಿಗೆ ಶಾಂತಿಯುತ ಬಾಂಧವ್ಯವನ್ನು ಬೆಳೆಸಿಕೊಂಡ ಪರಿಣಾಮವಾಗಿ ಸ್ಥಳೀಯವಾಗಿ ವಾಣಿಜ್ಯ ಕೃಷಿ ಚಟುಚವಟಿಕೆಯಲ್ಲಿ ತೊಡಗಿದರು. ದ್ರಾಕ್ಷಿ ಮತ್ತು ಹಿಪ್ಪು ನೇರಳೆಯ ತೋಟಗಳನ್ನು ನಿರ್ಮಿಸಿ ಈ ಬೆಳೆಗಳಿಗೆ ಹೆಚ್ಚಿನ ಆದ್ಯತೆಯನ್ನು ನೀಡಿದರು. ಇದರಿಂದಾಗಿ ರೇಷ್ಮೆ ಮತ್ತು ಮಧ್ಯದ ಉದ್ಯಮವು ಬೆಂಗಳೂರಿನಲ್ಲಿ ಬೆಳೆಯಲು ಕಾರಣವಾಯಿತು. ಟಿಪ್ಪುವಿನ ಜವಳಿ ಉದ್ಯಮಕ್ಕೆ ಪೂರಕರಾಗಿ ಕಾರ್ಯವೆಸಗಿದ್ದರು. ಟಿಪ್ಪುವಿನ ಸೈನ್ಯ ನೆಲೆಯಾದ ಬೆಂಗಳೂರಿನ ತಾರಾಮಂಡಲದಲ್ಲಿ ಯುದ್ಧಾಸ್ತ್ರಗಳ ತಯಾರಿಕೆಯಲ್ಲಿ ಫ್ರೆಂಚ್‌ರ ಸಹಾಯ ಪಡೆಯುತ್ತಿದ್ದ ಎಂಬ ಅಂಶವು ಸ್ಪಷ್ಟಗೊಳ್ಳುತ್ತದೆ.[೨೧] ಬ್ರಿಟಿಶರು ಮುಂದೆ ಬೆಂಗಳೂರಿನಲ್ಲಿ ಫ್ರೆಂಚ್‌ರ ನೆಲೆಯಾಗಿದ್ದ ಪ್ರದೇಶವನ್ನು ನಂತರದಲ್ಲಿ ಮುಸ್ಲಿಮರಿಗೆ ನೀಡಲಾಯಿತು. ಇಂದು ಅಲ್ಲಿ ಮುಸ್ಲಿಮರ ಸ್ಮಶಾನವಿದೆ. ಹೈದರನು ಫ್ರೆಂಚ್‌ರಿಗಾಗಿ ಗುಲ್‌ಮೊಹರ್ ಮತ್ತು ಲರ್ಬುನಮ್ ಎಂಬ ಸ್ಥಳದಲ್ಲಿ ಚರ್ಚ್‌ನ್ನು ನಿರ್ಮಿಸಲು ಅನುಮತಿಯನ್ನು ನೀಡಿದ್ದನು. ಇಲ್ಲಿಯೇ ಫ್ರೆಂಚರ ಸ್ಮಶಾನವಿದೆ. ನಂತರದಲ್ಲಿ ಅಂದರೆ ೨೦ನೇ ಶತಮಾನದಲ್ಲಿ ಮಾರ್ಚ್ ಗ್ರೌಂಡ್‌ನ ಸಮೀಪ ಫ್ರೆಂಚರ ಸ್ಮಶಾನವನ್ನು ನಿರ್ಮಿಸಲು ವ್ಯವಸ್ಥೆ ಮಾಡಲಾಯಿತು. ೧೭೯೧ರ ಕದನದ ಸಂದರ್ಭದಲ್ಲಿ ಬೆಂಗಳೂರಿನಲ್ಲಿ ನೆಲೆಸಿದ್ದ ಫ್ರೆಂಚ್ ಸೈನ್ಯವು ಯಶಸ್ವಿಯಾಗಿ ಬೆಂಗಳೂರು ಕೋಟೆಯ ಸಂಪಿಕೆ ಕೋಟೆಯನ್ನು ಮುಟ್ಟಿತು. ಅದರ ಸವಿ ನೆನಪಿಗಾಗಿ ೧೮೨೪ರಲ್ಲಿ ಒಂದು ನಿವೇಶನವನ್ನು ನಿರ್ಮಿಸಲಾಯಿತು. ಫ್ರೆಂಚ್‌ರು ಬೆಂಗಳೂರು ಮತ್ತು ಪಾಂಡಿಚೇರಿಯ ಜೊತೆಗೆ ಹೊಂದಿದ್ದ ಸಂಬಂಧದ ಬಗೆಗೆ ಫ್ರೆಂಚರ ಗ್ರಂಥಾಲಯಗಳಲ್ಲಿ ಹಲವು ದಾಖಲೆಗಳಿವೆ. ಫ್ರೆಂಚ್ ಟೌನ್‌ನ ಬಳಿ ಇದಕ್ಕೆ ಸಂಬಂಧಿಸಿದಂತೆ ಕುರುಹುಗಳು ಸಿಕ್ಕಿವೆ. ಚೆನ್ನಪ್ಪ ಗಾರ್ಡನ್‌ನ ಬಳಿ ಫ್ರೆಂಚ್‌ರ ಕೋಟೆಯು ಅಸ್ತಿತ್ವದಲ್ಲಿತ್ತು. ಕೋಟೆಯನ್ನು ನಕ್ಷತ್ರಾಕಾರದಲ್ಲಿ ನಿರ್ಮಿಸಲಾಗಿದ್ದು. ಕೋಟೆಯ ಒಳಗೆ ಕೋಠಿ, ಜೈಲು, ಕೆಲವು

ಮನೆಗಳನ್ನು ನಿರ್ಮಿಲಾಗಿದ್ದು. ಕಾಲಾಂತರದಲ್ಲಿ ಈ ನೆಲೆಯನ್ನು ನಾಶ ಪಡಿಸಲಾಗಿದೆ. ಇಂದು ಅದರ ಕುರುಹುಗಳು ಮಾತ್ರ ಕಂಡುಬರುತ್ತದೆ. ಲೂಯಿಸ್ ಅಲ್ಕೆಸ್ ಎಟಿನ್ನಿ ಬೋನ್‌ವಿನ್ ಫ್ರೆಂಚ್ ಭಾರತದ ಗೌರ್ನರ್ ಜನರಲ್ ಬೆಂಗಳೂರಿನಲ್ಲಿ ಕೇಪ್ ಆಫ್ ಇಕ್ವಾಲಿಟಿ ಗಾರ್ಡನನ್ನು ೧೯೪೧ರಲ್ಲಿ ನಿರ್ಮಿಸಿದನು. ಅದೇ ರೀತಿ ಪಾಂಡಿ ಪಾರ್ಕ್‌ನ್ನು ನಿರ್ಮಿಸಿ ಫ್ರೆಂಚ್‌ರ ಪ್ರದೇಶಗಳನ್ನು ಭಾರತದ ಒಕ್ಕೂಟಕ್ಕೆ ಸೇರಿಸುವಾಗ ಇಲ್ಲಿಯ ಪ್ರದೇಶಗಳನ್ನು ಪ್ರಭುತ್ವಕ್ಕೆ ವರ್ಗಾಯಿಸಲಾಯಿತು. ಬೆಂಗಳೂರಿನ ನಗರದ ಉಪ ನಗರಗಳಲ್ಲಿ ೧೮೦೦ರಲ್ಲಿ ತೋಟಗಾರಿಕೆಯನ್ನು ಬೆಳೆಸಿದರು. ಈ ತೋಟಗಳಲ್ಲಿ ದ್ರಾಕ್ಷಿ ಬೆಳೆಗಳನ್ನು ಬೆಳೆಸಲಾಗುತ್ತಿತ್ತು. ದ್ರಾಕ್ಷಿ ವ್ಯಾಪಾರವು ಒಂದು ದೊಡ್ಡ ಮಟ್ಟದ ವ್ಯಾಪಾರ ಕೇಂದ್ರವಾಗಿ ಬೆಂಗಳೂರು ಭಾರತದಲ್ಲಿ ಬೆಳೆಯತೊಡಗಿದ್ದು ಫ್ರೆಂಚ್‌ರ ಆಸಕ್ತಿಯೇ ಕಾರಣವಾಗಿದೆ. ಈ ಪ್ರದೇಶವನ್ನು ಇಂದಿಗೂ ವೈನ್ ಯಾರ್ಡ್ ಎಂದು ಗುರುತಿಸುತ್ತಾರೆ. ಫ್ರೆಂಚ್ ಟೌನ್‌ನಿನ ಉತ್ತರಕ್ಕೆ ಪಾಟರಿ ಟೌನ್‌ನ್ನು ಕಾಣಬಹುದಾಗಿದೆ. ನಂತರದ ಕಾಲದಲ್ಲಿ ಆರ್ಕಾಟ್ ನಾರಾಯಣಸ್ವಾಮಿ ಮೊದಲಿಯಾರ್ ದೊಡ್ಡ ವಾಣಿಜ್ಯೋದ್ಯಮಿ ಫ್ರೆಂಚ್ ಕೋಠಿಗಳ ಪ್ರದೇಶಗಳನ್ನು ಪ್ರಭುತ್ವದ ಅನುಮತಿಯನ್ನು ಪಡೆದು ತನ್ನದಾಗಿಸಿಕೊಂಡು, ಅಲ್ಲಿ ಧಾನ್ಯಗಳ ಗಿರಣಿಯನ್ನು ನಿರ್ಮಿಸಿದರು. ಫ್ರೆಂಚ್ ಅಧಿಕಾರಿಗಳು ಮತ್ತು ಉನ್ನತ್ತ ವ್ಯಕ್ತಿಗಳಿಗಾಗಿ ಕಂಪನಿ ಹೋಟಲ್‌ನ್ನು ೧೮೦೮ರಲ್ಲಿ ನಿರ್ಮಿಸಿತು. ಸ್ಥಳೀಯ ವ್ಯಾಪಾರ ವ್ಯವಹಾರಕ್ಕಾಗಿ ಅಲ್ಲಿ ಬುಚರ್ಸ್ ಮಾರ್ಕೆಟ್‌ನ್ನು ಸಹ ಸ್ಥಾಪಿಸಲಾಯಿತು. ಇಂದು ಸಹ ಈ ಸ್ಥಳಕ್ಕೆ ಅಂಟಿಕೊಂಡಂತೆ ಜುಮ್ಮ ಮಸೀದಿಯ ಕಟ್ಟಡವನ್ನು ಕಾಣಬಹುದಾಗಿದೆ. ಫ್ರೆಂಚ್‌ರು ಬೆಂಗಳೂರಿನಿಂದ ಸರಕು ಸಾಗಾಟಕ್ಕಾಗಿ ಹೊಸೂರು ಮತ್ತು ಸರ್ಜಾಪುರ ರಸ್ತೆ ಸೇರುವ ಸೆಟ್. ಲಜರ್ ರಸ್ತೆಯು ಪ್ರಮುಖ ವ್ಯಾಪಾರಿ ಹೆದ್ದಾರಿಯಾಗಿ ಬಳಸಿಕೊಳ್ಳಲಾಗುತ್ತಿತ್ತು. ಇದನ್ನು ನಂತರ ಪ್ಯಾರೀಸ್ ರೈಲ್ವೆ ಸ್ಟೆಷನ್ ಎಂತಲೂ ಕರೆಯಲಾಗುತ್ತಿತ್ತು. ಟಿಪ್ಪು ೧೭೮೭ರಲ್ಲಿ ತನ್ನ ರಾಯಭಾರಿಯನ್ನು ಬೆಂಗಳೂರಿನಲ್ಲಿದ್ದ ಫ್ರಾನ್ಸಿನ ವರ್ತಕನಾದ ಮ್ಯನ್ನೆರಾನ್ ಜೊತೆಯನ್ನು ಫ್ರಾನ್ಸ್‌ಗೆ ಕಳುಹಿಸಿಕೊಟ್ಟನು ಎಂಬುದು ಪ್ರಮುಖವಾದ ವಿಚಾರವಾಗಿದೆ. ಮಾರ್ಚ್ ಗ್ರೌಂಡ್‌ನಲ್ಲಿ ಪ್ರತಿ ಭಾನುವಾರ ಫ್ರೆಂಚರ ಸೈನ್ಯವು ತಮ್ಮ ಕೌಶಲ್ಯದ ಪ್ರದರ್ಶನವನ್ನು ಮಾಡುತ್ತಿದ್ದರು.[೨] ಇದೆಲ್ಲವು ಫ್ರೆಂಚರು ಸುಧೀರ್ಘವಾಗಿ ಬೆಂಗಳೂರು ಪ್ರದೇಶದೊಡನೆ ವಾಣಿಜ್ಯ ವ್ಯಾಪಾರ ಸಂಪರ್ಕ ಹೊಂದಿದ್ದರು ಎಂದು ಸೂಚಿಸುವುದು.

### ಇಟಲಿ, ಡಚ್ಚ್, ಪೋರ್ಚುಗೀಸ್ ವರ್ತಕ ಸಮುದಾಯ

ಬೆಂಗಳೂರು ಪ್ರದೇಶದಲ್ಲಿ ಕಂಡುಬರುವ ವರ್ತಕ ಸಮುದಾಯಗಳಲ್ಲಿ ಡಚ್ಚ್, ಪೋರ್ಚುಗೀಸ್ ವರ್ತಕ ಸಮುದಾಯಗಳು ಒಂದಾಗಿದೆ. ವ್ಯಾಪಾರ ಮತ್ತು ಧರ್ಮ ಪ್ರಚಾರದ ಹಿನ್ನೆಲೆಯಲ್ಲಿ ಬೆಂಗಳೂರು ಪ್ರದೇಶಕ್ಕೆ ಬಂದರು. ಇವರು ಬೆಂಗಳೂರಿನ ದಂಡು ಪ್ರದೇಶದಲ್ಲಿ ನೆಲೆಸಿದರು.

ಇಲ್ಲಿಯ ವ್ಯಾಪಾರ ಮತ್ತು ವ್ಯವಹಾರವನ್ನು ಅಭಿವೃದ್ಧಿಪಡಿಸುವ ನಿಟ್ಟಿನಲ್ಲಿ ಬೆಂಗಳೂರು ಟ್ರೇಡರ್ಸ್ ಅಸೋಸಿಯೇಶನನ್ನು ಸ್ಥಾಪಿಸಿಕೊಂಡಿದ್ದರು.[೭೩] ಈ ಅಂಶವು ಮೇಲ್ಕಂಡ ಸಮುದಾಯಗಳು ಬೆಂಗಳೂರು ಪ್ರದೇಶದಲ್ಲಿ ನೆಲೆಸಿ, ವ್ಯಾಪಾರ–ವಾಣಿಜ್ಯ ಚಟುವಟಿಕೆಯಲ್ಲಿ ತೊಡಗಿಸಿಕೊಂಡಿದ್ದರು ಎಂಬ ವಿಚಾರವನ್ನು ಸ್ಪಷ್ಟಪಡಿಸುತ್ತದೆ.

ಭಾರತದಲ್ಲಿ ೧೮೩೩ರ ಚಾರ್ಟರ್ ಆಕ್ಟ್ ಮೂಲಕ ಕಂಪನಿಯ ಏಕಸ್ವಾಮ್ಯ ಕೊನೆಗೊಂಡಾಗ ಯೂರೋಪಿನ ವಿವಿಧ ರಾಷ್ಟ್ರಗಳಿಂದ ವಿದೇಶಿ ವರ್ತಕರು ಭಾರತಕ್ಕೆ ಬರತೊಡಗಿದರು. ಈ ಹಿನ್ನೆಲೆಯಲ್ಲಿ ಇಟಲಿ, ಡಚ್ಚ್, ಪೋರ್ಚುಗೀಸ್, ಫ್ರೆಂಚ್, ಸ್ಕಾಟ್‌ಲೆಂಡ್, ಅಮೆರಿಕಾ ಮೊದಲಾದ ದೇಶದ ವರ್ತಕರು ಬೆಂಗಳೂರು ಪ್ರದೇಶದ ಜೊತೆಗೆ ಸಂಬಂಧವನ್ನು ಹೊಂದುವಲ್ಲಿ ಈ ಕಾಯ್ದೆಯು ಅವಕಾಶ ಕಲ್ಪಿಸಿತು ಎಂದು ತೋರುತ್ತದೆ. ಈ ನಿಟ್ಟಿನ ಅವರ ಆರ್ಥಿಕ ಚಟುವಟಿಕೆಯ ನೆರಳನ್ನು ಗುರುತಿಸ ಬಹುದಾದರೂ ಎಷ್ಟು ಸಂಖ್ಯೆಯ ವರ್ತಕರು ಬೆಂಗಳೂರು ಪ್ರದೇಶದಲ್ಲಿ ನೆಲೆಸಿದ್ದರು ಎಂಬುದರ ಬಗೆಗೆ ಅಂಕಿ–ಸಂಖ್ಯೆಗಳನ್ನು ನೀಡಲು ಸಾಧ್ಯವಾಗುತ್ತಿಲ್ಲ. ಜನಗಣತಿಯಲ್ಲಿ ಇವರ ಸಂಖ್ಯೆಯನ್ನು ನೀಡಿದ್ದರು ಸಹ ಇವರ ಒಟ್ಟು ಸಂಖ್ಯೆಯಲ್ಲಿ ಸೈನ್ಯ ಮತ್ತು ಆಡಳಿತದಲ್ಲಿ ತೊಡಗಿಸಿದವರ ಒಟ್ಟು ಮೊತ್ತವನ್ನು ನೀಡಿರುವುದರಿಂದಾಗಿ ವಿದೇಶಿ ವರ್ತಕ ಸಂಖ್ಯೆಯನ್ನು ತಿಳಿಯಲು ಸಾಧ್ಯವಾಗುತ್ತಿಲ್ಲ. ಆದರೂ ಸಹ ವಿದೇಶಿ ವರ್ತಕರ ಕಾರ್ಯಚಟುವಟಿಕೆಯಲ್ಲಿ ಅವರ ನೆಲೆ ಮತ್ತು ಬೆಂಗಳೂರು ಕಾಸ್ಮೋಪಾಲಿಟನ್ ನಗರವಾಗಿ ಗುರುತಿಸಿಕೊಂಡಿರುವುದನ್ನು ತಿಳಿಯಬಹುದಾಗಿದೆ. ಬ್ರಿಟಿಶ್ ಕಂಪನಿಯು ಓರ್ವ ವ್ಯಕ್ತಿಯನ್ನು ಬೆಂಗಳೂರಿನ ಸೈನ್ಯ ಅಧಿಕಾರಿಯಾಗಿಯೊ ಅಥವಾ ಆಡಳಿತ ಅಧಿಕಾರಿಯಾಗಿಯೊ ಕಳುಹಿಸುವಾಗ ಆ ವ್ಯಕ್ತಿ ತನ್ನ ಕುಟುಂಬದೊಂದಿಗೆ ಮಾತ್ರ ಭಾರತಕ್ಕೆ ಬರುತ್ತಿರಲ್ಲಿಲ್ಲ. ಆತನೊಂದಿಗೆ ಆತನಿಗೆ ಬೇಕಾದ ಸಹ ಪರಿಚಾರಕರೊಂದಿಗೆ ಬರುತ್ತಿದ್ದರು. ಅವರೊಂದಿಗೆ ಕನಿಷ್ಠವೆಂದರೂ ಹತ್ತರಿಂದ ೨೦ ಜನ ಬರುತ್ತಿದ್ದರು. ಅದೇ ರೀತಿಯಲ್ಲಿ ಓರ್ವ ವಿದೇಶಿ ವರ್ತಕನು ಸಹ ವ್ಯಾಪಾರದ ಹಿನ್ನೆಲೆಯಲ್ಲಿ ಭಾರತಕ್ಕೆ ಬರುವಾಗ ತನ್ನ ಪರಿವಾರದೊಂದಿಗೆ ಬಂದು ನೆಲೆಸುತ್ತಿದ್ದರು ಎಂಬುದು ಗಮನಿಸಬೇಕಾದ ಅಂಶವಾಗಿದೆ.

ವ್ಯಾಪಾರದ ಹಿನ್ನೆಲೆಯಲ್ಲಿ ಬೆಂಗಳೂರಿಗೆ ಬಂದ ವಿದೇಶಿ ವರ್ತಕ ಸಮುದಾಯಗಳಲ್ಲಿ ಇಟಲಿ ವರ್ತಕರು ಸಹ ಪ್ರಮುಖರಾಗಿದ್ದಾರೆ. ಇವರಲ್ಲಿ ಡೆ ವಿಚ್ಚಿ ಓರ್ವ ಪ್ರಬಲ ಇಟಲಿಯ ವಾಣಿಜ್ಯೋದ್ಯಮಿ. ಈತ ರೇಷ್ಮೆ ವ್ಯವಸಾಯದ ತಜ್ಞನಾಗಿದ್ದು. ಫ್ರಾನ್ಸ್ ಮತ್ತು ಇಟಲಿಯಲ್ಲಿ ಉಂಟಾದ ಪೆಬ್ರೈನ್(Pebrine) ಎಂಬ ರೋಗ ಹರಡಿದಾಗ ಕಚ್ಚಾ ರೇಷ್ಮೆಯ ಉತ್ಪಾದನೆಯು ನಿಂತುಹೋಯಿತು. ಯುರೋಪಿನ ಅಂತಾರಾಷ್ಟ್ರೀಯ ಮಾರುಕಟ್ಟೆಯಲ್ಲಿ ಕಚ್ಚಾ ರೇಷ್ಮೆಯ ಬೇಡಿಕೆ ಹೆಚ್ಚಾಗಿದಲ್ಲದೆ, ಉತ್ತಮ ತಳಿಯ ರೇಷ್ಮೆ ಗೂಡಿಗೆ ಬೇಡಿಕೆ ಹೆಚ್ಚಾಯಿತು. ಬ್ರಿಟಿಶ್ ವಸಾಹತು ಪ್ರಭುತ್ವವು ಈ ಸಂದರ್ಭದಲ್ಲಿ ರೇಷ್ಮೆ ಬೇಸಾಯಕ್ಕೆ ತನ್ನ ವಸಾಹತುಗಳಲ್ಲಿ ಪ್ರೋತ್ಸಾಹಿಸುವ ಕ್ರಮ ಕೈಗೊಂಡಿತು.

ಇದರ ಫಲವಾಗಿ ತಮ್ಮ ಅಧೀನ ಪ್ರದೇಶಗಳಾದ ಬಂಗಾಲ, ಮದ್ರಾಸ್, ಮೈಸೂರು ಪ್ರಾಂತ್ಯಗಳಲ್ಲಿ ರೇಷ್ಮೆ ಬೇಸಾಯಕ್ಕೆ ಉತ್ತೇಜನವನ್ನು ನೀಡಿತು. ಕೌಶಲ್ಯತೆಯನ್ನು ಹೊಂದಿದ್ದ ಇಟಲಿ ರೇಷ್ಮೆ ಬೆಳೆಗಾರರಿಗೆ ತಮ್ಮ ವಸಾಹತುಗಳಲ್ಲಿ ಉದ್ಯೋಗವನ್ನು ನೀಡಿ ಅವರ ಮಾರ್ಗದರ್ಶನದಲ್ಲಿ ಬೆಳೆಗಳನ್ನು ಬೆಳೆಯಲು, ನೂಲನ್ನು ತೆಗೆಯುವ, ಉತ್ಪಾದನೆಯ ವಿವಿಧ ಹಂತದ ತರಬೇತಿ ನೀಡಲು ಅವಕಾಶವನ್ನು ನೀಡಿತು. ಅದರಂತೆ ಬೆಂಗಳೂರು ಹವಾಗುಣವು ಹಿಪ್ಪುನೇರಳೆ ಬೆಳೆ ಸೂಕ್ತವಾದ ನೆಲೆಯಾಗಿದ್ದರಿಂದಾಗಿ ಫ್ರೆಂಚ್ ಮತ್ತು ಇಟಲಿಯನ್ನರು ಸಹ ಹಿಪ್ಪು ನೇರಳೆಯ ಎಸ್ಟೇಟ್‌ಗಳನ್ನು ಬೆಂಗಳೂರಿನ ಸುತ್ತ ಮುತ್ತಲಿನಲ್ಲಿ ಸ್ಥಾಪಿಸಿದರು.

ಡೆ ವಿಚ್ಚಿ ಬ್ರಿಟಿಶ್ ಸರ್ಕಾರದ ಅನುಮತಿಯನ್ನು ಪಡೆದು ಭಾರತದೊಂದಿಗೆ ರೇಷ್ಮೆ ವ್ಯವಹಾರದಲ್ಲಿ ತೊಡಗಿಸಿಕೊಂಡರು. ಈ ನಿಟ್ಟಿನಲ್ಲಿ ಡಿ ವಿಚ್ಚಿ ಮೆಟ್ಟೀಫ್ ಅಂಡ್ ಕಂಪೆನಿ (de vecchi metteief and company) ಸ್ಥಾಪಿಸಿದನು.[೭೪] ಯೂರೋಪ್ ಮತ್ತು ಏಷಿಯಾ ರಾಷ್ಟ್ರಗಳ ನಡುವೆ ಕಚ್ಚಾ ರೇಷ್ಮೆ ಮತ್ತು ಜವಳಿ ಉದ್ಯಮವನ್ನು ವ್ಯವಹಾರಕ್ಕಾಗಿ ಸ್ಥಳೀಯ ವರ್ತಕ ಸಮುದಾಯಗಳೊಂದಿಗೆ ಕೈಗೂಡಿಸಿದನು. ಮೈಸೂರು ಮತ್ತು ಮದ್ರಾಸ್ ಪ್ರದೇಶಗಳಲ್ಲಿ ೧೮೬೦ಗಿಂತ ಮುಂಚಿನ ದಶಕದಲ್ಲಿ ಡೆ ವಿಚ್ಚಿ ಎಂಟರ್‌ಪ್ರೈಸಸ್‌ನ್ನು ಸ್ಥಾಪಿಸಲು ಯೋಚಿಸಿದ ಸಹೋದರರು ಬೆಂಗಳೂರಿನ ಕೆಂಗೇರಿ ಪ್ರದೇಶವನ್ನು ಪಡೆದು ಹಿಪ್ಪುನೇರಳೆ ಬೆಳೆಯಲು ಪ್ರಾರಂಭಿಸಿದರು. ಇಟಲಿಯ ರೇಷ್ಮೆ ವರ್ತಕರು ಬೆಂಗಳೂರು, ರಾಮನಗರ, ಚೆನ್ನಪಟ್ಟಣ, ಹೊಸೂರು, ಮದ್ದೂರು ಮೊದಲಾದ ಸ್ಥಳಗಳಲ್ಲಿ ರೇಷ್ಮೆ ಬೇಸಾಯ ಮತ್ತು ವ್ಯವಹಾರಗಳಲ್ಲಿ ಮುಸ್ಲಿಂ ಸ್ಥಳೀಯ ವರ್ತಕರೊಂದಿಗಿನ ಸಹಭಾಗಿತ್ವದಲ್ಲಿ ಕಾರ್ಯ ಚಟುವಟಿಕೆಯಲ್ಲಿ ಭಾಗವಹಿಸುತ್ತಿದ್ದರು ಎಂಬುದು ಗಮನಾರ್ಹವಾಗಿದೆ. ಈ ನಿಟ್ಟಿನಲ್ಲಿ ಪ್ರಮುಖ ಪಾತ್ರವಹಿಸಿದ ಚೆನ್ನಪಟ್ಟಣದ ಮಸ್ತಾನ್[೭೫] ಎಂಬ ಮುಸ್ಲಿಂ ವರ್ತಕ ಸಮುದಾಯದ ವ್ಯಕ್ತಿ ಮತ್ತು ಅವರ ಕುಟುಂಬ ವರ್ಗವು ಇಟಲಿಯ ರೇಷ್ಮೆ ವರ್ತಕ ಸಮುದಾಯಗಳೊಂದಿಗೆ ನಿಕಟ ಸಂಬಂಧವನ್ನು ೧೮೩೦ರಿಂದಲೇ ಹೊಂದಿದ್ದರು. ಇವರ ಜಂಟಿ ಸಹಕಾರದೊಂದಿಗೆ ಬೆಂಗಳೂರಿನ ಸುತ್ತ-ಮುತ್ತಲಿನಲ್ಲಿ ರೇಷ್ಮೆ ಚಟುವಟಿಕೆಯಲ್ಲಿ ತೊಡಗಿಸಿಕೊಂಡಿದ್ದರು ಎಂಬುದು ಗಮನಾರ್ಹವಾಗಿದೆ. ಇದೆಲ್ಲವು ಇಟಲಿ ವರ್ತಕ ಸಮುದಾಯವು ಬೆಂಗಳೂರು ಪ್ರದೇಶ ಮತ್ತು ಅದರ ಸುತ್ತ ಮುತ್ತ ವಾಣಿಜ್ಯ ಸಂಪರ್ಕವನ್ನು ಹೊಂದಿತ್ತು ಎಂದು ಸ್ಪಷ್ಟಪಡಿಸುವುದು.

### ಅರಬ್, ಕಂದಹಾರಿ, ಬಲೂಚಿಸ್ ಪಂಗಂಡದ ವರ್ತಕ ಸಮುದಾಯದವರು

ಕುದುರೆ ವ್ಯಾಪಾರ ಮತ್ತು ಬಟ್ಟೆ ವ್ಯಾಪಾರದಲ್ಲಿ ತೊಡಗಿದ ವಿದೇಶಿ ವರ್ತಕ ಸಮುದಾಯಗಳು ಬಹುಪಾಲು ಬೆಂಗಳೂರಿನಲ್ಲಿ ನೆಲೆಸಿದ್ದರು. ಇವರು ಕುದುರೆಗಳನ್ನು ತಂದು ಮಾರಾಟ ಮಾಡುತ್ತಿದ್ದರು.

ರಿಚ್ಮಂಡ್ ರಸ್ತೆಯಲ್ಲಿ ಒಂದು ಬೀದಿಗೆ ಅರಬ್ ಲೇನ್ ಎಂದು ಕರೆಯಲಾಗಿದ್ದು. ಅರಬರು ಇಲ್ಲಿ ನೆಲೆಸಿದ್ದರು ಎಂಬ ವಿಚಾರವನ್ನು ತಿಳಿಸುತ್ತದೆ.[೭೬]

**ಚೀನಿಯರು**

ಪ್ರಾಚೀನ ಕಾಲದಿಂದಲ್ಲೂ ಚೀನಾ ದೇಶದ ವರ್ತಕ ಸಮುದಾಯದವರು ಭಾರತದೊಂದಿಗೆ ವ್ಯಾಪಾರ–ವಾಣಿಜ್ಯ ಸಂಪರ್ಕವನ್ನು ಹೊಂದಿದ್ದರು. ಫಾಹಿಯಾನ್, ಹ್ಯುಯೆನ್–ತ್ಸಾಂಗ್, ಇತ್ಸಿಂಗ್ ಪ್ರವಾಸಿಗರು ಭಾರತಕ್ಕೆ ಭೇಟಿ ಕೊಟ್ಟ ಮಾಹಿತಿಗಳು ದೊರೆಯುತ್ತದೆ. ಇವರು ಧರ್ಮ, ಶಿಕ್ಷಣ, ಪ್ರವಾಸದ ಹಿನ್ನೆಲೆಯಲ್ಲಿ ಬಂದರೆಂದು ತಿಳಿದರು ಸಹ ಅದರ ಹಿಂದೆ ವ್ಯಾಪಾರ ಮತ್ತು ವಾಣಿಜ್ಯದ ಉದ್ದೇಶವಿತ್ತು ಎಂಬ ವಿಚಾರವನ್ನು ಮರೆಯುವಂತಿಲ್ಲ. ಬೌದ್ಧಧರ್ಮದ ಪ್ರಚಾರದ ಹಿನ್ನೆಲೆಯಲ್ಲಿ ವ್ಯಾಪಾರದ ಉದ್ದೇಶವನ್ನು ಹೊಂದಿದ್ದರು. ಇದರ ಹಿನ್ನೆಲೆಯಲ್ಲಿ ಹಲವು ಚೀನಿ ವರ್ತಕ ಸಮುದಾಯಗಳು ರೇಷ್ಮೆ, ಪಿಂಗಾಣಿ ಉತ್ಪನ್ನಗಳು, ಸಕ್ಕರೆ ಉತ್ಪನ್ನಗಳನ್ನು ತಂದು ಭಾರತದಲ್ಲಿ ಮಾರಾಟ ಮಾಡುತ್ತಿದ್ದರೆಂದು ಊಹಿಸಬಹುದಾಗಿದೆ. ಇದರ ಹಿನ್ನೆಲೆಯಲ್ಲಿ ದಕ್ಷಿಣ ಭಾರತದೊಂದಿಗೆ ಇವರಿಗೆ ಸಂಕರ್ಪವಿದ್ದಂತೆ ತೊರುತ್ತದೆ. ಬೆಂಗಳೂರಿನ ಕೆಂಪೇಗೌಡನು ನಿರ್ಮಿಸಿದ ಕಾವಲು ಗೋಪುರದ ಘಂಟೆಯ ಮೇಲೆ ಚೀನಿ ಬರಹಗಳು ಇರುವುದು.[೭೭] ಈ ವಿಚಾರವು ಬೆಂಗಳೂರು ಪ್ರದೇಶ ಮತ್ತು ಚೀನಿಯರ ನಡುವಿನ ಸಂಬಂಧದ ಮೇಲೆ ಬೆಳಕು ಚೆಲ್ಲುತ್ತದೆ. ಇವರು ಯಾರ ಕಾಲದಲ್ಲಿ ಬೆಂಗಳೂರಿಗೆ ಬಂದರು ಎಂಬುದರ ಬಗೆಗೆ ಸ್ಪಷ್ಟ ಮಾಹಿತಿ ಇಲ್ಲ. ಆದರೆ ಟಿಪ್ಪುವಿನ ಕಾಲದಲ್ಲಿ ಟಿಪ್ಪು ಚೀನಾದಿಂದ ಹಿಪ್ಪುನೇರಳೆ ಬೆಳೆ ಮತ್ತು ಸಕ್ಕರೆ ಉತ್ಪಾದನೆಯಲ್ಲಿ ಕೌಶಲ್ಯವನ್ನು ಹೊಂದಿದ್ದ ಚೀನಿಯರ ಸಹಾಯದಿಂದ ಬೆಂಗಳೂರಿನ ಸ್ಥಳೀಯರಿಗೆ ತರಬೇತಿಯನ್ನು ನೀಡಲು ಕರೆಸಿಕೊಂಡಿದ್ದನು ಎಂಬ ವಿಚಾರಗಳು ಚೀನಿ ವರ್ತಕರು ಬೆಂಗಳೂರು ಪ್ರದೇಶದೊಂದಿಗೆ ವ್ಯಾಪಾರ–ವಾಣಿಜ್ಯ ಸಂಬಂಧವನ್ನು ಹೊಂದಿದ್ದರು ಸ್ಪಷ್ಟೀಕರಿಸುತ್ತದೆ. ಇವರ ಬಗೆಗೆ ಬಿ. ಎ. ರೈಸ್‌ರ ಮೈಸೂರ್ ಗೈಜೆಟಿಯರ್‌ನಲ್ಲಿ ಚೀನಿಯರ ಬಗೆಗೆ ಉಲ್ಲೇಖಿಸಿದ್ದಾರೆ.[೭೮]

**ಪಾರ್ಸಿ**

ಇವರು ಬಾಂಬೆಯಿಂದ ಬಂದವರು. ಪ್ರಬಲ ಔದ್ಯೋಗಿಕೋದ್ಯಮಿಗಳು. ಆರ್ಥಿಕವಾಗಿ ಪ್ರಬಲವಾದ ಸಮುದಾಯವಾಗಿದೆ. ವ್ಯಾಪಾರ, ಕಾಂಟ್ರಾಕ್ಟ್‌ನಂತಹ ವೃತ್ತಿಯಲ್ಲಿ ತೊಡಗಿಸಿಕೊಂಡಿರುವ ಸಮುದಾಯವಾಗಿದೆ. ಸುಮಾರು ಏಳನೇ ಶತಮಾನದಲ್ಲಿ ಅರಬರು ಇರಾನನ್ನು ಆಕ್ರಮಿಸಿದಾಗ ಅವರ ಉಪಲಾಟವನ್ನು ತಡೆಯಲಾಗದೆ ಪ್ರಪಂಚದ ಬೇರೆ ಬೇರೆ ಭಾಗಗಳಿಗೆ ವಲಸೆ ಹೋದರು. ಈ ಸಂದರ್ಭದಲ್ಲಿ ಭಾರತಕ್ಕೆ ಬಂದ ಗುಂಪು ಪಶ್ಚಿಮ ಕರಾವಳಿ, ಡಿಯು ಮತ್ತು ಮುಂಬಾಯಿಗಳಲ್ಲಿ

ನೆಲೆಸಿದರು. ಮುಂದೆ ವ್ಯಾಪಾರದ ಹಿನ್ನೆಲೆಯಲ್ಲಿ ದಾರಾಷಾ, ಪಲೊಂಜಿ, ಡಾ. ಹೋಮಿ ಬಾ ಬಾ ಕರ್ನಾಟಕದ ಜೊತೆ ವ್ಯಾಪಾರ ಸಂಪರ್ಕವನ್ನು ಹೊಂದಿದ್ದರು. ಹಾಗೆ ೧೮೮೦ರಲ್ಲಿ ಕೆಲವು ಪಾರ್ಸಿಗಳು ಬೆಂಗಳೂರಿನಲ್ಲಿ ನೆಲೆನಿಂತರು. ಅವರ ಸಂಖ್ಯೆಯು ನಂತರದ ದಶಕದಲ್ಲಿ ಅಂದರೆ, ೧೮೯೦ರಲ್ಲಿ ಹೆಚ್ಚಾಯಿತು. ಬೆಂಗಳೂರಿಗೆ ಮೊದಲು ಮಂಚರ್ಜೆ ಕಾಮ ಮತ್ತು ಕುಟುಂಬ ಬಂದು ನೆಲೆಸಿತು. ನಿಧಾನಗತಿಯಲ್ಲಿ ಹಲವು ಪಾರ್ಸಿ ಕುಟುಂಬಗಳು ಬೆಂಗಳೂರಿಗೆ ಬಂದು ನೆಲೆಸತೊಡಗಿತು. ಅವರಲ್ಲಿ ಪ್ರಮುಖ ಕುಟುಂಬಗಳೆಂದರೆ ಬೆಳಗಾಂವಾಲಾ, ಮಿರ್ಜಾದಲ್ಲಾ, ಮಾಲೆಗಾಂವಾಲಾ, ಮೆರವಾಸ್ಜಿ, ಮರ್ಚೆಂಟ್, ಬಾಯ್ಸ್, ಏಡನವಾಲಾ ಮರಕೆರಿ, ಮೋತಿಬಾಯಿ ಕಾಂಗ ಮೊದಲಾದ ಕುಟುಂಬಗಳು ಬಂದವು. ಪಾರ್ಸಿಯರು ಬೆಂಗಳೂರಿನ ಕ್ವೀನ್ಸ್ ರಸ್ತೆಯಲ್ಲಿ ನೆಲೆಸಿದ್ದರು. ಆ ಸಂದರ್ಭದಲ್ಲಿ ದಿವಾನ್ ಶೇಷಾದ್ರಿ ಅಯ್ಯರ್‌ರಿಂದ ೧೩ ಎಕರೆ ರುದ್ರಭೂಮಿಯನ್ನು ಈ ಸಮುದಾಯಕ್ಕೆ ನೀಡಿದರು. ಇಂದಿಗೂ ಅವರಿಗೆ ಸೇರಿದ ದೇಗುಲವೊಂದು ಇಂಡಿಯನ್ ಎಕ್ಸ್‌ಪ್ರೆಸ್‌ನ ಬಳಿಯಿದೆ. ಬೆಂಗಳೂರಿನ ಪ್ರಮುಖ ಪಾರ್ಸಿಗಳೆಂದರೆ, ಸೇಟ್ ಕೈಕುಸ್ರೂ ಬೆಳಗಾಂವಾಲಾ, ಸೇಟ್ ರುಸ್ತುಂಜೀ ಬಾಯ್ಸ್, ಸೇಟ್ ಕವಸ್ ಜೀ ಮೊದಲಾದವರು.[೭೯] ಈ ಸಮುದಾಯವರು ಬೆಂಗಳೂರು ಪ್ರದೇಶದ ಅಭಿವೃದ್ಧಿಗೆ ಸಹ ಕಾರಣರಾಗಿದ್ದಾರೆ. ಕೊತಾರಿ ಅವರು ೧೯೩೭ರಲ್ಲಿ ನಿರ್ಮಿಸಿದ ಲೇಡಿ ಜಹಾಂಗೀರ್ ಕೋತಾರಿ ಮೇಮೊರಿಯಲ್ ಹಾಲ್ ಇವರ ದೇವಾಲಯದ ಪಕ್ಕದಲ್ಲಿರುವ ಮುಖ್ಯ ಸ್ಮಾರಕವಾಗಿದ್ದು, ಬೆಂಗಳೂರು ಪ್ರದೇಶದ ಅಭಿವೃದ್ಧಿಗೆ ನೀಡಿದ ಕೊಡುಗೆಗೆ ಸಾಕ್ಷಿಯಾಗಿದೆ.

**ಪರ್ಷಿಯನ್ ಮುಸ್ಲಿಂ ಸಮುದಾಯಗಳು**

ಬೆಂಗಳೂರಿನ ಪ್ರದೇಶದಲ್ಲಿ ಕಂಡುಬರುವ ಇನ್ನೊಂದು ಪ್ರಮುಖ ವಿದೇಶಿ ವರ್ತಕರೆಂದರೆ ಅದು ಪರ್ಷಿಯನ್ ಮುಸ್ಲಿಮರು. ವ್ಯಾಪಾರದ ಹಿನ್ನೆಲೆಯಲ್ಲಿ ಪರ್ಷಿಯಾದಿಂದ ಬಂದವರಾಗಿದ್ದರು. ಈ ಸಮುದಾಯವು ಮೊಗಲರು ಬೆಂಗಳೂರನ್ನು ಆಕ್ರಮಿಸಿದಾಗ ಬಂದರೆನ್ನಬಹುದಾಗಿದೆ. ಇವರು ಜವಳಿ ವ್ಯಾಪಾರ ಮತ್ತು ಕುದುರೆ ವ್ಯಾಪಾರಕ್ಕೆ ಹೆಸರುವಾಸಿಯಾದ ವರ್ತಕ ಸಮುದಾಯವಾಗಿದೆ. ಮೈಸೂರು ಒಡೆಯರು ಮತ್ತು ಹೈದರ್, ಟಿಪ್ಪುವಿನ ಕಾಲದಲ್ಲಿ ಈ ವರ್ತಕ ಸಮುದಾಯಗಳೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದರು. ಈ ಕಾಲಘಟ್ಟದಲ್ಲಿಯೂ ಬೆಂಗಳೂರು ಮೈಸೂರು ರಾಜ್ಯದ ಸೈನಿಕ ನೆಲೆಯಾಗಿತ್ತು ಎಂಬುದು ಗಮನಿಸಬೇಕಾದ ಅಂಶ. ಆದರೆ ಇದರ ಬಗೆಗೆ ನಮಗೆ ಸ್ಪಷ್ಟ ದಾಖಲೆಗಳ ಕೊರತೆಯಿದೆ. ಅಧಿಕೃತ ಮಾಹಿತಿಯ ಪ್ರಕಾರ ೧೮೭೪ರಲ್ಲಿ ಬೆಂಗಳೂರು ದಂಡು ಪ್ರದೇಶಕ್ಕೆ ಕುದುರೆಗಳನ್ನು ಮಾರಾಟ ಮಾಡುವ ಸಲುವಾಗಿ ಆಗಾ ಅಲಿ ಅಸ್ಕರ್ ಷೀರಜೀ ಎಂಬುವವರು ತಮ್ಮ ಕುಟುಂಬದೊಂದಿಗೆ ಬಂದರು. ಅವರ ಜೊತೆ ಒರ್ವ ಲಿಪಿಗಾರ, ಅಕ್ಕಸಾಲಿಗ, ಅಡುಗೆ ಮಾಡುವವ ಹೀಗೆ ತಮಗೆ ಬೇಕಾದ ಎಲ್ಲಾ ರೀತಿಯಲ್ಲಿ ಸೇವೆಮಾಡುವ ಜನರೊಂದಿಗೆ

ಪರ್ಷಿಯಾದಿಂದ ಬಂದರು. ಇವರು ಉತ್ತಮ ದರ್ಜೆಯ ಕುದುರೆ ಮಾರಾಟದ ವ್ಯವಹಾರಕ್ಕೆ ಹೆಸರುವಾಸಿಯಾದ ಅತೀ ದೊಡ್ಡ ವರ್ತಕರಾಗಿದ್ದರು. ಈ ನಿಟ್ಟಿನಲ್ಲಿ ಬ್ರಿಟಿಶ್ ಪ್ರಭುತ್ವದೊಂದಿಗೆ ಉತ್ತಮ ಬಾಂಧವ್ಯವನ್ನು ಹೊಂದಿದ್ದರು. ಇವರು ಬೆಂಗಳೂರು ಮಿಲಿಟರಿ ಪ್ರದೇಶಕ್ಕೆ ಅಷ್ಟೇ ಕುದುರೆಗಳನ್ನು ಪೂರೈಕೆಯನ್ನು ಮಾಡುತಿರದೇ ಇನ್ನಿತರ ಪ್ರದೇಶಕ್ಕೂ ಅರೇಬಿಯಾ, ಪರ್ಷಿಯಾದಿಂದ ಕುದುರೆಗಳನ್ನು ತಂದು ಸರಬರಾಜು ಮಾಡುತ್ತಿದ್ದರು. ಕುದುರೆ ವ್ಯವಹಾರದೊಂದಿಗೆ ಮಾತ್ರ ಸಿಮೀತಗೊಂಡಿರದೆ, ಉತ್ತಮ ದರ್ಜೆಯ ಮನೆಗಳನ್ನು ನಿರ್ಮಿಸುವುದರಲ್ಲಿ ಸಿದ್ಧಹಸ್ತರಾಗಿದ್ದರು. ಇವರಿಗೆ ಎಷ್ಟರ ಮಟ್ಟಕ್ಕೆ ರಾಜಕೀಯ ವಿಚಾರಗಳಲ್ಲಿ ಹಿಡಿತವಿತ್ತೆಂದರೆ, ಮೈಸೂರು ಮಹಾರಾಜರ ದತ್ತು ಪುತ್ರರಿಗೆ ಮೈಸೂರು ರಾಜ್ಯದ ಆಸ್ತಿಯ ಹಕ್ಕನ್ನು ನೀಡಬೇಕೆಂದು ಸರ್ ಜಾನ್ ಲಾರೆನ್ಸ್‌ರಿಗೆ ಮನವಿ ಪತ್ರವನ್ನು ಬರೆದರು ಎಂಬ ವಿಚಾರವು ಇದಕ್ಕೆ ಸಾಕ್ಷಿಯಾಗಿದೆ. ಮುಂದೆ ಇವರ ಮೊಮ್ಮಗ ಮಿರ್ಜಾ ಇಸ್ಮಾಯಿಲ್ ಅವರು ಮೈಸೂರಿನ ದಿವಾನರಾಗಿ ಕಾರ್ಯನಿರ್ವಹಿಸಿದರು ಎಂಬುದು ಗಮನಾರ್ಹವಾದ ವಿಚಾರವಾಗಿದೆ. ಬೆಂಗಳೂರು ದಂಡು ಪ್ರದೇಶದ ರಿಚ್ಮಂಡ್ ರಸ್ತೆಯಲ್ಲಿ ನೆಲೆಸಿದ್ದರು. ಇಂದಿಗೂ ಈ ದಿಸೆಯಲ್ಲಿ ಅಲಿ ಅಸ್ಕರ್ ರಸ್ತೆ ಇದೆ. ಈ ಕುಟುಂಬ ಮಾತ್ರವಲ್ಲದೆ ನಂತರದಲ್ಲಿ ಪರ್ಷಿಯಾದಿಂದ ಬಂದ ಇನ್ನಿತರ ಕುಟುಂಬಗಳೆಂದರೆ, ನಮಜಿಸ್, ಕಿರ್ಮಾನಿ, ಖಲೆಲೀ, ಇಸ್ಪಹನಿಸ್, ಸೂಸ್ತರಿಸ್ ಮೊದಲಾದವು.[೮೦] ಈ ಸಮುದಾಯಗಳು ಬೆಂಗಳೂರು ನಗರ ಪ್ರದೇಶದ ಅಭಿವೃದ್ಧಿಗೆ ಮಾತ್ರವಲ್ಲದೆ ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಜೀವನಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ.

ಈ ಮೇಲೆ ವಿವರಿಸಿದ ಪ್ರಮುಖ ವರ್ತಕ ಸಮುದಾಯಗಳಲ್ಲದೆ ಇನ್ನೂ ಅನೇಕ ಸಣ್ಣ–ಪುಟ್ಟ ವರ್ತಕ ಸಮುದಾಯಗಳು ಬೆಂಗಳೂರಿನಲ್ಲಿ ಕಂಡುಬರುತ್ತಾರೆ. ಈ ವರ್ತಕ ಸಮುದಾಯಗಳ ನಡುವೆ ಒಳ್ಳೆಯ ಸಂಬಂಧವಿದ್ದು, ಇತರೆ ಪ್ರಮುಖ ವರ್ತಕ ಸಮುದಾಯಗಳಷ್ಟೇ ಪ್ರಮುಖ ಪಾತ್ರವನ್ನು ವಹಿಸಿದ್ದಾರೆ. ಅವುಗಳ ಬಗೆಗೆ ಇನ್ನೂ ಹೆಚ್ಚು ಅಧ್ಯಯನಗಳು ಆಗಬೇಕಾಗಿದೆ.

**ಕೊನೆಟಿಪ್ಪಣಿಗಳು**


೧. ವಿಜಯಶ್ರೀ ಇಟ್ಟಣ್ಣವರ, **ಹದಿನೆಂಟು ಜಾತಿಗಳು**, ೨೦೧೧, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧

೨. ರೈಸ್ ಬಿ. ಎಲ್., **ಮೈಸೂರು ಗೆಜೆಟಿಯರ್**, ೧೮೯೭, ವೆಸ್ಟಮಿನಿಸ್ಟರ್, ಲಂಡನ್, ಸಂಪುಟ–೧ ಪು.೨೨೨–೨೨೩

೩. ಚಂದ್ರಶೇಖರ್ ಎಸ್., **ಆಧುನಿಕ ಕರ್ನಾಟಕದ ಆಂದೋಲನಗಳು**, ೨೦೦೨, ನಮ್ಮ ಪ್ರಕಾಶನ, ತುಮಕೂರು, ಪು.೧೨

೪. ಫರೋಹ್ ಅಂಡ್ ಕೋ, **ಎ ಗೆಜೆಟಿಯಲ್ ಆಫ್ ಸಾದರ್ನ್ ಇಂಡಿಯಾ**, ೧೮೫೫, ಫರೋಹ್ ಅಂಡ್ ಕೋ, ಅಥೀನಿಯಮ್ ಪ್ರೆಸ್, ಮದ್ರಾಸ್, ಪು.೫೪.

೫. ಬೌರಿಂಗ್ ಎಲ್., **ಈಸ್ಟರ್ನ್ ಎಕ್ಸ್‌ಪೀರಿಯೇನ್ಸ್**, ಸೆಕೆಂಡ್ ಎಡಿಷನ್ ೧೮೭೨, ಹೆನ್ರಿ ಎಸ್ ಕಿಂಗ್ ಅಂಡ್ ಕೋ, ಲಂಡನ್, ಪು.೫೪

೬. **ಜನಗಣತಿ ವರದಿಗಳು**–೧೮೯೧, ೧೯೦೧, ೧೯೧೧

೭. **ಜನಗಣತಿ ವರದಿ**–೧೯೧೧

೮. ಸುಮಿತ್ರ ಎಂ., **ಕರಗ ಸಂಪ್ರದಾಯ**, ೨೦೦೨, ಅಂಕಿತ ಪುಸ್ತಕ, ಬೆಂಗಳೂರು, ಪು.೩೩

೯. **ಅದೇ**, ಪು.೪೨

೧೦. ಸೂರ್ಯನಾಥ ಯು. ಕಾಮತ್, ಪಾರಂಪರಿಕ ಕೈಗಾರಿಕೆಗಳ ನಾಶ: ಹಿಂದುಳಿದ ವರ್ಗಗಳ ಚಳುವಳಿಗೆ ನಾಂದಿ, ೧೯೯೮, **ಇತಿಹಾಸ ದರ್ಶನ**, ಸಂ–೧೩, ಪು.೨೯೭

೧೧. ಹಯವದನ ರಾವ್, **ಮೈಸೂರ್ ಗೈಜೆಟಿಯರ್**, ೧೯೨೭, ಗೌರ್ನಮೆಂಟ್ ಪ್ರೆಸ್ಸ್, ಬೆಂಗಳೂರು, ಸಂ–೧, ಪು.೪೧

೧೨. ರೈಸ್ ಬಿ. ಎಲ್., **ಪೂರ್ವೋಕ್ತ**, ಪು.೨೫೨

೧೩. **ಜನಗಣತಿ ವರದಿ**–೧೮೯೧

೧೪. ಸೂರ್ಯನಾಥ ಕಾಮತ್, **ಪೂರ್ವೋಕ್ತ**, ಪು.೨೯೮

೧೫. **ಜನೋಪಕಾರಿ ದೊಡ್ಡಣ್ಣ ಶೆಟ್ಟರವರ ಜೀವನ ಚರಿತ್ರೆ**, ೧೯೮೦, ಎಸ್. ಎಲ್. ಎನ್. ಧರ್ಮಸಂಸ್ಥೆ, ಬೆಂಗಳೂರು, ಪು.೨೧

೧೬. ಜ್ಯೋತಿನಗರ ವೈಶ್ಯ ಶ್ರೀ ಜೆ. ಬಿ. ಕೆಂಪಣ್ಣ ಶೆಟ್ಟರ ಧರ್ಮಸಂಸ್ಥೆಯ ೯೦ನೇ ವಾರ್ಷಿಕ ಸಮಾರಂಭದ **ಸ್ಮರಣ ಸಂಚಿಕೆ**, ಬೆಂಗಳೂರು.

೧೭. ಸುಂದರ ರಾವ್ ಬ. ನ., **ಬೆಂಗಳೂರಿನ ಇತಿಹಾಸ**, ೨೦೧೧, ಅಂಕಿತ ಪುಸ್ತಕ, ಬೆಂಗಳೂರು, ಪು.೧೧೨

೧೮. ಫ್ರಾನ್ಸಿಸ್ ಬುಕಾನನ್, ೧೮೦೭, **ಎ ಜರ್ನಿ ಫ್ರಂ ಮದ್ರಾಸ್ ಥ್ರೂ ದ ಕಂಟ್ರೀಸ್ ಆಫ್ ಮೈಸೂರು, ಕೆನರಾ ಆ್ಯಂಡ್ ಮಲಬಾರ್**, ಸಂ–೧, ಲಂಡನ್(ಮರುಮುದ್ರಣ ೨೦೧೦), ಕರ್ನಾಟಕ ಸ್ಟೇಟ್ ಗ್ಯಾಸೆಟಿಯರ್ ಡಿಪಾರ್ಟ್‌ಮೆಂಟ್, ಬೆಂಗಳೂರು, ಪು.೨೦೭

೧೯. ಜನಗಣತಿ ವರದಿ–೧೮೯೧.

೨೦. ಅಖಿಲ ಕರ್ನಾಟಕ ದೇವಾಂಗ ಮಹಾ ಸಮ್ಮೇಳನ, ೧೯೭೨, ಸ್ಮರಣ ಸಂಚಿಕೆ, ಪು.೧–೨.

೨೧. ಹಯವದನ ರಾವ್, ಪೂರ್ವೋಕ್ತ, ಪು.೯

೨೨. ನಾರಾಯಣನ್ ಕೃಷ್ಣಸ್ವಾಮಿ, ಮನುಜ ವೀರಪ್ಪ, ಪೇಟೆಸ್. ಇನ್ ಫ್ಲಾಸ್, ಜುಲೈ ೧೨ ೨೦೧೫, ದಿ ಟೈಮ್ ಆಫ್ ಇಂಡಿಯ, ಬೆಂಗಳೂರು

೨೩. ದೇವಾಂಗ ಸಂಘ, ಪೂರ್ವೋಕ್ತ, ಪು.೨

೨೪. ಹಯವದನ ರಾವ್, ಪೂರ್ವೋಕ್ತ, ಪು.೨೪೦

೨೫. ಬುಕಾನನ್, ಪೂರ್ವೋಕ್ತ, ಪು.೨೧೭

೨೬. ರೈಸ್ ಬಿ. ಎಲ್., ಪೂರ್ವೋಕ್ತ, ಪು.೨೫೦

೨೭. ಅದೇ, ಪು.೨೫೧

೨೮. ಕೃಷ್ಣಮೂರ್ತಿ ಪಿ. ವಿ.(ಲೇ), ಬೆಂಗಳೂರು ಪರಿಸರ, ಸಂ–೮, ೨೦೧೧, ಎಸ್. ಕೆ ಅರುಣಿ (ಸಂ), ಇತಿಹಾಸ ದರ್ಪಣ, ಬೆಂಗಳೂರು, ಪು.೩೭

೨೯. ಹಯವದನ್ ರಾವ್, ಪೂರ್ವೋಕ್ತ, ಪು.೨೩೯

೩೦. ಬುಕಾನನ್, ಪೂರ್ವೋಕ್ತ, ಪು.೨೧೩

೩೧. ಅದೇ, ಪು.೨೧೩

೩೨. ಹಯವದನ್ ರಾವ್, ಪೂರ್ವೋಕ್ತ, ಪು.೨೩೭

೩೩. ಕ್ಷೇತ್ರಕಾರ್ಯದ ಮಾಹಿತಿಯನ್ನಾಧಾರಿಸಿದೆ.

೩೪. ಬುಕಾನನ್, ಪೂರ್ವೋಕ್ತ, ಪು.೨೨೬

೩೫. ಅದೇ, ಪು.೨೨೮

೩೬. ಶಿವಾನಂದ ಗುಬ್ಬಣ್ಣ, ಕರ್ನಾಟಕದ ಕುರುಬರು, ೧೯೯೩, ಅಕ್ಷಯ ಪ್ರಕಾಶನ, ಧಾರವಾಡ, ಪು.೧, ೯೧

೩೭. ಹಯವದನ್ ರಾವ್, ಪೂರ್ವೋಕ್ತ, ಪು.೨೪೧

೩೮ ಅನಿತಾ ಎಂ. ಎಸ್., ಪೂರ್ವೋಕ್ತ, ಪು.೧೩೫

೩೯. ರೈಸ್ ಬಿ. ಎಲ್., **ಪೂರ್ವೋಕ್ತ**, ಪು.೨೪೬

೪೦. ಕೃಷ್ಣಮೂರ್ತಿ ಪಿ. ವಿ., **ಪೂರ್ವೋಕ್ತ**, ಪು.೩೭

೪೧. ರೈಸ್ ಬಿ. ಎಲ್., **ಪೂರ್ವೋಕ್ತ**, ಪು.೨೪೬

೪೨. **ಜನಗಣತಿ ವರದಿ**, ೧೮೯೧.

೪೩. ಹಯವದನ ರಾವ್, **ಪೂರ್ವೋಕ್ತ**, ಪು.೨೪೧

೪೪. ನಾರಾಯಣನ್ ಕೃಷ್ಣಸ್ವಾಮಿ, ಮನುಜ ವೀರಪ್ಪ, **ಪೂರ್ವೋಕ್ತ**, ಪು.೧

೪೫. ಹಯವದನ್ ರಾವ್, **ಪೂರ್ವೋಕ್ತ**, ಪು.೨೪೭

೪೬. ಬುಕಾನನ್, **ಪೂರ್ವೋಕ್ತ**, ಪು.೧೫೯

೪೭. ಚಂಪಕಲಕ್ಷ್ಮಿ ಆರ್.(ಲೇ), ದಿ ಮೆಡಿವಲ್ ಸೌತ್ ಇಂಡಿಯನ್ ಗಿಲ್ಡ್ಸ್: ದೆರ್ ರೋಲ್ ಇನ್ ಟ್ರೇಡ್ ಅಂಡ್ ಅರ್ಬನೈಜೇಶನ್, ರಣಬೀರ್ ಚಕ್ರವರ್ತಿ(ಸಂ), **ಟ್ರೇಡ್ ಇನ್ ಅರ್ಲಿ ಇಂಡಿಯ**, ೨೦೦೧, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ಡೆಲ್ಲಿ, ಪು.೧೪೧

೪೮. ರೈಸ್ ಬಿ. ಎಲ್., **ಪೂರ್ವೋಕ್ತ**, ಪು.೨೪೩

೪೯. ಸೂರ್ಯನಾಥ ಕಾಮತ್(ಲೇ), **ಇತಿಹಾಸ**, ೨೦೦೫, ಎಲ್. ಎಸ್. ಶೇಷಗಿರಿ ರಾವ್ (ಸಂ), ಬೆಂಗಳೂರು ದರ್ಶನ, ಉದಯಭಾನು ಕಲಾಸಂಘ, ಸಂ–೧, ಬೆಂಗಳೂರು, ಪು.೧೯

೫೦. ಚಂದ್ರಮೌಳಿ ಕೆ., **ಬೆಂಗಳೂರಿನ ನೋಟಗಳು**, ೨೦೦೦೨, ಪ್ರಸಮ್ ಬುಕ್ಸ್ ಪ್ರೈ. ಲಿ., ಬೆಂಗಳೂರು, ಪು.೩೬೨

೫೧. ಅದೇ, ಪು.೩೬೩

೫೨. ಆರ್ಯ ವೈಶ್ಯ ಮಂಡಲಿ, **ಕೋಮತಿಪೇಟೆ ಶ್ರೀ ಪ್ರಸನ್ನ ವೆಂಕಟರಮಣಸ್ವಾಮಿ ದೇವಸ್ಥಾನದ ಕಿರುಹೊತ್ತಿಗೆ**, ಬೆಂಗಳೂರು.

೫೩. ಸುಂದರರಾವ್ ಬ. ನ., **ಪೂರ್ವೋಕ್ತ**, ಪು.೨೦೨

೫೪. ಮಾಯ ಜಯಪಾಲ್, ಬೆಂಗಳೂರು ದಿ ಸ್ಟೋರಿ ಆಫ್ ಎ ಸಿಟಿ, ೧೯೯೭, ಇಸ್ಟ್‌ವೆಸ್ಟ್ ಬುಕ್ ಪ್ರೈ. ಲಿ., ಚೆನ್ನೈ, ಪು.೨೨೩

೫೫. ಚಂದ್ರಮೌಳಿ ಕೆ., **ಪೂರ್ವೋಕ್ತ**, ಪು.೩೬೨–೩೬೩

೫೬. ಫಜಲ್ ಹಸನ್ ಎಂ., **ಬೆಂಗಳೂರು ಥ್ರೂ ದಿ ಸೆಂಚುರಿಸ್**, ೧೯೭೦, ಹಿಸ್ಟೋರಿಕಲ್ ಪಬ್ಲಿಕೇಶನ್, ಬೆಂಗಳೂರು, ಪು.೬೬

೫೭. ಮಾಯ ಜಯಪಾಲ್, **ಪೂರ್ವೋಕ್ತ**, ಪು.೨೩೪

೫೮. ಅದೇ, ಪು.೨೩೬

೫೯. **ಜನಗಣತಿ ವರದಿ**, ೧೮೯೧

೬೦. ಹಯವದನ್ ರಾವ್, **ಪೂರ್ವೋಕ್ತ**, ಪು.೩೩೯

೬೧. ಮಾಯ ಜಯಪಾಲ್, **ಪೂರ್ವೋಕ್ತ**, ಪು.೨೩೭

೬೨. ಅನುಪಮ ಬಿ., **ಹೊಸಪೇಟೆ ನಗರದ ವರ್ತಕ ಸಮುದಾಯಗಳು: ಚಾರಿತ್ರಿಕ ಅಧ್ಯಯನ**, ೨೦೦೯, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೩೦

೬೩. ಜಮುನ ಎಂ., **ಬೆಂಗಳೂರಿನ ಬಖೈರುಗಳು**, ೨೦೦೬, ಬೆಂಗಳೂರು ವಿಶ್ವವಿದ್ಯಾಲಯ, ಪು.೬೧

೬೪. ಚಂದ್ರಮೌಳಿ ಕೆ., **ಪೂರ್ವೋಕ್ತ**, ಪು.೩೬೭

೬೫. ಅದೇ, ಪು.೩೬೮

೬೬. ರೈಸ್ ಬಿ. ಎಲ್., **ಪೂರ್ವೋಕ್ತ**, ಪು.೨೪೫

೬೭. ಜಮುನ ಎಂ., **ಪೂರ್ವೋಕ್ತ**, ಪು.೪೪

೬೮. ಬುಕಾನನ್, **ಪೂರ್ವೋಕ್ತ**, ಪು.೧೯೯

೬೯. ಶೇಷಗಿರಿ ರಾವ್ ಎಲ್. ಎಸ್., **ಪೂರ್ವೋಕ್ತ**, ಪು.೨೪೯

೭೦. ಮಾಯ ಜಯಪಾಲ್, **ಪೂರ್ವೋಕ್ತ**, ಪು.೨೩೯

೭೧. ನಂಜುಂಡಪ್ಪ ಕೆ. ಎಸ್.(ಲೇ), ಕ್ರಫ್ಟ್ ಪ್ರೊಡಕ್ಟ್ ಅಂಡ್ ಇಂಡಸ್ಟ್ರಿಯಲ್ ಡೆವಲಪ್‌ಮೆಂಟ್ ಅಂಡರ್ ಟಿಪ್ಪು, **ಸೆಮಿನಾರ್ ನ್ಯಾಷನಲ್ ಇಂಟಗ್ರೇಶನ್ ವಿತ್ ಸ್ಪೇಷನ್ ರೆಫರೆನ್ಸ್ ಟು ಟಿಪ್ಪು ಸುಲ್ತಾನ್**, ಸೆ–೧೯೮೯, ಮೈಸೂರು ಯೂನಿರ್ವಸಿಟಿ, ಮೈಸೂರು, ಪು.೯

೭೨. http://urbangeofiction.stadtkreation.com/wpcontent/uploads/2014/06/French-book-Spreads.pdf ಪು.೧–೪೩

೭೩. ಅನಿತಾ ಎಂ. ಎಸ್., **ಪೂರ್ವೋಕ್ತ,** ಪು.೨೧೮

೭೪. ಆಂಟೋನೆಲ್ಲಾ ವಿಯೋಲ, **ಇಟಾಲಿಯನ್ ಸಿಲ್ಕ್ ಟ್ರೇಡರ್ಸ್ ಅಂಡ್ ದೇರ್ ನೆಟ್ವರ್ಕ್ಸ್ ಇನ್ ಇಂಡಿಯ: ದಿ ಡೇ ವೆಚ್ಚಿ ಎಂಟರ್‌ಪ್ರೈಸ್,** ಪು.೧೮೬೦–೧೮೭೨ (ಅನ್‌ಪಬ್ಲಿಶಿಡ್ ಥೀಸಿಸ್)

೭೫. ಫಯಾಜ್ ಎಂ. **ಅಬ್ದುಲ್ ಕುದ್ದಸ್, ಮಸ್ತನ್ ಫಾಮಿಲಿ ಅಂಡ್ ಇಸ್ಟ್ ಅಕ್ಟಿವಿಟಿ ಇನ್ ಮೈಸೂರು,** ೧೯೨೩, ಬೆಂಗಳೂರು ಪ್ರೆಸ್, ಬೆಂಗಳೂರು, ಪು.೪೪

೭೬. **ಜನಗಣತಿ ವರದಿ,** ೧೮೯೧

೭೭. ಸುಂದರ ಎ., **ಆನ್ಯುಯಲ್ ರಿಪೋರ್ಟ್ಸ್ ಆಫ್ ದಿ ಅರ್ಕಿಯಾಲಾಜಿಕಲ್ ಡಿಪಾರ್ಟ್ಮೆಂಟ್ ಫಾರ್ ದಿ ಇಯರ್ ೧೮೮೫–೧೯೦೫,** ಡೈರೆಕ್ಟರ್ ಆಫ್ ಆರ್ಕಿಯಾಲಾಜಿಕಲ್ ಅಂಡ್ ಮ್ಯುಸಿಯಂ, ಮೈಸೂರ್ ಗೌರ್ನಮೆಂಟ್ ಆಫ್ ಕರ್ನಾಟಕ, ಬೆಂಗಳೂರು, ಪು.೮೦

೭೮. ರೈಸ್ ಬಿ. ಎಲ್., **ಪೂರ್ವೋಕ್ತ,** ಪು.೨೮೯

೭೯. ಸುರೇಶ್ ಮೂನ(ಲೇ), ಮತೀಯ ಕೇಂದ್ರಗಳು: ಧಾರ್ಮಿಕ ಸಮನ್ವಯತೆ, ಎಲ್. ಎಸ್. ಶೇಷಗಿರಿ ರಾವ್, **ಪೂರ್ವೋಕ್ತ,** ಪು.೪೫೦

೮೦. ಮಾಯ ಜಯಪಾಲ್, **ಪೂರ್ವೋಕ್ತ,** ಪು.೨೨೭

## ಅಧ್ಯಾಯ ಐದು

# ವರ್ತಕ ಸಮುದಾಯಗಳ ಸಂಘ–ಸಂಸ್ಥೆಗಳು

೫.೧. ಉತ್ಪಾದನಾ–ವಿನಿಮಯ ವರ್ತಕ ಸಂಘಗಳ ಉಗಮದ ಹಿನ್ನೆಲೆ

೫.೨. ಉತ್ಪಾದನಾ–ವಿನಿಮಯ ಸಮುದಾಯಗಳ ಸಂಘಗಳ ಏಳ್ಗೆಗೆ ಕಾರಣಾಂಶಗಳು

೫.೩. ಬೆಂಗಳೂರಿನ ಪ್ರಮುಖ ಉತ್ಪಾದನಾ–ವಿನಿಮಯ ವರ್ತಕ ಸಂಘಗಳು

೫.೪. ಮೈಸೂರು ಛೇಂಬರ್ ಆಫ್ ಕಾಮರ್ಸ್

## ಅಧ್ಯಾಯ ಐದು

# ವರ್ತಕ ಸಮುದಾಯಗಳ ಸಂಘ–ಸಂಸ್ಥೆಗಳು

ಮಾನವ ಸಂಘಜೀವಿಯಾಗಿದ್ದು, ಒಬ್ಬರ ಮೇಲೆ ಇನ್ನೊಬ್ಬರು ಅವಲಂಬಿತರಾಗಿರುತ್ತಾರೆ. ಇದು ನಿಸರ್ಗದ ನಿಯಮ. ತನ್ನ ಆರ್ಥಿಕ ಅಭಿವೃದ್ಧಿಗೆ ಇತರರ ಸಹಕಾರ ಸೌಹಾರ್ದತೆಯ ಒಡನಾಟ ಬೇಕು, ಅದರಿಂದಲೇ ಏಕಾಂಗಿಯಾಗಿರದೆ ತಾನು, ತನ್ನವರು ಎಂಬ ಭಾವನೆಯಿಂದ ತನ್ನವರೊಂದಿಗೆ ಬೆರತು ಬದುಕುತ್ತಾರೆ. ಪ್ರತಿ ಹಂತದಲ್ಲೂ ತನಗೆ ಸಮಾನರಾದವರೊಂದಿಗೆ ಹೊಂದಾಣಿಕೆ ಮಾಡಿಕೊಂಡು ತನ್ನಲ್ಲಿನ ತಪ್ಪುಗಳನ್ನು ಸರಿಪಡಿಸಿಕೊಂಡು ಮುನ್ನುಗ್ಗುತ್ತಾರೆ. ಹೀಗೆ ಮಾನವ ಸಮುದಾಯ ಜೀವನವನ್ನು ಮಾಡಲು ಆರಾಂಭಿಸಿತು. ಇದು ಮಾನವ ಬದುಕಿನ ವಿಕಾಸದ ವಿವಿಧ ಹಂತಗಳಲ್ಲಿ ಕಾಣಿಸಿಕೊಳ್ಳುತ್ತಾ ಹೋಯಿತು. ಮಾನವನ ಆರ್ಥಿಕ ಬದುಕನ್ನು ಬಲಪಡಿಸುವ ಹಲವಾರು ಅಂಶಗಳಲ್ಲಿ ಸಂಘ–ಸಂಸ್ಥೆಗಳೂ ಒಂದು. ಈ ಸಂಘ–ಸಂಘಟಣೆಗಳ ಹಿನ್ನೆಲೆಯಲ್ಲಿ ಸಮಾಜದ ಜೀವನಸ್ಥಿತಿ, ನಾಡಿನ ಆರ್ಥಿಕ ಪರಿಸ್ಥಿತಿಗಳು ಒಂದು ಆಕಾರ ಪಡೆಯುತ್ತವೆ. ಅದಲ್ಲದೆ, ಆರ್ಥಿಕತೆಯ ಬೆನ್ನೆಲುಬಾಗಿ ಸಂಘ–ಸಂಸ್ಥೆಗಳ ಆರ್ಥಿಕ ಚಟುವಟಿಕೆಗಳನ್ನು ಸರಳ ರೀತಿಯಲ್ಲಿ ಕಾರ್ಯನಿರ್ವಹಿಸಲು ಸಹಕರಿಸುತ್ತದೆ.

ಸಂಘ–ಸಂಘಟನೆಗಳು ಜನರನ್ನು ಒಂದು ಮಾಡಿ ಅವರ ಒಗ್ಗಟ್ಟನ್ನು ಬಲಪಡಿಸುತ್ತದೆ. ತಮ್ಮವರನ್ನು ಒಂದು ಚೌಕಟ್ಟಿಗೆ ತಂದು ವೃದ್ಧಿಗೆ ಬೇಕಾದ ರೀತಿ–ನೀತಿಗಳನ್ನು, ನಿಯಮಾವಳಿಗಳನ್ನು ಸಿದ್ಧಪಡಿಸಿ ಪುರೋವೃದ್ಧಿಯ ದಿಕ್ಕಿನಲ್ಲಿ ಕಾರ್ಯನಿರ್ವಹಿಸುತ್ತದೆ. ಈ ನಿಟ್ಟಿನಲ್ಲಿ ಬರುವ ಸಮಸ್ಯೆಗಳನ್ನು ಬಗೆಹರಿಸಲು ಪ್ರಭುತ್ವದೊಂದಿಗೆ ಒಳ್ಳೆಯ ಒಡನಾಟವನ್ನು ಹೊಂದಿರುತ್ತದೆ. ಪ್ರಭುತ್ವವು ಸಹ ಈ ತೆರನಾದ ಸಂಘಟನೆಗಳ ಮೂಲಕ ಆರ್ಥಿಕತೆಯನ್ನು ಉತ್ತಮ ಪಡಿಸಲು ಪ್ರಯತ್ನಿಸುತ್ತದೆ. ಹೀಗೆ ಒಂದಕ್ಕೊಂದು ಪೂರಕವಾಗಿ ಕಾರ್ಯನಿರ್ವಹಿಸುತ್ತದೆ. ಕೆಲವೊಮ್ಮೆ ಸಂಘ–ಸಂಸ್ಥೆಗಳು ಎಷ್ಟರ ಮಟ್ಟಕ್ಕೆ ಪ್ರಬಲವಾಗಿರುತ್ತದೆ ಎಂದರೆ ಇಡೀ ಆಡಳಿತ ವ್ಯವಸ್ಥೆಯನ್ನೇ ತನ್ನ ಅಧೀನದಲ್ಲಿ ಇರಿಸುತ್ತದೆ. ಈ

ನಿಟ್ಟಿನಲ್ಲಿ ಸಂಘ-ಸಂಘಟನೆಗಳ ಅಧ್ಯಯನ ಪ್ರಮುಖವೆನಿಸುತ್ತದೆ. ಆಧುನಿಕ ವಸಾಹತು ಕಾಲಘಟ್ಟದಲ್ಲಿ ರೂಪುಗೊಂಡ ವರ್ತಕ ಸಂಘ ಮತ್ತು ಸಂಘಟನೆಯು ತಮ್ಮ ವೃತ್ತಿಯ ಹಿನ್ನೆಲೆಯಲ್ಲಿ ಬೆಳೆವಣಿಗೆಗೆ ಅಡಚಣೆಯಾಗಿರುವ ಸಮಸ್ಯೆಗಳನ್ನು ಗುರುತಿಸಿ, ಅವುಗಳಿಗೆ ಆಧುನಿಕ ಆರ್ಥಿಕಾಂಶಗಳ ಮೂಲಕ ಪರಿಹಾರವನ್ನು ಕಂಡುಕೊಳ್ಳಲು ಪ್ರಯತ್ನಿಸಿದವು. ಸಂಪ್ರದಾಯಬದ್ಧವಾಗಿರುವ ತಮ್ಮ ಸಮುದಾಯದವರನ್ನು ಆರ್ಥಿಕ ಸಮುದಾಯವನ್ನಾಗಿ ಪರಿವರ್ತನೆಯ ಹಾದಿಯತ್ತ ಕೊಂಡೊಯ್ಯುವಲ್ಲಿ ಈ ಸಂಘಟನೆಗಳು ಪ್ರಮುಖ ಪಾತ್ರವಹಿಸಿದವು. ಸಂಘ-ಸಂಸ್ಥೆಗಳ ಈ ಪ್ರಯತ್ನದಿಂದ ಉತ್ಪಾದನಾ ಕ್ರಮದಲ್ಲಿ ಮತ್ತು ವಿನಿಮಯದ ವ್ಯವಸ್ಥೆಯಲ್ಲಿ ಕಾಣಿಸಿಕೊಂಡ ಬದಲಾವಣೆಗಳನ್ನು ಕುರಿತು ಪರಿಶೀಲಿಸುವುದೇ ಈ ಅಧ್ಯಾಯದ ಮೂಲ ಉದ್ದೇಶವಾಗಿದೆ.

## ೫.೧. ಉತ್ಪಾದನಾ-ವಿನಿಮಯ ವರ್ತಕ ಸಂಘಗಳ ಉಗಮದ ಹಿನ್ನೆಲೆ

ಸಂಘಗಳ ರಚನೆ ಮೊದಲು ಮೂಡಿದ್ದು ವೃತ್ತಿ ಬಾಂಧವರಲ್ಲಿ. ಆದರೆ ಎಲ್ಲಾ ವೃತ್ತಿಯವರು ಈ ರೀತಿಯ ಸಂಘಟನೆಯನ್ನು ರಚಿಸಿಕೊಳ್ಳಲಿಲ್ಲ. ಸಮಾಜದ ವ್ಯವಸ್ಥೆಯಲ್ಲಿ ಸಹಕಾರದ ತತ್ವ ಮತ್ತು ಸಮುದಾಯ ಜೀವನದ ಮಹತ್ವವನ್ನು ತಿಳಿದ ಕೆಲವು ಪ್ರಮುಖ ವೃತ್ತಿ ಸಮುದಾಯದವರು ಮಾತ್ರ ಇಂಥ ಸಂಘಗಳ ಸಂಘಟನೆಗೆ ಮುಂದಾದರು. ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದ ಪ್ರದೇಶಗಳಲ್ಲಿ ವೃತ್ತಿ ಸಂಘಗಳು ರಚನೆಗೊಂಡಿದ್ದು ಅದರ ಬಗೆಗೆ ಶಾಸನಗಳಲ್ಲಿ ಉಲ್ಲೇಖಗೊಂಡಿದೆ. ಇಂತಹ ಸಂಘಗಳಿಗೆ ಶಾಸನಗಳಲ್ಲಿ ಶ್ರೇಣಿ, ಗಣ ಎಂಬ ಪದವನ್ನು ಬಳಸಲಾಗಿದೆ.[೧] ಇದು ಸಂಘ ಎಂಬ ಪದಕ್ಕೆ ಬಳಸಿದ ಬದಲಿ ಪದವಾಗಿದೆ. ಸಾಮಾನ್ಯವಾಗಿ ವೃತ್ತಿ ಆಧಾರದ ಸಂಘಗಳನ್ನು ಆರ್ಥಿಕತೆಯ ಹಿನ್ನೆಲೆಯಲ್ಲಿ ಮೂರು ಪ್ರಕಾರಗಳಾಗಿ ವಿಂಗಡಿಸಲಾಗಿದೆ. ೧. ಉತ್ಪಾದಕ ಸಂಘ, ೨. ವಿನಿಮಯ ಸಂಘ, ೩. ಉತ್ಪಾದಕ-ವಿನಿಮಯ ಸಂಘ. ಈ ಸಂಘ-ಸಂಘಟಣೆಗಳ ರಚನೆಯ ಸ್ವರೂಪ, ಲಕ್ಷಣ, ಕಾರ್ಯಾಚರಣೆಗಳು ಒಂದೇ ತೆರನಾಗಿ ಕಂಡುಬಂದರೂ ಕೆಲವೊಮ್ಮೆ ಭಿನ್ನವಾಗಿರುತ್ತವೆ. ಪ್ರಾಚೀನ ಮತ್ತು ಮಧ್ಯಕಾಲೀನ ಸಂದರ್ಭದಲ್ಲಿದ್ದ ವರ್ತಕ ಸಂಘಗಳ ಬಗೆಗೆ ಅಧ್ಯಯನ ಮಾಡಿದ ಬಿ. ಆರ್. ಹಿರೇಮಠರವರು 'ಶಾಸನಗಳಲ್ಲಿ ಕರ್ನಾಟಕದ ವರ್ತಕರು' ಎಂಬ ಪ್ರಬಂಧದಲ್ಲಿ ಇದರ ಬಗೆಗೆ ವಿವರಿಸಿದ್ದಾರೆ. ಪ್ರಾಚೀನ ಮತ್ತು ಮಧ್ಯಕಾಲೀನ ಸಂದರ್ಭದಲ್ಲಿ ರಚನೆಗೊಂಡಿದ್ದ ಶ್ರೇಣಿಗಳಲ್ಲಿ ತಮ್ಮ ವೃತ್ತಿಗೆ ಪೂರಕವಾದ ಸಮುದಾಯಗಳೊಂದಿಗೆ ಸೇರಿದ ಸದಸ್ಯರನ್ನು ಹೊಂದಿದ್ದನ್ನು ಸಾಮಾನ್ಯವಾಗಿ ಕಾಣಬಹುದಾಗಿದೆ. ಉದಾಹರಣೆಗೆ, ಐಯ್ಯಹೊಳೆ ಐನೂರ್ವರು ಇತ್ಯಾದಿ. ಇಂತಹ ಶ್ರೇಣಿಗಳಲ್ಲಿ ಜಾತಿವಾರು, ವೃತ್ತಿವಾರು ಇರದೆ ಎಲ್ಲಾ ಪ್ರಮುಖ ವಿನಿಮಯ ವರ್ತಕರನ್ನು ಒಳಗೊಂಡಿರುವುದನ್ನು ಸಾಮಾನ್ಯವಾಗಿ ಕಾಣಬಹುದಾಗಿದೆ.[೨]

೧೯ನೇ ಶತಮಾನದಲ್ಲಿ ಬ್ರಿಟಿಶ್ ವರ್ತಕ ಸಮುದಾಯದ ಆಡಳಿತದ ದೊಡ್ಡ ಅಲೆ ಭಾರತದಲ್ಲಿ ಅಬ್ಬರಿಸಿದ ಫಲವಾಗಿ ಸಂಪದ್ಭರಿತವಾದ ಭಾರತದ ಆರ್ಥಿಕತೆ ಚದುರಿತು. ಸಾಂಪ್ರದಾಯಿಕ ಉತ್ಪಾದಕ–ವಿನಿಮಯ ವರ್ತಕ ಸಮುದಾಯಗಳು ನಿಲ್ಲಲಾರದೇ ಹೋದವು. ಬದಲಾದ ಪರಿಸ್ಥಿತಿಗೆ ತಕ್ಕಂತೆ ಬದಲಾವಣೆಗೆ ಒಳಗಾಗಬೇಕಾದ ಅನಿವಾರ್ಯತೆ ಏರ್ಪಟ್ಟಿತ್ತು. ಬದಲಾವಣೆಯು ಸಣ್ಣ ಪ್ರಮಾಣದ ಬದಲಾಣೆಯಾಗಿರದೆ, ಬದಲಾದ ಆಡಳಿತ, ಬದಲಾದ ಹೊಸ ಮಾರುಕಟ್ಟೆ, ಯಂತ್ರದ ಸಹಾಯದಿಂದ ಉತ್ಪಾದಿಸಲ್ಪಟ್ಟ ಉತ್ಪನ್ನ, ಬದಲಾದ ಆರ್ಥಿಕ ವ್ಯವಸ್ಥೆಯ ಚಟುಚಟಿಕೆಗಳಿಗೆ ಸಮನಾಗಿ ಪ್ರತಿಯೊಂದು ಹಂತದಲ್ಲೂ ಉತ್ಪಾದನಾ–ವಿನಿಮಯ ಸಮುದಾಯವು ನಿಲ್ಲಲಾರದೇ ಹೋಯಿತು. ಈ ರೀತಿಯ ಪರಿಸ್ಥಿತಿಯು ಭಾರತದೆಲ್ಲೆಡೆ ಅನ್ವಯಿಸುವ ಅಂಶವಾಗಿತ್ತು.[೩] ಮೈಸೂರು ರಾಜ್ಯ ಇದರ ಹೊರತೇನು ಆಗಿರಲಿಲ್ಲ. ಇನ್ನೂ ಒಂದು ಪಟ್ಟು ಹೆಚ್ಚಿನ ಅತಂತ್ರದ ವಾತಾವರಣವಿತ್ತು. ಕಾರಣ ಟಿಪ್ಪು ಮರಣದ ನಂತರ ಬ್ರಿಟಿಶ್ ವರ್ತಕ ಸಮುದಾಯದ (ಕಂಪನಿಯ) ಪರೋಕ್ಷ ಆಡಳಿತಕ್ಕೆ ಒಳಪಟ್ಟಿತ್ತು. ೧೮೯೯–೧೮೩೦ರ ದಶಕವು ಮೈಸೂರು ರಾಜಪ್ರಭುತ್ವದ ಚೇತರಿಕೆಯ ಕಾಲಘಟ್ಟವಾಗಿತ್ತು. ಬೆಂಗಳೂರು ದಂಡು ಪ್ರದೇಶವು ಮದ್ರಾಸ್ ಪ್ರೆಸ್ಸಿಡೆನ್ಸಿಯ ಅಧೀನದಲ್ಲಿತ್ತು. ಮೈಸೂರು ಪ್ರಭುತ್ವದ ಅಧೀನದಲ್ಲಿ ಬೆಂಗಳೂರು ನಗರವಿತ್ತು. ಒಂದೇ ಪ್ರದೇಶದಲ್ಲಿ ಈ ಎರಡು ತರಹದ ಲಕ್ಷಣಗಳನ್ನು ನಾವು ಇಲ್ಲಿ ಕಾಣಬಹುದಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಇಲ್ಲಿನ ರಾಜಕೀಯ ವ್ಯವಸ್ಥೆಯಲ್ಲಿ ಅಧಿಕಾರದ ಹಸ್ತಾಂತರ ಮತ್ತು ಬದಲಾದ ಆಡಳಿತ, ಆರ್ಥಿಕ ವ್ಯವಸ್ಥೆಯಿಂದಾಗಿ ಬೆಂಗಳೂರು ಪ್ರದೇಶದಲ್ಲಿ ಉತ್ಪಾದಕ ಮತ್ತು ವಿನಿಮಯ ವರ್ತಕ ಸಮುದಾಯಗಳಿಗೆ ಪೂರಕವಾದ ಯಾವುದೇ ಬದಲಾವಣೆಗಳ ಸಾಧ್ಯತೆಯ ಅವಕಾಶಗಳು ಈ ಅವಧಿಯಲ್ಲಿ ವಿರಳವಾಗಿತ್ತು.

ಇದಾದ ಕೆಲವೇ ದಶಕಗಳಲ್ಲಿ ಮತ್ತೆ ಅಧಿಕಾರ ಹಸ್ತಾಂತರಗೊಂಡು ಬೆಂಗಳೂರು ಪ್ರದೇಶವು ಬ್ರಿಟಿಶ್ ವರ್ತಕ ಸಮುದಾಯದ ನೇರ ಅಧೀನಕ್ಕೆ ಒಳಪಟ್ಟಿತ್ತು. ೧೮೩೧–೧೮೮೧ರ ಅವಧಿಯಲ್ಲಿ ಬ್ರಿಟಿಶ್ ವರ್ತಕ ಸಮುದಾಯವು ಇಲ್ಲಿಯ ಆಡಳಿತವನ್ನು ಮಾಡಲು ಕಮಿಷನರ್ ಹುದ್ದೆಯನ್ನು ಸೃಷ್ಟಿಸಿತು. ವಸಾಹತುಶಾಹಿ ಆಡಳಿತ ವ್ಯವಸ್ಥೆಯು ತಮ್ಮ ದೇಶದಲ್ಲಿದ್ದ ವಾಣಿಜ್ಯವಾದದ ಎರಡನೇ ಹಂತಕ್ಕೆ (ಬಂಡವಾಳವನ್ನು ಹೂಡಲು ತನ್ನ ದೇಶದವರಿಗೆ ಮುಕ್ತ ಅವಕಾಶದ ನೀತಿಗೆ) ಪೂರಕವಾಗಿ ಸಾರಿಗೆ–ಸಂಪರ್ಕ, ವಾಣಿಜ್ಯ–ವ್ಯಾಪಾರದ ಅಭಿವೃದ್ಧಿ ಕಾರ್ಯತಂತ್ರಗಳನ್ನು ರೂಪಿಸಿತು. ಇಂತಹ ಪರಿಸ್ಥಿತಿಯಲ್ಲಿ ಸ್ಥಳೀಯ ವರ್ತಕ ಸಮುದಾಯಗಳ ಸಂಘಟನೆಗಳ ಮಾತಿಗೆ ಅವಕಾಶವಿರಲು ಸಾಧ್ಯವಿರಲಿಲ್ಲ. ಬ್ರಿಟಿಶ್ ವರ್ತಕ ಕಂಪನಿಗೆ ಬೇಕಾಗಿರುವುದು ಮಧ್ಯವರ್ತಿಗಳೇ ಹೊರತು ಪ್ರತಿಸ್ಪರ್ಧಿಗಳಲ್ಲ. ಒಂದು ವೇಳೆ ಇದ್ದರೂ ಅದು ಅತೀ ವಿರಳ. ತಮ್ಮ ಆರ್ಥಿಕ ನೀತಿಗೆ ಪೂರಕವಾಗಿ ಅಧೀನದಲ್ಲಿ ಕಾರ್ಯನಿರ್ವಹಿಸುವ ಉತ್ಪಾದನಾ–ವಿನಿಮಯ ವರ್ತಕ ಸಮುದಾಯದ ವ್ಯಕ್ತಿಗೆ ಸ್ಥಳೀಯ ಮಟ್ಟದಲ್ಲಿ ಸಣ್ಣ ಪ್ರಮಾಣದ ಅಧಿಕಾರವನ್ನು ನೀಡಿತು. ಹಿಂಸೆ, ಲೂಟಿ, ಕ್ಷಾಮಗಳಿಂದ ಕಂಗಾಲಾಗಿದ್ದ

ಈ ಸಮುದಾಯಗಳಲ್ಲಿ ಮಹತ್ತರವಾದ ಪ್ರತಿರೋಧ ಮತ್ತು ಬದಲಾಣೆಗಳನ್ನು ನಿರೀಕ್ಷಿಸುವುದು ಕಷ್ಟವಾಗುತ್ತದೆ.[೪] ಈಗಾಗಲೇ ವರ್ತಕ ಸಮುದಾಯದಲ್ಲಿ ಅಸ್ತಿತ್ವವಿದ್ದ ಎಡ ಮತ್ತು ಬಲಗಳ ಮುಖ್ಯಸ್ಥರಿದ್ದರೂ ಸ್ಥಳೀಯವಾಗಿ ಧಾರ್ಮಿಕ, ಸಾಮಾಜಿಕ ಹಿನ್ನೆಲೆಯಲ್ಲಿ ಸೌಹಾರ್ದತೆಯನ್ನು ಮೂಡಿಸಿದರಾದರೂ, ಉತ್ಪಾದನಾ-ವಿನಿಮಯ ವರ್ತಕ ಸಮುದಾಯಗಳನ್ನು ಅಭಿವೃದ್ಧಿಪಡಿಸುವಲ್ಲಿ ವಿಫಲರಾದರೆಂದು ತೋರುತ್ತದೆ.

೧೯ನೇ ಶತಮಾನದಲ್ಲಿ ಸಂಘ-ಸಂಸ್ಥೆಗಳ ಸಂಘಟನೆಗೆ ಪೂರಕವಾದ ಪರಿಸ್ಥಿತಿಯು ಮೂಡಿತು. ಸಹಕಾರಿ ಸಂಘಗಳ ರಚನೆಯಲ್ಲಿ ಮೊದಲು ತೊಡಗಿದವರು ವಿದೇಶಿಯ ಉತ್ಪಾದನಾ-ವಿನಿಯಮ ವರ್ತಕ ಸಮುದಾಯದವರು. ಭಾರತದಲ್ಲಿ ೧೮೧೩ರ ಚಾಟರ್ ಕಾಯ್ದೆಯಲ್ಲಿ ಮುಕ್ತ ವ್ಯಾಪಾರಕ್ಕೆ ಅವಕಾಶ ಕಲ್ಪಿಸಿದ್ದಲ್ಲದೇ, ನಂತರ ಅವಧಿಯಲ್ಲಿ ಬ್ರಿಟಿಶ್ ವರ್ತಕ ಸಂಘಟನೆಯ (ಕಂಪನಿ) ಆಳ್ವಿಕೆ ಕೊನೆಗೊಂಡಿತ್ತು. ಭಾರತದಲ್ಲಿ ಬ್ರಿಟಿಶ್ ಸಾಮ್ರಾಜ್ಯದ ಆಡಳಿತ ಆರಂಭವಾಯಿತು. ಈ ಸಾಮ್ರಾಜ್ಯಶಾಹಿ ನೀತಿಯ ಹಿಂದೆಯೂ ಬ್ರಿಟಿಶ್ ವರ್ತಕ ಸಮುದಾಯಗಳ ಪ್ರಬಲ ಪಾತ್ರವಿತ್ತೆಂಬುದನ್ನು ಮರೆಯುವಂತಿಲ್ಲ. ಬ್ರಿಟಿಶ್ ವರ್ತಕ ಸಮುದಾಯಗಳು ವ್ಯಾಪಾರ-ವಾಣಿಜ್ಯ ಸಂಸ್ಥೆಗಳನ್ನು ಭಾರತದ ಬ್ರಿಟಿಶ್ ಪ್ರೆಸಿಡೆನ್ಸಿಗಳಲ್ಲಿ ಸ್ಥಾಪಿಸಿ ಕ್ರಮೇಣ ಪ್ರಮುಖ ನಗರಗಳಲ್ಲಿ ಸ್ಥಾಪಿಸುವುದರ ಮೂಲಕ ಆಯಾ ಪ್ರದೇಶದ ಸಂಪತ್ತು ಸೌಲಭ್ಯಗಳು ತಮ್ಮ ಸಾಮ್ರಾಜ್ಯಶಾಹಿಗೆ ಪೂರಕವಾಗಿ ಕಾರ್ಯನಿರ್ವಹಿಸಲು ಮತ್ತು ನಗರದ ಆರ್ಥಿಕತೆಯೊಂದಿಗೆ ಅದರ ನರನಾಡಿಯಾಗಿರುವ ವರ್ತಕರನ್ನು ಕಾನೂನಿನ ಚೌಕಟ್ಟಿನ ಒಳಗೆ ತಂದು ತನ್ನ ನಿಯಂತ್ರಣವನ್ನು ಹೊಂದುವ ಉದ್ದೇಶದಿಂದ **ಛೇಂಬರ್ ಆಫ್ ಕಾಮರ್ಸ್** ಎಂಬ ಸಾಂಸ್ಥಿಕ ಸಂಘವನ್ನು ಕಲ್ಕತ್ತ(೧೮೩೩), ಮದ್ರಾಸ್(೧೮೩೬), ಬಾಂಬೆ, ಕೊಚ್ಚಿನ್, ತಿರುವಾಂಕೂರು ಇತ್ಯಾದಿ ನಗರಗಳಲ್ಲಿ ಸ್ಥಾಪಿಸಿಕೊಂಡಿದ್ದರು.[೫] ಬ್ರಿಟಿಶ್ ಭಾರತ ಪ್ರಭುತ್ವದಿಂದ ಮಾನ್ಯತೆಯನ್ನು ಪಡೆದು ಯುರೋಪಿನ ಮಾದರಿಯಲ್ಲಿ ಸಂಘಟಿತವಾದ ಸಂಘ ಸಂಸ್ಥೆಯಾಗಿತ್ತು. ಇಂತಹ ಛೇಂಬರ್‌ನಲ್ಲಿ ಯುರೋಪಿಯನ್ನರಿಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಲಾಗಿತ್ತು. ವಸಾಹತುಶಾಹಿ ನೆಲೆಯಲ್ಲಿ ಸ್ಥಾಪಿತಗೊಂಡ ಛೇಂಬರ್ ಆಫ್ ಕಾಮರ್ಸ್ ಸ್ಥಳೀಯ ವರ್ತಕ ಸಂಘಗಳಂತೆ ಕಂಡರೂ ಸಹ ಅದರ ರಚನೆ ಮತ್ತು ಉದ್ದೇಶ ಬೇರೆಯೇ ಆಗಿತ್ತು. ಆರಂಭದಲ್ಲಿ ಈ ಸಂಘಟನೆಗಳು ಯುರೋಪಿಯನ್ನರಿಗೆ ಮಾತ್ರ ಸದಸ್ಯತ್ವವನ್ನು ನೀಡುತ್ತಿತ್ತು. ನಂತರದ ಅವಧಿಯಲ್ಲಿ ಜಾತ್ಯಾತೀತ ನೀತಿಯನ್ನು ಅನುಸರಿದಾಗ ಪ್ರಮುಖ ಸ್ಥಳೀಯ ಭಾರತೀಯ ವರ್ತಕರು, ವಾಣಿಜ್ಯೋದ್ಯಮಿಗಳು ಹಾಗೂ ದೊಡ್ಡ ಮಟ್ಟದ ಎಸ್ಟೇಟ್ ಮಾಲೀಕರಿಗೆ ಅವಕಾಶ ನೀಡಲಾಯಿತು. ಆದರೂ ಸಹ ಬಹುತೇಕವಾಗಿ ಈ ಸಂಘಗಳು ಯುರೋಪಿನ್ ವರ್ತಕರಿಗೆ ಪೂರಕವಾಗಿಯೇ ಕಾರ್ಯ ನಿರ್ವಹಿಸುತಿತ್ತು.[೬] ಈ ತರಹದ ಸಂಘ-ಸಂಘಟನೆಗಳ ಮಾದರಿಯನ್ನು ಭಾರತೀಯ

ಉತ್ಪಾದನಾ-ವಿನಿಮಯ ಸಮುದಾಯದವರು ಅನುಸರಿಸಲು ಮುಂದಾದರು. ಈ ನೆಲೆಯಲ್ಲಿ ಬೆಂಗಳೂರು ಪ್ರದೇಶದಲ್ಲಿ ಕಂಡುಬರುವ ಪ್ರಮುಖ ವರ್ತಕ ಸಂಘಗಳ ರಚನೆ, ಸ್ವರೂಪ, ಕಾರ್ಯವೈಖರಿಗಳ ಬಗೆಗೆ ನಿರೂಪಿಸುವುದು ಈ ಅಧ್ಯಾಯದ ಮತ್ತೊಂದು ಉದ್ದೇಶವಾಗಿದೆ.

### ೫.೨. ಉತ್ಪಾದನಾ-ವಿನಿಮಯ ಸಮುದಾಯಗಳ ಸಂಘಗಳ ಏಳ್ಗೆಗೆ ಕಾರಣಾಂಶಗಳು

ಉತ್ಪಾದನಾ-ವಿನಿಮಯ ಸಮುದಾಯಗಳ ಸಂಘಗಳ ರಚನೆಗೆ ಪೂರಕವಾದ ಸಂದರ್ಭಗಳು ಬೆಂಗಳೂರು ಪ್ರದೇಶದಲ್ಲಿ ಏರ್ಪಟ್ಟ ಅಂಶಗಳನ್ನು ಹೀಗೆ ಗುರುತಿಸಬಹುದಾಗಿದೆ. ಒಂದನೆಯದಾಗಿ, ೧೮೭೦ ರ ದಶಕದಲ್ಲಿ ಉಂಟಾದ ಬರಗಾಲ, ಕ್ಷಾಮ, ಪ್ಲೇಗ್‌ನಂತಹ ಸಂಕಷ್ಟಗಳಿಗೆ ಉತ್ಪಾದನಾ-ವಿನಿಮಯ ವರ್ತಕ ಸಮುದಾಯಗಳು ಸಿಲುಕಿದವು. ಕ್ಷಾಮದ ಪರಿಣಾಮವು ಎಷ್ಟರ ಮಟ್ಟಿಗೆ ಇತ್ತೆಂದರೆ ನೇಕಾರರು ತಮ್ಮ ನೂಲುವ ಯಂತ್ರಗಳನ್ನು ಮಾರಿ ಆಹಾರ ಪದಾರ್ಥಗಳನ್ನು ಕೊಂಡುಕೊಳ್ಳುವ ಪರಿಸ್ಥಿತಿ ಉಂಟಾದರೆ, ಕರಕುಶಲಕರ್ಮಿಗಳು ತಮ್ಮ ವೃತ್ತಿ ಜೀವನದ ಅವಿಭಾಜ್ಯ ಅಂಗವಾಗಿದ್ದ ತಮ್ಮ ಉಪಕರಣಗಳನ್ನು ಮಾರಿ ಆಹಾರ ಪದಾರ್ಥಗಳನ್ನು ಕೊಂಡುಕೊಂಡರೂ ಸಹ ಅವರ ಕನಿಷ್ಟ ಸಾಮಾಜಿಕ ಜೀವನವನ್ನು ಸಾಗಿಸಲು ಸಾಧ್ಯವಾಗದೇ ಸಾರ್ವಜನಿಕ ಕಾಮಗಾರಿ ಕಾರ್ಯಗಳಲ್ಲಿ ಕೂಲಿ ಕೆಲಸಗಾರರಾಗಿ ಸೇರಿಕೊಂಡರು.[೭] ಎರಡನೆಯದಾಗಿ ೧೯೧೪, ೧೯೩೯ ನಡೆದ ಮಹಾಯುದ್ಧಗಳ ಪರಿಸ್ಥಿತಿಯು, ಪ್ರಪಂಚದಲ್ಲಿ ಉಂಟಾದ ಆರ್ಥಿಕ ಕ್ಷೋಭೆ ಬ್ರಿಟಿಶ್ ಭಾರತ ಸಾಮ್ರಾಜ್ಯಶಾಹಿ ಪ್ರಭುತ್ವ ಮತ್ತು ಮೈಸೂರು ಪ್ರಭುತ್ವದ ಸ್ಥಳೀಯ ಪ್ರದೇಶದಲ್ಲಿ ಪುರೋಗಾಮಿ ನೀತಿಯನ್ನು ಅನುಮೋದಿಸಿತು. ಮೂರನೆಯದಾಗಿ ಬೆಂಗಳೂರು ಪ್ರದೇಶವು ರಾಜಧಾನಿಯಾಗಿದ್ದ ರಿಂದಾಗಿ ಶೈಕ್ಷಣಿಕ ಸೌಲಭ್ಯವನ್ನು ಇಲ್ಲಿಯ ಪ್ರಬಲ ಮತ್ತು ಮಧ್ಯಮ ವರ್ಗದ ವರ್ತಕ ಸಮುದಾಯಗಳು ಪಡೆಯಲು ಮುಂದಾದರು. ಶಿಕ್ಷಣ ಪಡೆದ ಈ ವರ್ಗಗಳು ಬದಲಾದ ಕಾಲಘಟ್ಟಕ್ಕೆ ತಕ್ಕಂತೆ ತಾವು ಬದಲಾವಣೆಗೆ ಒಳಪಡಲು ಬಯಸಿದರು.[೮] ಕಾನೂನಿಕ ಚೌಕಟ್ಟಿನಲ್ಲಿ ಸಂಘಟನೆಗೊಳ್ಳಲು ಸಂಘ-ಸಂಸ್ಥೆಗಳನ್ನು ರಚಿಸಲು ಆರಂಭಿಸಿದರು. ನಾಲ್ಕನೆಯದಾಗಿ ಮೈಸೂರು ಪ್ರಭುತ್ವವು ಸಹಕಾರಿ ಸಂಘಗಳ ಕಾಯ್ದೆಯನ್ನು ಜಾರಿಗೊಳಿಸಿದ್ದಲ್ಲದೇ, ಸಹಕಾರ ಸಂಘಗಳ ಚಳುವಳಿಗೆ ಪ್ರೋತ್ಸಾಹ ಮತ್ತು ಧನ ಸಹಾಯವನ್ನು ನೀಡಿತು.[೯] ಈ ಮೇಲಿನ ಅಂಶಗಳು ಬೆಂಗಳೂರು ಪ್ರದೇಶದಲ್ಲಿ ಹಲವು ಸಂಘ-ಸಂಸ್ಥೆಗಳನ್ನು ರಚಿಸಿಕೊಳ್ಳುವಂತೆ ಪ್ರೇರೇಪಣೆಯನ್ನುಂಟು ಮಾಡಿತು.

ತಮ್ಮ ವೃತ್ತಿ ಸಮುದಾಯಗಳ ಹಿತಾಸಕ್ತಿಯನ್ನು ಕಾಪಾಡಿ, ಸರ್ವತೋಮುಖ ಅಭಿವೃದ್ಧಿ ಪಡಿಸಲು ತಮ್ಮದೇ ಆದ ಕಾರ್ಯ ಸ್ವರೂಪದ ನೀತಿ ನಿಯಮಾವಳಿಗಳ, ಉದ್ದೇಶಗಳನ್ನಿಟ್ಟುಕೊಂಡು ಹಲವು ಸಂಘಟನೆಗಳು ಸ್ಥಾಪನೆಗೊಂಡವು. ಬೆಂಗಳೂರು ಟ್ರೇಡರ್ಸ್ ಅಸೋಸಿಯೇಷನ್ ೧೮೯೯.[೧೦]

ಆರ್ಯ ವೈಶ್ಯ ಮಂಡಲಿ ೧೮೯೯,[೧೧] ಒಕ್ಕಲಿಗರ ಸಂಘ ೧೯೦೫, ಕರ್ನಾಟಕ ವಾಣಿಜ್ಯ ಮತ್ತು ಕೈಗಾರಿಕಾ ಮಹಾಮಂಡಳಿ ೧೯೧೬, ಬೆಂಗಳೂರು ಧಾನ್ಯ ವರ್ತಕ ಸಂಘ ೧೯೨೦, ದೇವಾಂಗ ಸಂಘ ೧೯೨೦, ಬಟ್ಟೆ ವ್ಯಾಪಾರಿಗಳ ಸಂಘ ೧೯೨೦, ಮೊದಲಿಯರ್ ಸಂಘ ೧೯೨೭, ಬೆಂಗಳೂರು ತುಂಡು ಬಟ್ಟೆ ವ್ಯಾಪಾರಿಗಳ ಸಂಘ ೧೯೩೧, ಮುಸ್ಲಿಂ ವ್ಯಾಪಾರಿಗಳ ಸಂಘ ೧೯೪೦, ಬೆಂಗಳೂರು ನೂಲು ವರ್ತಕರ ಸಂಘ ೧೯೪೨, ವಿಶ್ವಕರ್ಮಿಗಳ ಸಂಘ ೧೯೪೨, ಬೆಂಗಳೂರು ದಿನಸಿ ವರ್ತಕರ ಸಂಘ ಇತ್ಯಾದಿ.[೧೨] ಇವೆಲ್ಲ ಸಂಘ ಸಂಘಟನೆಗಳು ಪ್ರಭುತ್ವದ ಮಾನ್ಯತೆ ಪಡೆದ ನೊಂದಾಯಿತ ಸಂಸ್ಥೆಗಳಾಗಿದ್ದವು. ಈ ಸಂಘಟನೆಗಳಲ್ಲಿ ಕೆಲವು ಸಂಘಟನೆಗಳ ಬಗೆಗೆ ನಮಗೆ ಸರ್ಕಾರಿ ದಾಖಲೆಗಳಲ್ಲಿ ಉಲ್ಲೇಖಗಳು ಸಿಗುತ್ತದೆ. ಅದರ ಕಾರ್ಯ ವೈಖರಿಗಳ ಬಗೆಗೆ ಹೆಚ್ಚಿನ ಮಾಹಿತಿಗಳು ಲಭ್ಯವಿಲ್ಲ. ಬೆಂಗಳೂರು ಪ್ರದೇಶದಲ್ಲಿ ಇನ್ನೂ ಕೆಲವು ವೃತ್ತಿ ಸಮುದಾಯಗಳು ಸಂಘಗಳನ್ನು ಸಂಘಟನೆ ರಚಿಸಿಕೊಂಡಿದ್ದರೂ ಪ್ರಭುತ್ವದ ಮಾನ್ಯತೆಯನ್ನು ಪಡೆಯದೇ ಕಾರ್ಯ ನಿರ್ವಹಿಸುತ್ತಿದ್ದವು. ಕೆಲವು ಸಂಘ-ಸಂಸ್ಥೆಗಳು ಧಾರ್ಮಿಕ ಸಂಘದ ಸ್ವರೂಪವನ್ನು ಹೊಂದಿದ್ದವು. ಇತ್ತೀಚೆಗೆ ಸಮುದಾಯ ಸಂಘವನ್ನು ಪ್ರಭುತ್ವದ ಮಾನ್ಯತೆಯಿಂದ ಸ್ಥಾಪಿಸಿಕೊಂಡಿವೆ. ಅಂದ ಮಾತ್ರಕ್ಕೆ ಅವು ಇತ್ತಿಚೀನ ಸಂಘಟನಾತ್ಮಕ ರೂಪವನ್ನು ಪಡೆಯಿತು ಎಂದರ್ಥವಲ್ಲ. ನಗರ್ತರ ಸಂಘ ೧೮೯೯, ತಿಗಳರ ಸಂಘ ಈ ಹಿನ್ನೆಲೆಯಲ್ಲಿ ಕಾಣಬಹುದಾಗಿದೆ. ಇಂತಹ ಸಂಘ ಸಂಸ್ಥೆಗಳ ರಚನೆ, ಉದ್ದೇಶ, ಆಡಳಿತ ಮತ್ತು ತಮ್ಮ ಸಂಘಗಳ ಮೂಲಕ ಪ್ರಭುತ್ವದ ಸೌಲಭ್ಯವನ್ನು ಎಷ್ಟರ ಮಟ್ಟಿಗೆ ಪಡೆಯುವಲ್ಲಿ ಯಶಸ್ವಿಯಾದವು, ತಮ್ಮ ಕುಲಬಾಂಧವರ ಪುರೋಭಿಧ್ಧಿಗೆ ಈ ಸಂಘ ಸಂಸ್ಥೆಗಳು ನಿರ್ವಹಿಸಿದ ಕಾರ್ಯಕ್ರಮಗಳ ಬಗೆಗೆ ಅಭ್ಯಸಿಸುವ ಉದ್ದೇಶವನ್ನು ಈ ಅಧ್ಯಾಯ ಹೊಂದಿತ್ತು.

### ೫.೩. ಬೆಂಗಳೂರಿನ ಪ್ರಮುಖ ಉತ್ಪಾದನಾ-ವಿನಿಮಯ ವರ್ತಕ ಸಂಘಗಳು

ಬೆಂಗಳೂರು ಪ್ರದೇಶದಲ್ಲಿ ಎಲ್ಲಾ ಉತ್ಪಾದನಾ-ವಿನಿಮಯ ವರ್ತಕ ಸಮುದಾಯದವರು ಸಂಘಗಳನ್ನು ಕಟ್ಟಲಿಲ್ಲ. ಕೆಲವು ಪ್ರಮುಖ ಸಮುದಾಯದವರು ಮಾತ್ರ ಸಂಘಗಳನ್ನು ರಚಿಸಿಕೊಂಡರು. ರಚಿಸಿಕೊಂಡ ಸಂಘಗಳಲ್ಲಿ ಕೆಲವು ಪ್ರಭುತ್ವದಿಂದ ಮಾನ್ಯತೆ ಪಡೆದು ನೋಂದಾವಣೆಯನ್ನು ಮಾಡಿಕೊಂಡಿದ್ದರೆ, ಹಲವು ಸಮುದಾಯದವರು ತಮ್ಮ ಸಂಘದ ನೋಂದಾವಣೆಯನ್ನು ಮಾಡದೇ ಧಾರ್ಮಿಕ ಸಂಘಟನೆಗಳನ್ನು ಮಾಡಿಕೊಂಡು ಅಥವಾ ಸಾಮಾಜಿಕ ಸಂಘಟನೆಗಳನ್ನು ರಚಿಸಿಕೊಂಡು ತಮ್ಮ ವೃತ್ತಿ ಬಾಂಧವರ ಹಿತಾಸಕ್ತಿಗಾಗಿ ಪ್ರಭುತ್ವದಿಂದ ಸೌಲಭ್ಯಗಳನ್ನು ಪಡೆದು ಕಾರ್ಯ ನಿರ್ವಹಿಸುತ್ತಿದ್ದವು. ಈ ಎರಡು ರೀತಿ ರಚನೆಯ ಸ್ವರೂಪದ ಸಂಘಗಳನ್ನು ನಾವು ಬೆಂಗಳೂರು ಪ್ರದೇಶದಲ್ಲಿ ಕಾಣಬಹುದಾಗಿದೆ.

## ದೇವಾಂಗ ಸಂಘ

ಕ್ರಿ. ಶ ೧೯೨೦ರಲ್ಲಿ ಬೆಂಗಳೂರಿನ ದೇವಾಂಗ ಸಮುದಾಯದ ನಾಯಕರಾದ ಯಜಮಾನ್ ಎಣ್ಣೆಗೆರೆ ಚಿಕ್ಕವೆಂಕಟಪ್ಪ, ಡಿ. ಆದೆಪ್ಪ, ಮರಡಿ ಸುಬ್ಬಯ್ಯ, ಮುನಿಸುಬ್ಬರಾಯಪ್ಪ, ಸೌದೆ ಅಂಗಡಿ ಚೌಡಪ್ಪ, ಮಹಡಿಮನೆ ಯಜಮಾನ್ ಮುನಿಶಂಕರಪ್ಪ, ಚಾಮರಾಜಪೇಟೆ ಬಸಯ್ಯ, ಗಂಟೇ ದೊಡ್ಡಣ್ಣ ಮುಂತಾದವರು ಶ್ರೀ ರಾಮಲಿಂಗ ಚೌಡೇಶ್ವರಿ ದೇವಸ್ಥಾನದಲ್ಲಿ ಸಭೆ ಸೇರಿ ದೇವಾಂಗ ಜನಾಂಗದ ಏಳಿಗೆಗಾಗಿ ಒಂದು ಸಂಘ ಕಟ್ಟಲು ಯೋಚಿಸಿದರು. ಇದಕ್ಕೆ ಅಂದಿನ ಅಧಿಕಾರಿಗಳಾದ ಶ್ರೀ ಕೆ.ಹೆಚ್. ರಾಮಯ್ಯ, ಬಿ. ಡ. ಬಾರ್ ಅಟ್‌ಲಾರವರು ಸಹ ಸಂಘದ ಸ್ಥಾಪನೆಗೆ ಬೆಂಬಲಿಸಿದರು. ೧೯೨೧ರಲ್ಲಿ ಗುಂತಕಲ್ಲಿನ ರಾಯ್ ಸಾಹೇಬ್ ಎಂ. ಹಂಪಯ್ಯನವರು ಶ್ರೀ ಮರಡಿ ಸುಬ್ಬಯ್ಯನವರನ್ನು ಪ್ರೇರೇಪಿಸಿದರು. ಇದರ ಫಲವಾಗಿ ತಮ್ಮವರಲ್ಲಿ ಒಮ್ಮತ ಮೂಡಿಸಲು ಒಂದು ಮಹಾ ಸಭೆಯನ್ನು ಕರೆಯಲು ನಿರ್ಧರಿಸಿ ತಮ್ಮವರಿಂದ ರೂ. ೧೫೦೦/– ಸಂಗ್ರಹಿಸಲು ಪ್ರಯತ್ನಿಸಿದರಾದರೂ ಅದು ಸಫಲವಾಗದೆ ಇದ್ದುದರಿಂದ ಸಭೆ ಕರೆಯಲು ಸಾಧ್ಯವಾಗಲ್ಲಿಲ್ಲ.

೧೯೨೩ ಡಿಸೆಂಬರ್ ೨೩ರಂದು ದೇವಾಂಗ ಸಮಾಜದ ಸಮಾವೇಶದಲ್ಲಿ ಶ್ರೀ ಡಿ. ಸಿ. ಸುಬ್ಬರಾಯಪ್ಪನವರ ಅಧ್ಯಕ್ಷತೆಯಲ್ಲಿ ದೇವಾಂಗ ಸಮಾಜದ ಹಿರಿಯ ವ್ಯಕ್ತಿಗಳು ಸೇರಿ ಬೆಂಗಳೂರಿನಲ್ಲಿ ದೇವಾಂಗದವರ ಸ್ಥಿತಿಗತಿಯನ್ನು ಸುಧಾರಿಸಲು ಸಂಘವನ್ನು ಸ್ಥಾಪಿಸಲು ನಿರ್ಧರಿಸಿ ಅದರ ಉದ್ದೇಶ, ನಿಬಂಧನೆಗಳನ್ನು ತಯಾರಿಸಿ ಸಲ್ಲಿಸಲು ಉಪಸಮಿತಿಯನ್ನು ಶ್ರೀ ಕೆ.ವಿ. ನಂಜಪ್ಪ, ಕೆ. ಎನ್. ರಾಮಚಂದ್ರಯ್ಯ, ಡಿ.ಎ ಆದಿನಾರಾಯಣ ಮತ್ತು ಕೆ.ಎನ್. ವೀರಭದ್ರಯ್ಯ ನೇತೃತ್ವದಲ್ಲಿ ರಚಿಸಿದರು. ಇದನ್ನು ೧೨-೨-೧೯೨೪ರಲ್ಲಿ ನೊಂದಾಯಿಸಲಾಯಿತು. ಈ ಕರಡು ನಿಬಂಧನೆಗೆ ಶ್ರೀಗಳಾದ ಮರಡಿ ಸುಬ್ಬಯ್ಯ, ಹೊಸಮನೆ ಕೆಂಚಪ್ಪ, ಕೆ.ವಿ. ವೀರಭದ್ರಯ್ಯ, ಡಿ. ಆದೆಪ್ಪ, ಡಿ. ತಾರಗಿರಿಯಪ್ಪ, ಸಿ. ಚಿಕ್ಕ ವೆಂಕಟಪ್ಪ, ಸಿ. ಕೆ. ಹುಚ್ಚಪ್ಪ, ಎನ್. ಪಿ. ಗುರಪ್ಪ, ಡಿ.ಸಿ. ಸುಬ್ಬರಾಯಪ್ಪ, ಡಿ. ಕಾಲೇಟಪ್ಪ, ಯ॥ ಮಹಡಿಮನೆ ಶಂಕರಪ್ಪ, ಕೆ. ಎನ್. ರಾಮಚಂದ್ರಯ್ಯ, ಕೆ. ವಿ. ನಂಜಪ್ಪ, ಸಪ್ಪೆ ವೈ, ನರಸಿಂಹಣ್ಣ, ಪಿ. ಸುಬ್ರಮಣ್ಯಶಾಸ್ತ್ರಿ, ಗಂಟೆ ದೊಡ್ಡಣ್ಣ, ಕೆ. ಆರ್. ಚೌಡಪ್ಪ ಮತ್ತು ಎಂ.ಹಂಪಯ್ಯ ರವರು ಸಹಿ ಮಾಡಿದರು.[೧೩] ಈ ಸಂಘದ ಮೂಲ ಧ್ಯೇಯಗಳು ಹೀಗಿವೆ. ತಮ್ಮ ಕಸಬನ್ನು ಉತ್ತಮ ರೀತಿಯಲ್ಲಿ ನಡೆಸಿ ಸಂಪಾದನಾ ಶಕ್ತಿಯನ್ನು ಹೆಚ್ಚಿಸಿಕೊಳ್ಳುವುದು, ದೇವಾಂಗ ಮತಸ್ಥರು ವಿದ್ಯಾವಂತರಾಗಲು ಪ್ರೋತ್ಸಾಹಿಸುವುದು, ಪೌರ ಮತ್ತು ರಾಜಕೀಯ ಕ್ಷೇತ್ರಗಳಲ್ಲೂ ಸರಕಾರಿ ಅಧಿಕಾರಗಳಲ್ಲೂ ಭಾಗವಹಿಸಿ ದೇಶಸೇವೆಯಲ್ಲಿ ನಿರತರಾಗುವಂತೆ ಮಾಡುವುದು ಹಾಗೂ ತಮ್ಮೊಳಗೆ ಪರಸ್ಪರ ಮೈತ್ರಿ ವೃದ್ಧಿ ಮಾಡಿ ಎಲ್ಲ ರೀತಿಯಲ್ಲಿ ಅಭಿವೃದ್ಧಿಯನ್ನು ಸಾಧಿಸುವ ನಿಟ್ಟಿನಲ್ಲಿ ಕಾರ್ಯ ಚಟುವಟಿಕೆಯನ್ನು ರೂಪಿಸುವುದು.[೧೪]

ದೇವಾಂಗ ಸಂಘದ ರಚನೆಯನ್ನು ನೋಡುವುದಾದರೆ, ಆಡಳಿತ ಮಂಡಳಿಯಲ್ಲಿ ಶ್ರೀಗಳಾದ ರಾಯ್ ಸಾಹೇಬ್ ಶ್ರೀ ಎಂ. ಹಂಪಯ್ಯರವರನ್ನು ಅಧ್ಯಕ್ಷರಾಗಿ, ಮರಡಿ ಸುಬ್ಬಯ್ಯ, ಹೊಸಮನೆ ಬನಪ್ಪ, ಡಿ. ಆದೆಪ್ಪರನ್ನು ಉಪಾಧ್ಯಕ್ಷರಾಗಿ, ಡಿ.ಎ. ಆದಿನಾರಾಯಣ ಕಾರ್ಯದರ್ಶಿಯಾಗಿ, ಬಿ. ಆರ್. ರಾಮಲಿಂಗಯ್ಯ ಎಂ.ಎ., ಬಿ.ಎಲ್.ರವನ್ನು ಜಂಟಿ ಕಾರ್ಯದರ್ಶಿಯಾಗಿ, ಸಿ. ಚಿಕ್ಕವೆಂಕಟಪ್ಪ ರವರನ್ನು ಖಜಾಂಚಿಯಾಗಿ, ಕೆ. ಆರ್. ಚೌಡಪ್ಪ, ವೈ.ಎಸ್. ನರಸಿಂಹಣ್ಣರವರನ್ನು ಲೆಕ್ಕಶೋಧಕರನ್ನಾಗಿ ನೇಮಿಸಿಸಲಾಯಿತು. ಈ ಸಂಘದ ಇನ್ನಿತರ ಸದಸ್ಯರೆಂದರೆ, ಡಿ.ಸಿ. ಸುಬ್ಬರಾಯಪ್ಪ, ಬಿ.ಎ., ಬಿ.ಎಲ್., ಯ॥ ಮಹಡಿಮನೆ ಶಂಕರಪ್ಪ, ಬಿ. ಕಾವೇಟಪ್ಪ, ಸಿ.ಕೆ. ಹಿಚ್ಚಪ್ಪ, ಯ॥ ಅನ್ನದಾನಪ್ಪ, ನೀಲಪ್ಪನವರ ದಾಸಪ್ಪ, ವೈ. ಎಚ್. ವೆಂಕಟರಮಣಪ್ಪ, ಡಿ. ತಾರಿ ಗಿರಿಯಪ್ಪ, ಶ್ಯಾಂಪೂರ್ ಪಾಪಣ್ಣ, ಜಿ. ಶಾಮಣ್ಣ, ಗಂಟೆ ದೊಡ್ಡಣ್ಣ, ಕೆರಮಲ ಚಿಕ್ಕವೀರಭದ್ರಯ್ಯ, ಅಮ್ಮಿ ಚಿಕ್ಕ ತಿಮ್ಮಶೆಟ್ಟಪ್ಪ, ಎಂ. ಎಲ್. ರಂಗಪ್ಪ, ಊಡೇದ ಬನಪ್ಪ, ಬೇವಿನಮರದ ಮುದ್ದಪ್ಪ, ಶೀರ್‍ಯದ ಪುಟ್ಟಪ್ಪ, ಶೀರ್‍ಯದ ಆಂಜನಪ್ಪ, ಎಣ್ಣೆಗೆರೆ ಚಿಕ್ಕವೆಂಕಟಪ್ಪ, ಚೀಣಾ ಅಂಗಡಿ ರಾಮಯ್ಯ, ಶೆಟ್ಟಿ ತಿಮ್ಮಪ್ಪ, ತಮ್ಮಯ್ಯ, ಶೆಟ್ಟಿ ಗವೇರಂಗಪ್ಪ, ದೊಮ್ಮಸಂದ್ರದ ಗಿರಿಯಪ್ಪ, ಹಣಬೆ ಶ್ರೀಕಂಠಪ್ಪ, ಶೆಟ್ಟರ ವೆಂಕಟರಮಣಪ್ಪ, ಬಿ. ಕಾಳಪ್ಪ ಶೆಟ್ಟರು, ಕಾಡು ಬಸನಯ್ಯ, ಚಿಕ್ಕವೆಂಕಟಪ್ಪ ಬ್ಯಾಟಪ್ಪ ಇತ್ಯಾದಿ ಸದಸ್ಯರನ್ನು ಒಳಗೊಂಡಿತ್ತು. ಎರಡು ವರ್ಷಗಳಿಂದ ಸಂಗ್ರಹಿಸಿದ ವಂತಿಕೆಯಾದ ೧೫೦೨ ರೂಪಾಯಿಗಳನ್ನು ದೇವಾಂಗ ಸಂಘದ ನೋಂದಾವಣೆಗೆ ಹಾಗೂ ಸಂಘ ಸ್ಥಾಪನೆಗೆ ಬಳಸಿಕೊಳ್ಳಲಾಯಿತು.

ಮೊದಲ ವಾರ್ಷಿಕ ಮಹಾಸಭೆಯನ್ನು ೬–೯–೧೯೨೪ರಂದು ಏರ್ಪಡಿಸಲಾಯಿತು. ಸಂಘದ ಪ್ರಥಮ ಸ್ಥಾಪಕ ಅಧ್ಯಕ್ಷರಾದ ರಾಯ್ ಸಾಹೇಬ್ ಶ್ರೀ ಎಂ. ಹಂಪಯ್ಯನವರು ಈ ವಾರ್ಷಿಕ ಮಹಾಸಭೆಯ ಅಧ್ಯಕ್ಷತೆಯನ್ನು ವಹಿಸಿಕೊಂಡರು. ಈ ಸಭೆಗೆ ಬೆಂಗಳೂರಿನಲ್ಲಿ ಸ್ಥಾಪನೆಗೊಂಡಿದ್ದ ಇನ್ನಿತರ ಸಂಘ–ಸಂಸ್ಥೆಗಳ ಅಧ್ಯಕ್ಷರು ದೇವಾಂಗ ಸಂಘದ ಏಳಿಗೆಗೆ ಮತ್ತು ಸಂಘ ಕಟ್ಟುವುದರಲ್ಲಿ ಇನ್ನಿತರರನ್ನು ಭಾಗವಹಿಸುವಂತೆ ಪ್ರೋತ್ಸಾಹಿಸಿದರು. ಪ್ರಭುತ್ವದ ಆಡಳಿತ ಮಂಡಲಿಯ ನಿವೃತ್ತ ಸದಸ್ಯರಾದ ಸರ್. ಕೆ. ಪಿ. ಪುಟ್ಟಣ್ಣ ಶೆಟ್ಟರು ಸಂಘಕ್ಕೆ ಶುಭಕೋರಿದರು. ಅಧ್ಯಕ್ಷ ಭಾಷಣವನ್ನು ಮಾಡಿದ ಸಾಹೇಬ್ ಶ್ರೀ ಎಂ ಹಂಪಯ್ಯನವರು ಸಂಘದ ಸದಸ್ಯರನ್ನು ಉದ್ದೇಶಿಸಿ "ದೇವಾಂಗ ಜನರಲ್ಲಿ ಸಂಘಟನೆ, ತ್ಯಾಗ ಒಗ್ಗಟ್ಟುಗಳ ಅಗತ್ಯತೆಯನ್ನು ಎತ್ತಿಹಿಡಿದು ಅದರ ಬಗೆಗೆ ಮುಂದು ವರೆಯಬೇಕೆಂದು ತಿಳಿಸುತ್ತಾ, ಬದಲಾದ ಪರಿಸ್ಥಿತಿಗೆ ಹೊಂದಿಕೊಳ್ಳುವ ಹಿನ್ನೆಲೆಯಲ್ಲಿ ಆಧುನಿಕ ಶಿಕ್ಷಣವನ್ನು ತಮ್ಮ ಸಮುದಾಯದವರು ಪಡೆಯಲು ಮುಂದಾಗಬೇಕು. ಸಂಘದ ಧ್ಯೇಯ ವಿದ್ಯಮಾನಗಳನ್ನು ಇನ್ನಿತರ ಸ್ಥಳಗಳಲ್ಲಿರುವ ದೇವಾಂಗ ಸಮುದಾಯದವರಿಗೆ ತಿಳಿಯಪಡಿಸಿ ಸಂಘಟಿತಗೊಳಿಸಬೇಕು. ಈ ನಿಟ್ಟಿನಲ್ಲಿ ಪ್ರಚಾರದ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕೆಂದು ತಿಳಿಸಿದರು".

ಈ ಮೇಲಿನ ಮಾತುಗಳಲ್ಲಿ ಇಂಗ್ಲಿಶ್ ಭಾಷೆಯ ಅರಿವಿಲ್ಲದ ಯಾವ ವ್ಯಕ್ತಿಯೂ ತನ್ನ ಪ್ರದೇಶ ಅಥವಾ ವರ್ಗದ ಪರವಾಗಿ ಮಾತನಾಡಿ ಪ್ರಭುತ್ವದ ಸೌಲಭ್ಯವನ್ನು ಪಡೆಯಲು ಸಾಧ್ಯವಾಗುತ್ತಿರಲಿಲ್ಲ ಎಂಬುದು ತಿಳಿಯುತ್ತದೆ. ೧೯೨೪ರಲ್ಲಿಯೇ ಕನ್ನಡ ದೇವಾಂಗ ಮತ್ತು ತೆಲುಗು(ಆಂಧ್ರ) ದೇವಾಂಗದವರಲ್ಲಿ ಭಿನ್ನಾಭಿಪ್ರಾಯಗಳು ತಲೆದೋರಿ ತಮ್ಮದೇ ಅದ ಸಂಘದ ಶಾಖೆಯನ್ನು ರಚಿಸಿಕೊಂಡು ಹೊರಬಂದರು. ಆದರೂ ಸಹ ಕೆಲವು ವರ್ಷಗಳ ಕಾಲ ಆಂಧ್ರದ ದೇವಾಂಗದವರು ಸಂಪೂರ್ಣವಾಗಿ ಕನ್ನಡ ದೇವಾಂಗದವರೊಂದಿಗೆ ಸಂಬಂಧವನ್ನು ಕಡಿತಗೊಳಿಸಲಿಲ್ಲ.[೧೫] ಅಂದರೆ ಆರಂಭದ ದಿನಗಳಲ್ಲಿ ಸಂಘವು ತನ್ನ ಅಸ್ತಿತ್ವಕ್ಕಾಗಿ ಭಿನ್ನಾಭಿಪ್ರಾಯಗಳ ನಡುವೆ ಹಲವು ಸಂಕಷ್ಟಗಳನ್ನು ದಾಟಿ ಬರಬೇಕಾಗಿತ್ತು ಎಂಬ ವಿಚಾರದೊಂದಿಗೆ ಕುಲಬಾಂಧವರ ಅಭಿವೃದ್ಧಿಯ ಕಾರ್ಯವೈಖರಿ ಬಗೆಗೆ ಬೆಳಕು ಹರಿಸುತ್ತದೆ.

ಸಂಘದ ಆಡಳಿತ ನಿರ್ವಹಣೆಗೆ ಪ್ರಚಾರ ಕಾರ್ಯಗಳಿಗೆ ಹಣಕಾಸಿನ ಸೌಲಭ್ಯ ಅಗತ್ಯ. ಈ ನಿಟ್ಟಿನಲ್ಲಿ ಸಂಘದ ಮೂಲಧನವನ್ನು ಪೋಷಕರು, ಸಹಾಯಕರು, ಆಜೀವ ಮತ್ತು ಸಾಧಾರಣ ಸದಸ್ಯರಿಂದ ವಂತಿಕೆಯ ರೂಪದಲ್ಲಿ ಚಂದಾ ಹಣವನ್ನು ಸಂಗ್ರಹಿಸಲಾಗಿತ್ತು. ಆದರೆ ಇದರಿಂದ ಬರುವ ಹಣದಿಂದ ಕಾರ್ಯ ಪ್ರವೃತ್ತಿ ಕೈಗೆತ್ತಿಕೊಳ್ಳಲು ಅಂದಿನ ಸಂದರ್ಭದಲ್ಲಿ ಸಾಧ್ಯವಾಗದ ಪರಿಸ್ಥಿತಿಗಳನ್ನು ಗಮನಿಸಿ ಮಹಾದಾನಿಗಳು ಚರಸ್ಥಿರ ಆಸ್ತಿ ಅಥವಾ ದ್ರವ್ಯರೂಪದಲ್ಲಿ ವಂತಿಕೆಯನ್ನು ನೀಡಲಾರಂಭಿಸಿದರು. ಇದು ಸಂಘದ ಮುಖ್ಯ ಬಂಡವಾಳವಾಗಿತ್ತು. ಆದರೆ ನೇಯ್ಗೆ ಸಮುದಾಯದವರು ಲಕ್ಷಾಂತರ ಮಂದಿಯಿದ್ದರೂ ಸಹ ಅಲ್ಪಾದಾಯವನ್ನು ಪಡೆಯುವವರು ಮತ್ತು ಈಗಾಗಲೇ ಕಷ್ಟ ಜೀವನವನ್ನು ಸಾಗಿಸುತ್ತಿದ್ದರು. ಆದ್ದರಿಂದ ಅವರಿಗೆ ಅನುಕೂಲವಾಗುವ ನಿಟ್ಟಿನಲ್ಲಿ ಬೆಂಗಳೂರಿನಲ್ಲಿ ಇದ್ದ ಮಗ್ಗಗಳ ಆಧಾರದ ಮೇಲೆ ಒಂದು ಮಗ್ಗಕ್ಕೆ ಎಂಟಾಣೆ, ನಾಲ್ಕಾಣೆ ಚಂದಾ ವಸೂಲಿ ಮಾಡುವ ಪದ್ಧತಿ ರೂಢಿಯಲ್ಲಿತ್ತು. ಬೆಂಗಳೂರಿನ ನಗರ ಪ್ರದೇಶವಷ್ಟೇ ಅಲ್ಲದೆ, ದೊಡ್ಡಬಳ್ಳಾಪುರ ದೇವಾಂಗ ಸಮುದಾಯದವರು ಸಹ ವಂತಿಕೆ, ದಾನದ ರೂಪದಲ್ಲಿ ದೊಡ್ಡ ಮೊತ್ತದ ಹಣಕಾಸಿದ ಸಹಾಯವನ್ನು ನೀಡಿದರೆಂಬುದನ್ನು ಗಮನಿಸಬೇಕಾಗಿದೆ.

ಬೆಂಗಳೂರಿನ ದೇವಾಂಗ ಸಂಘವು ಇತರೆ ಪ್ರದೇಶದವರೊಂದಿಗೆ ಸಂಬಂಧವನ್ನು ಹೊಂದಿತ್ತು. ಬೆಂಗಳೂರಿನ ದೇವಾಂಗ ಸಂಘ ಕಾರ್ಯಾಚರಣೆಯನ್ನು ಬೆಂಗಳೂರು ನಗರದ ದೇವಾಂಘ ಸಂಘದ ಸದಸ್ಯರಿಗೆ ಮಾತ್ರ ಸೀಮಿತಗೊಳಿಸದೆ ಬೆಂಗಳೂರು ಗ್ರಾಮಾಂತರ ಪ್ರದೇಶಗಳಾದ ದೊಡ್ಡಬಳ್ಳಾಪುರ, ಆನೇಕಲ್ ಮತ್ತು ತುಮಕೂರು, ಚಾಮರಾಜಪೇಟೆ, ಕೋಲಾರ ಜಿಲ್ಲೆಗಳಲ್ಲಿ ಕಾರ್ಯ ಪ್ರವೃತ್ತಗೊಂಡಿತ್ತು. ಈ ಸಂದರ್ಭದಲ್ಲಿ ಅಲ್ಲಿಯ ದೇವಾಂಗ ಸಮುದಾಯದವರನ್ನು ದೇವಾಂಗ ಸಂಘದ ಧ್ಯೇಯ, ಧೋರಣೆಗಳನ್ನು ಪ್ರಚಾರ ಪಡಿಸಿ, ಸಂಘಟಿಸಿ ಅವರನ್ನು ಸಂಘದ ಸದಸ್ಯತ್ವವನ್ನು

ಪಡೆಯುವಂತೆ ಮಾಡುವಲ್ಲಿ ರಾಯ್ ಸಾಹೇಬ್ ಎಂ. ಹಂಪಯ್ಯನವರ ಪಾತ್ರ ಹಿರಿದು. ಆನೇಕಲ್ ಮತ್ತು ದೊಡ್ಡಬಳ್ಳಾಪುರ ದೇವಾಂಗ ಸಮುದಾಯದವರಿಂದ ಸಂಘಕ್ಕೆ ಭಾರಿ ಮೊತ್ತದ ಚಂದಾ ಮತ್ತು ವಂತಿಕೆ ಬರುತ್ತಿತ್ತು ಎಂಬ ಅಂಶವು ಇಲ್ಲಿ ಗಮನಾರ್ಹವಾಗಿದೆ. ನಂತರದಲ್ಲಿ ಅಂದರೆ, ೧೯೪೨, ೧೯೪೩ ರಲ್ಲಿ ದೊಡ್ಡಬಳ್ಳಾಪುರ ಮತ್ತು ಉತ್ತರ ಕರ್ನಾಟಕದಲ್ಲಿ ಸಂಘಗಳನ್ನು ಸ್ಥಾಪಿಸಲಾಯಿತು. ಉತ್ತರ ಕರ್ನಾಟಕದಲ್ಲಿ ದೇವಾಂಗ ಪ್ರಸಾರಕ ಸಂಘವನ್ನು ೧೯೦೪ರಲ್ಲೇ ಸ್ಥಾಪಿಸಲಾಗಿತ್ತು. ನಂತರ ಶ್ರೀ ಎಂ. ಹಂಪಯ್ಯನವರು ಇನ್ನಿತರ ಮಹನೀಯರು ಸೇರಿ ಸಂಘಗಳನ್ನು ಸ್ಥಾಪಿಸಿದರು. ದೇವಾಂಗದವರಲ್ಲಿ ಐಕ್ಯತೆಯನ್ನು ಮೂಡಿಸುವ ಸಲುವಾಗಿ ಹಲವು ವಾರ್ಷಿಕ ಸಭೆ ಸಮ್ಮೇಳನಗಳನ್ನು ಏರ್ಪಡಿಸಲಾಯಿತು. ಈ ನಿಟ್ಟಿನಲ್ಲಿ ೧೯೨೪ ಏಪ್ರಿಲ್‌ನಲ್ಲಿ ಸರ್. ಪಿ. ಟಿ. ತ್ಯಾಗರಾಜ ಚೆಟ್ಟಿಯವರ ನೇತೃತ್ವದಲ್ಲಿ ಎಸ್. ಸಿ. ವೆಂಕಟಪ್ಪ ಚೆಟ್ಟಿಯವರ ಅಧ್ಯಕ್ಷತೆಯಲ್ಲಿ ಮದ್ರಾಸ್ ನಗರದಲ್ಲಿ ಏರ್ಪಡಿಸಲಾಗಿತು. ಇದರಲ್ಲಿ ಹಲವು ಗಣ್ಯರು ಮತ್ತು ಸಂಘದ ಸದಸ್ಯರುಗಳು ಭಾಗವಹಿಸಿದರು. ಅದೇ ತೆರನಾಗಿ, ೧೯೨೫ರಲ್ಲಿ ಪೆದ್ದಾಪುರಂ, ೧೯೨೮ರಲ್ಲಿ ಕೊಯಮತ್ತೂರು, ೧೯೪೮ರಲ್ಲಿ ಪಳನಿ, ೧೯೪೯ರಲ್ಲಿ ಅರಮು ಕೋಟೆಗಳಲ್ಲಿ ಸಭೆ ನಡೆಸಲಾಯಿತು. ಆದರೆ ಮೈಸೂರು ರಾಜ್ಯದಲ್ಲಿ ಈ ರೀತಿ ದೊಡ್ಡ ಮಟ್ಟದ ಸಮ್ಮೇಳನವನ್ನು ನಡೆಸುವ ಅವಕಾಶ ದೊರೆತಿರಲಿಲ್ಲ ಎಂಬುದು ಗಮನಿಸಬೇಕಾದ ಅಂಶವಾಗಿದೆ. ಹೀಗೆ ಬೆಂಗಳೂರಿನ ದೇವಾಂಗ ಸಂಘವು ರಾಜ್ಯದ ಇನ್ನಿತರ ಪ್ರದೇಶದ ದೇವಾಂಗ ಸಮುದಾಯವನ್ನು ಸಂಘಟಿಸುವ ಮತ್ತು ಸಂಘ ಸಂಸ್ಥೆಗಳೊಂದಿಗೆ ಉತ್ತಮ ಬಾಂಧವ್ಯವನ್ನು ರೂಪಿಸುವಲ್ಲಿ ಯಶಸ್ವಿಯಾಯಿತು. ತಮ್ಮ ಸಮುದಾಯದವರ ಅಭಿವೃದ್ಧಿಗೆ ಮತ್ತು ಅಂದಿನ ಸಮಸ್ಯೆಗೆ ಪರಿಹಾರವನ್ನು ಪಡೆಯುವ ನಿಟ್ಟಿನಲ್ಲಿ ಪ್ರಯತ್ನಿಸಿರುವುದನ್ನು ಕಾಣಬಹುದಾಗಿದೆ.[೧೬]

ಪ್ರಭುತ್ವ ಮತ್ತು ದೇವಾಂಗ ಸಂಘ ನಡುವಿನ ಸಂಬಂಧದ ಮೂಲಕ ಸಂಘವು ಎಷ್ಟರ ಮಟ್ಟಿಗೆ ತನ್ನ ವೃತ್ತಿ ಸಮುದಾಯಗಳ ಪುರೋವೃದ್ಧಿಗೆ ಶ್ರಮಿಸಿತು ಎಂಬುದನ್ನು ತಿಳಿಯಬಹುದು. ೧೯ನೇ ಶತಮಾನದ ಉತ್ತರಾರ್ಧದಲ್ಲಿ ಬ್ರಿಟಿಶರ ಆಳ್ವಿಕೆಯಿಂದಾಗಿ ಕ್ರಮೇಣ ಜವಳಿ ಗಿರಣಿಗಳು, ಯಾಂತ್ರಿಕ ಮಗ್ಗಗಳು ಅಸ್ತಿತ್ವಕ್ಕೆ ಬಂದ ಕಾರಣ ಕೈಮಗ್ಗದ ಉದ್ದಿಮೆ ನಶಿಸಲು ಕಾರಣವಾಯಿತು. ೧೯೦೬ರಲ್ಲಿ ಸ್ವದೇಶಿ ಚಳುವಳಿ ಆರಂಭವಾದರೂ ಕೈ ಮಗ್ಗಗಳಿಗೆ ಅವಶ್ಯವಿದ್ದ ನೂಲು, ಬಣ್ಣ, ರಾಸಾಯನ ಇತ್ಯಾದಿ ಕಚ್ಚಾ ಮಾಲು ಹಾಗೂ ಹುಟ್ಟುವಳಿಯಿಂದ ಬಟ್ಟೆಗಳ ಮಾರಾಟಗಳ ಸಮಸ್ಯೆಗಳಿಂದ ಹೊರ ಬರಲು ಸಾಧ್ಯವಾಗಲಿಲ್ಲ. ಸಂಘದ ಸ್ಥಾಪನೆಯ ನಂತರ ಮೈಸೂರು ಛೇಂಬರ್ ಆಫ್ ಕಾಮರ್ಸ್‌ನೊಂದಿಗೆ ಸಂಬಂಧವನ್ನು ಹೊಂದಿತು.[೧೭] ಆ ಮೂಲಕ ತಮ್ಮ ಬೇಡಿಕೆಗಳನ್ನು ಪ್ರಭುತ್ವದ ಮುಂದೆ ಇಡಲು ತಮ್ಮ ಪ್ರತಿನಿಧಿಯನ್ನು ಕಳುಹಿಸಲಾಗುತ್ತಿತು. ೧೯೨೪ರಲ್ಲಿ ಸಂಘ ಆರಂಭವಾದ

ಕಾಲದಲ್ಲಿ ಮೈಸೂರು ಪ್ರಜಾಪ್ರತಿನಿಧಿ ಸಭೆಗೆ ದೇವಾಂಗ ಸಂಘದಿಂದ ಒಬ್ಬ ಪ್ರತಿನಿಧಿಯನ್ನು ಚುನಾಯಿಸುವ ಸ್ವಾತಂತ್ರ್ಯವನ್ನು ಪ್ರಭುತ್ವ ನೀಡಿತು. ಮೊದಲ ಬಾರಿಗೆ ಸಂಘದಿಂದ ಸಿ.ಕೆ ಹುಚ್ಚಪ್ಪನವರನ್ನು ಚುನಾಯಿಸಲಾಯಿತು. ಅದೇ ರೀತಿ ಕೈಮಗ್ಗದ ಕಸುಬಿನ ಪರವಾಗಿ ವೈ. ಹೆಚ್. ವೆಂಕಟರಮಣಪ್ಪನವರನ್ನು ಸರ್ಕಾರದವರು ಪ್ರಜಾಪ್ರತಿನಿಧಿ ಸಭೆಗೆ ನಾಮಕರಣ ಮಾಡಿದ್ದರು.[೧೮] ೧೯೨೧ರ ವೇಳೆಗೆ ಗಾಂಧೀಜಿಯ ಅಸಹಕಾರ ಚಳುವಳಿಯ ಫಲವಾಗಿ ಖಾದಿ ಬಟ್ಟೆಗಳಿಗೆ ಪುರಸ್ಕಾರ ದೊರೆಯಿತು. ಆದರೂ ಸಹ ಅದು ನೇಕಾರನಿಗೆ ಚೇತರಿಕೆಯನ್ನುಂಟು ಮಾಡಿಕೊಂಡರೂ ಗಿರಣಿ ನೂಲಿಂದ ನಡೆಯುವ ಹೆಚ್ಚು ಮಗ್ಗಗಳಿಗೆ ನೂಲು ಪೂರೈಕೆ ಸಾಧ್ಯವಾಗಲಿಲ್ಲ. ಕೈನಿಂದ ತೆಗೆದ ನೂಲು ಕೆಲ ಜನರಿಗೆ ಮಾತ್ರ ನೇಯ್ಗೆಗೆ ಉದ್ಯೋಗ ಕಲ್ಪಿಸಿತು. ಇದರಿಂದ ದೇವಾಂಗ ಸಮುದಾಯವನ್ನು ಹಿಂದುಳಿದ ಸಮುದಾಯವೆಂದು ಪರಿಗಣಿಸಿತು. ಸಂಘದ ಬೆಳವಣಿಗೆಗೆ ಪೂರಕವಾಗಿ ನಗರ ಸಭೆ ಮತ್ತು ನಗರಾಭಿವೃದ್ಧಿ ಮಂಡಳಿಯು ನಗರದ ಮುಖ್ಯ ವಾಣಿಜ್ಯ ಕೇಂದ್ರವಾದ ಕೆಂಪೇಗೌಡ ರಸ್ತೆಯಲ್ಲಿ ಮತ್ತು ದೇವಾಂಗ ವಿದ್ಯಾರ್ಥಿ ನಿಲಯ ರಸ್ತೆಯಲ್ಲಿ ನಿವೇಶನಗಳನ್ನು ರಿಯಾಯಿತಿ ದರದಲ್ಲಿ ನೀಡಿದರು. ಯಾಂತ್ರಿಕ ಮಗ್ಗ, ಗಿರಣಿ ಮಗ್ಗ, ಕೈ ಮಗ್ಗಗಳಿಗೆ ಇರುವ ಪೈಪೋಟಿಯನ್ನು ನಿವಾರಿಸಲು ಬ್ರಿಟಿಶ್ ಪ್ರಭುತ್ವ ನೂಲು ಪೂರೈಕೆಯ ಕಾರ್ಯವನ್ನು ನಿರ್ವಹಿಸಿತು. ಆದರೂ ಸಮಸ್ಯೆಯನ್ನು ಸಂಪೂರ್ಣವಾಗಿ ಬಗೆಹರಿಸಲು ಸಾಧ್ಯವಾಗಲಿಲ್ಲ. ಆದ್ದರಿಂದ ಅದನ್ನು ಅಭ್ಯಸಿಸಿ ವರದಿ ಮಾಡಲು ೧೯೩೮ರಲ್ಲಿ ಸರ್ ಥಾಮಸ್ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಿಸಿತು. ಆ ಸಮಿತಿ ಒಪ್ಪಿಸಿದ ವರದಿ ಕಾರ್ಯಗತವಾಗದೆ ಹಾಗೇ ಉಳಿಯಿತು. ನಂತರ ೧೯೪೫ರಲ್ಲಿ ಭಾರತದ ಬ್ರಿಟಿಶ್ ಪ್ರಭುತ್ವ ನೆಲೆಕಚ್ಚಿದ ಕೈ ಮಗ್ಗಗಳ ಪುನಶ್ಚೇತನಗೊಳಿಸುವ ನಿಟ್ಟಿನಲ್ಲಿ ನೂಲಿನ ನಿಯಂತ್ರಣ ಮಾಡಿ ಸಹಕಾರಿ ಸಂಘಗಳ ಮೂಲಕ ನೂಲಿನ ವಿತರಣೆ ಆರಂಭಿಸಿತು.[೧೯] ಈ ಮೇಲಿನ ಅಂಶಗಳು ನೇಕಾರರಿಗೆ ಸಮುದಾಯಗಳಿಗೆ ಇದ್ದ ಸಮಸ್ಯೆಗಳು ಮತ್ತು ಸಂಘ ಹಾಗೂ ಪ್ರಭುತ್ವದ ನಡುವಿನ ಸಂಬಂಧದ ಬಗೆಗೆ ಬೆಳಕನ್ನು ಚೆಲ್ಲುತ್ತದೆ.

ಆದರೂ ಸಹ ಸಂಘ ಅಂದಿನ ಪರಿಸ್ಥಿತಿಯಲ್ಲಿ ತಮ್ಮ ಕುಲಬಾಂಧವರ ಸರ್ವತೋಮುಖ ಅಭಿವೃದ್ಧಿಗಾಗಿ ವಿದ್ಯಾರ್ಥಿ ನಿಲಯಗಳನ್ನು ಹಾಗೂ ವಿದ್ಯಾ ಸಂಸ್ಥೆಗಳನ್ನು ಸ್ಥಾಪಿಸಿತು. ಇದರಿಂದಾಗಿ ಬದಲಾದ ಶಿಕ್ಷಣ ವ್ಯವಸ್ಥೆ ಮತ್ತು ಆರ್ಥಿಕತೆಗೆ ತಕ್ಕಂತೆ ತಮ್ಮನ್ನು ಬದಲಾವಣೆಗೆ ಪೂರಕವಾಗಿ ಸ್ವಲ್ಪಮಟ್ಟಿಗೆ ಬದಲಾವಣೆ ಮಾಡಿಕೊಳ್ಳಲು ಸಾಧ್ಯವಾಯಿತು. ಯುವಕರನ್ನು ಪ್ರೇರೇಪಿಸುವ ನಿಟ್ಟಿನಲ್ಲಿ ದೇವಾಂಗ ಯುವಕರ ಸಂಘವನ್ನು ಸ್ಥಾಪಿಸಲಾಯಿತು. ತಮ್ಮ ವೃತ್ತಿಯನ್ನು ಕಾಲಕ್ಕೆ ತಕ್ಕಂತೆ ಬದಲಾಯಿಸಿಕೊಳ್ಳಲು ದೇವಾಂಗ ಬ್ಯಾಂಕನ್ನು[೨೦] ಸಹ ಸಂಘದ ಅಡಿಯಲ್ಲಿ ೧೯೨೬ರಲ್ಲಿ ಸ್ಥಾಪಿಸಲಾಯಿತು. ಹೀಗೆ ದೇವಾಂಗ ಸಂಘವು ಅಂದಿನಿಂದ ಇಂದಿನವರೆಗೂ ತಮ್ಮ ವೃತ್ತಿಬಾಂಧವರಿಗಾಗಿ ಶ್ರಮಿಸುತ್ತಾ ಬಂದಿದೆ.

## ಆರ್ಯ ವೈಶ್ಯ ಮಂಡಲಿ

ಕ್ರಿ.ಶ ೧೮೮೯ರಲ್ಲಿ ಶ್ರೀಮಾನ್ ಶೆಟ್ಟಿ ಯಜಮಾನ್ ಮತ್ತು ಪ್ರಮುಖರು ಸೇರಿ ಪೆದ್ದ ಪೇಟ ಆರ್ಯ ವೈಶ್ಯ ಮಂಡಲಿ ಎಂಬ ಸಂಘವನ್ನು ಸ್ಥಾಪಿಸಿದರು. ಇದರ ಮುಖ್ಯ ಉದ್ದೇಶ, ತಮ್ಮವರಲ್ಲಿ ಒಗ್ಗಟನ್ನು ಮೂಡಿಸಿ ಬದಲಾದ ವ್ಯವಸ್ಥೆಗೆ ಪೂರಕವಾಗಿ ಕಾರ್ಯನಿರ್ವಹಿಸುವುದು ಈ ನಿಟ್ಟಿನಲ್ಲಿ ಇಂಗ್ಲಿಶ್ ಶಿಕ್ಷಣವನ್ನು ನೀಡಿ ಸಾಮಾಜಿಕ ಸ್ಥಾನವನ್ನು ಉತ್ತಮ ಪಡಿಸಲು ೧೯೧೮ರಲ್ಲಿ ಶ್ರೀರಾಮ್ ವೆಂಕಟಸುಬ್ಬಯ್ಯ ಶೆಟ್ಟಿಯವರ ನೇತೃತ್ವದಲ್ಲಿ ತಮ್ಮ ವೃತ್ತಿಬಾಂಧವರ ಪುರೋಭಿವೃದ್ಧಿಗಾಗಿ ಮೈಸೂರಿನ ರಾಜರಾದ ನಾಲ್ವಡಿ ಕೃಷ್ಣರಾಜ ಒಡೆಯರ್ ಅವರಿಂದ ಶೇಷಾದ್ರಿ ರಸ್ತೆಯಲ್ಲಿ ಸ್ಥಳವನ್ನು ದಾನವಾಗಿ ಪಡೆದರು. ಈ ಮಂಡಲಿಯು ಆಂದಿನಿಂದ ಇಂದಿನವರೆಗೂ ಹತ್ತು-ಹಲವು ಕಾರ್ಯಗಳನ್ನು ರೂಪಿಸಿಕೊಂಡು ಸಮುದಾಯದ ವೃದ್ಧಿಗಾಗಿ ಶ್ರಮಿಸುತ್ತಿದೆ. ಆರ್ಯ ವೈಶ್ಯ ಮಂಡಲಿಯು ಓರ್ವ ಅಧ್ಯಕ್ಷ ಮತ್ತು ನಿರ್ದೇಶಕರುಗಳನ್ನು ಹೊಂದಿದೆ. ತಮ್ಮ ಸಮುದಾಯದವರಿಗೆ ಹಣಕಾಸಿನ ಸಹಕಾರವನ್ನು ನೀಡುವ ನಿಟ್ಟಿನಲ್ಲಿ ವೈಶ್ಯ ಬ್ಯಾಂಕನ್ನು ಸ್ಥಾಪಿಸಿದೆ. ಬದಲಾದ ಆರ್ಥಿಕ ಚಟುವಟಿಕೆ ಮತ್ತು ಆಡಳಿತದಲ್ಲಿ ಭಾಗವಹಿಸುವ ನಿಟ್ಟಿನಲ್ಲಿ ಪ್ರೋತ್ಸಾಹಿಸಲು ಬೆಂಗಳೂರು ನಗರಕ್ಕೆ ಬರುವ ವಿದ್ಯಾರ್ಥಿಗಳಿಗಾಗಿ ಆರ್ಯವೈಶ್ಯ ವಿದ್ಯಾರ್ಥಿ ನಿಲಯ, ವಿದೇಶಗಳಿಗೆ ತೆರಳಿ ಉನ್ನತ ಜ್ಞಾನವನ್ನು ಪಡೆಯಲು ಬಯಸುವವರಿಗೆ ಎಲ್ಲಾ ರೀತಿಯ ಸೌಲಭ್ಯವನ್ನು ಕಲ್ಪಿಸಿಕೊಡುವ ಕಾರ್ಯದಲ್ಲಿ ನಿರತವಾಗಿದೆ. ಈ ಮಂಡಲಿಯು ಕೇವಲ ಬೆಂಗಳೂರು ಪ್ರದೇಶದ ಆರ್ಯ ವೈಶ್ಯರಿಗೆ ಮಾತ್ರ ಸಹಕಾರ ನೀಡದೇ ಮೈಸೂರಿನಲ್ಲಿ ಸ್ಥಾಪನೆಗೊಂಡಿದ್ದ ಆರ್ಯ ಮಹಾಸಭಾದೊಂದಿಗೂ ಉತ್ತಮ ಬಾಂಧವ್ಯವನ್ನು ಹೊಂದಿದೆ. ಆ ಹಿನ್ನೆಲೆಯಲ್ಲಿ ಕ್ರಿ. ಶ ೧೯೩೫ರಲ್ಲಿ ಮೈಸೂರಿನಿಂದ ಬಂದ ಮಹಾಸಭಾದವರಿಗೆ ಸಭೆ ಸೇರಲು ವೈಶ್ಯ ಬ್ಯಾಂಕ್ ಪಕ್ಕದಲ್ಲಿದ್ದ ವೈಶ್ಯ ಬಿಲ್ಡಿಂಗ್‌ನ್ನು ಹಲವು ಬಾರಿ ನೀಡಲಾಯಿತು. ಅದಷ್ಟೇ ಅಲ್ಲದೆ, ಸಂಘವು ಧಾರ್ಮಿಕ, ಸಾಮಾಜಿಕ, ಚಟುವಟಿಕೆಗಳನ್ನು ಹಮ್ಮಿಕೊಂಡು ಇಂದಿಗೂ ಮುಂದುವರಿಸಿ ಕೊಂಡು ಬರುತ್ತಿದೆ.[೨೧]

## ನಗರ್ತರ ಸಂಘ

ಅಯೋಧ್ಯಾನಗರ ಶಿವಾಚಾರ ವೈಶ್ಯ ವಿದ್ಯಾ ವರ್ಧಕ ಸಂಘ ಎಂದು ಕರೆಯಲ್ಪಡುವ ನಗರ್ತರ ಸಂಘವು ಮೊದಲಿಗೆ ಒಂದು ಧಾರ್ಮಿಕ ಸಂಘಟನೆಯಾಗಿ ರೂಪುಗೊಂಡಿತು. ೧೮೮೪ರಲ್ಲಿ ಸಂಪನ್ನ ಮತ್ತು ನಂಜುಂಡಪ್ಪನವರ ನೇತೃತ್ವದಲ್ಲಿ ಶಿವಾಚಾರ ನಗರ್ತರು, ಯಮಳನಾಡು ನಗರ್ತರು ಮತ್ತು ಭೇರಿನಗರ್ತರು, ದೊಡ್ಡನಗರ್ತರು, ಬೇಟಪ್ಪನಗರ್ತರು ಸೇರಿ ಬೆಂಗಳೂರು ಅಯೋಧ್ಯಾನಗರ ಶಿವಾಚಾರ ವೈಶ್ಯ ನಗರ್ತ ಸಮಿತಿಯನ್ನು ಸ್ಥಾಪಿಸಿದರು.[೨೨] ಈ ಸಂಘಟನೆಯ ಕೇಂದ್ರವಾಗಿ

ಬೆಂಗಳೂರಿನ ನಗರ್ತಪೇಟೆಯ ನಾಗೇಶ್ವರ ದೇವಾಲಯವು ಕೇಂದ್ರವಾಗಿ ಸಮಿತಿಯ ಎಲ್ಲ ಕಾರ್ಯಗಳನ್ನು ನಿರ್ವಹಿಸುತ್ತಿತ್ತು. ೧೯೧೯ರಲ್ಲಿ ಸಂಘ ಅಸ್ತಿತ್ವಕ್ಕೆ ಬಂದು[೨೩] ನಂತರ ೧೯೨೭ರಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರು ಕೆಂಪೇಗೌಡ ರಸ್ತೆಯಲ್ಲಿರುವ ಜಾಗವನ್ನು ಸಂಘಕ್ಕೆ ಮಂಜೂರು ಮಾಡಿದರು.[೨೪] ಈ ಸಂಘದ ಸ್ಥಾಪನೆಯ ಮುಖ್ಯ ಉದ್ದೇಶವೆಂದರೆ, ವ್ಯಾಸಂಗಕ್ಕೆ ಬರುವ ಮಕ್ಕಳಿಗಾಗಿ ಉಚಿತ ವಸತಿ, ಊಟ, ಪುಸ್ತಕ, ಶಿಕ್ಷಣಕ್ಕೆ ಧನ ಸಹಾಯವನ್ನು ನೀಡಿ ತಮ್ಮ ಸಮುದಾಯದವರ ಹಿತಾಸಕ್ತಿಯನ್ನು ಕಾಪಾಡುವುದು. ತಮ್ಮ ಸಮುದಾಯದವರ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸುವ ಮೂಲೋದ್ದೇಶದ ಜೊತೆಗೆ ಬೆಂಗಳೂರಿಗೆ ನಾನಾ ಉದ್ದೇಶದಿಂದ ಬರುವ ತಮ್ಮ ಸಮುದಾಯದ ಯಾತ್ರಿಕರಿಗೆ ಊಟ ಮತ್ತು ವಸತಿ ಸೌಕರ್ಯಗಳನ್ನು ಒದಗಿಕೊಡಬೇಕೆಂಬ ಧ್ಯೇಯವನ್ನು ಹೊಂದಿತ್ತು. ಈ ಹಿನ್ನೆಲೆಯಲ್ಲಿ ಸಂಘವನ್ನು ಕಟ್ಟಿ ತಮ್ಮ ಸಂಘದ ಕಾರ್ಯಗಳನ್ನು ಕಾರ್ಯೋನ್ಮುಖ ಗೊಳಿಸಲು ತಮ್ಮ ಸಮುದಾಯ ದವರಿಂದ ಚಂದಾ ಹಣವನ್ನು ಸಂಗ್ರಹಣೆ ಮಾಡಲಾಗುತ್ತಿತ್ತು.

ನಗರ್ತ ಸಮುದಾಯದ ದಾನಿಗಳ ಸಹಕಾರದಿಂದ ಈ ಜಾಗದಲ್ಲಿ ಸ್ವಂತ ಕಟ್ಟಡವನ್ನು ನಿರ್ಮಿಸಲಾಗಿತ್ತು. ನಂತರದಲ್ಲಿ ಸಂಘವು ನಗರ್ತ ಸಮುದಾಯದವರಲ್ಲಿ ಜ್ಞಾನಾರ್ಜನೆಯನ್ನು, ಜಾಗೃತಿಯನ್ನು ಮೂಡಿಸುವ ಸಲುವಾಗಿ ನಗರ್ತವಾಣಿ ಎಂಬ ಆಂತರಿಕ ಪ್ರಸಾರ ಪತ್ರಿಕೆಯ ಪ್ರಕಟಣೆಯನ್ನು ಮಾಡಿತು. ೧೯೪೦ರಲ್ಲಿ ನಗರ್ತ ಯುವಕರ ಸಂಘವನ್ನು ಸ್ಥಾಪಿಸುವ ಮೂಲಕ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡುವ ಗುರಿಯನ್ನು ಹೊಂದಿತ್ತು.[೨೫] ಈ ಉದ್ದೇಶದಿಂದ ವಿದ್ಯಾರ್ಥಿಗಳಿಗೆ ಗ್ರಂಥಾಲಯವನ್ನು ಸ್ಥಾಪಿಸಲಾಯಿತು. ಅದಷ್ಟೇ ಅಲ್ಲದೇ ನಗರ್ತರ ಸಂಘವು ಪಠ್ಯೇತರ ಚಟುವಟಿಕೆಗಳಿಗೆ ವೇದಿಕೆಯನ್ನೊದಗಿಸುವ ನಿಟ್ಟಿನಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು, ಸ್ಪರ್ಧೆಗಳನ್ನು ಏರ್ಪಡಿಸುವ ಮೂಲಕ ಪ್ರತಿಭೆಗೆ ಪ್ರೋತ್ಸಾಹವನ್ನು ನೀಡಿತು. ನಗರ್ತ ಸಂಘದ ಅಧೀನದಲ್ಲಿ ಈ ಸಮುದಾಯಗಳ ವಿದ್ಯಾರ್ಥಿಗಳಿಗಾಗಿ ವಿದ್ಯಾರ್ಥಿ ನಿಲಯಗಳನ್ನು ನಡೆಸುತ್ತಾ ಬರುತ್ತಿದೆ. ಮೈಸೂರು ಛೇಂಬರ್ ಆಫ್ ಕಾಮರ್ಸ್‌ನೊಂದಿಗೆ ಈ ಸಂಘದ ಸದಸ್ಯರು ಸದಸ್ಯತ್ವವನ್ನು ಹೊಂದಿದ್ದರು ಎಂದು ತೋರುತ್ತದೆ. ಒಟ್ಟಿನಲ್ಲಿ ನಗರ್ತ ಸಂಘವು ಬೆಂಗಳೂರು ನಗರ ಮತ್ತು ಬೆಂಗಳೂರು ಗ್ರಾಮಾಂತರ ಪ್ರದೇಶದ ಇನ್ನಿತರ ನಗರ್ತ ಸಂಘದೊಂದಿಗೆ ಸಂಪರ್ಕವನ್ನು ಹೊಂದಿದ್ದು. ನಗರ್ತ ಸಮುದಾಯದ ಸರ್ವತೋಮುಖ ಅಭಿವೃದ್ಧಿಗೆ ಇಂದಿಗೂ ಶ್ರಮಿಸುತ್ತಿದೆ. ಎಂ. ಸಿ. ಚಿಕ್ಕ ನಂಜುಂಡಪ್ಪನವರು ಈ ಸಮುದಾಯದ ಪ್ರಮುಖ ವ್ಯಕ್ತಿಯಾಗಿದ್ದು ಬೆಂಗಳೂರಿನ ನಗರಾಭಿವೃದ್ಧಿಯಲ್ಲಿ ಇವರ ಪಾಲು ಮಹತ್ವದಾಗಿದೆ.[೨೬] ನಗರ್ತ ಸಂಘವು ಹೊರ ರಾಜ್ಯಗಳ ಸಂಘಟನೆಗಳೊಂದಿಗೆ ಸಂಬಂಧ ಹೊಂದಿರುವ ಬಗೆಗೆ ಯಾವುದೇ ಮಾಹಿತಿಗಳು ಕಂಡುಬಂದಿಲ್ಲ.

## ಅಂಜುಮಾನ್ ಸಂಘ

ಜೊರಾಸ್ಟ್ರಿ ಅಂಜುಮಾನ್ ಸಂಘವನ್ನು ಪಾರ್ಸಿ ಸಮುದಾಯದವರು ೧೯೦೦ರಲ್ಲಿ ಬೆಂಗಳೂರಿನಲ್ಲಿ ಸ್ಥಾಪಿಸಿದರು. ಸಂಘದ ಬೆಳವಣಿಗೆಗಾಗಿ ತಲಾ ನಾಲ್ಕಾಣಿಯಂತೆ ಚಂದಾ ಪಡೆದು ಸಂಘದ ಕಾರ್ಯ ಚಟುವಟಿಕೆಯನ್ನು ನಿರ್ವಹಿಸಲಾಗುತ್ತಿತ್ತು. ನಂತರದಲ್ಲಿ ಅಂದರೆ ೧೯೨೨ರ ಹೊತ್ತಿಗೆ ಎರಡು ಅಥವಾ ಮೂರು ಬಾರಿ ಪ್ರಾಥಮಿಕ ಸಭೆಯನ್ನು ಏರ್ಪಡಿಸಲಾಯಿತು.[೨೭] ಈಗಾಗಲೇ ೧೮೯೨ರಲ್ಲಿ ಸ್ಥಾಪಿತವಾಯಿತು. ಈ ಸಂಘದ ಸ್ಥಾಪನೆಯ ಉದ್ದೇಶವು ಇತರ ಸಂಘಗಳಂತೆ ತಮ್ಮ ಸಮುದಾಯದವರ ಹಿತಾಸಕ್ತಿಯನ್ನು ಪ್ರಭುತ್ವದ ಮುಂದಿರಿಸಿ ಅದರ ಸಹಕಾರದಿಂದ ಸಂಘದ ಬೇಡಿಕೆಯನ್ನು ಪೂರೈಸುವುದು ೧೯೩೧ರಲ್ಲಿ ಪ್ರಭುತ್ವದಿಂದ ನೋಂದಣಿಗೊಂಡಿತ್ತು.[೨೮] ಬೆಂಗಳೂರಿನಲ್ಲಿದ್ದ ಪಾರ್ಸಿ ಸಮುದಾಯದವರ ಶವ ಸಂಸ್ಕಾರವನ್ನು ನಿರ್ವಹಿಸಲು ಸ್ಥಳಾವಕಾಶವನ್ನು ಸಂಘವು ಕೇಳಿದಾಗ ಅಂದಿನ ದಿವಾನ್ ಶೇಷಾದ್ರಿ ಅಯ್ಯರ್‌ನವರು ಈ ಸಮುದಾಯದವರಿಗೆ ರುದ್ರಭೂಮಿಗೆಂದು ಈಗೀನ ಕ್ವೀನ್ಸ್‌ರಸ್ತೆಯಿಂದ ಸುಮಾರು ಎರಡೂವರೆ ಕಿಲೋಮೀಟರ್ ದೂರದಲ್ಲಿ ಹದಿನಾರೂವರೆ ಗುಂಟೆ ಜಾಗವನ್ನು ನೀಡಿದರು. ಈ ಅಂಶವು ಪಾರ್ಸಿ ಸಮುದಾಯದ ಪ್ರಾಬಲ್ಯ ಮತ್ತು ಪ್ರಭುತ್ವ ಹಾಗೂ ಪಾರ್ಸಿಗಳ ನಡುವಿನ ಸಂಬಂಧದ ಬಗೆಗೆ ವಿವರಿಸುತ್ತದೆ. ಅಂಜುಮಾನ್ ಸಂಘದ ನಿರ್ವಹಣೆಗಾಗಿ ಮತ್ತು ಬೆಳವಣಿಗೆಗಾಗಿ ತಮ್ಮ ಸಮುದಾಯದವರಿಂದ ತಲಾ ನಾಲ್ಕಾಣೆಯನ್ನು ಚಂದಾ ವಸೂಲಿ ಮಾಡಿ ಸಂಘದ ಸ್ವಂತ ಕಟ್ಟಡವನ್ನು ನಿರ್ಮಿಸಲಾಯಿತು. ೧೯೨೪–೧೯೨೫ರಲ್ಲಿ ಸಂಘವು ಅಗ್ನಿ ಮಂದಿರ ಮತ್ತು ಪ್ರಾರ್ಥನಾ ಮಂದಿರವನ್ನು ನಿರ್ಮಿಸಿತು. ಬೆಂಗಳೂರಿನ ಜೊರಾಸ್ಟ್ರಿ ಅಂಜುಮಾನ್ ಸಂಘವು ಪೂನಾ ಮತ್ತು ಮುಂಬೈ ಸಂಘದೊಂದಿಗೆ ಸಂಪರ್ಕವನ್ನು ಹೊಂದಿದೆ. ಈ ಸಂಘದ ಸದಸ್ಯರು ಬೆಂಗಳೂರಿನ ಸ್ಥಳೀಯ ಆಡಳಿತ ಮತ್ತು ಮೈಸೂರು ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿದ್ದರು ಎಂಬುದು ವಿಶೇಷವಾಗಿದೆ. ಉದಾಹರಣೆಗೆ ಬೆಳಗಾಂವಾಲಾ, ದಿನ್‌ಷಾ ಕೈಖುಸ್ರು ಪ್ರಮುಖರಾಗಿದ್ದರು.[೨೯] ಅಂಜುಮಾನ್ ಸಂಘವು ತಮ್ಮ ಸಮುದಾಯವರಿಗೆ ಶೈಕ್ಷಣಿಕ ಧನಸಹಾಯವನ್ನು ಮತ್ತು ಬಡ ಪ್ರತಿಭಾ ವಿದ್ಯಾರ್ಥಿಗಳಿಗೆ ವಾರ್ಷಿಕ ಪ್ರೋತ್ಸಾಹ ಧನವನ್ನು ನೀಡುತ್ತಾ ಇಂದು ಸಹಕರಿಸುತ್ತಿದೆ. ಈ ಸಂಘದಲ್ಲಿ ಸಕ್ರಿಯವಾಗಿ ಭಾಗವಹಿಸಿ ಪ್ರಮುಖ ಪಾತ್ರ ವಹಿಸಿದ ಪ್ರಧಾನ ನಾಯಕರೆಂದರೆ, ದಿವಂಗತ ಮೆರ್ಹೆವಂಜಿಮನೆಕ್ಜಿ, ನುರ್ಸೆವನಿಇ ಮಿರ್ಜಾ, ಕೈಖುಸ್ರು ಬೆಂಳಗಾಂವಾಲಾ, ರುಸ್ತೋಮ್‌ಜೀ ಮೊದಲಾದವರು ಅಂಜುಮಾನ್ ಸಂಘದ ಅಭಿವೃದ್ಧಿಗೆ ಶ್ರಮಿಸಿದ ವ್ಯಕ್ತಿಗಳಾಗಿದ್ದಾರೆ.

## ವಿಶ್ವಕರ್ಮಿಗಳ ಸಂಘ

ವಿಶ್ವಕರ್ಮಿಗಳ ಸಂಘವು ೧೯೪೨ರಲ್ಲಿ ಬೆಂಗಳೂರು ನಗರದ ಶ್ರೇಷಾದ್ರಿಪುರಂನಲ್ಲಿ ಸ್ಥಾಪಿತಗೊಂಡಿತು. ವಿಶ್ವಕರ್ಮ ವೃತ್ತಿಬಾಂಧವರುಗಳಾದ ಬಿ.ಎಸ್. ಪುಟ್ಟಯ್ಯ, ಎಚ್.ಬಿ. ವೇದಮೂರ್ತಿ,

ಬಿ. ಲಕ್ಷ್ಮೀ ನಾರಾಯಣ, ಜಿ.ಜಿ. ಶಂಕರಯ್ಯ, ಕಬ್ಬಳ್ಳಿ ನರಸಿಂಹಚಾರ್ ಬಿ, ವೆಂಕಟಾಚಾರ್, ಎಂ. ಎಚ್. ಮುಟ್ಟ ಹೊನ್ನಾಚಾರ್, ಬಿ. ಎಲ್. ತಿಪ್ಪಚಾರ್, ಆರ್. ಗೋವಿಂದಾಚಾರ್, ಸಿ. ಲಿಂಗಣ್ಣಾಚಾರ್, ಬಿ. ಜಿ. ಚಂಗಲ್ ರಾಮಾಚಾರ್, ಎಂ. ವೈ. ವಿ. ಚನ್ನಪ್ಪಾಚಾರ್, ಮುದ್ದಾಚಾರ್ಯರು, ಎಂ. ನೀಲಕಂಠನ್, ಶ್ರೀಮತಿ ಎಂ.ವಿ. ರಾಜಮ್ಮ ಮೊದಲಾದವರು ಈ ಸಂಘದ ಸ್ಥಾಪಕರು. ಈ ಸಂಘದ ಮುಖ್ಯ ಉದ್ದೇಶ, ವಿಭಿನ್ನ ಭಾಷೆ ವೃತ್ತಿಗಳಿಂದ ಕೂಡಿರುವ ಸಮಸ್ತ ವಿಶ್ವಕರ್ಮರನ್ನು ಸಂಘಟಿಸಿ ಅವರಲ್ಲಿ ಐಕ್ಯಮತ, ವಿದ್ಯಾಭಿವೃದ್ಧಿ, ಮತಾಭಿಮಾನ ಮೂಡಿಸಿ ಬದಲಾದ ಪರಿಸ್ಥಿತಿಗೆ ತಕ್ಕಂತೆ ತಮ್ಮ ವೃತ್ತಿಯಲ್ಲಿ ನೈಪುಣ್ಯತೆಯನ್ನು ಮೂಡಿಸಲು ಶೈಕ್ಷಣಿಕ ತರಬೇತಿಯನ್ನು ನೀಡುವುದಾಗಿತ್ತು. ಇಂದು ಈ ಸಂಘವು ಮಾತ್ರ ಸಂಘಟನೆಯಾಗಿ, ಕರ್ನಾಟಕ ರಾಜ್ಯ ವಿಶ್ವಕರ್ಮ ಸಮಾಜವಾಗಿ ಪ್ರಭುತ್ವದಿಂದ ಮಾನ್ಯತೆಗೊಂಡ ಸಂಘಟನೆಯಾಗಿದೆ. ಈ ಸಂಘದ ಪದಾಧಿಕಾರಿಗಳನ್ನು ಸರ್ಕಾರ ನಡೆಸುವ ಚುನಾಚಣೆಯಲ್ಲಿ ಆಯ್ಕೆ ಮಾಡಲಾಗುತ್ತದೆ. ಈ ಚುನಾವಣೆಯು ಮುಕ್ತವಾಗಿದ್ದು, ರಾಜ್ಯ ವಿಶ್ವಕರ್ಮ ಸಮಾಜದಲ್ಲಿ ಸದಸ್ಯರಾಗಿರುವ ಯಾವ ಸದಸ್ಯರಾದರೂ ಸಹ ಚುನಾವಣೆಯಲ್ಲಿ ಭಾಗವಹಿಸುವ ಮುಕ್ತ ಅವಕಾಶವಿದೆ. ಆಯ್ಕೆಯಾದ ನಿರ್ದೇಶಕರು ಕಾರ್ಯಕಾರಿ ಸಮಿತಿಯ ಸಹಕಾರ ದೊಂದಿಗೆ ೫ ವರ್ಷಗಳ ಅವಧಿಗೆ ಕಾರ್ಯನಿರ್ವಹಿಸಬಹುದಾಗಿದೆ.[೩೦] ಇಂದಿಗೂ ಸಹ ಅದೇ ನಿಟ್ಟಿನಲ್ಲಿ ಯಶಸ್ವಿಯಾಗಿ ಕಾರ್ಯನಿರ್ವಹಿಸುತ್ತಿದೆ. ವಸಾಹತು ಬೆಂಗಳೂರಿನಲ್ಲಿ ತಮ್ಮ ಸಮುದಾಯದ ಸರ್ವತೋಮುಖ ಅಭಿವೃದ್ಧಿ ಪಡಿಸುವ ನಿಟ್ಟಿನಲ್ಲಿ ವಸಾಹತು ಕಾಲಘಟ್ಟದ ಕೊನೆಯ ಹಂತದಲ್ಲಿ ಜಾಗೃತಿಗೊಂಡ ವರ್ತಕ ಸಮುದಾಯವಾಗಿದೆ. ಈ ಸಂಘದ ಕಾರ್ಯ ಚಟುವಟಿಕೆಗಳು ಇತ್ತೀಚೆಗೆ ಚುರುಕುಗೊಳ್ಳುತ್ತಿರುವುದನ್ನು ನಾವು ಗಮನಿಸಬಹುದಾಗಿದೆ.

**ತಿಗಳರ ಸಂಘ**

ವಸಾಹತು ಬೆಂಗಳೂರಿನಲ್ಲಿ ಪ್ರಧಾನವಾಗಿ ಧಾರ್ಮಿಕ ಕಾರ್ಯವ್ಯಾಪ್ತಿಯ ಸಲುವಾಗಿ ತಿಗಳರ ಸಂಘವು ಸ್ಥಾಪನೆಗೊಂಡಿತು. ಧರ್ಮರಾಯನ ದೇವಾಲಯವೇ ಸಂಘದ ಮೂಲ ಕೇಂದ್ರವಾಗಿದ್ದು, ೧೮೧೧ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಬೆಂಗಳೂರು ನಗರದ ಕರಗ ಉತ್ಸವಕ್ಕೆ ಭೇಟಿಕೊಟ್ಟರು.[೩೧] ರಾಜ ಪ್ರಭುತ್ವವು ಧಾರ್ಮಿಕ ಚಟುವಟಿಕೆಗಾಗಿ ನಾಲ್ವಡಿ ಕೃಷ್ಣರಾಜ ಒಡೆಯರ್ ಜಮೀನನ್ನು ದಾನವಾಗಿ ನೀಡಿದರು. ಸ್ವಾತಂತ್ರ್ಯೋತ್ತರ ಬೆಂಗಳೂರಿನ ಕಾಲದಲ್ಲಿ ಅಂದರೆ ೧೯೫೦-೬೦ರ ದಶಕದಲ್ಲಿ ಸಂಘ ಕಟ್ಟುವ ಬಗೆಗೆ ಕಾರ್ಯ ಚಟುವಟಿಕೆಗಳು ಕೈಗೊಂಡ ತಿಗಳರ ಸಮುದಾಯವು ತಿಗಳರ ಸಂಘವನ್ನು ಸ್ಥಾಪಿಸಿ ಪ್ರಭುತ್ವದಿಂದ ನೊಂದಣಿಯನ್ನು ಮಾಡಿಕೊಂಡಿತು.[೩೨] ಆದರೂ ಸಹ ವಸಾಹತು ಬೆಂಗಳೂರಿನ ಕಾಲಘಟ್ಟದಲ್ಲಿ ಧಾರ್ಮಿಕ ಸಂಘಟನೆಯಾಗಿ ತಮ್ಮ ವೃತ್ತಿ ಬಾಂಧವರಲ್ಲಿ ಏಕತೆಯನ್ನು, ಸಹಕಾರ-ಸಹಬಾಳ್ವೆಯ ಮನೋಭಾವನೆಯನ್ನು ಮೂಡಿಸುವಲ್ಲಿ ತಿಗಳರ ಸಂಘವು

ಪ್ರಮುಖ ಪಾತ್ರ ವಹಿಸಿದೆ ಮತ್ತು ವಹಿಸುತ್ತಾ ಬಂದಿದೆ. ಆ ನಿಟ್ಟಿನಲ್ಲಿ ತಮ್ಮ ವೃತ್ತಿ ಬಾಂಧವರ ಸರ್ವತೋಮುಖ ಅಭಿವೃದ್ಧಿಗಾಗಿ ಧರ್ಮಛತ್ರ, ಕಲ್ಯಾಣ ಮಂಟಪವನ್ನು ಧರ್ಮರಾಯ ದೇವಾಲಯದ ಸಮೀಪ ಸ್ಥಾಪಿಸಿರುವುದು ಸಾಕ್ಷಿಯಾಗಿದೆ. ಇತ್ತೀಚಿನ ದಿನಗಳಲ್ಲಿ ತಿಗಳರ ಸಂಘವು ಶೈಕ್ಷಣಿಕ ಸಂಸ್ಥೆಗಳು, ಸಹಕಾರಿ ಬ್ಯಾಂಕ್ ಇತ್ಯಾದಿ ಇನ್ನಿತರ ತಮ್ಮದೇ ಸಂಘ-ಸಂಸ್ಥೆಗಳನ್ನು ಸ್ಥಾಪಿಸಿದೆ. ತಮ್ಮ ಸಮುದಾಯದವರ ಅಭಿವೃದ್ಧಿಗಾಗಿ ತಿಗಳ ಸಮುದಾಯದ ಸಂಘ-ಸಂಸ್ಥೆಗಳು ಬೆಂಗಳೂರು ನಗರ ಮತ್ತು ಬೆಂಗಳೂರು ಗ್ರಾಮಾಂತರ ಪ್ರದೇಶದಲ್ಲಿಯೂ ಸಹ ಸಂಘ ಸ್ಥಾಪಿಸಿ ಕಾರ್ಯನಿರ್ವಹಿಸುತ್ತಿದೆ. ಪ್ರಜಾಪ್ರಭುತ್ವ ಪ್ರಭುತ್ವದಿಂದ ಹಲವು ಸೌಲಭ್ಯಗಳನ್ನು ಪಡೆಯಲು ರಾಜ್ಯಮಟ್ಟದ ಸಭೆ-ಸಮಾರಂಭಗಳನ್ನು ಏರ್ಪಡಿಸುವಲ್ಲಿ ಯಶಸ್ವಿಯಾಗಿದೆ. ತಿಗಳರ ಸಂಘವು ಧಾರ್ಮಿಕ ಮತ್ತು ಸಾಂಸ್ಕೃತಿಕ ಕೊಡುಗೆಯನ್ನು ನೀಡಿ ಬೆಂಗಳೂರು ನಗರದ ಕರಗ ರಾಜ್ಯಮಟ್ಟದಲ್ಲೇ ಪ್ರಸಿದ್ಧಿಯನ್ನು ಪಡೆಯುವಂತೆ ಮಾಡಿದೆ.

**ಕುರುಬರ ಸಂಘ**

೧೯ನೇ ಶತಮಾನದಲ್ಲಿ ಪಾಶ್ಚಾತ್ಯ ಶಿಕ್ಷಣ ಕ್ರಮ, ಕಾನೂನಿನ ಆಡಳಿತ, ಸಾರಿಗೆ ಸಂಪರ್ಕ ಇವೇ ಮೊದಲಾದ ವಸಾಹತು ನೀತಿಗಳು ಜನರಲ್ಲಿ ತಮ್ಮ ಸ್ಥಾನಮಾನಗಳ ಬಗ್ಗೆ ಚಿಂತಿಸುವಂತೆ ಮಾಡಿತು. ಧರ್ಮ ಹಾಗೂ ನ್ಯಾಯದ ಹೆಸರಿನಲ್ಲಿ ಕೆಲವೇ ಜನರು ಪ್ರಭುತ್ವದ ಸೌಲಭ್ಯಗಳನ್ನು ಅನುಭವಿಸುತ್ತಿದ್ದುದು ಅನ್ಯಾಯವಾಗಿ ತೋರಿತಲ್ಲದೆ ಅದನ್ನು ಪ್ರತಿಭಟಸಲು ಸಾರ್ವಜನಿಕ ಚಳುವಳಿ ಪ್ರಾರಂಭವಾಯಿತು. ಈ ತೆರನಾದ ಅಂಶಗಳು ಕುರುಬ ಸಮುದಾಯದವರನ್ನು ಪ್ರಭಾವಿಸದೇ ಇರಲಿಲ್ಲ. ಫಲವಾಗಿ ನೀಲಗಿರಿ ಎಸ್. ಗಿರಿಯಪ್ಪ, ನೀಲಗಿರಿ ಜೆ. ಸಂಜೀವಯ್ಯ, ಜೆ. ಮುನಿಯಪ್ಪ, ಬಿ. ವೆಂಕಟಪ್ಪ, ಹುಲಿಯಪ್ಪ, ರಾಮಪ್ಪ ನೀಲಿ ನರಸಿಂಹಯ್ಯ, ಎಲೆ ಅಂಗಡಿ ತಾಯಪ್ಪ, ಮೈಸೂರ ಅಕ್ಕಿ ಮಂಡಿ ದೊಡ್ಡಯ್ಯ, ತಮ್ಮಯ್ಯ ಮತ್ತು ಜವರಪ್ಪ ಸಹೋದರರು ಮುಂತಾದ ಕುರುಬ ಸಮುದಾಯದವರು ೧೯೨೧ರಲ್ಲಿ ಅನೌಪಚಾರಿಕವಾಗಿ ಕುರುಬ ಸಂಘ ಸ್ಥಾಪಿಸಿದರು. ಎರಡು ವರ್ಷಗಳ ನಂತರ ಜುಲೈ ೧೦-೧೯೨೩ರಂದು ಸಂಘವು ಪ್ರಭುತ್ವದಿಂದ ಅಧಿಕೃತವಾಗಿ ನೋಂದಣಿಗೊಂಡಿತು.[೩೩]

ಸ್ಥಾಪಕ ಅಧ್ಯಕ್ಷರಾಗಿ ಶ್ರೀ ನೀಲಗಿರಿ ಎಸ್. ಗಿರಿಯಪ್ಪ ಹಾಗೂ ಸ್ಥಾಪಕ ಕಾರ್ಯದರ್ಶಿಯಾಗಿ ಶ್ರೀ ಜೆ. ಮುನಿಯಪ್ಪ ಕುರುಬರ ಸಂಘದ ಕಾರ್ಯಚಟುವಟಿಕೆಗಳಿಗೆ ಭದ್ರ ಬುನಾದಿ ಹಾಕಿದರಲ್ಲದೆ ಸಂಘ ಸರಿಯಾದ ದಿಕ್ಕಿನಲ್ಲಿ ನಡೆಯುವಂತೆ ಬಹುವಾಗಿ ಶ್ರಮಿಸಿದರು. ೧೯೩೦ರಲ್ಲಿ ಸಂಘದ ದ್ವಿತೀಯ ಅಧ್ಯಕ್ಷರಾಗಿ ಆಯ್ಕೆಗೊಂಡ ಶ್ರೀ ನೀಲಗಿರಿ ಸಂಜಿವಯ್ಯನವರು ಸಂಘದ ಕಾರ್ಯ ಚಟುವಟಿಕೆಗಳನ್ನು ಮುಂಬೈ ಕರ್ನಾಟಕದ ಪ್ರದೇಶಕ್ಕೆ ವಿಸ್ತರಿಸುವ ಮೂಲಕ ಸಂಘದ ವ್ಯಾಪ್ತಿಯನ್ನು ವಿಸ್ತರಿಸಿದರು. ಪ್ರಥಮ ಬಾರಿಗೆ ಪ್ರಜಾಪತಿನಿಧಿ ಸಭೆಗೆ ಸದಸ್ಯರಾಗಿ ಸಂಜೀವಯ್ಯನವರು ಆಯ್ಕೆಗೊಂಡು

ಸಮುದಾಯದವರ ಪರವಾಗಿ ಶ್ರಮಿಸಿದರು. ಸಂಘದ ಮುಖ್ಯ ಧ್ಯೇಯಗಳನ್ನು ತಮ್ಮ ಸಮುದಾಯವರಿಗೆ ತಿಳಿಯ ಪಡಿಸುವ ನಿಟ್ಟಿನಲ್ಲಿ ಕುರುಬರ ಪತ್ರಿಕೆಯನ್ನು ಪ್ರಕಟಿಸಲಾಯಿತು.[೩೪]

ಸಮುದಾಯದ ಸರ್ವತೋಮುಖ ಅಭಿವೃದ್ಧಿ ಶಿಕ್ಷಣದ ಮೂಲಕವೇ ಸಾಧ್ಯವೆಂದು ಅರಿತ ಸಮುದಾಯದ ಹಿರಿಯರು ವಿದ್ಯಾಭ್ಯಾಸಕ್ಕೆ ಪೂರಕವಾಗಿರುವ ನಿಟ್ಟಿನಲ್ಲಿ ಮತ್ತು ಸಂಘದ ಕಾರ್ಯಕಲಾಪಗಳನ್ನು ಸಜ್ಜುಗೊಳಿಸುವ ದಿಸೆಯಲ್ಲಿ ಬೆಂಗಳೂರಿನ ಗಾಂಧಿನಗರದಲ್ಲಿ ೧೨-೨-೧೯೪೨ರಂದು ಮೈಸೂರು ದಿವಾನ ಎನ್ ಮಾಧವರಾವ್ ಅವರಿಂದ ಕುರುಬರ ಸಂಘದ ಹಾಸ್ಟೆಲ್ ಕಟ್ಟಡದ ಶಂಕು ಸ್ಥಾಪನೆ ಮಾಡಿಸಿದರು. ಎರಡು ವರ್ಷದಲ್ಲಿಯೇ ಕಟ್ಟಡವನ್ನು ನಿರ್ಮಿಸಿ ಸಮುದಾಯದವರಿಗೆ ಶಿಕ್ಷಣ ಸೌಲಭ್ಯವನ್ನು ಪಡೆಯಲು ಅವಕಾಶ ಕಲ್ಪಿಸಿಕೊಡಲಾಯಿತು.[೩೫]

## ಗೊಲ್ಲರ ಸಂಘ

೧೯೨೪ರಲ್ಲಿ ಗೊಲ್ಲರ ಸಂಘವನ್ನು ಶ್ರೀ. ಕೆ ಕುಪ್ಪುಸ್ವಾಮಿ, ಮಾಗಡಿ ರಂಗಪ್ಪ, ದುರ್ಗದ ಕೃಷ್ಣಪ್ಪ ಸ್ಥಾಪಿಸಿದರು. ಸಂಘದ ಕಛೇರಿಯನ್ನು ಸ್ಥಾಪಿಸಲು ಸ್ಥಳಾವಕಾಶವಿಲ್ಲದ ಕಾರಣ ಬೆಂಗಳೂರಿನ ಗಾಂಧಿ ನಗರದಲ್ಲಿದ್ದ ಯಾದವ ಹಾಸ್ಟೆಲಿನಲ್ಲಿಯೇ ಅದರ ಕಾರ್ಯಚಟುವಟಿಕೆಯನ್ನು ಮುಂದುವರಿಸ ಲಾಯಿತು.[೩೬] ಸಂಘವು ಸ್ವಂತ ಕಟ್ಟಡವನ್ನು ಹೊಂದಲು ಪ್ರಯತ್ನಗಳು ನಡೆದು ಸಂಘದ ಸದಸ್ಯರಲ್ಲಿ ಐಕ್ಯಮತ ಮತ್ತು ಕಾರ್ಯಕಾರಿ ಸಮಿತಿ ಸದಸ್ಯರ ಸಹಕಾರದ ಕೊರತೆಯಿಂದ ಕೆಲಸ ಅರ್ಧಕ್ಕೆ ನಿಂತುಹೋಯಿತು.[೩೭] ಅದರೂ ಸಹ ಮಹನೀಯರು ಜನಾಂಗದ ಒಳಿತಿಗಾಗಿ ಕೈಗೊಂಡ ಸೇವಾ ಕರ್ತವ್ಯಗಳಿಂದಾಗಿ ಜನಾಂಗದ ಯುವಕರು ಜಾಗೃತರಾಗುವಲ್ಲಿ ಯಶಸ್ವಿಯಾದರು. ಇದರಿಂದಾಗಿ ವಿದ್ಯಾವಂತ ಜನಾಂಗದ ಯುವಕರು ರಾಜ್ಯದ ಮೂಲೆ ಮೂಲೆಗಳಲ್ಲಿ ಸಂಚರಿಸಿ ಯಾದವರನ್ನು ಸಂಘಟಿಸಲು ಪೂರಕವಾದ ವಾತಾವರಣವನ್ನು ನಿರ್ಮಿಸತೊಡದರು.[೩೮] ಸಂಘಗಳನ್ನು ಸ್ಥಾಪಿಸಿ ವಿದ್ಯಾರ್ಥಿನಿಲಯಗಳ ಸ್ಥಾಪನೆಗೆ ಕಾರಣರಾಗಿ, ಅಲ್ಲಲ್ಲಿ ಸಮುದಾಯದ ಸಮ್ಮೇಳನಗಳನ್ನು ನಡೆಸಿ, ಶಿಕ್ಷಣ, ರಾಜಕೀಯ ಮತ್ತು ಸಂಘಟನೆಯ ಅರಿವು ಮೂಡುವಂತೆ ಪ್ರೇರೇಪಿಸಿದರು.[೩೯]

## ಧಾನ್ಯ ವರ್ತಕರ ಸಂಘ

ಧಾನ್ಯ ವರ್ತಕರ ಸಂಘವು ೧೯೨೦ರಲ್ಲಿ ಸ್ಥಾಪಿತಗೊಂಡಿತು. ವ್ಯಾಪಾರವನ್ನು ವ್ಯವಸ್ಥೆಗೊಳಿಸಿ, ಅಳತೆ ಮತ್ತು ತೂಕವನ್ನು ಉತ್ತಮಪಡಿಸಿ ಪ್ರಭುತ್ವದ ಸಹಕಾರವನ್ನು ಪಡೆದು ವರ್ತಕರ ಸರ್ವತೋಮುಖ ಅಭಿವೃದ್ಧಿಯ ಮುಖ್ಯ ಉದ್ದೇಶವನ್ನು ಹೊಂದಿ ಈ ಸಂಘಟನೆಯು ರಚನೆಯಾಯಿತು. ಆಮದು ಮತ್ತು ರಫ್ತು ವ್ಯವಹಾರದಲ್ಲಿ ರೈಲ್ವೆ ಇಲಾಖೆ, ಪ್ರಭುತ್ವದ ನೀತಿಯು ವರ್ತಕರ ಪರವಾಗಿ ಇರುವಂತೆ ನೋಡಿಕೊಳ್ಳುವುದು ಹಾಗೂ ಧಾನ್ಯ ವರ್ತಕ ನಡುವೆ ಯಾವುದೇ ನಕಾರಾತ್ಮಕವಾದ

ಪೈಪೋಟಿಯಾಗದಂತೆ ನೋಡಿಕೊಳ್ಳುವುದು ಇದರ ಉದ್ದೇಶವಾಗಿತು. ಈ ಸಂಘವು ಸರ್ಕಾರದ ಅಳತೆ ಮತ್ತು ತೂಕದ ಮಾರಾಟದ ಮಧ್ಯವರ್ತಿಗಳಂತೆ ಕಾರ್ಯ ನಿರ್ವಹಿಸಿತು. ವರ್ತಕರಿಗೆ ಧನ ಸಹಾಯವನ್ನು ಮಾಡುವುದು. ಧಾನ್ಯ ವರ್ತಕರ ಸಂಘದ ಧ್ಯೇಯೊದ್ದೇಶಗಳಾಗಿದ್ದವು. ಈ ಹಿನ್ನೆಲೆಯಲ್ಲಿ ಧಾನ್ಯ ವರ್ತಕರಿಗೆ ಹಣಕಾಸಿನ ಸಹಕಾರವನ್ನು ನೀಡುವ ಸಲುವಾಗಿ ಸಂಘವು ಮಂಡಿ ಹರಿಯಣ್ಣನವರ ನೇತೃತ್ವದಲ್ಲಿ ಧಾನ್ಯ ವರ್ತಕರ ಸಹಕಾರ ಸಂಘವನ್ನು ೧೯೨೭ರಲ್ಲಿ ಸ್ಥಾಪಿಸಿತು. ಇಂದಿಗೂ ಧಾನ್ಯ ವರ್ತಕರ ಸಹಕಾರ ಸಂಘವು ಕಾರ್ಯವನ್ನು ನಿರ್ವಹಿಸುತ್ತಿದೆ.[೪೦]

ಹೀಗೆ ವಿವಿಧ ಸಮುದಾಯಗಳಿಗೆ ಸೇರಿದ ಉತ್ಪಾದನಾ ಮತ್ತು ವಿನಿಮಯ ವರ್ತಕ ಸಮುದಾಯಗಳು ರಾಜಕೀಯ, ಸಾಮಾಜಿಕ, ಆರ್ಥಿಕ ಕ್ಷೇತ್ರಗಳಲ್ಲಿ ತಮ್ಮ ತಮ್ಮ ವೃತ್ತಿ ಬಾಂಧವರ ಸರ್ವತೋಮುಖ ಅಭಿವೃದ್ಧಿಯ ಹಿನ್ನೆಲೆಯಲ್ಲಿ ತಮ್ಮವರನ್ನು ಸಂಘಟಿಸುವ ಸಲುವಾಗಿ ಸಂಘಗಳನ್ನು ರಚಿಸಿಕೊಂಡವು. ೧೯೦೪ರಲ್ಲಿ ವೀರಶೈವರ ಸಂಘ(ಬಣಜಿಗರ ಸಂಘ), ೧೯೨೭ ರಲ್ಲಿ ಮೊದಲಿಯಾರರ ಸಂಘ ಮೊದಲಾದ ಸಂಘಗಳು ಸ್ಥಾಪನೆಗೊಂಡವು. ಈ ಎಲ್ಲಾ ಸಂಘಗಳ ಮುಖ್ಯ ಉದ್ದೇಶಗಳು ಒಂದೇ ತೆರನಾಗಿ ಕಂಡುಬರುತ್ತದೆ. ಸಂಘಗಳ ಸ್ಥಾಪನೆಯ ಸ್ವರೂಪದಲ್ಲಿ ಮಾತ್ರ ಭಿನ್ನತೆಯನ್ನು ಕಾಣಬಹುದಾಗಿದೆ. ಕೆಲವು ಸಂಘಗಳು ಧಾರ್ಮಿಕ ಹಿನ್ನೆಲೆಯಲ್ಲಿ ಸ್ಥಾಪನೆಗೊಂಡಿದ್ದರೆ, ಇನ್ನೂ ಕೆಲವು ಸಂಘಗಳು ತಮ್ಮ ಕುಲಬಾಂಧವರ ಅಭಿವೃದ್ಧಿಯ ಉದ್ದೇಶದಿಂದ ಸ್ಥಾಪನೆಗೊಂಡಿರುವ ಸ್ವರೂಪದ ಅಂಶಗಳನ್ನು ಕಾಣಬಹುದಾಗಿದೆ.

### ಬೆಂಗಳೂರು ಟ್ರೇಡರ್ಸ್ ಅಸೋಸಿಯೇಷನ್ಸ್

೧೮೪೯ರಲ್ಲಿ ಬೆಂಗಳೂರಿನ ಕೆಲವು ಡಚ್, ಫ್ರೆಂಚ್, ಇಂಗ್ಲಿಶ್ ವರ್ತಕರ ಸಹಾಯದಿಂದ ಬೆಂಗಳೂರು ಟ್ರೇಡರ್ಸ್ ಅಸೋಸಿಯೇಷನ್ ಸ್ಥಾಪಿತಗೊಂಡಿತು.[೪೧] ಈ ಸಂಘವನ್ನು ಪ್ರೋತ್ಸಾಹಿಸುವ ನೆಲೆಯಲ್ಲಿ ಮೈಸೂರು ಪ್ರಭುತ್ವಕ್ಕೆ ವಿದೇಶಿಯ ವಾಣಿಜ್ಯವನ್ನು ಅಭಿವೃದ್ಧಿ ಪಡಿಸಲು ಉತ್ತಮ ಬಂದರಿನ ಅಗತ್ಯವಿತ್ತು. ಇಲ್ಲಿಯವರೆಗೆ ವೀದೇಶಿ ವಾಣಿಜ್ಯವು ಬ್ರಿಟಿಶ್ ಸಾಮ್ರಾಜ್ಯಶಾಹಿ ಪ್ರಭುತ್ವದ ಅಧೀನದಲ್ಲಿದ್ದ ಮದ್ರಾಸ್ ಮತ್ತು ಬಾಂಬೆ ಬಂದರಿನ ಮೂಲಕ ನಡೆಯುತ್ತಿತ್ತು. ಆದ್ದರಿಂದ ಮೈಸೂರು ಪ್ರಭುತ್ವವು ಭಟ್ಕಳವನ್ನು ಉತ್ತಮ ಪಡಿಸಲು ಪ್ರಯತ್ನಿಸಿದಾಗ ಬ್ರಿಟಿಶ್ ಸಾಮ್ರಾಜ್ಯಶಾಹಿ ಪ್ರಭುತ್ವ ಅದಕ್ಕೆ ಒಪ್ಪಿಗೆ ನೀಡದೆ ನಿರಾಕರಿಸಿತು.[೪೨] ಬ್ರಿಟಿಶ್ ಸಾಮ್ಯಾಜ್ಯಶಾಹಿ ಪ್ರಭುತ್ವದ ಉದ್ದೇಶವೆನಿತ್ತೆಂದು ಇದರಿಂದ ತಿಳಿಯುತ್ತದೆ. ತನ್ನ ವಾಣಿಜ್ಯದಲ್ಲಿ ಪ್ರತಿಸ್ಪರ್ಧಿಗಳನ್ನು ಬೆಳೆಯಲು ಎಳ್ಳಷ್ಟೂ ಅವಕಾಶಗಳನ್ನು ನೀಡುತ್ತಲೇ ಇರಲಿಲ್ಲ. ಇದರಿಂದಾಗಿ ಈ ಮಂಡಳಿ ಮುಂದೆ ಆರ್ಥಿಕ ಚಟುವಟಿಕೆಯಲ್ಲಿ ಬ್ರಿಟಿಶ್ ಸರ್ಕಾರದ ಅಧೀನದಲ್ಲಿ ಕಾರ್ಯ ನಿರ್ವಹಿಸಲು ಮುಂದಾಯಿತು. ೧೯೩೦ರ ಬೆಂಗಳೂರು ದಂಡು ಪ್ರದೇಶದ ಆಡಳಿತ ವರದಿಯಲ್ಲಿ ಉಲ್ಲೇಖಿಸಿರುವಂತೆ ಅಲ್ಲಿಯ ಸ್ಥಳೀಯ ಆಡಳಿತವನ್ನು ನಿರ್ವಹಿಸಲು

ನೇಮಿಸುತ್ತಿದ್ದ ಪುರಸಭೆಯ ಸದಸ್ಯರಲ್ಲಿ, ಆಂಗ್ಲೋ-ಇಂಡಿಯನ್, ಯುರೋಪಿಯನ್ನರೊಂದಿಗೆ ಬೆಂಗಳೂರು ಟ್ರೇಡರ್ಸ್ ಅಸೋಸಿಯೆಷನ್ನಿನ ಇಬ್ಬರು ಸದಸ್ಯರನ್ನು ನೇಮಿಸಿಕೊಳ್ಳುತ್ತಿದ್ದರು ಎಂಬ ವಿಚಾರವು ಈ ಸಂಘಟನೆಯು ಸ್ಥಳೀಯ ಆಡಳಿತದಲ್ಲಿ ವಹಿಸಿದ್ದ ಪಾತ್ರದ ಬಗ್ಗೆ ತಿಳಿಸುತ್ತದೆ.[೪೩] ಈ ಸಂಘದ ಉದ್ದೇಶ, ಕಾರ್ಯವೈಖರಿಗಳ ಬಗೆಗೆ ಸರ್ಕಾರಿ ದಾಖಲೆಗಳ ಮಾಹಿತಿಯು ಕೊರೆತೆಯಿರುವುದರಿಂದಾಗಿ ಸ್ಪಷ್ಟವಾಗಿ ತಿಳಿಯಲು ಸಾಧ್ಯವಾಗಿಲ್ಲ. ಒಟ್ಟಿನಲ್ಲಿ ಆರಂಭದಲ್ಲಿ ಬೆಂಗಳೂರು ಟ್ರೇಡರ್ಸ್ ಅಸೋಸಿಯೇಷನ್ ಸಂಘಟನೆಯು ಸ್ಥಳೀಯ ಪ್ರಭುತ್ವದ ಬೆಂಬಲವನ್ನು ಪಡೆದು ನಂತರ ಬ್ರಿಟಿಶ್ ಪ್ರಭುತ್ವದ ಬೆಂಬಲ ಪಡೆಯಲು ಪ್ರಯತ್ನಿಸಿತು. ನಂತರದಲ್ಲಿ ಮೈಸೂರು ಛೇಂಬರ್ ಆಫ್ ಕಾಮರ್ಸ್‌ನ ಸದಸ್ಯತ್ವವನ್ನು ಪಡೆಯಿತು ಎಂಬ ವಿಚಾರಗಳು ಮೈಸೂರು ಛೇಂಬರ್ ಆಫ್ ಕಾಮರ್ಸ್‌ನ ಸದಸ್ಯರ ಪಟ್ಟಿಯಿಂದ ತಿಳಿಯುತ್ತದೆ.[೪೪]

## ೫.೪. ಮೈಸೂರು ಛೇಂಬರ್ ಆಫ್ ಕಾಮರ್ಸ್

ಮೈಸೂರು ಸಂಸ್ಥಾನದಲ್ಲಿ ಛೇಂಬರ್ ಆಫ್ ಕಾಮರ್ಸ್ ರೂಪುಗೊಳ್ಳುವ ನೆಲೆಯಲ್ಲಿ ಯುರೋಪಿನರಿಗಿಂತ ಸ್ಥಳೀಯ ಆಡಳಿತ ವರ್ಗದ ಪಾತ್ರವೇ ಹೆಚ್ಚಾಗಿದೆ. ವಸಾಹತುಶಾಹಿ ಆಳ್ವಿಕೆಯಲ್ಲಿ ಸ್ಥಳೀಯ ವರ್ತಕರ ಪ್ರಾಮುಖ್ಯತೆ ಕುಸಿಯುತ್ತಾ ಸಾಗಿತು. ೨೦ನೇ ಶತಮಾನದ ಆರಂಭದ ಹೊತ್ತಿಗೆ ವಿಸ್ತಾರವಾದ ಅಂತಾರಾಷ್ಟ್ರೀಯ ಮಾರುಕಟ್ಟೆ ಸ್ಪರ್ಧೆಗಳಲ್ಲಿ ಮತ್ತು ಬದಲಾದ ವಾಣಿಜ್ಯ ನೀತಿಯ ಆರ್ಥಿಕತೆ ಲಾಭವನ್ನು ಪಡೆಯುವಲ್ಲಿ ಸ್ಥಳೀಯ ವ್ಯಾಪಾರ ವಾಣಿಜ್ಯೋದ್ಯಮಿಗಳು ಹಿಂದೆ ಬಿದ್ದರು.[೪೫] ಮೈಸೂರು ಸಂಸ್ಥಾನದ ಪ್ರಭುತ್ವವು ಆ ದಿಸೆಯಲ್ಲಿ ವರ್ತಕರ ಕ್ಷೇಮಾಭಿವೃದ್ಧಿಗಾಗಿ ಕಾರ್ಯ ನಿರ್ವಹಿಸುವ ಉಸ್ತುವಾರಿಯನ್ನು ವಹಿಸಿಕೊಂಡಿತು. ಇದಕ್ಕೆ ಪೂರಕವಾಗಿ ಅಂದಿನ ಮೈಸೂರು ಒಡೆಯರು ಮತ್ತು ದಿವಾನರ ಭಾಷಣಗಳಲ್ಲಿ ಈ ಚಿಂತನೆಗಳನ್ನು ಕಾಣಬಹುದಾಗಿದೆ. ಮೈಸೂರು ಸಂಸ್ಥಾನದ ವರ್ತಕರಿಗೆ ಸಾಂಪ್ರದಾಯಿಕ ಆರ್ಥಿಕತೆಯಿಂದ ಹೊರಬಂದು ಆಧುನಿಕ ಆರ್ಥಿಕತೆಯ ಅರಿವನ್ನು ಮೂಡಿಸಲು ೧೯೧೧ರಲ್ಲಿ ಎಕನಾಮಿಕ್ಸ್ ಕೌನ್ಸಿಲ್ ಸ್ಥಾಪನೆಯಾಯಿತು. ಇದು ಕೌನ್ಸಿಲ್ ಸಭೆಗಳನ್ನು ಕರೆಯುವ ಮತ್ತು ಆಧುನಿಕ ಮಾರುಕಟ್ಟೆಯ ವರದಿಯನ್ನು ಪ್ರಕಟಿಸುವ ಕಾರ್ಯನಿರ್ವಹಿಸುತ್ತಿತ್ತು. ಈ ಉದ್ದೇಶದಿಂದ ನಿಯತಕಾಲಿಕೆಗಳನ್ನು ಹೊರ ತಂದಿತು. ಆದರೆ ಪರಿಣಾಮಕಾರಿಯಾಗಿ ವರ್ತಕ ಸಮುದಾಯದೊಂದಿಗೆ ಒಟ್ಟಾಗಿ ಕಾರ್ಯನಿರ್ವಹಿಸಲು ಸಾಧ್ಯವಾಗಲಿಲ್ಲ. ಅದಷ್ಟೆ ಅಲ್ಲದೆ, ಅದು ಎಲ್ಲರನ್ನೂ ತಲುಪುವಲ್ಲಿ ವಿಫಲವಾಯಿತು. ಜೊತೆಗೆ ಸ್ಥಳೀಯ ವರ್ತಕ ಸಮುದಾಯಗಳು 'ಈಗಾಗಲೇ ಹಲವೆಡೆ ಸ್ಥಾಪನೆಗೊಂಡಿದ್ದ ಯುರೋಪಿನ ಮಾದರಿಯ ಛೇಂಬರ್ ಆಫ್ ಕಾಮರ್ಸ್‌ನ್ನು ಮೈಸೂರಿನಲ್ಲಿಯೂ ಸ್ಥಾಪಿಸುವ ಹಾಗೂ ಇದಕ್ಕೆ ಈಗಾಗಲೇ ಕಾರ್ಯ ನಿರ್ವಹಿಸುತ್ತಿದ್ದ ಇನ್ನಿತರ ಛೇಂಬರ್‌ನೊಂದಿಗೆ ಸಂಬಂಧವನ್ನು ಏರ್ಪಡಿಸಲು ಒತ್ತಡ ಹಾಕುತ್ತಿತ್ತು. ಇದು ಸ್ಥಳೀಯ ವರ್ತಕರಿಗೆ ಜಾಗತಿಕ ಮಾರುಕಟ್ಟೆಯ

ಅರಿವು ಮೂಡಿಸುವುದು ಮತ್ತು ಬದಲಾದ ಮಾರುಕಟ್ಟೆಯ ಕಾರ್ಯವೈಖರಿಯ ತರಬೇತಿಯನ್ನು ನೀಡುವ ಹಾಗೂ ವರ್ತಕರೇ ಸ್ವತಃ ನೇರವಾಗಿ ಭಾಗವಹಿಸುವ ಉದ್ದೇಶದಿಂದ ಸಂಘಟನೆಯೊಂದನ್ನು ಸ್ಥಾಪಿಸುವಂತೆ ಮೈಸೂರು ಪ್ರಭುತ್ವಕ್ಕೆ ಬೇಡಿಕೆಯನ್ನು' ಇಡುತ್ತಿದ್ದು ಪ್ರಭುತ್ವದ ಮೇಲೆ ಒತ್ತಡ ಹೇರುತ್ತಿದ್ದರು ಎಂದು ತೋರುತ್ತದೆ. ಪರಿಣಾಮವಾಗಿ ಮೈಸೂರು ಛೇಂಬರ್ ಆಫ್ ಕಾಮರ್ಸ್ ಸ್ಥಾಪನೆಯಾಯಿತು. ಈ ಸಂಘಟನೆಯ ನೇತೃತ್ವವನ್ನು ಮೈಸೂರು ಸಂಸ್ಥಾನದ ಸರ್ಕಾರ ವಹಿಸಿಕೊಳ್ಳುವ ಮೂಲಕ ಸ್ಥಳೀಯ ವರ್ತಕರಿಗೆ ಪೂರಕವಾದ ಬೆಂಬಲವನ್ನು ನೀಡಿತು. ಹಾಗೆ ಇದರ ಕಾರ್ಯವೈಖರಿ, ಆಡಳಿತ ಇನ್ನಿತರ ವಿಷಯಗಳಿಗೆ ಸಂಬಂಧಿಸಿದಂತೆ ಎಲ್ಲ ವಿಚಾರಗಳನ್ನು ಸ್ಥಳೀಯ ಮತ್ತು ಕೆಲವು ಆಂಗ್ಲೋ-ಇಂಡಿಯನ್ ವರ್ತಕರು ಒಟ್ಟಾಗಿ ನಿರ್ವಹಿಸುತ್ತಿದ್ದರು. ಸ್ಥಳೀಯ ವರ್ತಕರೆ ಪ್ರಭುತ್ವದ ಮೇಲೆ ಒತ್ತಡ ಹಾಕಿ ಜಾಗತಿಕ ಮಾರುಕಟ್ಟೆಯಲ್ಲಿ ಸ್ಪರ್ಧಿಸಲು ಪೂರಕವಾಗಿ ಸಹಾಯ ಮಾಡುವ ಸಂಘಟನೆಯೊಂದನ್ನು ನಿರ್ಮಿಸಿದ್ದು ವಿಶೇಷವಾಗಿದೆ.

ಛೇಂಬರ್ ಆಫ್ ಕಾಮರ್ಸ್‌ನ ಆರಂಭದ ಕಾಲದ ವಿಚಾರಗಳನ್ನು ಅರಿಯಲು ಅಂದಿನ ದಿವಾನರಾದ ಸರ್.ಎಂ. ವಿಶ್ವೇಶ್ವರಯ್ಯ ಅವರ ಭಾಷಣ ಪೂರಕವಾಗಿದೆ. ೧೯೧೪ರ ಅಕ್ಟೋಬರ್ ೭ರಂದು ನಡೆದ ಮೈಸೂರು ಎಕನಾಮಿಕ್ ಕಾನ್‌ಫರೆನ್ಸ್‌ನಲ್ಲಿ 'ಈ ಹಿಂದಿನಿಂದಲೂ ವರ್ತಕ ಸಮುದಾಯದವರು ಒಂದು ಸಂಘಟನೆಯನ್ನು ಸ್ಥಾಪಿಸಬೇಕೆಂದು ಬೇಡಿಕೆಯನ್ನುನಿಡುತ್ತಿದ್ದು ಮೈಸೂರು ಪ್ರಭುತ್ವ ಅದನ್ನು ಪರಿಗಣಿಸಿತು. ಅದನ್ನು ಕಾರ್ಯಗತಗೊಳಿಸುವ ನಿಟ್ಟಿನಲ್ಲಿ ಸರ್. ಆಲ್ಫೈಡ್ ಚಾಟರ್‌ಟನ್, ಮೈಸೂರ್ ಬ್ಯಾಂಕಿನ ಮ್ಯಾನೇಜರ್ ಮತ್ತು ದೊಡ್ಡ ಕೈಗಾರಿಕೋದ್ಯಮಿಯೂ ಆದ ಡಬ್ಲ್ಯೂ. ಸಿ. ರೋಸ್ ಮತ್ತು ಬೆಂಗಳೂರಿನ ಪ್ರಮುಖ ವರ್ತಕರಾದ ಬಿ.ಕೆ ಗರುಡಾಚಾರ್ ಮೊದಲಾದವರನ್ನು ಒಳಗೊಂಡ ಸಮಿತಿಯೊಂದನ್ನು ನೇಮಿಸಲಾಗಿದೆ' ಎಂದು ವಿವರಿಸಿರುವರು.[೬೬] ಈ ಸಮಿತಿಯು ೧೯೧೬ ಏಪ್ರಿಲ್ ೮ರಂದು ವರದಿಯನ್ನು ಸಲ್ಲಿಸಿತು. ಇದಕ್ಕೆ ಮೈಸೂರು ಪ್ರಭುತ್ವ ಏಪ್ರಿಲ್ ೨೫ರಂದು ಅನುಮೋದಿಸಿತು. ಏಪ್ರಿಲ್ ೨೬ರಂದು ಮೈಸೂರು ಬ್ಯಾಂಕ್ ಮ್ಯಾನೆಜರ್ ಮತ್ತು ಪ್ರಬಲ ವಾಣಿಜ್ಯೋದ್ಯಮಿಯಾದ ಡಬ್ಲ್ಯೂ. ಸಿ ರೋಸ್ ಬೆಂಗಳೂರಿನ ವರ್ತಕರಿಗೆ ಪ್ರಭುತ್ವದ ನಿಲುವನ್ನು ಮನವರಿಕೆ ಮಾಡಲು ಬೆಂಗಳೂರಿನ ಮೈಸೂರು ಬ್ಯಾಂಕ್ ಬಳಿ ಸಭೆ ಕರೆಯಲಾಯಿತು. ಈ ಸಮಾವೇಶಕ್ಕೆ ೩೯ ಜನ ವಿವಿಧ ವರ್ತಕ ಸಮುದಾಯಗಳ ಸದಸ್ಯರು ಭಾಗವಹಿಸಿದ್ದರು.[೬೭] ಮುಂದೆ ಬ್ರಿಟಿಶ್ ಇಂಪೀರಿಯಲ್ ಕೌನ್ಸಿಲ್ ಆಫ್ ಕಾಮರ್ಸ್‌ನ ಅಡಿಯಲ್ಲಿ ಮೈಸೂರು ಛೇಂಬರ್ ಆಫ್ ಕಾಮರ್ಸ್‌ನ್ನು ೧೯೧೬ ಮೇ ೮ರಂದು ಅಧಿಕೃತವಾಗಿ ಆರಂಭಿಸಲಾಯಿತು. ಬೆಂಗಳೂರು ಪೇಟೆಯ ಬಳಿ ಇರುವ ಮೈಸೂರು ಬ್ಯಾಂಕಿನ ಆವರಣದಲ್ಲಿ ಉದ್ಘಾಟನಾ ಕಾರ್ಯಕ್ರಮ ನೆರವೇರಿತು. ಮೈಸೂರು ರಾಜ್ಯದೆಲ್ಲೆಡೆಯಿಂದ ೫೦೦ಕ್ಕೂ ಹೆಚ್ಚು ವರ್ತಕ ಸಮುದಾಯಗಳು ಈ ಕಾರ್ಯಕ್ರಮದಲ್ಲಿ

ಭಾಗವಹಿದರು. ಈ ಸಂದರ್ಭದಲ್ಲಿ ಸರ್. ಎಂ. ವಿಶ್ವೇಶ್ವರಯ್ಯನವರ ಅಧ್ಯಕ್ಷ ಭಾಷಣದಲ್ಲಿರುವ ಕೆಲವು ಅಂಶಗಳು ಮುಖ್ಯವಾಗಿವೆ. ಅವುಗಳೆಂದರೆ 'ಸರ್ಕಾರವು ಛೇಂಬರ್ ಆಫ್ ಕಾಮರ್ಸ್ ಸ್ಥಾಪನೆಗೆ ಅದರ ಪ್ರಾಥಮಿಕ ವೆಚ್ಚಗಳನ್ನು ಭರಿಸಲು ೧೦೦೦ ರೂಪಾಯಿಗಳನ್ನು ನೀಡಲು ಮುಂದಾಯಿತು. ಇದರೊಂದಿಗೆ ಛೇಂಬರ್ ಸ್ಥಾಪನೆಗೊಂಡ ಕಾಲದಿಂದ ಮುಂದಿನ ಮೂರು ವರ್ಷಗಳ ಕಾಲ ೭೫೦ ರೂಪಾಯಿಗಳನ್ನು ವಂತಿಕೆಯಾಗಿ ನೀಡಲು ಒಪ್ಪಿದರು. ಜೊತೆಗೆ ಛೇಂಬರಿನ ಸದಸ್ಯರಲ್ಲಿ ಕನಿಷ್ಠ ೫೦ ಜನರನ್ನು ಬಹುಮತದ ಮೇರೆಗೆ ಆರಿಸಿ ಮೈಸೂರು ಎಕನಾಮಿಕ್ ಕಾನ್ಫರೆನ್ಸ್, ಬೆಂಗಳೂರು ನಗರ ಮುನಿಸಿಪಾಲಿಟಿ, ಕೈಗಾರಿಕೆ ಮತ್ತು ವಾಣಿಜ್ಯ ಸಮಿತಿಗೆ ನೇಮಿಸಲು ತಿಳಿಸಲಾಯಿತು. ಹಾಗೆ ಮುಂದಿನ ದಿನಗಳಲ್ಲಿ ಛೇಂಬರಿನ ಸದಸ್ಯರನ್ನು ಮೈಸೂರು ಪ್ರತಿನಿಧಿ ಸಭೆಯಲ್ಲಿ ಭಾಗವಹಿಸಲು ಅವಕಾಶ ಕಲ್ಪಿಸಲಾಗುವುದು ಎಂಬ ಆಶ್ವಾಸನೆಯನ್ನು ಸಹ ಈ ಸಂದರ್ಭದಲ್ಲಿ ನೀಡಿದರು' ಎಂಬುದು ಗಮನಾರ್ಹ.[೪೮] ಇವೆಲ್ಲವು ಇಪ್ಪತ್ತನೆ ಶತಮಾನದ ಆದಿ ಭಾಗದ ಹೊತ್ತಿಗೆ ಮೈಸೂರು ಸಂಸ್ಥಾನದ ವರ್ತಕರು ಟಿಪ್ಪು ಪತನದ ನಂತರ ಧೀರ್ಘ ಕಾಲದ ತಟಸ್ಥತೆಯಿಂದ ಹೊರಬಂದು ಆಧುನಿಕ ಸಂದರ್ಭದ ಜಾಗತಿಕ ವ್ಯಾಪಾರ ವಹಿವಾಟಿನಲ್ಲಿ ಸ್ಪರ್ಧಿಸಲು ಸಿದ್ಧರಾಗಿರುವುದನ್ನು ಬಿಂಬಿಸುತ್ತದೆ. ಮುಂದೆ ಸಾಮ್ರಾಜ್ಯಶಾಹಿ ವಿರುದ್ಧ ಸ್ವಾತಂತ್ರ್ಯ ಹೋರಾಟದಲ್ಲಿಯೂ ಈ ವರ್ಗದ ಪಾತ್ರವಿರುವುದು ಗಮನಾರ್ಹವಾಗಿದೆ.

### ಮೈಸೂರು ಛೇಂಬರ್ ಆಫ್ ಕಾಮರ್ಸ್‌ನ ಧ್ಯೇಯೋದ್ದೇಶ ಮತ್ತು ಕಾರ್ಯಗಳು

ಸದಸ್ಯರಲ್ಲಿ ಏಕತೆ ಮತ್ತು ಸ್ನೇಹ ಸಹಕಾರದ ಬೆಳವಣಿಗೆಗೆ ಪ್ರೋತ್ಸಾಹಿಸುವುದು. ವಾಣಿಜ್ಯ ವಹಿವಾಟುದಾರರ ರಕ್ಷಣೆ ಮತ್ತು ಬೆಳವಣಿಗೆಯನ್ನು ಪ್ರೋತ್ಸಾಹಿಸುವುದು. ಇವುಗಳಿಗೆ ಪೂರಕವಾಗಿ ಸರ್ಕಾರದ ನೀತಿಗಳನ್ನು ರೂಪಿಸುವ ಅಗತ್ಯಗಳನ್ನು ಸರ್ಕಾರದ ಗಮನಕ್ಕೆ ತರುವುದು. ವಾಣಿಜ್ಯ ವೃತ್ತಿಗಾರರ ಹಿತರಕ್ಷಣೆಗಾಗಿ ಸರ್ಕಾರ ಮತ್ತು ಇತರ ಪ್ರಾದೇಶಿಕ ಸಂಘ ಸಂಸ್ಥೆಗಳೊಂದಿಗೆ ಮಾತುಕತೆಗಳನ್ನು ನಡೆಸುವುದು.[೪೯]

ಈ ಮೇಲಿನ ಸಾಲುಗಳು ಛೇಂಬರ್ ಆಫ್ ಕಾಮರ್ಸ್‌ನ ಮುಖ್ಯ ಉದ್ದೇಶದ ಸಾರವಾಗಿದೆ. ಇದು ಸ್ಥಳೀಯ ವಾಣಿಜ್ಯೋದ್ಯಮಿಗಳು ಮತ್ತು ಪ್ರಭುತ್ವದ ನಡುವಿನ ಸಂಬಂಧದ ಸ್ವರೂಪವನ್ನು ಸಹ ಸೂಚಿಸುವುದು.

ಅದಷ್ಟೆ ಅಲ್ಲದೆ, ವ್ಯಾಪಾರ ವಾಣಿಜ್ಯದ ಮೂಲಭೂತ ಅಂಗಗಳಾದ ರಸ್ತೆ–ಸಾರಿಗೆ, ರೈಲ್ವೆ ಸಾರಿಗೆ ಅಭಿವೃದ್ಧಿ ಕಾರ್ಯಗಳನ್ನು ಚುರುಕುಗೊಳಿಸುವಂತೆ ಒತ್ತಾಯಿಸುವುದು. ವ್ಯಾಪಾರ–ವಾಣಿಜ್ಯ ಅಭಿವೃದ್ಧಿಗೆ ಪೂರಕವಾದ ತೆರಿಗೆ ಪದ್ಧತಿ, ಆಮದು–ರಫ್ತು, ಸುಂಕ, ಹಣಕಾಸಿನ ವಿನಿಮಯ

ವ್ಯವಸ್ಥೆಯನ್ನು ರೂಪಿಸುವಂತೆ ಒತ್ತಾಯಿಸುವುದು. ಬ್ಯಾಂಕಿಂಗ್ ವ್ಯವಸ್ಥೆ, ಕಾನೂನುಗಳ ಬಗೆಗೆ ತನ್ನ ಸದಸ್ಯರಿಗೆ ಸಲಹೆ–ಸೂಚನೆಗಳನ್ನು ನೀಡುವುದು, ಪ್ರಭುತ್ವ ಇದರ ಬಗೆಗೆ ಮೃದು ಧೋರಣೆಯನ್ನು ತೋರಿಸುವಂತೆ ನೋಡಿಕೊಳ್ಳುವ ಕಾರ್ಯಗಳನ್ನು ನಿರ್ವಹಿಸುವುದು, ಆಧುನಿಕ ಪರಿಸ್ಥಿತಿಗೆ ತಕ್ಕಂತೆ ಬದಲಾಗುತ್ತಿರುವ ಮಾರುಕಟ್ಟೆಯ ಬಗೆಗೆ ತನ್ನ ಸದಸ್ಯರಿಗೆ ವಿಶೇಷ ಉಪನ್ಯಾಸಗಳನ್ನು ಏರ್ಪಡಿಸುವುದು, ಕಾರ್ಯಗಾರ, ತರಬೇತಿಗಾರಗಳನ್ನು ಏರ್ಪಡಿಸುವುದು, ಹಾಗೂ ಈ ನಿಟ್ಟಿನಲ್ಲಿ ಹೊರರಾಜ್ಯಗಳಿಗೆ ಅಥವಾ ವಿದೇಶಗಳಿಗೆ ತನ್ನ ಸದಸ್ಯರನ್ನು ಆಯ್ಕೆ ಮಾಡಿ ಕಳುಹಿಸಿಕೊಡುವುದು, ಸಭೆ–ಸಮ್ಮೇಳನಗಳನ್ನು ಕರೆಯುವುದು, ವಾಣಿಜ್ಯ–ವಹಿವಾಟಿಗೆ ಸಂಬಂಧಿಸಿದಂತೆ ಅಂಕಿ–ಸಂಖ್ಯೆಗಳನ್ನು ದಾಖಲಿಸುವುದು, ಸಗಟು ವ್ಯಾಪಾರ ವ್ಯಾಜ್ಯಗಳನ್ನು ಬಗೆಹರಿಸುವುದು, ಮಾರುಕಟ್ಟೆ ಮತ್ತು ಸರ್ಕಾರ, ಸ್ಥಳೀಯ ಮಾರುಕಟ್ಟೆ ಮತ್ತು ಜಾಗತಿಕ ಮಾರುಕಟ್ಟೆ, ಮಾರುಕಟ್ಟೆ ಮತ್ತು ಸಾರಿಗೆ–ಸಂಪರ್ಕ, ಮಾರುಕಟ್ಟೆ ಮತ್ತು ಶಿಕ್ಷಣ ಸಂಬಂಧಿಸಿದಂತೆ ಎಲ್ಲ ಬಗೆಯ ಸೌಲಭ್ಯಗಳನ್ನು ಒದಗಿಸುವ ಕಾರ್ಯಗಳನ್ನು ನಿರ್ವಹಿಸುವುದು ಕೂಡ ಮುಖ್ಯ ಉದ್ದೇಶಗಳಾಗಿದ್ದವು. ಮತ್ತೊಂದು ರೀತಿಯಲ್ಲಿ ಹೇಳಬೇಕೆಂದರೆ ಪರೋಕ್ಷವಾಗಿ ಸ್ಥಳೀಯ ಮಾರುಕಟ್ಟೆ ಸುತ್ತ ಮುತ್ತಲಿನ ಸ್ಥಳ ನಗರೀಕರಣಕ್ಕೊಳಪಡಲು ಮತ್ತು ನಗರಗಳು ವೇಗವಾಗಿ ಬೆಳೆಯಲು ಅಗತ್ಯವಾದ ಕೊಡುಗೆಯನ್ನು ಸಹ ನೀಡಿತು. ಈ ಬಗೆಯ ಆರ್ಥಿಕ ಕಾರ್ಯ ಚಟುವಟಿಕೆಗಳು ಮತ್ತು ಉತ್ತಮವಾದ ಸಾರಿಗೆ ಸೌಕರ್ಯಗಳು ನಗರೀಕರಣ ಪ್ರಕ್ರಿಯೆಯನ್ನು ಚುರುಕುಗೊಳಿಸಿದವು. ಸಾಮ್ರಾಜ್ಯಶಾಹಿ ವ್ಯವಸ್ಥೆಯೊಳಗೆ ಸ್ಥಳೀಯ ಮಾರುಕಟ್ಟೆ ಮತ್ತು ವರ್ತಕರ ಸಂರಕ್ಷಣೆಗಾಗಿ ಕೈಗೊಂಡ ಕಾರ್ಯಚಟುವಟಿಕೆಗಳಾಗಿತ್ತು. ವಸಾಹತುಶಾಹಿ ವ್ಯವಸ್ಥೆಯಲ್ಲಿ ವಸಾಹತು ರಾಷ್ಟ್ರಗಳಲ್ಲಿ ಆಡಳಿತ, ಆರ್ಥಿಕತೆ ಮತ್ತು ಎಲ್ಲ ಸಂಪನ್ಮೂಲಗಳ ಮೇಲೂ ಪೂರ್ಣವಾದ ಹಿಡಿತವನ್ನು ಹೊಂದಿದ್ದವು. ಈ ಸಂದರ್ಭದ ಹೊತ್ತಿಗೆ ಭಾರತದ ಪ್ರಮುಖ ಪ್ರೆಸಿಡೆನ್ಸಿಗಳಲ್ಲಿ ಸ್ವಾತಂತ್ರ್ಯ ಹೋರಾಟ ಚುರುಕುಗೊಳ್ಳುತ್ತಿತ್ತು. ಈ ಹೋರಾಟದ ಆರಂಭಿಕ ಹಂತದಲ್ಲಿ ತೊಡಗಿಸಿ ಕೊಂಡವರೆಲ್ಲರೂ ಬಹುತೇಕವಾಗಿ ವರ್ತಕರು ಹಾಗೂ ಉತ್ಪಾದಕರೆ ಆಗಿದ್ದರು ಎಂಬುದು ಗಮನಿಸಬೇಕಾದ ಅಂಶವಾಗಿದೆ.

### ಮೈಸೂರು ಛೇಂಬರ್ ಆಫ್ ಕಾಮರ್ಸ್‌ನ ಸ್ವರೂಪ

ಮೈಸೂರು ಸಂಸ್ಥಾನದಲ್ಲಿ ೧೯೧೬ರಲ್ಲಿ ಛೇಂಬರ್ ಆಫ್ ಕಾಮರ್ಸ್ ಆರಂಭವಾಯಿತು. ಇದರ ಆಡಳಿತ ಸ್ವರೂಪ ಮತ್ತು ಸದಸ್ಯರುಗಳ ಕುರಿತ ಅಧ್ಯಯನವು ಸ್ಥಳೀಯ ಬಂಡವಾಳಗಾರರು, ವಾಣಿಜ್ಯೋದ್ಯಮಿಗಳು ಮತ್ತು ಸ್ಥಳೀಯ ಮಾರುಕಟ್ಟೆಗಳ ಮೇಲೆ ಬೆಳಕು ಚೆಲ್ಲುತ್ತದೆ. ಛೇಂಬರ್ ಆಫ್ ಕಾಮರ್ಸ್‌ನ ಒಟ್ಟು ಸದಸ್ಯರ ಸಂಖ್ಯೆ ೨೧೮. ಇದರಲ್ಲಿ ೬೫ ಸದಸ್ಯರು ಸ್ಥಳೀಯ ವರ್ತಕರಾಗಿದ್ದರು. ಇವರು ವಿವಿಧ ಜಾತಿಯ ವರ್ತಕ ಸಮುದಾಯಗಳ ಪ್ರತಿನಿಧಿಗಳು, ಲೇವಾದೇವಿಗಾರರು,

ವಾಣಿಜ್ಯೋದ್ಯಮಿಗಳು, ಹಣಕಾಸು ಸಂಸ್ಥೆಗಳು, ಬ್ಯಾಂಕರುಗಳು ಹಾಗೂ ಉದ್ಯಮ ಸಮುದಾಯದಕ್ಕೆ ಸೇರಿದ್ದವರು. ಅಲ್ಲದೆ ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಪ್ರಾಬಲ್ಯತೆ ಹೊಂದಿದ ಇಬ್ಬರನ್ನು 'ಗೌರವಾನ್ವಿತ ವರ್ಗ' ಎಂದು ಹೊಂದಿರುತಿತ್ತು. ಈ ಮೇಲಿನ ೬೫ ಮತ್ತು ೨ ಸದಸ್ಯರು ನಗರ ಪ್ರದೇಶಗಳಿಗೆ ಸೇರಿದವರು. ಉಳಿದಂತೆ ೧೫೧ ಜನ ಸದಸ್ಯರು ಗ್ರಾಮಾಂತರ ಪಟ್ಟಣಗಳಿಗೆ ಸೇರಿದ ವರ್ತಕ ಸಮುದಾಯದವರಾಗಿದ್ದರು. ಸಂಖ್ಯಾವಾರು ಗ್ರಾಮಾಂತರ ಪಟ್ಟಣಕ್ಕೆ ಸೇರಿದ ಸದಸ್ಯರ ಸಂಖ್ಯೆ ಹೆಚ್ಚಾಗಿ ಮೇಲಿನ ೬೭ ಸದಸ್ಯರು ಛೇಂಬರ್ ಒಳಗೆ ಹೆಚ್ಚು ಪ್ರಭಾವಿತರಾಗಿದ್ದಂತೆ ಕಂಡುಬರುತ್ತದೆ. ಉದಾಹರಣೆಗೆ ಬೆಂಗಳೂರಿನ ವರ್ತಕ ಸದಸ್ಯರುಗಳಾದ ಡಬ್ಲ್ಯೂ. ಸಿ ರೋಸ್, ಬಿ. ಕೆ ಗರುಡಾಚಾರ್, ದೇವರಾವ್ ಶಿವರಾಮ್, ಹಾಜಿ ಸರ್ ಇಸ್ಮಾಯಿಲ್ ಸೇಟ್, ಸುಬ್ಬರಾಮ ಚೆಟ್ಟಿ, ಹಯವದನ್ ರಾವ್ ಮೊದಲಾದವರು ಛೇಂಬರಿನ ಆರಂಭಿಕ ಅಧ್ಯಕ್ಷತೆಯ ಸ್ಥಾನವನ್ನು[೫೦] ೧೯೧೬-೧೯೪೦ರವರೆಗೆ ವಹಿಸಿದ್ದರು ಎಂಬುದು ಗಮನಾರ್ಹ.

ಸಂಘದ ಸದಸ್ಯತ್ವವನ್ನು ಪಡೆಯಲು ವಾರ್ಷಿಕ ವಂತಿಕೆಯಾಗಿ ೫೦ ರೂಪಾಯಿಯನ್ನು ನೀಡಬೇಕಾಗಿತ್ತು. ಅಂದರೆ ಸಂಘದಲ್ಲಿ ಸದಸ್ಯತ್ವ ಪಡೆಯಲು ಸಾಧ್ಯವಿದ್ದದ್ದು ಶ್ರೀಮಂತ ವರ್ತಕರು ಮತ್ತು ವಾಣಿಜ್ಯೋದ್ಯಮಿಗಳಿಗೆ ಮಾತ್ರ. ಹಾಗೇ ಅವಶ್ಯಕತೆಗನುಗುಣವಾಗಿ ಈ ವಂತಿಕೆಯ ದರವನ್ನು ಆಡಳಿತ ಮಂಡಳಿ ಪರಿಷ್ಕರಿಸುವ ಅಧಿಕಾರ ಹೊಂದಿತ್ತು. ಆಡಳಿತ ಮಂಡಳಿಯು ಒಬ್ಬ ಉಪಾಧ್ಯಕ್ಷ ಮತ್ತು ಒಬ್ಬ ಕಾರ್ಯದರ್ಶಿಯನ್ನು ಹೊಂದಿರುತ್ತಿತ್ತು. ಈ ಸ್ಥಾನವನ್ನು ಚುನಾವಣೆಯ ಮೂಲಕ ಭರಿಸಲಾಗುತ್ತಿತ್ತು ಮತ್ತು ಅಧಿಕಾರಾವಧಿ ಒಂದು ವರ್ಷ. ಇದರೊಂದಿಗೆ ಮತ್ತೆ ಮುಂದುವರಿಯಲು ಇಚ್ಛಿಸಿದಲ್ಲಿ ಸದಸ್ಯರ ಅನುಮೋದನೆಯೊಂದಿಗೆ ಮುಂದುವರಿಯುವ ಅವಕಾಶವು ಇತ್ತು. ಮೇಲ್ನೋಟಕ್ಕೆ ಪ್ರಜಾಪ್ರಭುತ್ವ ಮಾದರಿ ಕಂಡುಬರುತ್ತಿತ್ತು. ೧೯೧೬ರಲ್ಲಿ ಛೇಂಬರಿನ ಅಧ್ಯಕ್ಷರಾಗಿ ಡಬ್ಲ್ಯೂ. ಸಿ ರೂಸ್ ಮತ್ತು ಉಪಾಧ್ಯಕ್ಷರಾಗಿ ಬೆಂಗಳೂರಿನ ಪ್ರಮುಖ ವರ್ತಕರಾದ ಮಂಡಿ ಹರಿಯಣ್ಣನವರನ್ನು ನೇಮಿಸಲಾಗಿತ್ತು. ಜೊತೆಗೆ ಕಾರ್ಯದರ್ಶಿಯಾಗಿ ಎಲ್.ಎಸ್. ವಿ. ರಾಮಯ್ಯರ್‌ನವರನ್ನು ಆಯ್ಕೆ ಮಾಡಲಾಗಿತ್ತು.[೫೧]

ಛೇಂಬರ್ ಆಫ್ ಕಾಮರ್ಸ್‌ನ ಮುಖ್ಯ ಕಛೇರಿಯು ಬೆಂಗಳೂರಿನಲ್ಲಿ ಸ್ಥಾಪಿತವಾಗಿದ್ದು ನಂತರದಲ್ಲಿ ಇನ್ನಿತರ ಪ್ರಮುಖ ಸ್ಥಳಗಳಲ್ಲಿ ಶಾಖೆಗಳನ್ನು ಆರಂಭಿಸಲಾಯಿತು. ಉದಾಹರಣೆಗೆ ತುಮಕೂರು, ದಾವಣಗೆರೆ, ಚಿಕ್ಕಮಗಳೂರು, ತಿಪಟೂರು ಶಾಖೆಗಳು ಛೇಂಬರ್ ಆಫ್ ಕಾಮರ್ಸ್‌ನ ಕಾರ್ಯ ಚಟುವಟಿಕೆಯನ್ನು ಸಂಸ್ಥಾನದಾದ್ಯಂತ ವಿಸ್ತರಿಸುವ ಪ್ರಯತ್ನದ ಫಲವಾಗಿದೆ. ಆರಂಭದಲ್ಲಿ ಸರ್ಕಾರಿ ಕಟ್ಟಡವನ್ನು ಬೆಂಗಳೂರಿನಲ್ಲಿ ಬಾಡಿಗೆಗೆ ಪಡೆದು ಕಛೇರಿಯ ಅಗತ್ಯವನ್ನು ಪೂರೈಸಿಕೊಳ್ಳುತ್ತಿತ್ತು. ಕ್ರಮೇಣ ವರ್ತಕ ಸಮುದಾಯ ಸರ್ಕಾರದ ಮೇಲೆ ಒತ್ತಡ ಹಾಕಿ ಮೈಸೂರು ಬ್ಯಾಂಕ್ ಬಳಿ

೨೭೦ ಅಡಿ ಉದ್ದ ಮತ್ತು ೨೭೦ ಅಡಿ ಅಗಲದ ಅಳತೆಯ ನಿವೇಶನವನ್ನು ಉಚಿತವಾಗಿ ಪಡೆದುಕೊಂಡಿತು. ಕಟ್ಟಡ ನಿರ್ಮಾಣಕ್ಕೆ ಸಂಬಂಧಿಸಿದಂತೆ ಅತಿ ದೊಡ್ಡ ಕೊಡುಗೆಯನ್ನು ನೀಡಿದ ಪ್ರಬಲ ವರ್ತಕರೆಂದರೆ ಬೆಂಗಳೂರಿನ ಹಾಜೀ ಸರ್ ಇಸ್ಮಾಯಿಲ್ ಸೇಟ್. ಇವರು ೧೫,೦೦೦ ರೂಪಾಯಿಯನ್ನು ದೇಣಿಗೆ ನೀಡಿದರು. ಅಲ್ಲದೇ ಎಲ್ಲ ವರ್ತಕ ಸದಸ್ಯರು ಕಟ್ಟಡ ನಿರ್ಮಾಣಕ್ಕೆ ದೇಣಿಗೆ ನೀಡಿದ್ದರಿಂದಾಗಿ ಒಂದು ವರ್ಷದ ಅವಧಿಯೊಳಗೆ ಅದರದೇ ಆದ ಸ್ವಂತ ಕಟ್ಟಡ ನಿರ್ಮಾಣಗೊಂಡಿತ್ತು.[೫೨] ಇದು ಛೇಂಬರಿನ ಸದಸ್ಯರ ಪ್ರಾಬಲ್ಯ ಮತ್ತು ಮೈಸೂರು ಸಂಸ್ಥಾನದ ಸರ್ಕಾರ ಈ ಸಮುದಾಯಗಳ ಪರವಾಗಿ ವರ್ತಿಸುತ್ತಿದ್ದಿದ್ದಕ್ಕೆ ಸಾಕ್ಷಿ ಎನ್ನಬಹುದು. ಹಾಗೆ ಛೇಂಬರ್ಸ್‌ನ ಪ್ರಧಾನ ಸದಸ್ಯರೆಲ್ಲರೂ ಬೆಂಗಳೂರು ನಗರದವರೇ ಆಗಿದ್ದು, ಬೆಂಗಳೂರು ಮಾರುಕಟ್ಟೆ ಮತ್ತು ನಗರದ ಬೆಳವಣಿಗೆಗೆ ಅತ್ಯಂತ ಅಮೂಲ್ಯ ಕೊಡುಗೆಯನ್ನು ನೀಡಿದ್ದಾರೆ. ಇದು ವರ್ತಕ ಸಮುದಾಯ ನಗರೀಕರಣ ಪ್ರಕ್ರಿಯೆಯನ್ನು ತೀವ್ರಗೊಳಿಸುವಲ್ಲಿ ನಿರ್ವಹಿಸಿದ ಪಾತ್ರದ ಮೇಲೆ ಪರೋಕ್ಷವಾದ ಬೆಳಕು ಚೆಲ್ಲುವುದು.

**ಮೈಸೂರು ಛೇಂಬರ್ ಆಫ್ ಕಾಮರ್ಸ್ ಮತ್ತು ಇತರ ಸಂಘಟನೆಗಳ ಸಂಬಂಧ ಮತ್ತು ಸ್ವರೂಪ**

ಮೈಸೂರು ಛೇಂಬರ್ ಆಫ್ ಕಾಮರ್ಸ್ ರೂಪುಗೊಳ್ಳುವ ಮೊದಲೇ ಅನೇಕ ಸಂಘಟನೆಗಳು ವಾಣಿಜ್ಯೋದ್ಯಮಿಗಳು ಮತ್ತು ಕೈಗಾರಿಕೋದ್ಯಮಿಗಳ ಹಿತ ರಕ್ಷಣೆಗಾಗಿ ಸ್ಥಾಪಿತಗೊಂಡಿದ್ದವು. ಮೈಸೂರು ಸಂಸ್ಥಾನದ ಅನೇಕ ಪ್ರಮುಖ ಪಟ್ಟಣ ಮತ್ತು ನಗರಗಳಾದ ದಾವಣಗೆರೆ, ಮಂಡ್ಯ, ಶಿವಮೊಗ್ಗ ಮೊದಲಾದೆಡೆ  ಕಾಣಬಹುದಾಗಿದೆ. ಈ ಸಂಸ್ಥೆಗಳು ಸಹ ಕಾರ್ಯ ಚಟುವಟಿಕೆಯನ್ನು ವಿಸ್ತರಿಸಲು ಸರ್ಕಾರದ ಸಹಕಾರ ಪಡೆಯುವಲ್ಲಿ ಪ್ರಯತ್ನಿಸುತ್ತಿದ್ದವು. ಸ್ಥಾಪನೆಯಾದ ಸ್ವಲ್ಪ ಕಾಲದಲ್ಲಿಯೇ ಮೈಸೂರು ಛೇಂಬರ್ ಆಫ್ ಕಾಮರ್ಸ್ ಅತ್ಯಂತ ಪ್ರಭಾವಿ ಸಂಘಟನೆಯಾಗಿ ರೂಪುಗೊಂಡಿತು. ಹಾಗೇ ಸಂಸ್ಥಾನದೊಳಗಿನ ಎಲ್ಲಾ ವರ್ತಕ ಸಂಘ ಮತ್ತು ಸಮುದಾಯಗಳು ಛೇಂಬರಿನ ಸದಸ್ಯತ್ವ ಪಡೆಯಬೇಕು ಅಥವಾ ವಿಲೀನವಾಗಬೇಕು ಎನ್ನುವ ನಿರ್ಬಂಧವಿರಲಿಲ್ಲ. ಪ್ರತಿಯಾಗಿ ಬೆಂಗಳೂರಿನ ಹೊರ ಪ್ರದೇಶದಲ್ಲಿನ ಸಂಘಟನೆಗಳು ಮತ್ತು ಬೆಂಗಳೂರಿನೊಳಗಿನ ಇತರ ಸಂಘಟನೆಗಳೊಂದಿಗೆ ಸಮನ್ವಯತೆಯನ್ನು ಸಾಧಿಸುವಲ್ಲಿ ಸಫಲವಾಯಿತು. ಉದಾಹರಣೆಗೆ ಈ ಸಂದರ್ಭದಲ್ಲಿ ಬೆಂಗಳೂರಿನ 'ಬೆಂಗಳೂರು ಟ್ರೇಡರ್ಸ್ ಅಸೋಸಿಯೇಷನ್', 'ಯುನೈಟೆಡ್ ಪ್ಲಾಂಟರ್ಸ್ ಅಸೋಸಿಯೇಷನ್ ಆಫ್ ಸೌತ್ ಇಂಡಿಯಾ' (ಬೆಂಗಳೂರು),[೫೩] 'ಬೆಂಗಳೂರು ಸಗಟು ವ್ಯಾಪಾರಿಗಳ ಸಂಘ', 'ಬೆಂಗಳೂರು ಧಾನ್ಯ ವರ್ತಕರ ಸಂಘ'[೫೪] ಮೊದಲಾದವುಗಳನ್ನು ಕಾಣಬಹುದು. ಇವು ಸ್ಥಳೀಯ ಮತ್ತು ಅಂತರ್ ರಾಜ್ಯ ಸಂಘಟನೆಗಳಾಗಿವೆ. ಜೊತೆಗೆ ಬೆಂಗಳೂನು ಪೇಟೆಯ ಪ್ರಮುಖ ಮರ್ಕೆಂಟೈಲ್ ಸಮುದಾಯಗಳಾದ ಮೈಸೂರು ರಾಜ್ಯದ ಏಜೆಂಟ್ ಮೊತಿಲಾಲ್ ಜೆ. ಬೊಅಲ್, ಜೆ. ಐಸಾಕ್(ಪಲ್ಯೆ

ಸೆಂಟ್ರಲ್ ಬ್ಯಾಂಕ್, ಲಿ. ಮತ್ತು ಬೆಂಗಳೂರು ಟ್ರೇಡರ್ಸ್ ಅಸೋಸಿಯೇಷನಿನ ಸದಸ್ಯ),[೫೫] ಬಿ. ಎನ್. ಗುಪ್ತ (ಪ್ರಜಾಮತ ಪವರ್ ಪ್ರೆಸ್), ರಾಜಚರಿತ ವಿಶಾರದ ರಾವ್ ಬಹದೂರ್ ಸಿ. ಹಯವದನ ರಾವ್ (ಮೈಸೂರು ಸ್ಟೇಟ್ ಪೇಪರ್ ಮರ್ಚೆಂಟ್ ಆಂಡ್ ಸ್ಟೇಷನರೀಸ್ ಮಾಲಿಕರು ಮತ್ತು ಮೈಸೂರು ಗ್ಯಾಜೆಟಿಯರ್‌ಗಳನ್ನು ಬರೆದವರು),[೫೬] ಪಿ. ಎಸ್. ನಾರಾಯಣ ರಾವ್ (ಸ್ಟಾಕ್ ಆಂಡ್ ಷೇರ್ ಬ್ರೋಕರ್) ಮೊದಲಾದ ವಿವಿಧ ಆರ್ಥಿಕ ನೆಲೆಯ ವ್ಯಕ್ತಿಗಳು ಸದಸ್ಯತ್ವವನ್ನು ಪಡೆದರು. ರಾಜ್ಯದ ಆರ್ಥಿಕತೆಯ ಸುಧಾರಣೆಯಲ್ಲಿ ಇವರ ಪಾತ್ರ ಹಿರಿದಾಗಿದೆ. ಈ ನಿಟ್ಟಿನಲ್ಲಿ ಇವರು ಜಾರಿಗೆ ತಂದ ವಿಚಾರಗಳನ್ನು ಕೆಳಗೆ ವಿವರಿಸಲಾಗಿದೆ.

ಮೈಸೂರು ಸಂಸ್ಥಾನದಾದ್ಯಂತ ಕಂಡುಬರುವ ಪ್ರಮುಖ ವರ್ತಕ ಸಂಘಗಳೆಂದರೆ, ಮಂಡ್ಯದ ವರ್ತಕರ ಸಂಘ, ದಾವಣಗೆರೆ ವ್ಯಾಪಾರಸ್ಥರ ಸಂಘ,[೫೭] ಕೃಷ್ಣರಾಜನಗರದ ರೈಸ್ ಮಿಲ್ ಯಜಮಾನರ ಸಂಘ, ಕೊಳ್ಳೆಗಾಲದ ವರ್ತಕರ ಸಂಘ,[೫೮] ಶಿವಮೊಗ್ಗ ತಾಲೂಕಿನ ವರ್ತಕರ ಸಂಘ,[೫೯] ಎಂ ಅಂಡ್ ಎಸ್. ಎಂ. ರೈಲ್ವೆ, ಮದ್ರಾಸ್, ಮದ್ರಾಸಿನ ಸಿಂಪ್ಸನ್ ಆಂಡ್ ಜನರಲ್ ಫೈನಾನ್ಸ್ ಕೋ. ಲಿಮಿಟೆಡ್ ಮೊದಲಾದವುಗಳು. ಇವು ಛೇಂಬರ್ ಆಫ್ ಕಾಮರ್ಸ್‌ನೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದವು. ಈ ಸಂಘಟನೆಗಳಲ್ಲಿನ ಸಮಸ್ಯೆಗಳು, ಬೇಡಿಕೆಗಳನ್ನು ಮೈಸೂರು ಛೇಂಬರ್ ಆಫ್ ಕಾಮರ್ಸ್‌ನ ಮೂಲಕ ಸರ್ಕಾರದ ಗಮನಕ್ಕೆ ತಂದು ತಮ್ಮ ಸಮಸ್ಯೆಗಳನ್ನು ಬಗೆಹರಿಸುವ ಪ್ರಯತ್ನವನ್ನು ಮಾಡಲಾಗುತ್ತಿತ್ತು. ಒಂದು ರೀತಿಯಲ್ಲಿ ಸಂಸ್ಥಾನದಾದ್ಯಂತ ಕಂಡುಬರುತ್ತಿದ್ದ ಸಂಘಟನೆಗಳಲ್ಲಿ ಛೇಂಬರ್ ಆಫ್ ಕಾಮರ್ಸ್ ನಾಯಕನ ಪಾತ್ರ ನಿರ್ವಹಿಸುತ್ತಿತ್ತು. ಇದಲ್ಲದೆ, ಬೆಂಗಳೂರಿನ ಸ್ಥಳೀಯ ವರ್ತಕ ಸಮುದಾಯಗಳ ಪ್ರಮುಖ ವ್ಯಕ್ತಿಗಳು ಮತ್ತು ಸಣ್ಣ–ಪುಟ್ಟ ಕಸುಬಾಧಾರಿತ ಸಂಘಗಳ ಸದಸ್ಯರು ಸಹ ಪ್ರತ್ಯೇಕವಾಗಿ ಇದರ ಸದಸ್ಯತ್ವವನ್ನು ಪಡೆದುಕೊಂಡು ಅದರ ಲಾಭವನ್ನು ಪಡೆಯುತ್ತಿದ್ದರು. ಇಂತಹ ಸಂಘಟನೆಗಳಿಂದ ಬಂದವರೂ ಸಹ ಛೇಂಬರ್ ಆಫ್ ಕಾಮರ್ಸ್‌ನ ಉನ್ನತ ಸ್ಥಾನವನ್ನು ಪಡೆಯುತ್ತಿದ್ದರು. ಉದಾಹರಣೆಗೆ ಬೆಂಗಳೂರು ಪೇಟೆಯ ಮಂಡಿ ಹರಿಯಣ್ಣರವರು(ಉಪಾಧ್ಯಕ್ಷರು, ೧೯೧೬ ಮತ್ತು ೧೯೧೮), ದೇವರಾವ್ ಶಿವರಾಮ್(೧೯೨೬, ಅಧ್ಯಕ್ಷರು) ಎಂಬುದು ಗಮನಾರ್ಹ.

ಸಂಸ್ಥಾನದೊಳಗಿನ ಸಂಘ–ಸಂಸ್ಥೆಗಳಲ್ಲದೇ ದೇಶದ ವಿವಿಧ ರಾಜ್ಯಗಳ ಕೈಗಾರಿಕೋದ್ಯಮಿಗಳು, ವಾಣಿಜ್ಯೋದ್ಯಮಿಗಳು, ಹಣಕಾಸು ಸಂಘ–ಸಂಸ್ಥೆಗಳು, ಸಾರಿಗೆ ಸಗಟು ವ್ಯಾಪಾರದ ದಲ್ಲಾಳಿಗಳು, ಕೈಗಾರಿಕಾ–ವಾಣಿಜ್ಯ ಮಂಡಳಿಗಳಷ್ಟೇ ಅಲ್ಲದೇ ಮದ್ರಾಸ್ ಮತ್ತು ಮರಾಠ ರೈಲ್ವೆ ಕಂಪನಿಗಳೊಂದಿಗೆ ಉತ್ತಮ ಬಾಂಧವ್ಯವನ್ನು ಹೊಂದಿತ್ತು. ೧೯೪೫ರಲ್ಲಿ ಮೈಸೂರು ಛೇಂಬರ್ ಆಫ್ ಕಾಮರ್ಸ್‌ನ ಬೆಳ್ಳಿ ಹಬ್ಬದ ಸಂದರ್ಭದಲ್ಲಿ ಶುಭಕೋರಿ ಬರೆದ ಪತ್ರಗಳು ಮೇಲಿನ ವಿಚಾರಗಳಿಗೆ ಪೂರಕವಾದ ಮಾಹಿತಿಯಾಗಿದೆ.[೬೦] ಅಂತಹ ಪತ್ರಗಳಲ್ಲಿ ಕಂಡುಬರುವ ಪ್ರಮುಖ ಸಂಘಟನೆಗಳು ಹೀಗಿವೆ.

ಫೆಡರೇಷನ್ ಆಫ್ ಕಾಮರ್ಸ್ ಆಫ್ ದಿ ಬ್ರಿಟಿಶ್ ಎಂಪೈರ್,[೬೧] ಇಂಡಿಯನ್ ಮರ್ಚೆಂಟ್ ಛೇಂಬರ್, ಸದ್ರನ್ ಇಂಡಿಯಾ ಛೇಂಬರ್ ಆಫ್ ಕಾಮರ್ಸ್(ಮದ್ರಾಸ್),[೬೨] ಕೈಗಾರಿಕೋದ್ಯಮಿ ಸಿ. ಎಂ. ಕೊಠಾರಿ(ಕೋಠಾರಿ ಆಂಡ್ ಸನ್ಸ್, ಮದ್ರಾಸ್),[೬೩] ಮಾರ್ವಾಡಿ ಛೇಂಬರ್ ಆಫ್ ಕಾಮರ್ಸ್ (ಕಲ್ಕತ್ತ), ಮಾರ್ವಾಡಿ ಛೇಂಬರ್ ಆಫ್ ಕಾಮರ್ಸ್, ಲಿ (ಬಾಂಬೆ),[೬೪] ಫೆಡರೇಷನ್ ಆಫ್ ಬರೋಡ ಸ್ಟೇಟ್ ಮಿಲ್ಸ್ ಆಂಡ್ ಇಂಡಸ್ಟ್ರೀಸ್ (ಬರೋಡ).[೬೫] ರಾಷ್ಟ್ರದಾದ್ಯಂತ ಇದ್ದ ಪ್ರಮುಖ ಸಂಘಟನೆಗಳು ಮತ್ತು ಪ್ರಮುಖ ವರ್ತಕ ಸಮುದಾಯಗಳೊಡನೆ ಇದು ಉತ್ತಮ ಸಂಬಂಧವನ್ನು ಹೊಂದಿತ್ತು. ಬೆಂಗಳೂರಿನ ವ್ಯಾಪಾರ–ವಾಣಿಜ್ಯ ಹಾಗೂ ಕೈಗಾರಿಕೋದ್ಯಮದ ಬೆಳವಣಿಗೆಗೆ ಛೇಂಬರ್‌ನ ಕಾರ್ಯಚಟುವಟಿಕೆಗಳು ನೆರವಾದವು.

## ನಗರಾಭಿವೃದ್ಧಿಯಲ್ಲಿ ಛೇಂಬರ್‌ನ ಪಾತ್ರ

ಮೈಸೂರು ಛೇಂಬರ್ ಆಫ್ ಕಾಮರ್ಸ್‌ನ ಪ್ರಧಾನ ಕಛೇರಿಯು ಬೆಂಗಳೂರಿನಲ್ಲಿದ್ದಿದ್ದರಿಂದಾಗಿ ಸಹಜವಾಗಿ ನಗರೀಕರಣ ಪ್ರಕ್ರಿಯೆಗೆ ಒತ್ತು ದೊರೆಯಿತು. ಜೊತೆಗೆ ಛೇಂಬರ್ ಸಂಸ್ಥಾನಿ ಸರ್ಕಾರದಲ್ಲಿ ಪ್ರಭಾವಿಯಾಗಿ ಕಾರ್ಯನಿರ್ವಹಿಸುತ್ತಿದ್ದದ್ದು ಪೂರಕವಾಗಿ ಸಹಕರಿಸಿತು. ವಾಣಿಜ್ಯೋದ್ಯಮಿಗಳು ಮತ್ತು ಕೈಗಾರಿಕೋದ್ಯಮಿಗಳು ಮೈಸೂರು ಎಕನಾಮಿಕ್ ಕಾನ್‌ಫರೆನ್ಸ್, ಬೆಂಗಳೂರು ನಗರ ಮುನಿಸಿಪಾಲಿಟಿ, ಕೈಗಾರಿಕಾ ಮತ್ತು ವಾಣಿಜ್ಯ ಸಮಿತಿಗಳಲ್ಲಿ ಛೇಂಬರ್‌ನ ಪ್ರತಿನಿಧಿಯಾಗಿ ಭಾಗವಹಿಸುತ್ತಿದ್ದರು. ಇಂತಹ ಸಂದರ್ಭಗಳು, ವಾರ್ಷಿಕ ಅಧಿವೇಶನಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ವಾಣಿಜ್ಯ–ವಹಿವಾಟಿಗೆ ಉಂಟಾಗುತ್ತಿದ್ದ ತೊಂದರೆಗಳು ಮತ್ತು ಅಗತ್ಯಗಳನ್ನು ಸರ್ಕಾರದ ಗಮನಕ್ಕೆ ತರಲು ಯಶಸ್ವಿಯಾದರು. ಇದರೊಂದಿಗೆ ಸಾರ್ವಜನಿಕ ಹಿತಾಸಕ್ತಿಯ ದೃಷ್ಟಿಯಿಂದಲೂ ಹತ್ತು–ಹಲವು ಬೇಡಿಕೆಗಳನ್ನು ಸರ್ಕಾರದ ಗಮನಕ್ಕೆ ತರುತ್ತಿದ್ದರು. ಇವೆಲ್ಲವೂ ಬೆಂಗಳೂರಿನ ನಗರೀಕರಣಕ್ಕೆ ಪೂರಕವಾದವು. ಈ ಚರ್ಚೆಗಳಿಗೆ ಪೂರಕವಾಗಿ ಛೇಂಬರ್‌ನ ಪ್ರತಿನಿಧಿಯಾಗಿ ಭಾಗವಹಿಸಿದ ಸರ್ಕಾರದ ಸಮಿತಿಗಳು ಮತ್ತು ಯೋಜನೆಗಳ ಪಟ್ಟಿಯನ್ನು ಕೆಳಗೆ ನೀಡಲಾಗಿದೆ.

ಇದರಲ್ಲಿ ಬೆಂಗಳೂರಿನ ವರ್ತಕರನ್ನು ಮಾತ್ರ ಗಮನಿಸಲಾಗಿದೆ. (ಈ ಕೆಳಗಿನ ಪಟ್ಟಿಯಲ್ಲಿ ಹೆಸರಿಸಿರುವ ವರ್ತಕರು ತಮ್ಮ ವ್ಯಾವಹಾರಿಕ ಚಟುವಟಿಕೆಗಳ ಕೇಂದ್ರವಾಗಿ ಬೆಂಗಳೂರು ನಗರದಲ್ಲಿರಿಸಿಕೊಂಡಿರುವುದರಿಂದಾಗಿ ಇವರನ್ನು ಬೆಂಗಳೂರಿನ ವರ್ತಕರೆಂದು ಗುರುತಿಸಲಾಗಿದೆ) ಆರ್. ಸುತ್ರಾಂದಾಸ್‌ರವರು ಬೆಂಗಳೂರು ನಗರದ ಪ್ರಮುಖ ವಾಣಿಜ್ಯೋದ್ಯಮಿಗಳಲ್ಲಿ ಒಬ್ಬರು. ಲೇವಾದೇವಿ ಕಂಪನಿಯಾದ ಕೆ. ರಾಧಾಕಿಸನ್ ಆಂಡ್ ಸನ್ಸ್ ಮತ್ತು ಪಾರಾಮೌಂಟ್ ಟಾಕೀಸಿನ ಮಾಲೀಕರು. ವಿವಿಧ ವಾಣಿಜ್ಯ ವ್ಯಾಪಾರದಲ್ಲಿ ತೊಡಗಿಸಿಕೊಂಡಿದ್ದರು. ಪಿ. ಸುಬ್ಬರಾಮ ಚೆಟ್ಟಿರವರು ಬೆಂಗಳೂರು ನಗರದ ಪ್ರಮುಖ ಕೈಗಾರಿಕೋದ್ಯಮಿ ಮತ್ತು ವಾಣಿಜ್ಯೋದ್ಯಮಿಗಳಲ್ಲಿ ಪ್ರಮುಖರು.

ಬೆಂಗಳೂರಿನ ಶ್ರೀ ರಾಮ ವೀವಿಂಕ್ ಶೆಡ್‌ನ ಮಾಲೀಕರು. ಪ್ರಭುತ್ವದಿಂದ ಅನುದಾನಿತ ಹಲವು ಕಂಪನಿಗಳಲ್ಲಿ ವ್ಯವಸ್ಥಾಪಕರಾಗಿ ಸೇವೆಯನ್ನು ಸಲ್ಲಿಸಿದವರು. ಎಸ್. ವಿ. ಶ್ರೀನಿವಾಸ ಸೆಟ್ಟಿರವರು ಬೆಂಗಳೂರು ನಗರದ ಯಾರ್ನ್ ವ್ಯಾಪಾರಿ ಮತ್ತು ಮಧುರ ಮಿಲ್ಸ್‌ನ ಮಾಲೀಕರು. ಅದಷ್ಟೇ ಅಲ್ಲದೆ, ವೈಶ್ಯ ಬ್ಯಾಂಕ್ ಮತ್ತು ಜಾವಹಾರ್ ಮಿಲ್ಸ್ ಲಿ. ನ ವ್ಯವಸ್ಥಾಪಕರು. ರಾಮಚಂದ್ರ ರಾವ್ ಸಿಂಧಿಯಾರವರು ಬೆಂಗಳೂರಿನ ಶ್ರೀ ರಾಮಕೃಷ್ಣ ಆಯಿಲ್ ಮಿಲ್ಸ್‌ನ ಸಹ ಮಾಲಿಕರು. ರಾಜ್ಯ ಎಣ್ಣೆ ಕೈಗಾರಿಕೆಗಳ ಅಭಿವೃದ್ಧಿಯಲ್ಲಿ ಆಸಕ್ತಿಯುಳ್ಳವರು.[೬೬] ಟಿ. ನಂಜಪ್ಪ ಬೆಂಗಳೂರು ವರ್ತಕರಲ್ಲಿ ಪ್ರಮುಖರು ಮತ್ತು ಜಮೀನ್ದಾರರು. ಇವರು ಮೈಸೂರು ಬ್ಯಾಂಕಿನ ವ್ಯವಸ್ಥಾಪಕರಲ್ಲಿ ಒಬ್ಬರು. ಸಿ. ಎಂ. ಗರುಡಾಚಾರ್‌ರವರು ಬೆಂಗಳೂರು ನಗರದ ಮೋಟಾರ್ ಸರ್ವೀಸ್‌ನ ಮಾಲೀಕರು. ಬರ್ಮಾ ಸೇಲ್‌ನ ಕಾರ್ಯಭಾರಿಯಾಗಿ ಕಾರ್ಯನಿರ್ವಹಿಸುವ ಪ್ರಮುಖ ವ್ಯಾಪಾರಿ ಮತ್ತು ಬಸವನಗುಡಿ ಕೋ–ಆಪರೇಟಿವ್ ಸೋಸೈಟಿ ಲಿ. ಸಂಸ್ಥಾಪಕರು. ರಾಜ್ಯದ ವಾಣಿಜ್ಯೋದ್ಯಮಗಳಲ್ಲಿ ಆಸಕ್ತಿಯುಳ್ಳ ವ್ಯಕ್ತಿಯಾಗಿದ್ದರು.[೬೭] ಹೀಗೆ ವಿವಿಧ ವೃತ್ತಿ ಸಮುದಾಯಗಳ ಸಂಘದ ಸದಸ್ಯರು ಮತ್ತು ವರ್ತಕ ಸಮುದಾಯದವರು ಮೈಸೂರು ಛೇಂಬರ್ ಆಫ್ ಕಾಮರ್ಸ್‌ನ ಮೂಲಕ ಸಲ್ಲಿಸಿದ ಸೇವೆಯನ್ನು ಕೋಷ್ಟಕದ ಮೂಲಕ ತಿಳಿಸಲಾಗಿದೆ.[೬೮]

| ಸಮಿತಿಯ ಹೆಸರು | ಸದಸ್ಯರ ಹೆಸರು | ಕಾಲ |
|---|---|---|
| ಬೆಂಗಳೂರು ನಗರ ಮುನಿಸಿಪಲ್ ಕೌನ್ಸಿಲ್ | ಕೆ. ಎಸ್.ಕೃಷ್ಣ ಐಯ್ಯರ್ | ೧೯೧೭–೧೯೧೮ ರಿಂದ ೧೯೧೮–೧೯೧೯ |
| | ಎಂ. ವೆಂಕಟಸುಬ್ಬಯ್ಯ | ೧೯೧೯–೧೯೨೦ ರಿಂದ ೧೯೨೦–೧೯೨೧ |
| | ಪಿ. ಸುಬ್ಬರಾಮ ಚೆಟ್ಟಿ | ೧೯೨೧–೧೯೨೨ ರಿಂದ ೧೯೨೩–೧೯೨೪ |
| | ಎಂ .ರಾಮಚಂದ್ರರಾವ್ ಸಿಂಧಿಯ | ೧೯೨೪–೧೯೨೫ ರಿಂದ ೧೯೨೬–೧೯೨೭ |
| | ವಜಪೇಯಮ್ ವೆಂಕಟೇಶಯ್ಯ | ೧೯೨೭–೧೯೨೮ ರಿಂದ ೧೯೨೯–೧೯೩೦ |
| | ಎಸ್. ವಿ. ಶ್ರೀನಿವಾಸ ಸೆಟ್ಟಿ | ೧೯೩೦–೧೯೩೧ ರಿಂದ ೧೯೩೨–೧೯೩೩ |
| | ಪಿ. ಸುಬ್ಬರಾಮ ಚೆಟ್ಟಿ | ೧೯೩೩–೧೯೩೪ ರಿಂದ ೧೯೩೫–೧೯೩೬ |
| | ಎಸ್. ಎಲ್. ಮನ್ನಜಿ ರಾವ್ | ೧೯೩೬–೧೯೩೭ ರಿಂದ ೧೯೩೮–೧೯೩೯ |
| | ಕೆ.ಎಸ್. ರಾಮಕೃಷ್ಣಯ್ಯ ಶೆಟ್ಟಿ | ೧೯೩೯–೧೯೪೦ ರಿಂದ ೧೯೪೧–೧೯೪೨ |
| | ಕೆ. ಎಂ. ನಾಗಣ್ಣ | ೧೯೪೨–೧೯೪೩ ರಿಂದ ೧೯೪೪–೧೯೪೫ |
| ಮೈಸೂರು ಪ್ರತಿನಿಧಿ ಸಭೆ | ಎಂ .ರಾಮಚಂದ್ರರಾವ್ ಸಿಂಧಿಯ | ೧೯೧೯–೧೯೨೦ |
| | ಪಿ. ಸುಬ್ಬರಾಮ ಚೆಟ್ಟಿ | |
| | ಎಂ .ರಾಮಚಂದ್ರರಾವ್ ಸಿಂಧಿಯ | ೧೯೨೦–೧೯೨೧ |
| | ಕೆ. ಎಂ. ಪುಟ್ಟಪ್ಪ | |
| | ಎಂ .ರಾಮಚಂದ್ರರಾವ್ ಸಿಂಧಿಯ | |
| | ಟಿ. ನಂಜಪ್ಪ | ೧೯೨೧–೧೯೨೨ |

| | | |
|---|---|---|
| | ಎಂ .ರಾಮಚಂದ್ರರಾವ್ ಸಿಂಧಿಯ | ೧೯೨೨-೧೯೨೩ |
| | ಟಿ. ನಂಜಪ್ಪ | ೧೯೨೩-೧೯೨೪ ರಿಂದ ೧೯೨೫-೧೯೨೬ |
| | ಪಿ. ಸುಬ್ಬರಾಮ ಚೆಟ್ಟಿ | ೧೯೨೬-೧೯೨೭ ರಿಂದ ೧೯೩೨-೧೯೩೩ |
| ಶಾಸನ ಸಭೆ | ಸಿ. ಎಂ. ಗರುಡಾಚಾರ್ | ೧೯೩೩-೧೯೩೪ ರಿಂದ ೧೯೩೫-೧೯೩೬ |
| | ಆರ್. ಸುತ್ರಾಂದಾಸ್ | ೧೯೩೬-೧೯೩೭ ರಿಂದ ೧೯೩೯-೧೯೪೦ |
| | ಬಿ.ಆರ್. ಚಂದ್ರಶೇಖರಯ್ಯ | ೧೯೪೦-೧೯೪೧ ರಿಂದ ೧೯೪೪-೧೯೪೫ |
| | ಸಿ. ಎಂ. ಗರುಡಾಚಾರ್ | ೧೯೨೩-೧೯೨೪ ರಿಂದ ೧೯೨೯-೧೯೩೦ |
| | ಎಂ .ರಾಮಚಂದ್ರರಾವ್ ಸಿಂಧಿಯ | ೧೯೩೩-೧೯೩೪ ರಿಂದ ೧೯೩೫-೧೯೩೬ |
| | ಪಿ. ಸುಬ್ಬರಾಮ ಚೆಟ್ಟಿ | ೧೯೩೬-೧೯೩೭ ರಿಂದ ೧೯೩೯-೧೯೪೦ |
| | ಎಂ .ರಾಮಚಂದ್ರರಾವ್ ಸಿಂಧಿಯ | ೧೯೪೦-೧೯೪೧ ರಿಂದ ೧೯೪೩-೧೯೪೪ |
| | ಎಲ್. ಎಸ್. ವೆಂಕಜಿ ರಾವ್ | ೧೯೪೪-೧೯೪೫ |
| ಮೈಸೂರು ದಸರಾ ಪ್ರದರ್ಶನ ಸಮಿತಿ | ಎಂ. ವೆಂಕಟಸುಬ್ಬಯ್ಯ | ೧೯೨೮-೧೯೨೯ ರಿಂದ ೧೯೩೨-೧೯೩೩ |
| | ಪಿ. ಸುಬ್ಬರಾಮ ಚೆಟ್ಟಿ | ೧೯೩೩-೧೯೩೪ ರಿಂದ ೧೯೩೬-೧೯೩೭ |
| | ಎಂ .ರಾಮಚಂದ್ರರಾವ್ ಸಿಂಧಿಯ | ೧೯೩೭-೧೯೩೯ ರಿಂದ ೧೯೪೧-೧೯೪೨ |
| | ಎಂ. ರಾಮಯ್ಯ | ೧೯೪೨-೧೯೪೫ |

| **ಸಮಿತಿಯ ಹೆಸರು** | **ಸದಸ್ಯರ ಹೆಸರು** | **ಕಾಲ** |
|---|---|---|
| ಎಕಾನಿಮಿಕ್ ಕಾನ್ಫರೇನ್ಸ್ | ಪಿ. ಎ. ಬರ್ಟನ್ | ೧೯೧೭-೧೯೧೮ |
| | ದೇವರಾವ್ ಶಿವರಾಮ್ | ೧೯೧೮-೧೯೧೯ ರಿಂದ ೧೯೧೯-೧೯೨೦ |
| | ಎಂ .ರಾಮಚಂದ್ರರಾವ್ ಸಿಂಧಿಯ | ೧೯೨೦-೧೯೨೧ |
| | ಎಂ. ವೆಂಕಟಸುಬ್ಬಯ್ಯ | ೧೯೨೧-೧೯೨೨ ರಿಂದ ೧೯೨೬-೧೯೨೭ |
| | ಎಂ .ರಾಮಚಂದ್ರರಾವ್ ಸಿಂಧಿಯ | ೧೯೨೭-೧೯೨೮ ರಿಂದ ೧೯೩೦-೧೯೩೧ |
| | ಆರ್. ಸುಂದ್ರಮ್ ಐಯ್ಯರ್ | ೧೯೩೪-೧೯೩೫ ರಿಂದ ೧೯೩೬-೧೯೩೭ |
| | ಸಿ. ಹಯವದನ ರಾವ್ | ೧೯೪೦-೧೯೪೧ |
| | ಎಂ .ರಾಮಚಂದ್ರರಾವ್ ಸಿಂಧಿಯ | ೧೯೪೧-೧೯೪೨ |
| | ರಾಮ್‌ನರಾಯಣ ಚೆಲ್ಲರಾಮ್ | ೧೯೪೨-೧೯೪೩ |
| | ಎಸ್. ಎ. ಶ್ರೀನಿವಾಸನ್ | ೧೯೪೩-೧೯೪೪ |
| | ಎಲ್. ಎಸ್. ವೆಂಕಜಿ ರಾವ್ | ೧೯೪೪-೧೯೪೫ |
| ರೈಲ್ವೆ ಲೋಕಲ್ ಅಡ್‌ವೈಸರಿ ಕಮಿಟಿ | ಆರ್. ಸುಂದ್ರಮ್ ಐಯ್ಯರ್ | ೧೯೨೮-೧೯೨೯ ರಿಂದ ೧೯೩೬-೧೯೩೭ |
| | ಎಚ್. ಸಿ. ಸೂರ್ಯನಾರಯಣ ರಾವ್ | ೧೯೩೮-೧೯೩೯ ರಿಂದ ೧೯೪೦-೧೯೪೧ |
| | ಆರ್. ಸುಂದ್ರಮ್ ಐಯ್ಯರ್ | ೧೯೪೧-೪೨ ರಿಂದ ೧೯೪೨-೪೩ |
| | ಆರ್. ವಿ. ಗುರು ರಾವ್ | ೧೯೪೨-೪೫ |

### ಮೈಸೂರು ಛೇಂಬರಿನ ಸದಸ್ಯರು ಮತ್ತು ಪ್ರಭುತ್ವ ಪ್ರತಿಕ್ರಿಯೆ

ಮೈಸೂರ್ ಛೇಂಬರ್ ಮತ್ತು ಸಂಸ್ಥಾನಿ ಪ್ರಭುತ್ವದೊಂದಿಗೆ ಉತ್ತಮ ಸಂಬಂಧವಿದ್ದಿತ್ತು. ಆದರೂ ಛೇಂಬರಿನ ಎಲ್ಲ ಬೇಡಿಕೆಗಳನ್ನು ಪೂರೈಸಿಕೊಳ್ಳಲು ಸಾಧ್ಯವಿರಲಿಲ್ಲ. ಇಲ್ಲಿ ಪ್ರಭುತ್ವ ಪ್ರತಿಕ್ರಿಯಿಸಿದ ಕೆಲವು ಬೇಡಿಕೆ ಮತ್ತು ಯೋಜನೆಗಳನ್ನು ಮಾತ್ರ ವಿವರಿಸಲಾಗಿದೆ.

೧. ೧೯೨೦-೨೧ರಲ್ಲಿ ರೈಲ್ವೆ ಸಾರಿಗೆ ಸಂಪರ್ಕ ಮತ್ತು ಭದ್ರತೆಯ ಕೊರತೆಯ ಬಗೆಗೆ ಗಮನ ಸೆಳೆಯಲಾಯಿತು. ವಸ್ತುಗಳ ಸಾಗಾಣಿಕೆ ಸಂದರ್ಭದಲ್ಲಿ ವಸ್ತುಗಳ ಕಳ್ಳತನ ಹಾಗೂ ಬೋಗಿಗಳ ಕೊರತೆ ಉಂಟಾಗುತ್ತಿತ್ತು. ಆ ಸಂದರ್ಭದಲ್ಲಿ ವರ್ತಕರು ಪ್ರಭುತ್ವದ ಗಮನಕ್ಕೆ ತಂದರು. ಮಿ. ಹ್ಯಾನ್‌ಸನ್ ಮತ್ತು ರಾಸ್‌ರವರ ನೇತೃತ್ವದಲ್ಲಿ ಭಾರತೀಯ ರೈಲ್ವೆ ಪೋಲಿಸ್ ಸಮಿತಿಯನ್ನು ಬೆಂಗಳೂರಿನಲ್ಲಿ ನೇಮಿಸಲಾಯಿತು. ಈ ಸಮಿತಿಯು ವಾಣಿಜ್ಯೋದ್ಯಮಿಗಳಿಗೆ ಅಗತ್ಯ ಭದ್ರತೆಯನ್ನು ಒದಗಿಸುವುದರಲ್ಲಿ ಯಶಸ್ವಿಯಾಯಿತು.[೧೯]

೨. ಬೆಂಗಳೂರು ಮತ್ತು ಮೈಸೂರಿನಲ್ಲಿ ಟೆಲಿಫೋನ್ ಲೈನ್ ಅಭಿವೃದ್ಧಿ ಪಡಿಸುವುದರೊಂದಿಗೆ 'ಮೈಸೂರು ಡೈರೆಕ್ಟರಿಯನ್ನು' ಪ್ರಕಟಿಸಲು ಕಾರಣವಾಯಿತು.[೨೦]

೩. ಸರ್ಕಾರವು ಅಂಚೆ ಉಪ-ಕಛೇರಿಯನ್ನು ಅವಿನ್ಯೂ ರಸ್ತೆಯಲ್ಲಿ ತೆರೆಯಿತು.[೨೧] ಇದರಿಂದಾಗಿ ಸಾರ್ವಜನಿಕರು ಮತ್ತು ವಾಣಿಜ್ಯವಹಿವಾಟುಗಳ ಕಾರ್ಯ ಚುರುಕುಗೊಂಡಿತು.

೪. ಸಮಕಾಲೀನ ಮಾರುಕಟ್ಟೆ ವ್ಯವಸ್ಥೆಯ ಬಗ್ಗೆ ತಿಳಿಸಲು **ದಿ ಮಾರ್ಕೆಟ್ ರಿಪೋರ್ಟ್, ಮೈಸೂರ್ ಎಕಾನಾಮಿಕ್ ಜರ್ನಲ್ ವೀಕ್ಲಿ ಬುಲೆಟಿನ್** ಮುಂತಾದ ವಾರಪತ್ರಿಕೆ ಮತ್ತು ಮಾಸ ಪತ್ರಿಕೆಗಳನ್ನು ಪ್ರಕಟಿಸಿತು.[೨೨]

೫. ೧೯೨೭ರಲ್ಲಿ ಸ್ಟಾಕ್ ಎಕ್ಸ್‌ಛೇಂಜ್‌ನ್ನು ಛೇಂಬರ್‌ನ ಅಧೀನಕ್ಕೆ ತರಲಾಯಿತು. ಷೇರು ಮಾರುಕಟ್ಟೆ, ಏಕ ರೀತಿಯ ತೂಕ ಮತ್ತು ಅಳತೆಯನ್ನು ಸರ್ಕಾರ ಜಾರಿಗೊಳಿಸಲು ಕಾರಣವಾಯಿತು.

೬. ಶಿಕ್ಷಣ ಕ್ಷೇತ್ರದಲ್ಲಿ ವಾಣಿಜ್ಯ ವ್ಯವಹಾರಕ್ಕೆ ಸಂಬಂಧಿಸಿದಂತಹ ಪ್ರತ್ಯೇಕ ಅಧ್ಯಯನ ವಿಭಾಗಗಳನ್ನು ಮೈಸೂರು ವಿಶ್ವವಿದ್ಯಾಲಯದ ಅಡಿಯಲ್ಲಿ ತರಲು ಸಲಹೆ ನೀಡಿತು. ಇದಕ್ಕೆ ಪೂರಕವಾಗಿ ೧೯೨೮ರಲ್ಲಿ ಎರಡು ವರ್ಷದ ಡಿಪ್ಲೋಮ ಕೋರ್ಸ್ ಪದವಿಗಳು ಆರಂಭವಾದವು. ಉದಾಹರಣೆಗೆ ಆಡಿಟಿಂಗ್, ಇನ್ಸುರೆನ್ಸ್, ಮಾರ್ಕೆಟಿಂಗ್ ಮತ್ತು ಸೇಲ್ಸ್ ಮ್ಯಾನ್‌ಶಿಫ್ ಮುಂತಾದ ವಿವಿಧ ವಾಣಿಜ್ಯ ವಿಷಯಗಳನ್ನು ಶೈಕ್ಷಣಿಕ ವಲಯದಲ್ಲಿ ಪರಿಚಯಿಸಲಾಯಿತು. ನಂತರ ೧೯೪೨ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ವಾಣಿಜ್ಯ ಪದವಿ ಕೋರ್ಸ್‌ನ್ನು ಜಾರಿಗೊಳಿಸಲು ಕಾರಣವಾಯಿತು.[೨೩]

ಮೈಸೂರು ಛೇಂಬರ್ ಆಫ್ ಕಾಮರ್ಸ್‌ನ ಉಪ ಶಾಖೆಗಳು ಸ್ಥಳೀಯ ಪ್ರದೇಶದಲ್ಲಿ ನಗರೀಕರಣಕ್ಕೆ ಪೂರಕವಾಯಿತು. ತುಮಕೂರು, ದಾವಣಗೆರೆ, ಚಿಕ್ಕಮಗಳೂರು ಮತ್ತು ತಿಪಟೂರುಗಳಲ್ಲಿ ಇದರ ಉಪಶಾಖೆಗಳನ್ನು ಸ್ಥಾಪಿಸಲಾಯಿತು. ಆ ಪ್ರದೇಶದ ಮೂಲಭೂತ ಸೌಲಭ್ಯಗಳನ್ನು ಅಭಿವೃದ್ಧಿಪಡಿಸುವಲ್ಲಿ ಪ್ರಮುಖ ಪಾತ್ರವಹಿಸಿದವು. ಇದರೊಂದಿಗೆ ಛೇಂಬರ್‌ನ ಕಾರ್ಯವ್ಯಾಪ್ತಿಯು ವಿಸ್ತರಿಸಿತು. ಅಲ್ಲದೇ ಛೇಂಬರ್ ಭಾರತದಾದ್ಯಂತ ಅನೇಕ ಸಂಘ ಸಂಸ್ಥೆಗಳೊಡನೆ ಸಂಪರ್ಕ ಹೊಂದಿದ್ದು, ಪರಸ್ಪರ ವಿಚಾರ ವಿನಿಮಯಗಳು ನಡೆಯುತ್ತಿದ್ದವು. ಪರಿಣಿತ ವಾಣಿಜ್ಯ ವ್ಯಾಪಾರಿಗಳಿಂದ ಉಪನ್ಯಾಸ, ತರಬೇತಿ ಕಾರ್ಯಾಗಾರಗಳನ್ನು ವಾರ್ಷಿಕ ಸಭೆಗಳಲ್ಲಿ ಆಯೋಜಿಸಲಾಗುತ್ತಿತ್ತು. ಸಮಕಾಲೀನ ಮಾರುಕಟ್ಟೆಯ ಅರಿವು ಮೂಡಿಸಲು ಮತ್ತು ಶೈಕ್ಷಣಿಕ ವಲಯದಲ್ಲಿಯೂ ಅಧ್ಯಯನದ ವಿಷಯವಾಗಿ ತರಲು ಸಾಧ್ಯವಾಯಿತು. ಉದಾಹರಣೆಗೆ ಮಾರ್ಕೆಟಿಂಗ್ ಪರಿಣಿತರಾದ ಎ.ಎಂ. ಲೀವಿಂಕ್‌ಸ್ಟೋನ್ ಮತ್ತು ಜಪಾನಿನ ಪ್ರಮುಖ ವರ್ತಕರಾದ ಮಿ. ಸೆಂಡ (೧೯೩೪ ಉಪನ್ಯಾಸ). ವರ್ತಕ ಸಮುದಾಯಗಳು, ವಾಣಿಜ್ಯೋದ್ಯಮಿಗಳು ಮತ್ತು ಕೈಗಾರಿಕೋದ್ಯಮಿಗಳ ಹಿತ ರಕ್ಷಣೆಗಾಗಿಯೇ ಎಲ್ಲ ಕಾರ್ಯ ಚಟುವಟಿಕೆಗಳು ಕೇಂದ್ರೀಕೃತಗೊಂಡಿದ್ದವಾದರೂ ಸಂಸ್ಥಾನದ ಆರ್ಥಿಕ ಹಾಗೂ ಬೆಂಗಳೂರು ನಗರ ಪ್ರದೇಶದ ಮೂಲಸೌಲಭ್ಯಗಳ ಅಭಿವೃದ್ಧಿಗೂ ಅಪಾರವಾದ ಕೊಡುಗೆಯನ್ನು ನೀಡಿದವು. ಈ ಮೂಲಕ ಇಪ್ಪತ್ತನೇ ಶತಮಾನದ ಆರಂಭದಲ್ಲಿ ಮೈಸೂರು ಛೇಂಬರ್ ಆಫ್ ಕಾಮರ್ಸ್ ಬೆಂಗಳೂರು  ನಗರದ ನಗರೀಕರಣವನ್ನು ತೀವ್ರಗೊಳಿಸಿತು. ಸ್ವಾತಂತ್ರ್ಯೋತ್ತರದಲ್ಲಿ ಬೆಂಗಳೂರು ನಗರದ ಬೆಳವಣಿಗೆಗೆ ೧೯೫೦ರೊಳಗಿನ ಛೇಂಬರ್‌ನ ಕಾರ್ಯಚಟುವಟಿಕೆಗಳು ಮುಖ್ಯವಾದ ನೆಲೆಯನ್ನು ಒದಗಿಸಿದವು ಎಂಬುದರಲ್ಲಿ ಎರಡು ಮಾತಿಲ್ಲ. ಆರ್ಥಿಕತೆ ಮತ್ತು ನಗರೀಕರಣದ ನಡುವಿನ ಸಂಬಂಧಗಳ ಹಲವು ಆಯಾಮಗಳನ್ನು ತೆರೆದಿಡುತ್ತವೆ. ಈ ದಿಕ್ಕಿನಲ್ಲಿ ಬೆಂಗಳೂರಿನ ನಗರೀಕರಣದಲ್ಲಿ ವಿವಿಧ ವರ್ತಕ ಸಮುದಾಯಗಳು ಹಾಗೂ ಸಂಘಟಣೆಗಳ ಅಧ್ಯಯನವು ಇನ್ನೂ ವಿಸ್ತಾರವಾದ ನೆಲೆಗಟ್ಟನ್ನು ಒದಗಿಸುತ್ತವೆ.

**ಕೊನೆಟಿಪ್ಪಣಿಗಳು**

೧. ಹಿರೇಮಠ ಬಿ.ಆರ್., **ಶಾಸನಗಳಲ್ಲಿ ಕರ್ನಾಟಕದ ವರ್ತಕರು**, ೧೯೮೬, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ಪು.೭೧

೨. ಅದೇ, ಪು.೯೩

೩. ಸೂರ್ಯನಾಥ ಯು. ಕಾಮತ್, ಪಾರಂಪರಿಕ ಕೈಗಾರಿಕೆಗಳ ನಾಶ: ಹಿಂದುಳಿದ ವರ್ಗಗಳ ಚಳುವಳಿಗೆ ನಾಂದಿ, **ಇತಿಹಾಸ ದರ್ಶನ**, ಸಂ–೧೩, ೧೯೯೮, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು, ಪು.೨೯೫

೪. ಚಂದ್ರಶೇಖರ್ ಎಸ್., **ದಕ್ಷಿಣ–ಭಾರತ (ವಸಾಹತುಶಾಹಿ, ರಾಷ್ಟ್ರೀಯತೆ ಮತ್ತು ಸಂಘರ್ಷ)**, ೨೦೦೦, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೬

೫. ತಿರುಮಲೈ ಆರ್., **ದ ವಾಯಿಸ್ ಆಫ್ ಎಂಟರ್‌ಪ್ರೈಸ್**, ೧೯೮೬, ಮ್ಯಕ್‌ಮಿಲ್ಲನ್ ಇಂಡಿಯಾ ಲಿ., ಮದ್ರಾಸ್, ಪು.೩೧

೬. ಮೋಹನ್‌ಕೃಷ್ಣ ರೈ ಕೆ., **ಪ್ರಭುತ್ವ ಮತ್ತು ಜನತೆ**, ೨೦೦೪, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ. ಪು.೧೧೫

೭. ಸೂರ್ಯನಾಥ ಯು. ಕಾಮತ್, **ಪೂರ್ವೋಕ್ತ**, ಪು.೨೯೭

೮. ೧೯೧೧ರ ಜನಗಣತಿಯನ್ನು ಆಧಾರಿಸಿದೆ.

೯. ಅನಿತಾ ಎಂ.ಎಸ್., **ಆಧುನಿಕ ಮೈಸೂರಿನ ಇತಿಹಾಸದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ್**, ೨೦೧೨, ಪ್ರಿಯದರ್ಶಿನಿ ಪ್ರಕಾಶನ, ಮೈಸೂರು, ಪು.೧೯೭

೧೦. ಸೂರ್ಯನಾಥ ಯು. ಕಾಮತ್, **ಬೆಂಗಳೂರು ಡಿಸ್ಟ್ರಿಕ್ ಗೆಜೆಟಿಯರ್** ಲೋಟಸ್ ಪ್ರಿಂಟರ್ಸ್, ಬೆಂಗಳೂರು, ಪು.೩೯೦

೧೧. **ಸ್ಮರಣ ಸಂಚಿಕೆ**, ಆರ್ಯ ವೈಶ್ಯ ಮಹಾಮಂಡಲಿ, ಬೆಂಗಳೂರು

೧೨. ಸೂರ್ಯನಾಥ ಯು. ಕಾಮತ್, **ಪೂರ್ವೋಕ್ತ**, ಪು.೩೮೯

೧೩. ಅನಿತಾ ಎಂ.ಎಸ್., **ಪೂರ್ವೋಕ್ತ**, ಪು.೨೧೮

೧೪. ಹಯವದನ ರಾವ್, **ಡೈಮಂಡ್ ಜ್ಯೂಬ್ಲಿ ಸಾವೆನಿಯರ್**, ೧೯೭೬, ಮೈಸೂರು ಛೇಂಬರ್ ಆಫ್ ಕಾಮರ್ಸ್, ಬೆಂಗಳೂರು, ಪು.೫

೧೫. ಮುನಿಸಿಪಾಲ್ ಕಮೀಷನ್ ಸಿವಿಲ್ & ಮಿಲಿಟರಿ ಸ್ಟೇಷನ್, ಬೆಂಗಳೂರು., **ಅಡಮಿನಿಸ್ಟ್ರೇಷನ್ ರಿಪೋರ್ಟ್** ೧೯೩೦–೩೧, ವಿ. ನಾಯ್ಡು & ಕೋ., ಪವರ್ ಪ್ರೆಸ್, ಬೆಂಗಳೂರು, ೧೯೩೧, ಪು.೫

೧೬. ಹಯವದನರಾವ್, **ಸಿಲ್ವರ್ ಜ್ಯೂಬ್ಲಿ ಸಾವೆನಿಯರ್**, ೧೯೪೫, ಮೈಸೂರು ಛೇಂಬರ್ ಆಫ್ ಕಾಮರ್ಸ್, ಬೆಂಗಳೂರು ಪು.೯೧

೧೭. ಅದೇ, ಪು–೩೩

೧೮. **ಡೈಮಂಡ್ ಜ್ಯೂಬ್ಲಿ ಆಫ್ ಮೈಸೂರು ಛೇಂಬರ್ ಆಫ್ ಕಾಮರ್ಸ್** ೧೯೧೬–೧೯೭೬ **ಸಾವೆನಿಯರ್**, ಪು.೧೭

೧೯. ಸಿಲ್ವರ್ ಜ್ಯೂಬ್ಲಿ ಆಫ್ ಮೈಸೂರು ಛೇಂಬರ್ ಆಫ್ ಕಾಮರ್ಸ್, ಪು.೩೪

೨೦. ಅದೇ, ಪು.೩೪

೨೧. ಅದೇ, ಪು.೩೬

೨೨. ಅದೇ, ಪು.೮೫-೮೮

೨೩. ಅದೇ, ಪು.೩೭

೨೪. ಡೈಮಂಡ್ ಜ್ಯೂಬ್ಲಿ ೧೯೧೬-೧೯೭೬, ಸಾವೆನಿಯರ್ ೧೯೭೬, ಫೆಡರೇಶನ್ ಆಫ್ ಕರ್ನಾಟಕ ಛೇಂಬರ್ ಆಫ್ ಕಾಮರ್ಸ್ ಆ್ಯಂಡ್ ಇಂಡಸ್ಟ್ರಿ, ಬೆಂಗಳೂರು, ಪು.೨೦

೨೫. ಸಿಲ್ವರ್ ಜ್ಯೂಬ್ಲಿ ಆಪ್ ಮೈಸೂರು ಛೇಂಬರ್ ಆಫ್ ಕಾಮರ್ಸ್, ಪು.೯೧

೨೬. ಅದೇ, ಪು.೯೭

೨೭. ಅದೇ, ಪು.೧೦೫

೨೮. ಅದೇ, ಪು.೧೦೪

೨೯. ಅದೇ, ಪು.೧೦೯

೩೦. ಅದೇ, ಪು.೧೧೦

೩೧. ಅದೇ, ಪು.೧೧೧

೩೨. ಅದೇ, ಪು.೭

೩೩. ಅದೇ, ಪು.೮

೩೪. ಅದೇ, ಪು.೧೦

೩೫. ಅದೇ, ಪು.೨೧

೩೬. ಅದೇ, ಪು.೨೪

೩೭. ಅದೇ, ಪು.೨೫

೩೮. ಥಾಮಸ್ ಪಿಟರ್ಸ್, ಹು ಈಸ್ ಹೂ, ಹು ಈಸ್ ಹೂ ಪಬ್ಲಿಷರ್ಸ್ (ಇಂಡಿಯಾ) ಲಿ. ಬಾಂಬೆ, ಪು.೮೪

೩೯. ಅದೇ, ಪು.೨೮

೪೦. ಸಿಲ್ವರ್ ಜ್ಯೂಬ್ಲಿ ಆಪ್ ಮೈಸೂರು ಛೇಂಬರ್ ಆಫ್ ಕಾಮರ್ಸ್, ಪು.೯೦

೪೧. ಅದೇ, ಪು.೩೯

೪೨. ಅದೇ, ಪು.೩೯

೪೩. ಅದೇ, ಪು.೪೫

೪೪. **ಡೈಮಂಡ್ ಜ್ಯೂಬ್ಲಿ**, ಪೂರ್ವೋಕ್ತ, ಪು.೨೨, ೨೩

೪೫. **ಸಿಲ್ವರ್ ಜ್ಯೂಬ್ಲಿ ಆಪ್ ಮೈಸೂರು ಛೇಂಬರ್ ಆಫ್ ಕಾಮರ್ಸ್**, ಪು.೨೭

೪೬. ಅದೇ, ಪು.೫೭

೪೭. ಡಿ. ಎಸ್. ಶಿವಪ್ಪ, **ಅಖಿಲ ಕರ್ನಾಟಕ ದೇವಾಂಗ ಮಹಾ ಸಮ್ಮೇಳನ**, ೧೯೭೨ ಸ್ಮರಣ ಸಂಚಿಕೆ, ಅಖಿಲ ಕರ್ನಾಟಕ ದೇವಾಂಗ ಮಹಾ ಸಮ್ಮೇಳನದ ಸ್ವಾಗತ ಸಮಿತಿ, ಬೆಂಗಳೂರು, ಪು.೨

೪೮. ಅದೇ, ಪು.೨

೪೯. ಅದೇ, ಪು.೨

೫೦. ಅದೇ, ಪು.೩

೫೧. **ಸಿಲ್ವರ್ ಜ್ಯೂಬ್ಲಿ ಸಾವೆನಿಯರ್**, ಮೈಸೂರು ಛೇಂಬರ್ಸ್ ಆಫ್ ಕಾಮರ್ಸ್, ಪು.೧೦೦

೫೨. ಸ್ಮರಣ ಸಂಚಿಕೆ, **ದೇವಾಂಗ ಸಂಘ**, ಬೆಂಗಳೂರು, ಪು.೬

೫೩. ಅದೇ, ಪು.೭೯

೫೪. ಎಂ. ಬಿ. ಪಾಟೀಲ್, ೨೦೦೫ ಆಧುನಿಕ ಬ್ಯಾಂಕಿಂಗ್ ಇತಿಹಾಸ, (ಸಂ) ಎಲ್. ಎಸ್. ಶೇಷಗಿರಿ ರಾವ್, **ಬೆಂಗಳೂರು ದರ್ಶನ**, ಸಂ.೧, ಉದಯಭಾನು ಕಲಾಸಂಘ, ಪು. ೩೯೮

೫೫. ಸ್ಮರಣ ಸಂಚಿಕೆ, **ಆರ್ಯ ವೈಶ್ಯ ಮಹಾಮಂಡಲಿ**, ಬೆಂಗಳೂರು.

೫೬. ಇಂದಿರಾ ಶಿವಣ್ಣ, **ಶಿವಾಚಾರ ನಗರ್ತರು**, ೨೦೦೯, ನಗರ್ತ ಮಹಿಳಾ ಸಂಘ, ಬೆಂಗಳೂರು, ಪು.೧೩೩

೫೭. ಅದೇ, ಪು.೧೩೮

೫೮. ಅದೇ, ಪು.೧೩೯

೫೯. ಅದೇ, ಪು.೧೪೦

೬೦. ಅದೇ, ಪು.೨೧೪

೬೧. ಸೂರ್ಯನಾಥ ಯು. ಕಾಮತ್, **ಪೂರ್ವೋಕ್ತ**, ಪು.೪೫೦

೬೨. www.bpza.org>history>001 history

೬೩. ಥಾಮಸ್ ಪಿಟರ್ಸ್, **ಪೂರ್ವೋಕ್ತ**, ಪು.೧೧, ೫೬

೬೪. **ಸ್ಮರಣ ಸಂಚಿಕೆ**, ವಿಶ್ವ ಕರ್ಮ ಸಂಘ, ಬೆಂಗಳೂರು.

೬೫. ಚಂದ್ರಮೌಳಿ ಕೆ., **ಬೆಂಗಳೂರಿನ ನೋಟಗಳು**, ೨೦೦೨, ಪ್ರಿಸಮ್ ಬುಕ್ಸ್ ಪ್ರೈ. ಲಿ., ಪು.೨೨೧

೬೬. **ಸ್ಮರಣ ಸಂಚಿಕೆ**, ತಿಗಳ ಸಂಘ, ಬೆಂಗಳೂರು.

೬೭. ಶಿವಾನಂದ ಗುಬ್ಬಣ್ಣವರ, **ಕರ್ನಾಟಕದ ಕುರುಬರು**, ೧೯೯೩, ಅಕ್ಷಯ ಪ್ರಕಾಶನ, ಧಾರವಾಡ, ಪು.೩೬,೩೭

೬೮. ಅದೇ, ಪು.೩೭

೬೯. ಅದೇ, ಪು.೩೬,೩೭

೭೦. ಗುರುಲಿಂಗಯ್ಯ ಎಂ., **ಕರ್ನಾಟಕದ ಗೊಲ್ಲ ಸಮುದಾಯ**, ೨೦೦೫, ಶಕ್ತಿ ಪ್ರಿಂಟರ್ಸ್ ಆಂಡ್ ಪಬ್ಲಿಷರ್ಸ್, ಬೆಂಗಳೂರು, ಪು.೬೪

೭೧. ಅದೇ, ಪು.೬೫

೭೨. ಅದೇ, ಪು.೫೬

೭೩. **ಬೆಂಗಳೂರು ಹ್ಯಾಂಡ್ ಬುಕ್**, ೧೯೩೦, ಪು. ೫೪

## ಅಧ್ಯಾಯ ಆರು

# ವರ್ತಕರು ಮತ್ತು ನಗರಾಭಿವೃದ್ಧಿ

ಅಧ್ಯಾಯ ಆರು

# ವರ್ತಕರು ಮತ್ತು ನಗರಾಭಿವೃದ್ಧಿ

ಒಂದು ಭೌಗೋಳಿಕ ಪ್ರದೇಶವು ವಾಣಿಜ್ಯ ನಗರದಿಂದ ಮೆಟ್ರೋಪಾಲಿಟನ್ ಪ್ರದೇಶವಾಗಿ ಬದಲಾಗುವ ಪ್ರಕ್ರಿಯೆಗಳು ಭೌಗೋಳಿಕ ಪ್ರದೇಶದ ಪರಿಸರ, ರಾಜಕೀಯ, ಸಮಾಜ ಮತ್ತು ಆರ್ಥಿಕತೆ ಮೊದಲಾದ ಅಂಶಗಳಿಂದ ನಗರದ ಅಭಿವೃದ್ಧಿಯನ್ನು ನಿರ್ಣಯಿಸುತ್ತದೆ. ಇದರ ಬೆನ್ನಲ್ಲೆ ಹಳೆಯ ವ್ಯಾಪಾರ-ವಾಣಿಜ್ಯ ವ್ಯವಸ್ಥೆಯಿಂದ ಹೊಸ ವ್ಯವಸ್ಥೆಗೆ ಬದಲಾವಣೆಯನ್ನು ಹೊಂದುವ ಹಂತದಲ್ಲಿ ವಿವಿಧ ತರಹದ ಸ್ಥಾನಪಲ್ಲಟಗಳು ಆರ್ಥಿಕತೆಯಲ್ಲಿ ಕಾಣಿಸಿಕೊಳ್ಳುತ್ತದೆ. ಆರ್ಥಿಕ ಚಟುವಟಿಕೆಯ ಕೇಂದ್ರಬಿಂದುವಾದ ವರ್ತಕ ಮತ್ತು ವರ್ತಕ ಸಮುದಾಯಗಳು ಸಹ ಸಂದರ್ಭಕ್ಕನುಸಾರವಾಗಿ ವಿವಿಧ ಹೊಸ ತೆರನಾದ ಕಾರ್ಯ ಚಟುವಟಿಕೆಯ ಹಿನ್ನೆಲೆಯಲ್ಲಿ ಹೊಸ ರೂಪದಲ್ಲಿ ಕಾಣಿಸಿಕೊಂಡವು. ಫಲವಾಗಿ ವ್ಯಾಪಾರ-ವಾಣಿಜ್ಯ ವಿಸ್ತರಿಸಿತ್ತು. ಇದು ನಗರ ಬೆಳವಣಿಗೆಗೆ ಕಾರಣವಾಗಿತ್ತಲ್ಲದೆ, ನಗರದ ವ್ಯಾಪ್ತಿಯನ್ನು ವಿಸ್ತರಿಸಿತು. ಇವೆಲ್ಲದರ ಅಭಿವೃದ್ಧಿಯು ಸಂದರ್ಭಕ್ಕೆ ಅನುಗುಣವಾಗಿ ಮತ್ತು ಪ್ರದೇಶದಲ್ಲಿ ಮೂಲಭೂತ ಸೌಕರ್ಯಗಳನ್ನು ಅಗತ್ಯಕ್ಕೆ ಅನುಸಾರವಾಗಿ ವಿಸ್ತರಿಸಿತು. ಈ ದಿಸೆಯಲ್ಲಿ ಬ್ಯಾಂಕಿಂಗ್ ವ್ಯವಸ್ಥೆ, ಉತ್ಪನ್ನ, ನಿರ್ವಹಣ ಏಜೆಂಟರು, ಉದ್ದಿಮೆ, ಉತ್ಪನ್ನದ ಉತ್ಪಾದನಾ ವಿಧಾನ, ವ್ಯಾಪಾರಿ ಮಾರ್ಗಗಳು ಪ್ರಮುಖವಾದ ಪಾತ್ರವನ್ನು ವಹಿಸುತ್ತದೆ. ಈ ಎಲ್ಲ ಹಂತದ ಕಾರ್ಯ ಚಟುವಟಿಕೆಯ ಹಿಂದೆಯೂ ಸಹ ವರ್ತಕರು ಸಾಮಾಜಿಕ, ಆರ್ಥಿಕ, ರಾಜಕೀಯಗಳ ಮುಖ್ಯವಾಹಿನಿಯಲ್ಲಿ ತಮ್ಮದೇ ಆದ ಮಹತ್ವದ ಕಾರ್ಯವನ್ನು ನಿರ್ವಹಿಸುತ್ತಾರೆ.

## ೬.೧. ವ್ಯಾಪಾರ ಮತ್ತು ವಾಣಿಜ್ಯ

ವ್ಯಾಪಾರ ಮತ್ತು ವಾಣಿಜ್ಯವೆಂದರೆ ಇಂದಿನ ಪರಿಧಿಯಲ್ಲಿ ಬೌದ್ಧಿಕ ಮತ್ತು ಅಬೌದ್ಧಿಕ ಸೇವೆಗಳನ್ನು ಒಳಗೊಂಡಂತೆ ಇಬ್ಬರ ನಡುವೆ ನಡೆಯುವ ಆರ್ಥಿಕ ಚಟುವಟಿಕೆಯಾಗಿದೆ. ಇಂದಿನ ಈ ಪರಿಧಿಯ ಹುಟ್ಟನ್ನು ನಾವು ೧೮ನೇ ಶತಮಾನದಲ್ಲಿ ಕಾಣಬಹುದಾಗಿದೆ. ವ್ಯಾಪಾರ ಮತ್ತು

ವಾಣಿಜ್ಯವೆಂದರೆ ಸಾಮಾನ್ಯವಾಗಿ ಸಂಚನದ ಮಾಧ್ಯಮವಾದ ಹಣ, ಅದರ ಮೌಲ್ಯ, ಅದರ ಸ್ವರೂಪ, ಉತ್ಪನ್ನದ ಸ್ವರೂಪ, ಸಂಚಾರದ ಸಾಧನ, ಮಾರುಕಟ್ಟೆಯ ಸ್ವರೂಪ, ಪ್ರಭುತ್ವದ ನೀತಿಗಳು ಮೊದಲಾದ ಅಂಶಗಳ ಹಿನ್ನೆಲೆಯಲ್ಲಿ ಒಂದು ನಿರ್ದಿಷ್ಟ ಅವಧಿಗೆ ಸೀಮಿತಗೊಳಿಸಿ ಅಧ್ಯಯನಗಳನ್ನು ಮಾಡಲಾಗುತ್ತದೆ. ಇದನ್ನು ಬಿಟ್ಟು ಬ್ಯಾಂಕಿಂಗ್, ಉತ್ಪನ್ನ, ಮಧ್ಯವರ್ತಿಗಳು, ಸಾರಿಗೆ–ಸಂಪರ್ಕ, ಕೈಗಾರಿಕೆಗಳು ಸಹ ಅಷ್ಟೇ ಪ್ರಮುಖವಾದ ಪಾತ್ರವನ್ನು ವ್ಯಾಪಾರ ಮತ್ತು ವಾಣಿಜ್ಯದಲ್ಲಿ ವಹಿಸುತ್ತದೆ. ಇವೆಲ್ಲದರ ಕಾರ್ಯ ಚಟುಚಟಿಕೆಗಳ ಕೇಂದ್ರ ಬಿಂದುವಾಗಿ ವರ್ತಕ ಸಮುದಾಯಗಳು ನಿರ್ಣಾಯಕ ಪಾತ್ರವನ್ನು ವಹಿಸುವುದು. ಆದ್ದರಿಂದಾಗಿ ಬ್ಯಾಂಕಿಂಗ್, ಉತ್ಪನ್ನ, ಮಧ್ಯವರ್ತಿಗಳು, ಸಾರಿಗೆ–ಸಂಪರ್ಕಗಳಲ್ಲಿ ವರ್ತಕ ಸಮುದಾಯಗಳ ಪಾತ್ರ ಮತ್ತು ಅದು ಹೇಗೆ ವ್ಯಾಪಾರ ಮತ್ತು ವಾಣಿಜ್ಯದ ಬೆಳವಣಿಗೆಗೆ ಸಹಾಯಕವಾಯಿತು ಎಂಬ ಅಂಶಗಳನ್ನು ಇಲ್ಲಿ ಚರ್ಚಿಸಲಾಗಿದೆ. ಇದರ ಬೆನ್ನಲ್ಲೆ ಈ ಎಲ್ಲಾ ಕಾರ್ಯ ಚಟುವಟಿಕೆಗಳು ನಗರ ವ್ಯವಸ್ಥೆಯ ಬೆಳವಣಿಗೆಗೆ ಹೇಗೆ ಸಹಕರಿಸುತ್ತದೆ ಎಂಬ ಅಧ್ಯಯನವನ್ನು ಮಾಡುವ ಉದ್ದೇಶವನ್ನು ಹೊಂದಿದೆ. ಜೊತೆಗೆ ವಸಾಹತು ಕಾಲದಲ್ಲಿ ವರ್ತಕ ಸಮುದಾಯಗಳು ಹೊಸ ರೂಪದಲ್ಲಿ ಮಧ್ಯವರ್ತಿಗಳಾಗಿ ಹೊಸ ಸ್ವರೂಪವನ್ನು ಪಡೆದು ವ್ಯಾಪಾರ–ವಾಣಿಜ್ಯದಲ್ಲಿ ಪ್ರಮುಖ ಪಾತ್ರದಲ್ಲಿ ಕಾಣಿಸಿಕೊಳ್ಳ ತೊಡಗಿದರು. ಅವರಲ್ಲಿ ಆದ ಬದಲಾವಣೆಗಳನ್ನು ಸಹ ಇಲ್ಲಿ ಚರ್ಚಿಸಲಾಗಿದೆ.

### ೬.೧.೧. ಬ್ಯಾಂಕಿಂಗ್

ಆರ್ಥಿಕ ಜೀವನದ ಒಂದು ವಿಶಿಷ್ಟಾಂಶವಾಗಿ ಬ್ಯಾಂಕಿಂಗ್ ಮತ್ತು ಹಣಕಾಸಿನ ಸಂಸ್ಥೆಗಳು ಕಾರ್ಯನಿರ್ವಹಿಸುತ್ತದೆ. ಇದು ಸಂಪನ್ಮೂಲಗಳ ಕ್ರೋಢೀಕರಣ ಮತ್ತು ಹೂಡಿಕೆಯಿಂದ ಉತ್ಪಾದನಾ ಚಟುವಟಿಕೆಗಳನ್ನು ಚುರುಕುಗೊಳಿಸಲು ನೆರವಾಗುತ್ತವೆ. ಇದರ ನೆಲೆಯಲ್ಲಿಯೇ ವ್ಯಾಪಾರ ಮತ್ತು ವಾಣಿಜ್ಯಗಳು ಉತ್ಪಾದಿತ ಉತ್ಪನ್ನಗಳನ್ನು ವಿವಿಧ ಮಾರ್ಗಗಳ ಮೂಲಕ ವಿರತಣೆ ಮಾಡಲು ಸಹಕರಿಸುತ್ತದೆ. ಭಾಷ್ಯಮ್‌ರವರು ತಿಳಿಸುವಂತೆ, "ಯೂರೋಪಿಯನ್ನರ ಆಗಮನವಾಗುವವರೆಗೆ ಎಲ್ಲಾ ಕಾಲದಲ್ಲಿಯೂ ಭಾರತದಲ್ಲಿ ಬ್ಯಾಂಕಿಂಗ್, ವ್ಯಾಪಾರದ ಒಂದು ಉಪಾಂಗವಾಗಿತ್ತು" ಎಂದು ಅಭಿಪ್ರಾಯ ಪಟ್ಟಿದ್ದಾರೆ. ಪ್ರಾಚೀನ ಕಾಲದಿಂದಲೂ ಕರಕುಶಲ ಕಸುಬುದಾರರ ಮತ್ತು ವ್ಯಾಪಾರಸ್ಥರ ಶ್ರೇಣಿಗಳು ಪ್ರಬಲವಾದ ಮತ್ತು ಅಧಿಕಾರಯುತ ಆರ್ಥಿಕ ನಿಗಮಗಳಾಗಿದ್ದವು. ಈ ನಿಗಮಗಳು ವ್ಯಾಪಾರವನ್ನಲ್ಲದೆ ವ್ಯಾಪಾರೀ ಬ್ಯಾಂಕಿಂಗ್ ಕಾರ್ಯವನ್ನೂ ಸಂಘಗಳ ಮೂಲಕ ನಿರ್ವಹಿಸುತ್ತಿದ್ದವು. ವ್ಯಾಪಾರಿ ಸಂಘಗಳ ಮೂಲಕ ವ್ಯಾಪಾರಿಗಳು ವೈಯಕ್ತಿಕವಾಗಿ ಅಥವಾ ಸಾಮೂಹಿಕವಾಗಿ ಹಣದ ವಹಿವಾಟನ್ನು ನಡೆಸುತ್ತಿದ್ದರು. ಜನರಿಂದ ಕಾಯಂ ಠೇವಣಿಗಳನ್ನು ಸ್ವೀಕರಿಸಿ ಅದಕ್ಕೆ ಬಡ್ಡಿಯನ್ನು ನೀಡುತ್ತಿದ್ದವು. ಸಾರ್ವಜನಿಕರ ಹಣವನ್ನು ಸಮರ್ಥವಾಗಿ ಉಪಯೋಗಿಸುತ್ತಿದ್ದ ಕಾರಣಕ್ಕಾಗಿ ಈ

ಸಂಸ್ಥೆಗಳು ಜನರ ವಿಶ್ವಾಶಕ್ಕೆ ಪಾತ್ರವಾಗಿದ್ದವು. ಸಂಘಗಳು ನಡೆಸುತ್ತಿದ್ದ ಹಣಕಾಸಿನ ವ್ಯವಹಾರವನ್ನು ಸದಸ್ಯರ ಸಭೆಗಳಲ್ಲಿ ಘೋಷಿಸಿ ಅದನ್ನು ದಾಖಲಿಸುತ್ತಿದ್ದರು. ಹೀಗೆ ಸಂಘದ ಮುಖ್ಯಸ್ಥನು ತನ್ನ ಸದಸ್ಯರಿಗೆ ಬದ್ಧರಾಗಿ ಕಾರ್ಯನಿರ್ವಹಿಸುತ್ತಿದ್ದನು. ಶ್ರೇಣಿಗಳಷ್ಟೇ ಅಲ್ಲದೇ ದೇವಾಲಯಗಳು, ಮಠಗಳು ಸಹ ಹಣಕಾಸಿನ ವ್ಯವಹಾರಗಳನ್ನು ನಿರ್ವಹಿಸುತ್ತಿದ್ದವು. ಬಡ್ಡಿದರವೂ ಪಣ, ಹಗ, ವೀಸ ಅಥವಾ ಬೇಳೆ ಮುಂತಾದ ಕನಿಷ್ಠ ನಾಣ್ಯಗಳ ಪ್ರಮಾಣದಿಂದ ಸೂಚಿತವಾಗುತ್ತಿತ್ತು. ಅಸಲು ಹಣವನ್ನು ಗದ್ಯಾಣ ಅಥವಾ ಹೊನ್ನುಗಳೆಂಬ ಗರಿಷ್ಠ ನಾಣ್ಯಗಳ ಅಂಶಗಳಿಂದ ಸೂಚಿಸಲಾಗುತ್ತಿತ್ತು. ಬಡ್ಡಿಯ ದರವು ತೀರ ಏರುಪೇರಿನದಾಗಿರಲಿಲ್ಲ. ಆದರೆ ಬಡ್ಡಿದರದ ವ್ಯತ್ಯಾಸವು ಪ್ರತಿ ಜಾತಿ ಮತ್ತು ಸಾಲಗಾರನ ಆರ್ಥಿಕ ಭದ್ರತೆ ಮತ್ತು ಅವನ ವಿಶ್ವಾಸದ ಮೇಲೆ ಅವಲಂಬಿಸಿತ್ತು. ಇವು ಪ್ರಾಚೀನ ಕಾಲದಲ್ಲಿದ್ದ ಬ್ಯಾಂಕಿಂಗ್ ವ್ಯವಸ್ಥೆಯ ಪ್ರಮುಖ ಲಕ್ಷಣಗಳು.[೧] ೧೮ನೇ ಮತ್ತು ೧೯ನೇ ಶತಮಾನದವರೆಗೂ ಈ ವ್ಯವಸ್ಥೆಯು ಮುಂದುವರಿಕೆಯಾಗಿದ್ದನ್ನು ಕಾಣಬಹುದಾಗಿದೆ.

೧೮ನೇ ಶತಮಾನದ ಕೊನೆಯ ಹಂತದಲ್ಲಿ ಹೊಸ ಬಗೆಯ ಆಧುನಿಕ ಬ್ಯಾಂಕಿಂಗ್ ವ್ಯವಸ್ಥೆಯು ಕಂಡುಬರಲು ಆರಂಭವಾಯಿತು. ಈ ದಿಶೆಯಲ್ಲಿ ಯುರೋಪಿನಲ್ಲಿ ಉದಯವಾದ ವಾಣಿಜ್ಯವಾದದ ಪ್ರಭಾವವನ್ನು ಗುರುತಿಸಬಹುದು. ಭಾರತಕ್ಕೆ ಸಂಬಂಧಿಸಿದಂತೆ, ವಸಾಹತು ಪೂರ್ವದಲ್ಲಿಯೇ ಮೈಸೂರು ರಾಜ್ಯದಲ್ಲಿಯೂ ಇದರ ಪ್ರಭಾವ ಬೀರಿತು. ಅನೇಕ ಯುರೋಪಿನ ಕಂಪನಿಗಳು ಭಾರತದಾದ್ಯಂತ ತಮ್ಮ ನೆಲೆಗಳನ್ನು ಹೊಂದಿದ್ದು, ಅವರ ನಡುವೆಯೇ ಸ್ಪರ್ಧೆಗಳು ನಡೆಯುತ್ತಿದ್ದವು. ಈ ಕಾಲಘಟ್ಟದಲ್ಲಿ ಫ್ರೆಂಚರು ಮತ್ತು ಬ್ರಿಟಿಶರು ಪ್ರಬಲ ಸ್ಪರ್ಧಿಗಳಾಗಿದ್ದರು. ಟಿಪ್ಪು ಪರಿಗಣಿಸಿದ್ದನು. ಬ್ರಿಟಿಶರನ್ನು ಶತ್ರುಗಳಾಗಿ ಹಾಗೂ ಫ್ರೆಂಚ್ ವರ್ತಕ ಸಮುದಾಯಗಳ ಜೊತೆ ಸ್ನೇಹ ಸಂಪರ್ಕವನ್ನು ಹೊಂದಿದ್ದನು. ಅನೇಕ ಬಗೆಯ ಹೊಸ ವೈಜ್ಞಾನಿಕ ವಿಚಾರಗಳನ್ನು, ತಂತ್ರಜ್ಞಾನವನ್ನು ಫ್ರೆಂಚರ ಮಾರ್ಗದರ್ಶದಲ್ಲಿ ರಾಜ್ಯದಾದ್ಯಂತ ಅಳವಡಿಸುವ ಪ್ರಯತ್ನ ಮಾಡಿದ್ದನು. ಆರ್ಥಿಕತೆಯಲ್ಲಿಯೂ ಸಹ ಯುರೋಪಿನ ರಾಷ್ಟ್ರಗಳಲ್ಲಿ ಪ್ರಬಲವಾಗಿದ್ದ ವಾಣಿಜ್ಯವಾದದ ಮಾದರಿಯನ್ನು ಅಳವಡಿಸಲು ಯತ್ನಿಸಿದನು. ಈ ನಿಟ್ಟಿನಲ್ಲಿಯೇ ಟಿಪ್ಪು ಪ್ರಭುತ್ವದ ಹಿಡಿತ ಹೊಂದಿರುವ ಹೊಸ ಮಾದರಿ ಬ್ಯಾಂಕಿಂಗ್ ವ್ಯವಸ್ಥೆಯನ್ನು ಮೈಸೂರು ರಾಜ್ಯದಲ್ಲಿ ಜಾರಿಗೊಳಿಸಿದನು. ಟಿಪ್ಪು ಸುಲ್ತಾನನು ಸಾರ್ವಜನಿಕರಿಂದ ಠೇವಣಿಗಳನ್ನು ಸಂಗ್ರಹಿಸಲು ಸರಕಾರದ ಮಾರಾಟ ಮಳಿಗೆಗಳನ್ನು ವ್ಯವಸ್ಥೆ ಮಾಡಿದ್ದನು. ಈ ರೀತಿ ಸಂಗ್ರಹಿಸಿದ ಠೇವಣಿಗಳನ್ನು ಮಾರಾಟ ಮಳಿಗೆಗಳ ವ್ಯವಹಾರಿಕ ಬಂಡವಾಳವನ್ನಾಗಿ ಪರಿವರ್ತಿಸಿದನು. ಠೇವಣಿದಾರರಿಗೆ ಲಾಭಾಂಶವನ್ನು ನೀಡುತ್ತಿದ್ದನು. ಈ ಲಾಭಾಂಶವು ಠೇವಣಿಯ ಮೊತ್ತವನ್ನು ಅನುಸರಿಸಿದ್ದು ಕಡಿಮೆ ಮೊತ್ತಕ್ಕೆ ಹೆಚ್ಚಿನ ಲಾಭಾಂಶದ ದರ ನೀಡುತ್ತಿದ್ದನು. ಈ ತೆರನಾದ ಲೇವಾದೇವಿ ವ್ಯವಹಾರವನ್ನು ಟಿಪ್ಪು ನಿರ್ವಹಿಸುತ್ತಿದ್ದನು.

ಇವು ವಾಣಿಜ್ಯವಾದ ಪ್ರಭಾವಕ್ಕೆ ಟಿಪ್ಪು ಒಳಗಾಗಿದ್ದನು ಎಂಬುದು ಸ್ಪಷ್ಟಪಡಿಸುತ್ತದೆ.[೨] ಆದರೆ ಈ ಮಾದರಿಯು ಹೆಚ್ಚು ವ್ಯವಸ್ಥಿತವಾಗಿ ರೂಪುಗೊಂಡಿದ್ದು ವಸಾಹತುಶಾಹಿ ಭಾರತದಲ್ಲಿದೆ. ಇದನ್ನು ವ್ಯಾಪಕವಾಗಿ ವಸಹಾತುಶಾಹಿ ಮತ್ತು ಸಾಮ್ರಾಜ್ಯಶಾಹಿ ಕಾಲಘಟ್ಟದಲ್ಲಿ ಭಾರತದ ಎಲ್ಲೆಡೆ ಯುರೋಪಿನ ವರ್ತಕರು ಕೂಡು ಬಂಡವಾಳದ ಕಂಪನಿ, ವಿಮಾ ಕಂಪನಿ, ಬ್ಯಾಂಕಿಂಗ್ ವ್ಯವಸ್ಥೆಯನ್ನು ರೂಪಿಸಿದರು. ೧೯ನೇ ಶತಮಾನದಲ್ಲಿ ಹೊಸ ಮಾದರಿಯ ಬ್ಯಾಂಕಿಂಗ್ ವ್ಯವಸ್ಥೆ ಹಂತ ಹಂತವಾಗಿ ರೂಪುಗೊಂಡರೂ ಅಸಂಘಟಿತ ಬ್ಯಾಂಕಿಂಗ್ ವ್ಯವಸ್ಥೆ ಪ್ರಬಲವಾಯಿತು. ಇವುಗಳು ದೇಶಿ ಮಾದರಿ ಅಥವಾ ಯುರೋಪಿಯನ್ನರಿಂದ ಪ್ರಭಾವಿತವಾಗಿದ್ದವು. ಇಲ್ಲಿ ಬ್ಯಾಂಕರ್ಸ್‌ಗಳ ಪಾತ್ರ ಪ್ರಬಲವಾಗಿದೆ. ಈ ದಿಸೆಯಲ್ಲಿ ಪ್ರಮುಖ ವರ್ತಕ ಸಮುದಾಯಗಳು ಮತ್ತು ಮಠಗಳು ಕಾರ್ಯನಿರತವಾಗಿದ್ದವು. ಅವುಗಳೆಂದರೆ, ಸೆಟ್ಟಿ, ನಗರ್ತರು, ಬನಿಯಾ, ಶೇಠ್, ಮಾರ್ವಾಡಿ, ಗುಜರಾತಿ, ಚೆಟ್ಟಿ ಇತ್ಯಾದಿ ವರ್ತಕ ಸಮುದಾಯಗಳು[೩] ಮತ್ತು ಮಠಗಳು ಸಹ ಈ ತೆರನಾದ ಕಾರ್ಯ ವೈಖರಿಯನ್ನು ನಿರ್ವಹಿಸುತ್ತಿದ್ದವು. ಉದಾಹರಣೆ ಬೇಲಿಮಠ, ನರಗುಂದದೇವರಮಠ, ದೊಡ್ಡಮಠ, ಶಂಕರದೇವರಮಠ, ಗುರುವಣ್ಣದೇವರ ಮಠ, ಸರ್ಪಭೂಷಣಮಠ ಇವೇ ಮೊದಲಾದ ಮಠಗಳು.[೪] ಇದಕ್ಕೆ ಪೂರಕವಾಗಿ ಬೌರಿಂಗ್ ತಮ್ಮ 'ಈಸ್ಟ್ರನ್ ಎಕ್ಸ್‌ಪೀರಿಯನ್ಸ್' ಪುಸ್ತಕದಲ್ಲಿ ಲೇವಾದೇವಿ ವ್ಯವಹಾರವನ್ನು ಪ್ರಶಂಸಿರುವನು. 'ಸ್ಥಳೀಯ ಬ್ಯಾಂಕರುಗಳ ಅರ್ಹತೆ, ಗುಣಮಟ್ಟ ಕಡಿಮೆಯದಾಗಿರಲಿಲ್ಲ'.[೫] ಮುಂದೆ ೧೮೯೬ರಲ್ಲಿ ಬೆಂಗಳೂರು ದಂಡು ಪ್ರದೇಶಕ್ಕೆ ಸೈನ್ಯ ಅಧಿಕಾರಿಯಾಗಿ ಬಂದ ವಿನ್ಸ್ಟನ್ ಚರ್ಚಿಲ್ ಸಹ ಲೇವಾದೇವಿ ವ್ಯವಹಾರದ ಬಗೆಗೆ ಉಲ್ಲೇಖಿಸುವನು. 'ಸಾಹುಕಾರರು ಸಾಕಷ್ಟು ಹಣ ಸಂಪಾದನೆ ಮಾಡಿ ಒಳ್ಳೆಯ ಜೀವನ ನಡೆಸುತ್ತಿದ್ದರು. ಇವರು ಲೋಭಿಗಳು, ದುರಾಸೆ ಉಳ್ಳವರಾಗಿದ್ದರು ಮತ್ತು ಯಾವುದೇ ರೀತಿಯ ದಯೆ, ದಾಕ್ಷಿಣ್ಯ, ಅನುಕಂಪ ಇಲ್ಲದೇ ಸಾಲಗಾರರನ್ನು ಹಿಂಸಿಸಿ ಸಾಲ ವಸೂಲು ಮಾಡುತ್ತಿದ್ದರು.[೬] ಇದೇ ವಿಚಾರ ೧೯೦೫ರಲ್ಲಿ ರಚಿತವಾದ 'ಎ ಗೈಡ್ ಟು ಬೆಂಗಳೂರು' ಎಂಬ ಪುಸ್ತಕದಲ್ಲೂ ಮತ್ತೆ ಕಾಣಿಸುವುದು. 'ಬೆಂಗಳೂರಿನ ದಂಡು ಪ್ರದೇಶದ ಸೆಂಟ್ ಜಾನ್ ಹಿಲ್ಸ್, ಕಮರ್ಷಿಯಲ್ ಸ್ಟ್ರೀಟ್, ಹಲಸೂರು, ಶೂಲೆ ಮುಂತಾದೆಡೆ ಇಂತಹ ಲೇವಾದೇವಿ ಸಂಸ್ಥೆಗಳು ಇದ್ದು ಇವುಗಳನ್ನು ಹಿಂದೂ ಬ್ಯಾಂಕರ್ಸ್ ಮತ್ತು ಸಾಹುಕಾರರು ಎಂದು ಕರೆಯಲಾಗಿದೆ.[೭]

### ಬ್ಯಾಂಕಿಂಗ್ ವ್ಯವಸ್ಥೆಯ ಆರಂಭ

ವಸಾಹತುಕಾಲಘಟ್ಟದಲ್ಲಿ ಸಾಮ್ರಾಜ್ಯಶಾಹಿ ನೀತಿಯ ನೆಲೆಯಲ್ಲಿ ಬ್ಯಾಂಕಿಂಗ್ ವ್ಯವಸ್ಥೆ ಒಂದು ಹೊಸ ರೂಪವನ್ನು ಪಡೆಯಿತು. ೧೮ನೇ ಶತಮಾನದ ಕೊನೆಯ ಹೊತ್ತಿಗೆ ಕೈಗಾರಿಕಾ ಕ್ರಾಂತಿಯ ಪ್ರಭಾವದಿಂದ ಇಂಗ್ಲೆಂಡಿನಲ್ಲಿ ಸಹಕಾರಿ ಚಳುವಳಿಯು ಕಂಡುಬಂದಿತು. ಇದು ವರ್ತಕರನ್ನು

ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಪರಿಣಿತರನ್ನಾಗಿಸಿತ್ತು. ಇದರಿಂದಾಗಿ ೧೯ನೇ ಶತಮಾನದಲ್ಲಿ ಸಂಘಟಿತ ಸಂಸ್ಥೆಯ ಸ್ಥಳೀಯ ಬ್ಯಾಂಕುಗಳನ್ನು ಸ್ಥಾಪಿಸುವುದರಲ್ಲಿ ಯುರೋಪಿನ ವರ್ತಕ ಸಮುದಾಯಗಳು ಸಕ್ರಿಯ ಪಾತ್ರವನ್ನು ವಹಿಸಿದವು. ಮುಂದೆ ೨೦ನೇ ಶತಮಾನದ ಹೊತ್ತಿಗೆ ಭಾರತೀಯ ವರ್ತಕ ಸಮುದಾಯಗಳೇ ಈ ಕಾರ್ಯದಲ್ಲಿ ಪ್ರಮುಖ ಪಾತ್ರ ನಿರ್ವಹಿಸಿದವು. ಇಂತಹ ಬ್ಯಾಂಕ್‌ಗಳಿಗೆ ಮಾರ್ಗದರ್ಶನವನ್ನು ಯುರೋಪಿಯನ್ ವಾಣಿಜ್ಯೋದ್ಯಮಿಗಳು ನೀಡುತ್ತಿದ್ದರು.

೧೮ನೇ ಶತಮಾನದಲ್ಲಿ ಆರಂಭವಾದ ವಸಾಹತುಶಾಹಿ ಪ್ರಕ್ರಿಯೆಯು ೧೯ನೇ ಶತಮಾನದ ಪೂರ್ವಾರ್ಧದಲ್ಲಿಯೂ ಮುಂದುವರೆಯಿತು. ಹಂತ ಹಂತವಾಗಿ ವಸಾಹತುಕರಣಕ್ಕೆ ಒಳಪಡುತ್ತಿದ್ದ ಭಾರತದ ಭೂಭಾಗಗಳ ಮೇಲೆ ನಿಯಂತ್ರಣ ಸಾಧಿಸಲು ಈ ಕಾಲಘಟ್ಟದಲ್ಲಿ ಐರೋಪ್ಯ ಮಾದರಿಯ ಆಡಳಿತ ಹಾಗೂ ಆರ್ಥಿಕತೆಯನ್ನು ಹಂತ ಹಂತವಾಗಿ ಪರಿಚಯಿಸಿದರು. ಈ ಪ್ರಕ್ರಿಯೆಯ ಭಾಗವಾಗಿ ಬ್ಯಾಂಕಿಂಗ್ ವ್ಯವಸ್ಥೆಯನ್ನು ಸಹ ಕಾಣಬಹುದು. ವಸಾಹತುಕಾಲದಲ್ಲಿ ಸ್ಥಾಪಿತವಾಗಿದ್ದ ಬ್ಯಾಂಕುಗಳು ಬಹುತೇಕವಾಗಿ ಕೂಡು ಬಂಡವಾಳದ ಕಂಪನಿಗಳ ಸ್ವರೂಪದಾಗಿದ್ದವು. ಬ್ಯಾಂಕ್‌ಗಳ ಸ್ಥಾಪನೆಯ ಮುಖ್ಯ ಉದ್ದೇಶ ಭಾರತದಲ್ಲಿನ ವ್ಯಾಪಾರ–ವಾಣಿಜ್ಯ, ಹೊಸ ಆರ್ಥಿಕ ವ್ಯವಸ್ಥೆಗಳನ್ನು ಜಾರಿಗೆ ತಂದು ಬ್ರಿಟಿಶರ ಆಡಳಿತಕ್ಕೆ ಒಳಪಡಿಸುವುದಾಗಿತ್ತು. ೧೯ನೇ ಶತಮಾನದಿಂದ ೨೦ನೇ ಶತಮಾನದ ಆರಂಭದವರೆಗೂ ಇವುಗಳ ಮೇಲೆ ಪ್ರಭುತ್ವದ ಯಾವುದೇ ನಿಯಂತ್ರಣಗಳು ಇರಲಿಲ್ಲ. ಬ್ಯಾಂಕುಗಳನ್ನು ಸ್ಥಾಪಿಸುವುದು ಸರಳ ವಿಷಯವಾಗಿತ್ತು. ೨೦ನೇ ಶತಮಾನದ ಪ್ರಾರಂಭದವರೆಗೂ ಹಣದ ಲೇವಾದೇವಿ ವ್ಯವಹಾರವನ್ನು ಸಂಘಟಿತ ಮತ್ತು ಅಸಂಘಟಿತ ವಲಯಗಳಲ್ಲಿದ್ದ ದೇಶಿ–ವಿದೇಶಿ ಕಂಪನಿಗಳು ನಿರ್ವಹಿಸುತ್ತಿದ್ದುದನ್ನು ಕಾಣಬಹುದಾಗಿದೆ.[೮] ಇವುಗಳನ್ನು ಗಮನಿಸುತ್ತಾ ಬೆಂಗಳೂರು ಪ್ರದೇಶದಲ್ಲಿ ಬೆಳೆದುಬಂದ ಬ್ಯಾಂಕಿಂಗ್ ವ್ಯವಸ್ಥೆಯ ಆರಂಭಿಕ ಹಂತದ ಸ್ಥೂಲ ರೂಪವನ್ನು ಚರ್ಚಿಸಲು ಪ್ರಯತ್ನಿಲಾಗಿದೆ.

ಟಿಪ್ಪು ಕಾಲದಲ್ಲಿ ಅತ್ಯಂತ ಪ್ರಮುಖವಾಗಿದ್ದ ಎರಡು ನಗರ ಕೇಂದ್ರಗಳೆಂದರೆ ಶ್ರೀರಂಗಪಟ್ಟಣ ಮತ್ತು ಬೆಂಗಳೂರು. ೧೭೯೯ರ ಯುದ್ಧದ ನಂತರ ಶ್ರೀರಂಗಪಟ್ಟಣ ಅವನತಿಯನ್ನು ಹೊಂದುತ್ತಾ ಸಾಗಿದರೆ, ಬೆಂಗಳೂರು ಅಭಿವೃದ್ಧಿಯ ಹಾದಿಯಲ್ಲಿ ನಡೆದಿತ್ತು. ೧೮೩೧ರ ನಗರ ದಂಗೆಯ ನಂತರ ಮೈಸೂರು ಒಡೆಯರ ಆಳ್ವಿಕೆಯನ್ನು ತಡೆ ಹಿಡಿದು ಕಮಿಷನರ್‌ಗಳ ಆಳ್ವಿಕೆ ಆರಂಭವಾಗಿತ್ತು. ಈ ಸಂದರ್ಭದಲ್ಲಿ ಬೆಂಗಳೂರು ರಾಜಧಾನಿಯ ಪಟ್ಟವನ್ನು ಪಡೆದುಕೊಂಡಿತು. ಜೊತೆಗೆ ಸಾರಿಗೆ ಸಂಪರ್ಕದಲ್ಲಿಯೂ ಗುರುತರವಾದ ಬದಲಾವಣೆಗಳು ಉಂಟಾದವು. ೧೮೬೦ರ ದಶಕದವರೆಗೆ ಎರಡು ಹಂತದಲ್ಲಿ ಈ ಬದಲಾವಣೆಗಳನ್ನು ಗುರುತಿಸಬಹುದು. ೧೮೫೦ಕ್ಕಿಂತ ಪೂರ್ವದಲ್ಲಿ ಅನೇಕ ಹಳೆಯ ವ್ಯಾಪಾರಿ ಮಾರ್ಗಗಳ ಬದಲಿಗೆ ಹೊಸ ಮಾರ್ಗಗಳು ನಿರ್ಮಿತಗೊಂಡವು.

ಇದರಿಂದಾಗಿ ಅನೇಕ ಹಳೆಯ ನಗರ ಕೇಂದ್ರಗಳು ಪ್ರಾಮುಖ್ಯತೆ ಕಳೆದುಕೊಳ್ಳಲು ಪ್ರಾಂಭಿಸಿದವು. ಈ ಪ್ರಕ್ರಿಯೆಗೆ ತೀವ್ರತೆಯನ್ನು ತಂದಿದ್ದು ರೈಲ್ವೆ ಮಾರ್ಗದ ಪರಿಚಯ. ಇದು ಸಂಪೂರ್ಣವಾಗಿ ಹೊಸ ಮಾರ್ಗ ಮತ್ತು ಹೊಸ ನಗರಗಳ ಬೆಳವಣಿಗೆಗೂ ಕಾರಣವಾಯಿತು. ಬೆಂಗಳೂರು ನಗರವು ಈ ಆಧುನಿಕ ಸೌಲಭ್ಯಗಳನ್ನು ಹೊಂದಿತ್ತು. ಹಾಗಾಗಿ ಬ್ಯಾಂಕಿಂಗ್ ವ್ಯವಸ್ಥೆಯ ಆರಂಭಕ್ಕೆ ಪೂರಕ ವಾತಾವರಣವನ್ನು ನಿರ್ಮಿಸಿತು. ೧೮೬೪ರ ಮದ್ರಾಸ್ ಪ್ರೆಸಿಡೆನ್ಸಿ ಬ್ಯಾಂಕ್ ಬೆಂಗಳೂರು ಪ್ರದೇಶದಲ್ಲಿ ಮೊಟ್ಟ ಮೊದಲು ಸ್ಥಾಪನೆಯಾದ ಬ್ಯಾಂಕಾಗಿದೆ. ಇದರ ಮುಖ್ಯ ಉದ್ದೇಶ ಬೆಂಗಳೂರಿನಲ್ಲಿದ್ದ ಯುರೋಪಿನ ವರ್ತಕರ ಕಂಪನಿಗಳಿಗೆ ಸಹಾಯ ಮಾಡುವುದು. ಮದ್ರಾಸ್ ಬಂದರಿನ ಮೂಲಕ ನಡೆಯುತ್ತಿದ್ದ ವ್ಯಾಪಾರ ವಾಣಿಜ್ಯಕ್ಕೆ ಆರ್ಥಿಕ ಸಹಕಾರ ನೀಡುವುದು. ಜೊತೆಗೆ ಸೈನಿಕರಿಗೆ ಹಣಕಾಸಿನ ಸೌಲಭ್ಯವನ್ನು ನೀಡುವುದು ಸಹ ಆಗಿತ್ತು.[೬] ೧೮ ಮತ್ತು ೧೯ನೇ ಶತಮಾನದಲ್ಲಿ ಬ್ಯಾಂಕಿಂಗ್ ಉದ್ಯಮದ ಹುಟ್ಟು ಮತ್ತು ಬೆಳೆವಣಿಗೆಗೆ ಕಾರಣವಾದ ಅಂಶಗಳನ್ನು ಈ ಕೆಳಗಿನಂತೆ ಗುರುತಿಸಬಹುದಾಗಿದೆ.

೧. ೧೮೩೧–೧೮೮೧ರ ವರೆಗೆ ಮೈಸೂರು ರಾಜ್ಯವು ಕಮಿಷನರುಗಳ ಆಡಳಿತಕ್ಕೆ ಒಳಪಟ್ಟಾಗ ಯುರೋಪಿನ ಮಾದರಿಯ ಆರ್ಥಿಕತೆಯ ಚಟುಚಟಿಕೆಯ ವ್ಯಾಪಾರ–ವಾಣಿಜ್ಯ, ಕೈಗಾರಿಕೆ ವಲಯವನ್ನು ಜಾರಿಗೊಳಿಸಿದರು. ಇದು ಕಂಪನಿ ವಲಯದಲ್ಲಿ ಕೂಡು ಬಂಡವಾಳ ಸಂಸ್ಥೆಗಳ ಸ್ಥಾಪನೆಗೆ ಕಾರಣವಾಯಿತು.

೨. ಮೈಸೂರು ರಾಜ್ಯದ ರಾಜಧಾನಿಯನ್ನು ಬೆಂಗಳೂರಿಗೆ ಬದಲಾಯಿಸಿದ್ದು ಸಹ ಒಂದು ಒಳ್ಳೆಯ ಆರ್ಥಿಕತೆ ಕೇಂದ್ರವಾಗಿ ಬೆಳೆಯಲು ಕಾರಣವಾಗಿ ಬ್ಯಾಂಕಿಂಗ್ ವಲಯದ ಸ್ಥಾಪನೆಗೆ ಕಾರಣವಾಯಿತು.

೩. ೧೮೦೯ರಲ್ಲಿ ದಂಡು ಪ್ರದೇಶದ ಉದಯವಾಗಿ ನಂತರದಲ್ಲಿ ಬ್ರಿಟಿಶರ ವಾಸದ ನೆಲೆಯಾಯಿತು. ಇದು ನಗರ ವ್ಯಾಪಾರ–ವಾಣಿಜ್ಯದ ಕ್ಷೇತ್ರದಲ್ಲಿ ಹೊಸ ಅಲೆಯನ್ನು ಎಬ್ಬಿಸಿತು.

೪. ೧೮೬೦ರ ದಶಕದಲ್ಲಿ ಅಮೆರಿಕಾದಲ್ಲಿನ ಕಾಟನ್ ಬೂಮ್ ಬೆಂಗಳೂರು ಪ್ರದೇಶದಲ್ಲಿ ಜವಳಿ ಉದ್ಯಮ ಮತ್ತು ವಾಣಿಜ್ಯ ಕ್ಷೇತ್ರದಲ್ಲಿ ಬ್ಯಾಂಕಿಂಗ್ ವ್ಯವಸ್ಥೆ ಉಗಮಕ್ಕೆ ಪೂರಕ ವಾತಾವರಣವನ್ನು ರೂಪಿಸಿತು.

೫. ೧೮೫೭ರ ನಂತರ ಕಂಪನಿ ವಲಯದ ವ್ಯವಹಾರದಲ್ಲೂ ಸೀಮಿತ ಹೊಣೆಗಾರಿಕೆ ತತ್ವವನ್ನು ಅಳವಡಿಸಿದ್ದರಿಂದ ಕೂಡು ಬಂಡವಾಳ ಸಂಸ್ಥೆಗಳು ಖಾಸಗಿ ವಲಯದಲ್ಲಿ ಸ್ಥಾಪನೆಗೊಂಡು ಬ್ಯಾಂಕಿಂಗ್ ಉದ್ಯಮ ವ್ಯಾಪಕವಾಗಿ ಹರಡಲು ಕಾರಣವಾಯಿತು. ನಂತರದ ಕಾಲದಲ್ಲಿ

ಯುರೋಪಿನ ವರ್ತಕರಲ್ಲದೆ ಸ್ಥಳೀಯ ವರ್ತಕರು ಸಹ ಒಂದು ಸಂಘಟಿತ ಬ್ಯಾಂಕಿಂಗ್ ಸಂಸ್ಥೆಗಳನ್ನು ಸ್ಥಾಪನೆ ಮಾಡುವಲ್ಲಿ ಪ್ರಮುಖ ಪಾತ್ರ ವಹಿಸಿದರು. ಈ ನಿಟ್ಟಿನಲ್ಲಿ ಪೂರಕ ಸಂದರ್ಭಗಳು ಒದಗಿಬಂದವು.[೧೦]

ಅಲ್ಲದೇ ಇದಾದ ಕೆಲವೇ ವರ್ಷಗಳಲ್ಲಿ ಸ್ಥಳೀಯ ಖಾಸಗಿ ಬ್ಯಾಂಕಿಂಗ್ ಕಂಪನಿಗಳು ಆರಂಭವಾದವು. ಉದಾಹರಣೆಗೆ, ಬೆಂಗಳೂರು ಬ್ಯಾಂಕ್(೧೮೬೮) ಮತ್ತು ಮೈಸೂರು ಬ್ಯಾಂಕ್ ಕಾರ್ಪೋರೇಷನ್(೧೮೬೯). ೧೯೪೦ರ ದಶಕದವರೆಗೂ ೪೨ ಬ್ಯಾಂಕಿಂಗ್ ಕಂಪನಿಗಳು ಸ್ಥಾಪನೆ ಯಾಗಿತ್ತು.[೧೧] ಈ ಬ್ಯಾಂಕ್‌ಗಳಲ್ಲಿ ಸಾಮಾಜಿಕ ಹಾಗೂ ಧಾರ್ಮಿಕ ಕಾರ್ಯಗಳಿಗೆ ಸಹಕಾರ ನೀಡುವ ಬ್ಯಾಂಕುಗಳು ಸಹ ಹುಟ್ಟಿಕೊಂಡಿದ್ದವು.

ಬೆಂಗಳೂರು ಪ್ರದೇಶದಲ್ಲಿ ಸ್ಥಾಪಿತಗೊಂಡ ಕೆಲವು ಬ್ಯಾಂಕ್ ಕಂಪನಿಗಳ ಪಟ್ಟಿ ಹೀಗಿದೆ.

| ಕ್ರ.ಸಂ. | ಬ್ಯಾಂಕಿಂಗ್ ಕಂಪನಿಗಳು ಹೆಸರು | ನೋಂದಣಿವರ್ಷ | ಷೇರು ಬಂಡವಾಳ ರೂಗಳಲ್ಲಿ |
|---|---|---|---|
| ೧. | ಬೆಂಗಳೂರು ಬ್ಯಾಂಕ್ | ೧೮೬೮ | ೭,೦೦,೦೦೦ |
| ೨. | ಮೈಸೂರು ಬ್ಯಾಂಕ್ ಕಾರ್ಪೋರೇಷನ್ | ೧೮೬೮ | ೨,೦೦,೦೦೦ |
| ೩. | ಹಿಂದು ದ್ರವ್ಯ ಶೇಖರನಿಧಿ | ೧೮೬೯ | ೫೦,೦೦೦ |
| ೪. | ಕರ್ನಾಟಕ್ ಬ್ಯಾಂಕ್ | ೧೮೬೯ | ೧,೫೦,೦೦೦ |
| ೫. | ಹಿಂದು ಬ್ಯಾಂಕ್ | ೧೮೭೦ | ೨,೦೦,೦೦೦ |
| ೬. | ಮಹಾರಾಷ್ಟ್ರಾ ಬ್ಯಾಂಕ್ | ೧೮೭೧ | ೫೦,೦೦೦ |
| ೭. | ಟೌನ್ ಬ್ಯಾಂಕ್ | ೧೮೭೧ | ೫೦,೦೦೦ |
| ೮. | ಪೇಟೆ ಮರ್ಚೆಂಟ್ ಬ್ಯಾಂಕ್ | ೧೮೭೨ | ೩,೦೦,೦೦೦ |
| ೯. | ಧನಾದಿ ವೃದ್ಧಿ ಬ್ಯಾಂಕ್ | ೧೮೭೨ | ೨೫,೦೦೦ |
| ೧೦. | ಬೇಲಿ ಬ್ಯಾಂಕ್ | ೧೮೭೨ | ೨೦,೦೦೦ |
| ೧೧. | ಅಲಸೂರು ಬ್ಯಾಂಕ್ | ೧೮೭೩ | ೫೦,೦೦೦ |
| ೧೨. | ಕಮರ್ಷಿಯಲ್ ಬ್ಯಾಂಕ್ | ೧೮೭೩ | ೫೦,೦೦೦ |
| ೧೩. | ಕಲ್ಯಾಣ ಪುರಿ ಬ್ಯಾಂಕ್ | ೧೮೭೩ | ೧,೦೦,೦೦೦ |

| ೧೪. | ಮುರಹರಸ್ವಾಮಿ ಬ್ಯಾಂಕ್ | ೧೮೭೪ | ೨೦,೦೦೦ |
|---|---|---|---|
| ೧೫. | ಅಲಸೂರು ಜನೋಪಕಾರ ಬ್ಯಾಂಕ್ | ೧೮೭೪ | ೨೦,೦೦೦ |
| ೧೬. | ಯುನೈಟೆಡ್ ನೇಟಿವ್ ಬ್ಯಾಂಕ್ | ೧೮೭೪ | ೫೦,೦೦೦ |
| ೧೭. | ಲಕ್ಷ್ಮೀ ವಿಲಾಸ ಬ್ಯಾಂಕ್ | ೧೮೭೫ | ೫೦,೦೦೦ |
| ೧೮. | ಅಲಸೂರು ಹಿಂದು ಪಂಥ | ೧೮೭೫ | ೨೦,೦೦೦ |
| ೧೯. | ಅಲಸೂರು ಹಿಂದು ದ್ರವ್ಯ ಪೋಷಿಣಿ ಸಂಘಂ | ೧೮೭೫ | ೪೦,೦೦೦ |
| ೨೦. | ಕಂಟೋನ್ಮೆಂಟ್ ಕ್ಯಾಮಿರಿ ಕೋಡ್ ಸೇವಿಂಗ್ಸ್ ಬ್ಯಾಂಕ್ | ೧೮೭೫ | ೫೦,೦೦೦ |
| ೨೧. | ಪ್ರೋವಿನ್ಸಿಯಲ್ ಬ್ಯಾಂಕ್ | ೧೮೭೫ | ೧,೦೦,೦೦೦ |
| ೨೨. | ದೊಡ್ಡ ಪೇಟೆ ರಾಜಧಾನಿ ಬ್ಯಾಂಕ್ | ೧೮೭೫ | ೨೦,೦೦೦ |
| ೨೩. | ಕಂಟೋನ್ಮೆಂಟ್ ಜನರಲ್ ಬ್ಯಾಂಕ್ | ೧೮೭೫ | ೫೦,೦೦೦ |
| ೨೪. | ಕೃಷ್ಣರಾಜೇಂದ್ರ ಬ್ಯಾಂಕ್ | ೧೮೭೬ | ೨೦,೦೦೦ |
| ೨೫. | ನಗರ್ತಪೇಟ್ಟ ದ್ರವ್ಯೋಪಕಾರನಿಧಿ | ೧೮೮೯ | ೪,೯೨೬ |
| ೨೬. | ಶ್ರೀನಿವಾಸ ನಿಧಿ ಲಿ. | ೧೮೮೯ | ೫,೭೧೫ |
| ೨೭. | ದೊಡ್ಡಪೇಟೆ ಶ್ರೀ ಸುಂದರ ಮೀನಾಕ್ಷಮ್ಮನ್ ನಿಧಿ | ೧೮೮೭ | ೨,೨೮,೦೨೫ |
| ೨೮. | ದ್ರವ್ಯ ಸಹಾಯ ನಿಧಿ | ೧೮೮೯ | ೪, ೨೧೨ |
| ೨೯. | ಮನೋರಂಜಿನಿ ಬ್ಯಾಂಕ್ ಲಿ. | ೧೮೯೦ | ೪೭,೦೧೨ |
| ೩೦. | ಸೂರ್ಯನಾರಾಯಣ ನಿಧಿ ಲಿ. | ೧೮೯೨ | ೫೨೬ |

ಬೆಂಗಳೂರು ಪ್ರದೇಶದಲ್ಲಿ ಮೂಲಭೂತ ಸೌಲಭ್ಯಗಳ ಲಭ್ಯತೆ, ೧೯೦೫ ಸಹಕಾರಿ ಸಂಘ ಚಳುವಳಿಯ ಪ್ರಭಾವ, ೧೯೦೬ ಸ್ವದೇಶಿ ಚಳುವಳಿಯ ಪ್ರಭಾವ, ಮೈಸೂರು ಅರಸರು ಆಡಳಿತದಲ್ಲಿ ತೋರಿದ ಉದಾರ ಆರ್ಥಿಕ ನೀತಿಗಳು ಇತ್ಯಾದಿ ಅಂಶಗಳು ೧೯೦೦ರ ದಶಕದ ನಂತರದಲ್ಲಿ ಸ್ಥಳೀಯರು ಸಹ ಈ ನಿಟ್ಟಿನಲ್ಲಿ ಕಾರ್ಯವೆಸಗುವಂತೆ ಬ್ಯಾಂಕಿಂಗ್ ಕಂಪನಿಗಳು ಸ್ಥಾಪಿತವಾದವು.

೧. ಮೈಸೂರು ಬ್ಯಾಂಕ್ ಲಿ. ೧೯೧೩ –

೨. ಮಾಣಿಕ್ಯವೇಲು ಬ್ಯಾಂಕಿಂಗ್ ಕಾರ್ಪೊರೇಷನ್ ೧೯೨೦ –

೩. ಮೈಸೂರು ಇಂಡಸ್ಟ್ರಿಯಲ್ ಬ್ಯಾಂಕ್ ಲಿ. ೧೯೨೦ –

೪. ದೇವಾಂಗ ಬ್ಯಾಂಕ್ ಲಿ. ೧೯೨೬ –

೫. ಮೈಸೂರ್ ಒರಿಯಂಟಲ್ ಬ್ಯಾಂಕ್ ಲಿ. ೧೯೨೬ –

೬. ವೈಶ್ಯ ಬ್ಯಾಂಕ್ ಲಿ. ೧೯೩೦ –

೭. ಬೆಂಗಳೂರು ಕಮರ್ಷಿಯಲ್ ಬ್ಯಾಂಕ್ ೧೯೩೬ –

೮. ನಟರಾಜ ಬ್ಯಾಂಕ್ ಲಿ. ೧೯೩೩ –

೧೮೬೪ರಿಂದ ೧೯೪೦ರವರೆಗೆ ೪೪ ಬ್ಯಾಂಕ್‌ಗಳು ಸ್ಥಾಪನೆಯಾದ ಕುರಿತು ಮಾಹಿತಿ ಇದೆ. ಈ ಮೇಲ್ಕಂಡ ಪಟ್ಟಿಯಲ್ಲಿ ೩೮ ಬ್ಯಾಂಕ್‌ಗಳ ನೋಂದಣಿ ವರ್ಷ ಮತ್ತು ಕೂಡು ಬಂಡವಾಳವನ್ನು ಗಮನಿಸಬಹುದು. ಆದರೆ ೨೦ನೇ ಶತಮಾನದಲ್ಲಿ ಆರಂಭಗೊಂಡ ಬ್ಯಾಂಕ್ ಕೂಡು ಬಂಡವಾಳ ತಿಳಿದುಬರುವುದಿಲ್ಲ. ಈ ಬ್ಯಾಂಕ್‌ಗಳ ವೈವಿಧ್ಯಮಯ ಹೆಸರುಗಳ ನೆಲೆಯಲ್ಲಿ ಅವುಗಳ ಮುಖ್ಯ ಉದ್ದೇಶವನ್ನು ಗುರುತಿಸಬಹುದು. ಈ ಮೇಲಿನ ಪಟ್ಟಿಯಲ್ಲಿ ವರ್ತಕ ಸಮುದಾಯಗಳನ್ನು ಉಲ್ಲೇಖಿಸುವ ಬ್ಯಾಂಕ್‌ಗಳನ್ನು ಗಮನಿಸುವುದಾದರೆ, ದೇವಾಂಗ ಬ್ಯಾಂಕ್, ವೈಶ್ಯ ಬ್ಯಾಂಕ್, ವೀರಶೈವ ಸಹಕಾರಿ ಬ್ಯಾಂಕ್, ಭಾವಸಾರ ಬ್ಯಾಂಕ್‌ಗಳನ್ನು ನೋಡಿದಾಗ ಈ ವರ್ತಕ ಸಮುದಾಯಗಳು ಎಷ್ಟರ ಮಟ್ಟಿಗೆ ವಾಣಿಜ್ಯ–ವ್ಯಾಪಾರದಲ್ಲಿ ಭಾಗವಹಿಸುತ್ತಿದ್ದವು ಎಂಬುದರ ಬಗೆಗೆ ಬೆಳಕನ್ನು ಚೆಲ್ಲುತ್ತದೆ. ಅದೇ ರೀತಿಯಲ್ಲಿ ಬೆಂಗಳೂರು ಪೇಟೆಯಲ್ಲಿ ಯಾವ ಪೇಟೆ ಬೀದಿಯಲ್ಲಿ ವ್ಯಾಪಾರ ವಹಿವಾಟುಗಳು ಹೆಚ್ಚಾಗಿ ನಡೆಯುತ್ತಿದ್ದವು ಎಂಬುದನ್ನು ಗಮನಿಸುವುದಾದರೆ ದೊಡ್ಡಪೇಟೆಯ, ನಗರ್ತಪೇಟೆಯ ಹೆಸರನ್ನು ಹೊಂದಿರುವ ಬ್ಯಾಂಕ್‌ಗಳಾದ ದೊಡ್ಡಪೇಟೆ ರಾಜಧಾನಿ ಬ್ಯಾಂಕ್, ದೊಡ್ಡಪೇಟೆ ಶ್ರೀಸುಂದರ ಮೀನಾಕ್ಷಾಮ್ಮನ್ ನಿಧಿ, ನಗರ್ತಪೇಟ್ಟ ದ್ರವ್ಯೋಪಕಾರನಿಧಿ, ಟೌನ್ ಬ್ಯಾಂಕ್‌ಗಳ ತಿಳಿಸುತ್ತದೆ. ವ್ಯಾಪಾರದ ಮುಖ್ಯ ಉದ್ದೇಶದಿಂದಲೇ ಸ್ಥಾಪಿತಗೊಂಡ ಬ್ಯಾಂಕಿನ ಹೆಸರುಗಳನ್ನು ಈ ಪಟ್ಟಿಯಲ್ಲಿ ಕಾಣಬಹುದಾಗಿದೆ. ಉದಾಹರಣೆಗೆ, ಬೆಂಗಳೂರು ಕಮರ್ಷಿಯಲ್ ಬ್ಯಾಂಕ್, ಧನ್ಯ ವರ್ತಕರ ಸಹಕಾರಿ ಬ್ಯಾಂಕ್, ಪೇಟೆ ಮರ್ಚೆಂಟ್ ಬ್ಯಾಂಕ್, ಕಮರ್ಷಿಯಲ್ ಬ್ಯಾಂಕ್ ಮೊದಲಾದ ಬ್ಯಾಂಕ್‌ಗಳನ್ನು ಕಾಣಬಹುದಾಗಿದೆ. ಇದಷ್ಟೇ ಅಲ್ಲದೇ ವಿವಿಧ ಜಾತಿ, ಪಂಥ, ಸಮುದಾಯಗಳಿಗೆ ಸೇರಿದ ಸಹಕಾರಿ ಸಂಘಗಳು ಸ್ಥಾಪನೆಗೊಂಡವು.

ಸ್ವಾತಂತ್ರ್ಯ ಪೂರ್ವದಲ್ಲಿ ಸ್ಥಾಪಿತಗೊಂಡ ಸಹಕಾರಿ ಬ್ಯಾಂಕ್‌ಗಳ ಪಟ್ಟಿ.

೧. ಬೆಂಗಳೂರು ಸಿಟಿ ಕೋ ಅಪರೇಟಿವ್ ಬ್ಯಾಂಕ್ ೧೯೦೪ –

೨. ಭಾವಸಾರ ಕ್ಷತ್ರೀಯ ಬ್ಯಾಂಕ್ ೧೯೧೬ –

೩. ವೀರಶೈವ ಸಹಕಾರಿ ಬ್ಯಾಂಕ್ – –

೪. ಧನ್ಯ ಮರ್ಚೆಂಟ್ ಸಹಕಾರಿ ಬ್ಯಾಂಕ್ ೧೯೨೭ –

ಸಂಘಗಳ ಹಿನ್ನೆಲೆಯಲ್ಲಿ ಸ್ಥಾಪನೆಗೊಂಡ ಬ್ಯಾಂಕ್‌ಗಳು ಸಹ ಬ್ಯಾಂಕಿಂಗ್ ವ್ಯವಹಾರದಲ್ಲಿ ಪ್ರಮುಖ ಪಾತ್ರವನ್ನು ವಹಿಸಿದವು.

**ಹೊರ ರಾಜ್ಯಗಳ ಬ್ಯಾಂಕ್‌ಗಳ ಪಟ್ಟಿ**

| | | | |
|---|---|---|---|
| ೧. | ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ | ೧೯೧೧ | – |
| ೨. | ಇಂಪೀಯಲ್ ಬ್ಯಾಂಕ್ ಇಂಡಿಯಾ | ೧೯೨೦ | – |
| ೩. | ಸಿಂಡಿಕೇಟ್ ಬ್ಯಾಂಕ್ | ೧೯೩೩ | – |

ಇದಷ್ಟೇ ಅಲ್ಲದೇ ಕಟ್ಟಡ ನಿರ್ಮಾಣ ಸಹಕಾರಿ ಬ್ಯಾಂಕ್‌ಗಳು ಮತ್ತು ಸರ್ಕಾರಿ ನೌಕರರ ಸಹಕಾರಿ ಬ್ಯಾಂಕ್ ಕಂಪನಿಗಳು, ಸಾಮಾಜಿಕ ಮತ್ತು ಧಾರ್ಮಿಕ ಬ್ಯಾಂಕಿಂಗ್ ಕಂಪನಿಗಳು ಸಹ ಬೆಂಗಳೂರಿನ ದಂಡು ಮತ್ತು ಪೇಟೆ ಪ್ರದೇಶದಲ್ಲಿ ಸ್ಥಾಪನೆಗೊಂಡಿದ್ದವು. ಈ ಮೇಲಿನ ವಿಚಾರಗಳು ಬೆಂಗಳೂರಿನಲ್ಲಿ ಸ್ಥಾಪನೆಗೊಂಡಿದ್ದ ಬಹುತೇಕ ಬ್ಯಾಂಕ್‌ಗಳು ವರ್ತಕರು, ವ್ಯಾಪಾರ–ವಾಣಿಜ್ಯ ಉದ್ದೇಶದ ಹಿನ್ನೆಲೆಯಲ್ಲಿ ಸ್ಥಾಪನೆಗೊಂಡಿದ್ದ ಬ್ಯಾಂಕ್‌ಗಳೇ ಆಗಿದ್ದವು ಎಂಬುದನ್ನು ಸ್ಪಷ್ಟಪಡಿಸುವುದು. ಈ ಮೇಲಿನ ಅಂಶಗಳು ಬೆಂಗಳೂರು ಪ್ರದೇಶದಲ್ಲಿ ಬ್ಯಾಂಕಿಂಗ್ ವಲಯವನ್ನು ಸ್ಥಾಪಿಸಿಸುವ ಮೂಲಕ ವ್ಯಾಪಾರ–ವಾಣಿಜ್ಯವನ್ನು ಇನ್ನಷ್ಟು ವ್ಯಾಪಕವಾಗಿ ವೃದ್ಧಿಸುವಂತೆ ಮಾಡಿತು. ಫಲವಾಗಿ ಬೆಂಗಳೂರು ಪ್ರದೇಶದ ವ್ಯಾಪಾರ–ವಾಣಿಜ್ಯ ಚಟುವಟಿಕೆಯನ್ನು ವಿಸ್ತರಿಸಿದ್ದಲ್ಲದೆ ಬೆಂಗಳೂರು ಪ್ರದೇಶದ ನಗರೀಕರಣ ಪ್ರಕ್ರಿಯೆಯನ್ನು ಚುರುಕುಗೊಳಿಸಿತು. ಈ ಮೇಲಿನ ಪಟ್ಟಿಯನ್ನು ಕೇಸ್ ಹಿಸ್ಟರಿ ಆಗಿ ಮೈಸೂರು ಬ್ಯಾಂಕ್ ಬಗ್ಗೆ ಚರ್ಚಿಸಲಾಗಿದೆ.

## ಮೈಸೂರು ಬ್ಯಾಂಕ್

ಜೂನ್ ೧೯೧೧ರಲ್ಲಿ ಮೈಸೂರು ಆರ್ಥಿಕ ಸಭೆಯಲ್ಲಿ ಸ್ಥಳೀಯ ವರ್ತಕ ಸಮುದಾಯಗಳ ಬೇಡಿಕೆಯಂತೆ ಹೊಸ ವ್ಯವಸ್ಥೆಯ ಬ್ಯಾಂಕನ್ನು ಸ್ಥಾಪಿಸುವಂತೆ ಕೃಷ್ಣರಾಜ ಒಡೆಯರ ಬಳಿ ವಿನಂತಿಸಲಾಯಿತು. ಬ್ಯಾಂಕಿಂಗ್ ವ್ಯವಸ್ಥೆಗೆ ಸಂಬಂಧಿಸಿದಂತೆ ಜೂನ್ ೧೯೧೨ರಲ್ಲಿ ಎರಡನೆಯ ಅಧಿವೇಶನದಲ್ಲಿ ಬ್ಯಾಂಕಿಂಗ್ ಸಮಿತಿಯ ಅಧ್ಯಕ್ಷರಾದ ವಿಶ್ವೇಶ್ವರಯ್ಯನವರು ರಾಜ್ಯದ ಆರ್ಥಿಕತೆಯ ಹಿನ್ನೆಲೆಯಲ್ಲಿ ಪ್ರಭುತ್ವ ಅನುದಾನದಲ್ಲಿ ಬ್ಯಾಂಕನ್ನು ಸ್ಥಾಪಿಸುವ ಅಗತ್ಯವಿದೆ ಎಂದು ಹೇಳಿದರು. ಇದನ್ನು ಪರಿಗಣಿಸಿ ಮೈಸೂರು ಅರಸರು ಪ್ರಭುತ್ವದಿಂದ ಅನುದಾನಿತ ಬ್ಯಾಂಕ್ ಸ್ಥಾಪಿಸಲು ಅನುಮತಿ ನೀಡಿದರು. ೧೯೧೩ರಲ್ಲಿ ಸ್ಥಾಪಿತಗೊಂಡ ಪ್ರಥಮ ಅನುದಾನಿತ ಬ್ಯಾಂಕಾಗಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಹೊರ ಹೊಮ್ಮಿತು. ಮೈಸೂರು ರಾಜ್ಯದ ವ್ಯಾಪಾರ–ವಾಣಿಜ್ಯದ ಕಾರ್ಯ ಚಟುವಟಿಕೆ ಕೇಂದ್ರ ಬಿಂದುಗಳಾದ ವರ್ತಕ ಸಮುದಾಯಗಳಿಗೆ ಮತ್ತು ಕೈಗಾರಿಗೆಗಳನ್ನು ಅಭಿವೃದ್ಧಿ ಪಡಿಸುವ

ಮತ್ತು ಹಣಕಾಸಿನ ಸಹಾಯ ಮಾಡುವ ಹಿನ್ನೆಲೆಯ ಉದ್ದೇಶದಿಂದ ಸ್ಥಾಪನೆಗೊಂಡಿತು. ಇದು ಸಹ ಕೂಡು ಬಂಡವಾಳ ಬ್ಯಾಂಕ್ ಆಗಿದೆ.

ಬ್ಯಾಂಕ್ ಸ್ಥಾಪನೆಯ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಒಂದು ಡೈರೆಕ್ಟರ್ಸ್ ಬೋರ್ಡ್‌ನ್ನು ಪ್ರಭುತ್ವ ರಚನೆಮಾಡಿತು. ಅದರಲ್ಲಿ ಇದ್ದ ಪ್ರಮುಖ ವ್ಯಕ್ತಿಗಳ ಪಟ್ಟಿ ಹೀಗಿವೆ,[೨]

೧. ಕೆ. ಪಿ. ಪುಟ್ಟಣ್ಣಚೆಟ್ಟಿ (ಪ್ರಬಲ ಬಣಜಿಗ ವರ್ತಕ ಸಮುದಾಯದವರು)

೨. ಇ. ಆರ್. ಸುಬ್ಬರಾಯರ್

೩. ಮಂಡಿ ಹರಿಯಣ್ಣ (ವರ್ತಕ ಸಮುದಾಯದವರು)

೪. ಎಮ್. ಚೆನ್ನಯ್ಯ ಚೆಟ್ಟಿ (ವರ್ತಕ ಸಮುದಾಯದವರು)

೫. ಅಬ್ದುಲ್ ಕುದ್ದಿಸ್ (ವರ್ತಕ ಸಮುದಾಯದವರು)

೬. ಒರೆಕೊಂಡಿ ಚೆನ್ನಬಸಪ್ಪ( ವರ್ತಕ ಸಮುದಾಯದವರು)

೭. ಅಹಮದ್ ಸೇಟ್ (ವರ್ತಕ ಸಮುದಾಯದವರು)

೮. ಡಿ. ಬಾನುಮಿಯ್ಯ (ವರ್ತಕ ಸಮುದಾಯದವರು)

೯. ವೈ. ನರಸಿಂಗಾ ರಾವ್ (ವರ್ತಕ ಸಮುದಾಯಕ್ಕೆ ಸೇರಿದವರು)

ಬ್ಯಾಂಕಿನ ಬೋರ್ಡ್ ಆಫ್ ಡೈರೆಕ್ಟರ್ಸ್‌ನ ಪಟ್ಟಿಯಲ್ಲಿ ಬಹುಪಾಲು ವರ್ತಕ ಸಮುದಾಯಗಳ ಪ್ರಬಲ ವರ್ತಕರ ಹೆಸರುಗಳು ಇರುವುದನ್ನು ಗಮನಿಸಬಹುದಾಗಿದೆ. ಪ್ರಭುತ್ವದಿಂದ ಅನುದಾನಿತ ಪ್ರಬಲ ಬ್ಯಾಂಕಿನ ಬೋರ್ಡ್ ಡೈರೆಕ್ಟರ್‌ಗಳ ಪಟ್ಟಿಯಲ್ಲಿಯೇ ಬಹುಪಾಲು ವರ್ತಕರ ಹೆಸರುಗಳಿರು ವುದನ್ನು ಕಾಣಬಹುದಾದರೆ. ಇನ್ನೂ ಸಾಮಾನ್ಯ ಬ್ಯಾಂಕ್‌ಗಳ ಸ್ಥಾಪನೆ ಮತ್ತು ಬೆಳವಣಿಗೆ ಹಾಗೂ ಕಾರ್ಯಚಟುವಟಿಕೆಯಲ್ಲಿ ವರ್ತಕ ಸಮುದಾಯಗಳ ಪಾತ್ರವನ್ನು ವಿವರಿಸುವ ಅಗತ್ಯ ಹೆಚ್ಚಿಲ್ಲವೆಂದು ಕಾಣುತ್ತದೆ.

ಅದಷ್ಟೇ ಅಲ್ಲದೆ, ಬ್ಯಾಂಕಿನ ಚೇರ್‌ಮ್ಯಾನ್‌ಗಳಾಗಿ ಕಾರ್ಯ ನಿರ್ವಹಿಸಿದ ಪುಟ್ಟಣ್ಣಚೆಟ್ಟಿ, ಬಿ. ಕೆ ಗರುಡಾಚಾರ್(ನಗರದ ಪ್ರಬಲ ವ್ಯಾಪಾರ ಸಮುದಾಯದ ವ್ಯಕ್ತಿ ಮತ್ತು ವಾಣಿಜ್ಯೋದ್ಯಮಿ), ಮಂಡಿ ಹಿರಿಯಣ್ಣ(ನಗರ ಪ್ರಬಲ ವರ್ತಕರು), ಎಂ. ಚೆಂಗಯ್ಯ ಚೆಟ್ಟಿ, ಅಬ್ದುಲ್ ಕುದ್ದಸ್ (ಚೆನ್ನಪಟ್ಟಣದ ರೇಷ್ಮೆ ವ್ಯಾಪಾರಿ), ಒರೆಕೊಂಡಿ ಚೆನ್ನಬಸಪ್ಪ(ದಾವಣಗೆರೆಯ ವರ್ತಕ), ಸಿಂಗಾರಿ ನಂಜಪ್ಪ( ತಿಪಟೂರಿನ ವರ್ತಕ), ಅಹಮದ್ ಸೇಟ್(ಬೆಂಗಳೂರಿನ ಪ್ರಬಲ ವಾಣಿಜ್ಯೋದ್ಯಮಿಯಾದ ಹಾಜಿ ಇಸ್ಮಾಯಿಲ್ ಸೇಟ್‌ರ ಮಗ), ಪಿ. ಸುಬ್ಬರಾಮಾ ಚೆಟ್ಟಿ ಮೊದಲಾದವರು ಸಹ ವರ್ತಕ

ಸಮುದಾಯದ ಹಿನ್ನೆಲೆಯುಳ್ಳವರು ಮತ್ತು ಪ್ರಬಲ ವರ್ತಕರಾದ್ದವರು ಬ್ಯಾಂಕಿನ ಕಾರ್ಯಗಳನ್ನು ನಿರ್ವಹಿಸುತ್ತಿದ್ದರು. ಹಾಗೆಯೇ ಮ್ಯಾನೇಜರಾಗಿ ಕಾರ್ಯವನ್ನು ಪ್ರಾರಂಭದಿಂದ ಸ್ವಾತಂತ್ರ್ಯ ಬರುವವರಿಗೆ ನಿರ್ವಹಿಸಿದವರು ವರ್ತಕ ಸಮುದಾಯಗಳಿಂದ ಬಂದ ಪ್ರಬಲ ವಾಣಿಜ್ಯೋದ್ಯಮಿಗಳ ಕುಟುಂಬದಿಂದ ಬಂದವರೆ ಆಗಿದ್ದರು. ಉದಾರಹರಣೆಗೆ ಡಬ್ಲ್ಯೂ. ಸಿ ರೋಸ್, ಎಂ ಎಚ್. ದಸ್ತರ್(ಪಾರ್ಸಿ ಸಮುದಾಯದ ಹಿನ್ನೆಲೆಯಿಂದ ಬಂದವರು), ಎಫ್. ಎಲ್. ಪ್ಯಾರಡನ್ ಲಂಡನಿನ ಪ್ರಬಲ ವಾಣಿಜ್ಯೋದ್ಯಮಿಯಾದ ಎಲ್. ಜಿ ಪ್ಯಾರಡನಿನ ಮಗ) ಹೀಗೆ ಮೊದಲಾದವರು. ಮೈಸೂರು ಬ್ಯಾಂಕ್ ಸ್ಥಾಪನೆಯಿಂದ ಹಿಡಿದು ಅದರ ಬೆಳವಣಿಗೆಯಲ್ಲೂ ವರ್ತಕ ಸಮುದಾಯಗಳ ಪಾತ್ರವನ್ನು ಗುರುತಿಸಬಹುದು.[೧೩]

ಭಾರತದಲ್ಲಿನ ಬ್ಯಾಂಕ್‌ಗಳ ಹುಟ್ಟು ಮತ್ತು ಬೆಳವಣಿಗಳ ಹಿನ್ನೆಲೆಯಲ್ಲಿ ಅವುಗಳನ್ನು ೪ ತೆರನಾಗಿ ವಿಂಗಂಡಿಸಬಹುದು.

೧. ದಿ ಇಂಪೀರಿಯಲ್ ಬ್ಯಾಂಕ್. ೨. ದಿ ಎಕ್ಸ್‌ಚೇಂಜ್ ಬ್ಯಾಂಕ್, ೩. ದಿ ಇಂಡಿಯನ್ ಜಾಯಿಂಟ್ ಸ್ಟಾಕ್ ಕಂಪನಿಗಳು, ೪. ದಿ ಇಂಡಿಯನ್ ಕೋ-ಅಪರೇಟಿವ್ ಬ್ಯಾಂಕ್,

ಮೈಸೂರು ಬ್ಯಾಂಕಿನ ಮೂಲಕ ವರ್ತಕರು, ವಾಣಿಜ್ಯೋದ್ಯಮಿಗಳು, ಕೈಗಾರಿಕೋದ್ಯಮಿಗಳು, ಕೃಷಿಕರಿಗೆ ಹಣಕಾಸಿನ ಸಹಕಾರವನ್ನು ಇಂದಿನವರೆಗೂ ನೀಡುತ್ತಾ ಬಂದಿದೆ. ಲಭ್ಯ ದಾಖಲೆಗಳ ಪ್ರಕಾರ ವರ್ಷದಿಂದ ವರ್ಷಕ್ಕೆ ಬ್ಯಾಂಕ್ ನೀಡಿರುವ ಹಣಕಾಸಿನ ಸಹಕಾರವನ್ನು ನೀಡಿದ ವಿವರಗಳು ಇಂತಿವೆ.[೧೪]

| ವರ್ಷ | ನೀಡಿರುವ ಹಣ ರೂ.ಗಳಲ್ಲಿ | ವರ್ಷ | ನೀಡಿರುವ ಹಣ ರೂ.ಗಳಲ್ಲಿ |
|---|---|---|---|
| ೧೯೧೩ | ೬ ಲಕ್ಷಗಳು | ೧೯೨೬ | ೨೭೬ |
| ೧೯೧೪ | ೪೯ | ೧೯೨೭ | ೩೮೭ |
| ೧೯೧೫ | ೯೦ | ೧೯೨೮ | ೫೫೩ |
| ೧೯೧೬ | ೧೪೭ | ೧೯೨೯ | ೪೦೩ |
| ೧೯೧೭ | ೧೭೪ | ೧೯೩೦ | ೩೭೩ |
| ೧೯೧೮ | ೨೭೦ | ೧೯೩೧ | ೨೭೨ |
| ೧೯೧೯ | ೨೯೯ | ೧೯೩೨ | ೨೯೮ |
| ೧೯೨೦ | ೩೫೨ | ೧೯೩೩ | ೩೨೪ |

| ೧೯೨೧ | ೩೦೯ | ೧೯೩೪ | ೩೮೩ |
|---|---|---|---|
| ೧೯೨೨ | ೩೨೩ | ೧೯೩೫ | ೩೬೬ |
| ೧೯೨೩ | ೨೫೦ | ೧೯೩೬ | ೩೯೨ |
| ೧೯೨೪ | ೨೬೭ | ೧೯೩೭ | ೪೦೯ |
| ೧೯೨೫ | ೨೭೩ | ೧೯೩೮ | ೨೪೦ |

ಮೈಸೂರು ಬ್ಯಾಂಕಿನ ಕಾರ್ಯವೈಖರಿಯು ಒಂದು ಉದಾಹರಣೆಯಷ್ಟೇ ಅದೇ ರೀತಿಯಲ್ಲಿ ಹಲವು ಖಾಸಗಿ ಅನುದಾನ ಬ್ಯಾಂಕ್‌ಗಳು ವ್ಯಾಪಾರ ಮತ್ತು ವಾಣಿಜ್ಯಕ್ಕೆ ಪೂರಕವಾಗಿ ಹಾಗೂ ಅದರ ಬೆಳವಣಿಗೆಗೆ ಸಹಕಾರಿಯಾಗಿ ಕಾರ್ಯ ನಿರ್ವಹಿಸಿದವು. ಇಂತಹ ಬ್ಯಾಂಕ್ ಸ್ಥಾಪನೆ ಮತ್ತು ನಿರ್ವಹಣೆಯಲ್ಲಿ ವರ್ತಕ ಸಮುದಾಯಗಳ ಪಾತ್ರವು ಹಿರಿದಾಗಿದೆ. ಈ ತೆರನಾದ ಬೆಳವಣಿಗಳನ್ನು ವಾಣಿಜ್ಯ ಮತ್ತು ವ್ಯಾಪಾರವನ್ನು ಮಾತ್ರವಲ್ಲದೆ ನಗರ ವ್ಯವಸ್ಥೆಯನ್ನು ವೃದ್ಧಿಸುವ ನಿಟ್ಟಿನಲ್ಲಿ ಹಣಕಾಸಿನ ಸೌಲಭ್ಯತೆಯನ್ನು ನೀಡಿತು. ಇದು ಬೆಂಗಳೂರು ಪ್ರದೇಶದ ಬೆಳವಣಿಗೆಗೆ ಕಾರಣವಾಯಿತು.

### ೬.೧.೨ ಉತ್ಪನ್ನ

ಆರ್ಥಿಕತೆಯ ಮೂಲ ಚಟುಚಟಿಕೆಯ ಕೇಂದ್ರಬಿಂದು ಎಂದರೆ ಅದು ಉತ್ಪಾದನಾ ಶಕ್ತಿ ಮತ್ತು ಉತ್ಪನ್ನವಾಗಿದೆ. ಉತ್ಪನ್ನವು ಬೌದ್ಧಿಕವಾಗಿರಬಹುದು ಅಥವಾ ಅಬೌದ್ಧಿಕವಾಗಿರಬಹುದು. ಆದರೆ ಅದು ವರ್ತಕ ಮತ್ತು ಅನುಭೋಗಿಯ ಮೇಲೆ ಹೆಚ್ಚು ಪ್ರಭಾವ ಬೀರುವ ಅಂಶವಾಗಿದೆ. ಇದರ ಮೇಲೆ ಮಾರುಕಟ್ಟೆ ನಿರ್ಣಯವಾಗುತ್ತದೆ. ಉತ್ಪನ್ನದ ಸ್ವರೂಪವನ್ನು ಪ್ರಾಥಮಿಕ, ದ್ವಿತೀಯ, ತೃತೀಯ ವಲಯವೆಂದು ೨೦ನೇ ಶತಮಾನದಲ್ಲಿ ವಿಂಗಡಿಸಲಾಗಿದೆ. ಒಂದು ದೇಶದ ಆರ್ಥಿಕತೆಯನ್ನು ನಿರ್ಧರಿಸುವ ಅಂಶಗಳಲ್ಲಿ ಉತ್ಪನ್ನವು ಒಂದು. ಇದರ ಹಿನ್ನೆಲೆಯಲ್ಲಿ ೧೮ ಮತ್ತು ೧೯ನೇ ಶತಮಾನದಲ್ಲಿ ಹಲವು ಸಿದ್ಧಾಂತಗಳು ರಚನೆಗೊಂಡವು. ಸಾಂಪ್ರದಾಯ, ನವ ಸಾಂಪ್ರದಾಯ ಪಂಥ, ವಾಣಿಜ್ಯವಾದ ಮೊದಲಾದ ಪಂಥಗಳು ಹುಟ್ಟಿಕೊಂಡಿತ್ತು. ಉತ್ಪನ್ನವು ಇಡೀ ಮಾರುಕಟ್ಟೆಯ ಸನ್ನಿವೇಶವನ್ನೇ ಬದಲಾಯಿಸುವ ಶಕ್ತಿಯನ್ನು ಹೊಂದಿದೆ. ಒಂದು ದೇಶದ ಇತಿಹಾಸದಲ್ಲಿ ಆಮೂಲಾಗ್ರ ಬದಲಾವಣೆಯನ್ನುಂಟು ಮಾಡುವ ಶಕ್ತಿ ಉತ್ಪನ್ನಕ್ಕಿದೆ. ಅರಬರು, ಪರ್ಷಿಯನ್ನರು, ಯುರೋಪಿಯನ್ನರು ಭಾರತಕ್ಕೆ ಬಂದಿದ್ದು ಉತ್ಪನ್ನಗಳನ್ನು ಹುಡುಕುತ್ತಾ ಎಂಬುದು ಇಲ್ಲಿ ಗಮನಾರ್ಹವಾಗಿದೆ. ಉತ್ಪನ್ನದ ಹಿನ್ನೆಲೆಯಲ್ಲಿ ಹಲವು ಯುದ್ಧಗಳು ಸಹ ನಡೆದ ವಿಚಾರಗಳನ್ನು ನಾವು ಚರಿತ್ರೆಯ ಪುಟಗಳಲ್ಲಿ ಕಾಣುತ್ತೇವೆ. ಇದರ ಫಲವಾಗಿ ರಾಜಕೀಯ, ಆರ್ಥಿಕ-ಸಾಮಾಜಿಕ ಮತ್ತು ಧಾರ್ಮಿಕ ಜೀವನದಲ್ಲಿ

ಮಹತ್ತರವಾದ ಬದಲಾವಣೆಯನ್ನು ಉಂಟುಮಾಡಿತು. ಈ ನಿಟ್ಟಿನಲ್ಲಿ ಉತ್ಪನ್ನಗಳ ಅಧ್ಯಯನದ ಅಗತ್ಯತೆ ಎಷ್ಟಿದೆ ಎಂದು ತಿಳಿಯುತ್ತದೆ.

ಪ್ರಾಚೀನ ಮತ್ತು ಮಧ್ಯಕಾಲದ ಮಾರುಕಟ್ಟೆಯ ಉತ್ಪನ್ನದ ಸ್ವರೂಪವು ಪ್ರಾಥಮಿಕ ಉತ್ಪನ್ನ ಆಧಾರದ ಮೇಲೆಯೇ ನಡೆಯುತ್ತಿತ್ತು. ಗುಣಮಟ್ಟವು ಉತ್ಪನ್ನದ ಬೆಲೆಯನ್ನು ನಿರ್ಧಾರಿಸುತ್ತಿತ್ತು. ಸಾಮಾನ್ಯವಾಗಿ ಉತ್ಪನ್ನದ ಗುಣಮಟ್ಟವು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿದ್ದವು. ಕಾರಣ ಪ್ರಾಥಮಿಕ ಆಧಾರದ ಉತ್ಪನ್ನವು ಕೃಷಿಯ ಮೂಲಕ ಬರುತ್ತಿತ್ತು. ಭೌಗೋಳಿಕ ಸನ್ನಿವೇಶಗಳು, ಉತ್ಪಾದಕನ ಕೌಶಲ್ಯ ಮತ್ತು ಉತ್ಪಾದನಾ ವಿಧಾನಗಳ ಪ್ರಭಾವ ಉತ್ಪನ್ನದ ಗುಣಮಟ್ಟದ ನಿರ್ಧಾರಕ ಅಂಶವಾಗಿ ಪರಿಗಣಿಸಲಾಗುತ್ತಿತ್ತು. ಪ್ರಾಥಮಿಕ ವಲಯದ ಮಾರುಕಟ್ಟೆಯ ಸ್ವರೂಪವನ್ನು ಪ್ರಾಚೀನ ಕಾಲದಲ್ಲಿ ಕಾಣಬಹುದು. ಇಂತಹ ಉತ್ಪನ್ನ ಎಷ್ಟರ ಮಟ್ಟಿಗೆ ಮಾರುಕಟ್ಟೆಯನ್ನು ಪ್ರಭಾವಿಸಿತೆಂದರೆ, ಮಾರುಕಟ್ಟೆಯ ಸ್ಥಳಗಳನ್ನು ಉತ್ಪನ್ನದ ಹೆಸರಿನೊಂದಿಗೆ ಕರೆಯುತ್ತಿದ್ದರು. ಅದೇ ರೀತಿ ವರ್ತಕರನ್ನು, ಕೃಷಿಕರನ್ನು ಆತ ಮಾರುವ ಅಥವಾ ಉತ್ಪಾದಿಸುವ ವಸ್ತುವಿನ ಜೊತೆ ಅವರ ಹೆಸರನ್ನು ಸೇರಿಸಿ ಕರೆಯುವ ಪ್ರವೃತ್ತಿಯನ್ನು ಕಾಣಬಹುದಾಗಿದೆ. ಅದಷ್ಟೇ ಅಲ್ಲದೆ ಮಾರುಕಟ್ಟೆಯ ವಿಸ್ತರಣೆಗೆ ಸಹ ಉತ್ಪನ್ನಗಳು ಕಾರಣವಾಗುತ್ತದೆ.

ಉತ್ಪಾದನಾ ವಿಧಾನವವು ಸಹ ಉತ್ಪನ್ನದ ಗುಣಮಟ್ಟವನ್ನು ಪ್ರಭಾವಿಸುತ್ತದೆ. ಉತ್ಪಾದನಾ ವಿಧಾನವು ಕಾಲದಿಂದ ಕಾಲಕ್ಕೆ ಬದಲಾವಣೆಯನ್ನು ಹೊಂದುತ್ತದೆ. ಉತ್ಪಾದನಾ ವಿಧಾನಗಳ ಬದಲಾವಣೆಗಳು ಅಂದಿನ ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಹಾಗೂ ವಿಜ್ಞಾನ-ತಂತ್ರಜ್ಞಾನದ ಅಂಶಗಳನ್ನು ಆಧರಿಸಿರುತ್ತದೆ. ಉತ್ಪನ್ನದ ಉತ್ಪಾದನಾ ವಿಧಾನವು ಹೊಯ್ಸಳ, ವಿಜಯನಗರ, ಟಿಪ್ಪು ಮತ್ತು ಬ್ರಿಟಿಶರ ಕಾಲಘಟ್ಟದಲ್ಲಿ ಹಲವು ಬದಲಾವಣೆಗಳಿಗೆ ಒಳಪಟ್ಟಿತು ಎಂದು ಗುರುತಿಸಬಹುದಾಗಿದೆ. ಈ ಅಧ್ಯಯನದ ಅವಧಿ ಮತ್ತು ವ್ಯಾಪ್ತಿಯು ವಸಹತುಕಾಲಘಟ್ಟದ ಬೆಂಗಳೂರು ಪ್ರದೇಶಕ್ಕೆ ಸೀಮಿತಗೊಂಡಿದೆ. ಇದರ ಹಿನ್ನೆಲೆಯಲ್ಲಿ ಬೆಂಗಳೂರು ಪ್ರದೇಶದ ಮಾರುಕಟ್ಟೆ, ವ್ಯಾಪಾರದ ಸ್ವರೂಪ ಮತ್ತು ಉತ್ಪನ್ನದ ಉತ್ಪಾದನಾ ವಿಧಾನದಲ್ಲಿ ಉಂಟಾದ ಬದಲಾವಣೆಗಳನ್ನು ಮತ್ತು ಬದಲಾದ ಉತ್ಪನ್ನದೊಂದಿಗೆ ಗುರುತಿಸಿಕೊಂಡ ವರ್ತಕ ಸಮುದಾಯಗಳ ಬಗೆಗೆ ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಿದೆ.

ಕೆಂಪೇಗೌಡನ ಕಾಲದಲ್ಲಿ ಬೆಂಗಳೂರು ನಗರ ಪ್ರದೇಶವು ಉತ್ಪನ್ನಗಳ ಆಧಾರದ ಮೇರೆಗೆ ಅಕ್ಕಿ ಪೇಟೆ, ರಾಗಿ ಪೇಟೆ, ಅರಳೆ ಪೇಟೆ, ದೊಡ್ಡ ಪೇಟೆ ಮತ್ತು ಚಿಕ್ಕಪೇಟೆ ಎಂಬ ಪೇಟೆಗಳು ರಚಿತಗೊಂಡವು. ಇವೆಲ್ಲಾ ಪ್ರಾಥಮಿಕ ವಲಯದ ಉತ್ಪನ್ನ ಸ್ವರೂಪದ ಮಾರುಕಟ್ಟೆಯನ್ನು ತಿಳಿಸುತ್ತದೆ. ಅಂದರೆ ಹೆಚ್ಚಾಗಿ ಕೃಷಿಯನ್ನಾಧಾರಿತವಾಗಿದ್ದವು. ಈ ಉತ್ಪನ್ನಗಳನ್ನು ಮಾರಾಟ ಮಾಡುವ ಹಿನ್ನೆಲೆಯಲ್ಲಿ

ಕೆಲವು ಸಮುದಾಯಗಳು ಗುರುತಿಸಿಕೊಂಡರು. ಉದಾಹರಣೆಗೆ, ಸಾಲೆಮೂಲೆ ಬಣಜಿಗರು, ಸೆಟ್ಟಿ, ನರ್ಗತರು. ಇವರ ಬಗೆಗೆ ಶಾಸನಗಳು ನಮಗೆ ತಿಳಿಸುತ್ತದೆ.[೧೫]

ಟಿಪ್ಪುವಿನ ಕಾಲದಲ್ಲಿ ಮಾರುಕಟ್ಟೆಯ ಸ್ವರೂಪದಲ್ಲಿ ಬದಲಾವಣೆಗಳು ಕಾಣಿಸಿಕೊಂಡಿತ್ತು. ಪ್ರಾಥಮಿಕ ವಲಯದ ಉತ್ಪನ್ನಗಳಲ್ಲಿ ವಾಣಿಜ್ಯ ಬೆಳೆಗಳಿಗೆ ಹೈದರ್ ಅಲಿ ಮತ್ತು ಟಿಪ್ಪು ಮಹತ್ವವನ್ನು ನೀಡಿದರು. ಅದರೊಂದಿಗೆ ದ್ವಿತೀಯ ವಲಯದ ಉತ್ಪನ್ನಗಳಿಗೆ ಟಿಪ್ಪು ಪ್ರಾಮುಖ್ಯತೆ ನೀಡಿದರು. ಪ್ರಾಥಮಿಕ ಮತ್ತು ದ್ವಿತೀಯ ವಲಯದ ಸ್ವರೂಪ ಉತ್ಪನ್ನಗಳ ತಯಾರಿಕೆಯು ಕೃಷಿ ಮತ್ತು ಮಾನವನ ಶ್ರಮ ಆಧಾರಿತವಾಗಿತ್ತು. ಬಹುತೇಕವಾಗಿ ಉತ್ಪನ್ನದ ಗುಣಮಟ್ಟವು ಉತ್ಪಾದನಾ ಕೌಶಲ್ಯತೆಯನ್ನು ಆಧರಿಸಿತು. ಈಗಾಗಲೇ ಇದ್ದ ಮಾರುಕಟ್ಟೆಯ ಪೇಟೆಗಳೊಂದಿಗೆ ತಾರಾಮಂಡಲ ಪೇಟೆಯು ದ್ವಿತೀಯ ವಲಯದ ಉತ್ಪನ್ನಗಳ ಮಾರುಕಟ್ಟೆಯ ಕೇಂದ್ರವಾಗಿ ಬೆಳೆದಿರುವುದನ್ನು ಅಲ್ಲಿ ಉತ್ಪಾದಿಸುತ್ತಿದ್ದ ಉತ್ಪನ್ನಗಳ ಆಧಾರದ ಮೇರೆಗೆ ಹೇಳಬಹುದಾಗಿದೆ.

ಗ್ರಂಥಿಗೆ ಅಥವಾ ಔಷಧಿ ಪದಾರ್ಥಗಳು, ಜೇನುತುಪ್ಪ, ಮೇಣ, ಶುಂಠಿ, ಇಂಗು, ಮೈಲುತುತ್ತ, ರಂಜಕ, ಪಟಗಾರ, ಬೆಳ್ಳಿಗಾರ, ಜವಳಿ ಉದ್ಯಮಕ್ಕೆ ಸಂಬಂಧಿಸಿದ ಬಣ್ಣ ತಯಾರಿಕಾ ಉತ್ಪನ್ನಗಳು, ಕಚ್ಚಾ ಹತ್ತಿ, ರೇಷ್ಮೆ, ಉಣ್ಣೆ ಇತ್ಯಾದಿ. ಮರದ ತಯಾರಿಕೆಗಳಾದ ದ್ವಾರಬಂಧ, ಕಂಬ, ಮೇಲ್ಛಾವಣಿ, ಪೀಠೋಪಕರಣಗಳು ಮತ್ತು ಬಿದಿರಿನ ಬುಟ್ಟಿ, ಮೊರ, ಸಿಬ್ಬಿಲು, ಗೂಡೆ, ಮಕ್ಕರಿ, ತಡಿಕೆ ಮೊದಲಾದವು. ದ್ವಿತೀಯ ವಲಯದ ಉತ್ಪನ್ನಗಳಾದ ಕಬ್ಬಿಣದ ಉತ್ಪನ್ನಗಳಾದ ಗೃಹ ಮತ್ತು ವ್ಯವಸಾಯಕ್ಕೆ ಬಳಸುವ ಉಪಕರಣಗಳು. ಕಾಗದ, ಗಾಜಿನ ಸಾಮಾನು ಮತ್ತು ಕನ್ನಡಿ, ಬಂಗಾಳಿ, ಚೀನಾ, ಕಾಂಚೀ ಮತ್ತು ಅರಣಿಯ ರೇಷ್ಮೆ, ಹತ್ತಿಬಟ್ಟೆ, ಚೀನ ಬಂಗಾಳಗಳಿಂದ ಸಕ್ಕರೆ, ಖರ್ಜೂರ ಮತ್ತು ಬಾದಾಮಿ,[೧೬] ಕೈಗಡಿಯಾರ, ವೈವಿಧ್ಯತೆಯಿಂದ ಕೂಡಿದ ಮಸ್ಲಿನ್ ಬಟ್ಟೆ[೧೭] ಚರ್ಮದ ವಸ್ತುಗಳು, ಬಂದೂಕುಗಳು, ಕೋವಿಗಳು, ಚಾಕುಗಳು, ಕತ್ತರಿಗಳು ಮತ್ತು ಕಬ್ಬಿಣ ಕರಗಿಸುವುದು, ಎರಕ ಹೊಯ್ಯುವ ಕೆಲಸವನ್ನು ತಾರಾಮಂಡಲಪೇಟೆಯಲ್ಲಿ ಮಾರಾಟ ಮಾಡಲಾಗುತ್ತಿತ್ತು.

ಕೃಷಿಯನ್ನಧಾರಿಸಿದ ಉತ್ಪನ್ನಗಳ(ಜವಳಿ ಉತ್ಪನ್ನಗಳು ಸೇರಿ) ಮಾರಾಟದ ಹಿನ್ನೆಲೆಯಲ್ಲಿ ವೀರಬಣಜಿಗರು, ಶೆಟ್ಟಿ, ನಗರ್ತರು ಪ್ರಮುಖ ವರ್ತಕ ಸಮುದಾಯಗಳಾಗಿ ಕಂಡುಬಂದರು. ಕಬ್ಬಿಣ್ಣ, ಗಾಜು, ಮಸ್ಲಿನ್ ಬಟ್ಟೆ ಉತ್ಪನ್ನ, ಚರ್ಮದ ಉತ್ಪನ್ನಗಳ ಮಾರಾಟ ಮಾಡುವ ಪ್ರಮುಖ ವರ್ತಕರಾಗಿ ಮುಸ್ಲಿಂ ವರ್ತಕರು, ಅರಬ್ಬರು, ಪರ್ಷಿಯನ್, ಲಬ್ಬೆ ಸಮುದಾಯದ ವರ್ತಕರು ಆರ್ಥಿಕ ವ್ಯವಹಾರಗಳಲ್ಲಿ ಕಂಡುಬಂದಿರುವುದನ್ನು ಬುಕಾನನಿನ ಉಲ್ಲೇಖಗಳಿಂದ ತಿಳಿಯಬಹುದಾಗಿದೆ. ಇದರ ಬೆನ್ನಲ್ಲೆ ಬೆಂಗಳೂರು ಪೇಟೆ ಕೃಷಿಯನ್ನಾಧಾರಿಸಿ ಪೇಟೆ ಬೀದಿಗಳ ಸಾಲಿನಲ್ಲಿ ಕೃಷಿಯೇತರ ಉತ್ಪನ್ನ ಮತ್ತು ಕೃಷಿಯನ್ನಾಧರಿದ ದ್ವಿತೀಯ ವಲಯದ ಉತ್ಪನ್ನಗಳನ್ನು ಮಾರಾಟ

ಮಾಡುವ ಹಿನ್ನೆಲೆಯಲ್ಲಿ ತಾರಾಮಂಡಲಪೇಟೆ, ಮಾಮೂಲು ಪೇಟೆ, ಮನವರ್ತಪೇಟೆ, ಸೌರಾಷ್ಟ್ರ ಪೇಟೆ ಗುರುತಿಸಿಕೊಂಡಿರುವುದನ್ನು ಗಮನಿಸಬಹುದಾಗಿದೆ.

ಬ್ರಿಟಿಶರ ಆಡಳಿತಕ್ಕೆ ಒಳಪಟ್ಟ ಬೆಂಗಳೂರು ಪ್ರದೇಶದಲ್ಲಿ ಯುರೋಪಿನಲ್ಲಿ ಆದ ಕೈಗಾರಿಕೀಕರಣದ ಪ್ರಭಾವವು ಬೆಂಗಳೂರು ಪ್ರದೇಶದ ಮೇಲೂ ಬೀರಿತು. ಈ ಅವಧಿಯಲ್ಲಿ ಪ್ರಾಥಮಿಕ ವಲಯ, ದ್ವಿತೀಯ ವಲಯ, ತೃತೀಯ ವಲಯದ ಉತ್ಪನ್ನಗಳು ಮಾರುಕಟ್ಟೆಯ ಮಾರಾಟದ ಉತ್ಪನ್ನಗಳಾಗಿ ಅಥವಾ ವಸ್ತುಗಳಾಗಿ ಕಾಣಿಸಿಕೊಂಡಿವು. ದ್ವಿತೀಯ ವಲಯದ ಉತ್ಪನ್ನಗಳು ಹೆಚ್ಚು ಕೃಷಿಯನ್ನಾಧಾರಿಸದ ಉತ್ಪನ್ನಗಳಾಗಿದ್ದು ದ್ವಿತೀಯ ವಲಯದ ಉತ್ಪನ್ನಗಳು ಎಂದು ಪರಿಗಣಿಸಲಾಗಿದೆ. ದ್ವಿತೀಯ ವಲಯ ಎಂದಾಕ್ಷಣ ಸಂಪೂರ್ಣ ದ್ವಿತೀಯ ವಲಯದ ಉತ್ಪನ್ನಗಳಾಗಿರದೆ ಅದು ಸಿದ್ದ ವಸ್ತುಗಳ ಉತ್ಪಾದನೆಗೆ ಬೇಕಾಗುವ ಕಚ್ಚ ವಸ್ತುಗಳಾಗಿದ್ದವು ಅಥವಾ ಉಪ–ಉತ್ಪನ್ನ ಎಂಬುದು ವಿಶೇಷವಾಗಿದೆ. ಉದಾಹರಣೆಗೆ, ಪಿಸ್ ಕ್ಲಾತ್ಸ್, ಹತ್ತಿ ನೂಲುಗಳು, ಹಾರ್ಡ್‌ವೇರ್ಸ್ ಇತ್ಯಾದಿ. ತೃತೀಯವಲಯದ ಅಬೌದ್ಧಿಕ ಸೇವೆಗಳಿಗೆ ಹೆಚ್ಚು ಮನ್ನಣೆ ದೊರೆಯಿತು. ವಿಮಾ ಕಂಪನಿಗಳು, ಸ್ಟಾಕ್ ಏಕ್ಸಚೆಂಜ್ ಕಂಪನಿಗಳು, ಬ್ಯಾಂಕಿಂಗ್ ಕಂಪನಿಗಳು ಇತ್ಯಾದಿಗಳು.

ಬೆಂಗಳೂರು ೨೦ನೇ ಶತಮಾನದಲ್ಲಿ ಮುದ್ರಣಾಲಯಗಳ ಕೇಂದ್ರವಾಗಿತ್ತು. ಇದರ ಹಿನ್ನೆಲೆಯಲ್ಲಿ ಹಲವು ಉತ್ಪನ್ನಗಳು ಮಾರುಕಟ್ಟೆಯ ಮಾರಾಟದ ಉತ್ಪನ್ನಗಳಾಗಿ ಕಾಣಿಸಿಕೊಂಡವು. ಅವುಗಳೆಂದರೆ ಕಲ್ಲಚ್ಚು, ಅಚ್ಚು, ಕಬ್ಬಿಣದ ಮೊಳೆ ಅಚ್ಚು, ಷಾಹಿ, ಕಾಗದ, ಲೇಖನಿ ಮತ್ತು ಅದಕ್ಕೆ ಸಂಬಂಧಿಸಿದ ಉತ್ಪನ್ನಗಳು. ಇದಕ್ಕೆ ಸಂಬಂಧಿಸಿದ ಪುಸ್ತಕ ಮಳಿಗೆಗಳು ದೊಡ್ಡಪೇಟೆ ಎಂದು ಕರೆಯುವ ಬೀದಿಯು ಕ್ರಮೇಣ ಬದಲಾವಣೆಗೊಂಡು ಅವೆನ್ಯೂ ರೋಡಾಗಿ ಸ್ಟೇಷನರಿ ವಸ್ತುಗಳ ಮಾರಾಟ ಕೇಂದ್ರವಾಗಿ ಮಾರ್ಪಾಡು ಹೊಂದಿತ್ತು. ಇಂದಿಗೂ ಅವೆನ್ಯೂ ರಸ್ತೆಯ ಮುಖ್ಯಬೀದಿಗಳಲ್ಲಿ ಪುಸ್ತಕ ಮಳಿಗೆಗಳನ್ನು ಕಾಣಬಹುದಾಗಿದೆ.[೧೮]

ಕುಂಬಾರ ಪೇಟೆಯು ಪ್ರಾಥಮಿಕ ಉತ್ಪನ್ನದ ಮಾರುಕಟ್ಟೆಯಾಗಿತ್ತು. ಅಂದರೆ, ಕುಂಬಾರನಿಂದ ಮಾಡಿದ ಮಡಿಕೆ–ಕುಡಿಕೆಗಳ ಜೊತೆಗೆ ಕೈಗಾರಿಕೆಯಿಂದ ತಯಾರಿಸಲ್ಪಟ್ಟ ಉತ್ಪನ್ನಗಳಾದ ನೆಲಕ್ಕೆ ಹಾಕುವ ಚದರಬಿಲ್ಲೆ, ಕೊಳಾಯಿಗೆ ಬೇಕಾದ ಪೈಪು ಉತ್ಪನ್ನಗಳು, ಗೃಹೋಪಯೋಗಿ ಪಿಂಗಾಣಿ ವಸ್ತುಗಳು ಅದರ ಜೊತೆಗೆ ಅಲ್ಯುಮಿನಿಯಮ್ ಪಾತ್ರೆಗಳು ಮೊದಲಾದ ಗೃಹೋಪಯೋಗಿ ಹಾರ್ಡ್‌ವೇರ್ ಉತ್ಪನ್ನಗಳು ಮನೆಮಾಡಿಕೊಂಡವು.[೧೯]

ಇದೇ ಅವಧಿಯಲ್ಲಿ ಬೆಂಗಳೂರು ದೇಶದಲ್ಲಿ ಮೊದಲ ವಿದ್ಯುತ್ಶಕ್ತಿಯನ್ನು ಪಡೆದ ನಗರವಾಗಿದೆ. ಇದರ ಹಿನ್ನೆಲೆಯ ಉತ್ಪನ್ನಗಳು ಮಾರುಕಟ್ಟೆಯ ಪ್ರಮುಖ ಉತ್ಪನ್ನಗಳಾಗಿ ಲ್ಯಾಂಪ್‌ವೇರ್ಸ್, ಸ್ವಿಚ್‌ಗೇರ್ಸ್, ಟ್ರಾನ್ಸ್‌ಫಾರ್ಮರ್‌ಗಳು, ಇನ್ಸುಪೇಟರ್‌ಗಳು ಇತ್ಯಾದಿ ಎಲೆಟ್ರಾನಿಕಲ್ ಉತ್ಪನ್ನಗಳು ಬಳೇಪೇಟೆಯ

ಸಮೀಪದ ಬೀದಿಗಳಲ್ಲಿ ಮಾರಾಟವಾಗ ತೊಡಗಿದವು. ಅದೇ ತೆರನಾಗಿ ರಾಗಿಪೇಟೆ ಬೀದಿಯು ಹಿಂದೆ ರಾಗಿ ಮಾರಾಟದಿಂದಾಗಿ ರಾಗಿಪೇಟೆಯೆಂದು ಹೆಸರುಪಡೆದಿತ್ತು. ಆದರೆ ವಸಾಹತುಶಾಹಿ ಪ್ರಭಾವದಿಂದ ಈ ಪೇಟೆಭಾಗದಲ್ಲಿ ರಾಗಿಗೆ ಬದಲಾಗಿ ಕಬ್ಬಿಣದ ವಸ್ತುಗಳನ್ನು ಮಾರಾಟ ಮಾಡುವ ಕೇಂದ್ರವಾಗಿ ಪರಿವರ್ತನೆಗೊಂಡಿತು. ಗೃಹ ನಿರ್ಮಾಣಕ್ಕೆ ಬೇಕಾದ ಹಾರ್ಡ್‌ವೇರ್ ಸಾಮಾಗ್ರಿಗಳು ಮಾರಾಟವಾಗುವ ಸ್ಥಳವಾಗಿ ಪರಿವರ್ತನೆಗೊಂಡಿತು.

ಚರ್ಮದ ಉತ್ಪನ್ನಗಳಾದ ಚರ್ಮದ ಪೆಟ್ಟಿಗೆ, ದಿಂಬುಗಳು, ಚರ್ಮದ ಕವಚ, ಚರ್ಮದ ಉಡುಪುಗಳು, ರೈಲ್ವೆ ಅಗತ್ಯಕ್ಕೆ ಬೇಕಾದ ಉತ್ಪನ್ನಗಳು, ಗೃಹೋಪಯೋಗಿ ಫ್ಯಾನ್ಸಿ ಉತ್ಪನ್ನಗಳು ಸಹ ಮಾರುಕಟ್ಟೆಯ ಮಾರಾಟದ ಉತ್ಪನ್ನಗಳಾದಿ ಈ ಅವಧಿಯಲ್ಲಿ ಕಾಣಿಸಿಕೊಂಡಿರುವುದನ್ನು ಅಂದಿನ ಬದಲಾದ ಜೀವನಶೈಲಿಯಿಂದ ತಿಳಿಯಬಹುದಾಗಿದೆ. ರಾಸಾಯನಿಕ ಉತ್ಪನ್ನಗಳು, ಗ್ಲಾಸ್ ಮತ್ತು ಎನಾಮಲ್ ಉತ್ಪನ್ನಗಳಾದ ಫಾರ್ಮಸ್ಯೂಟಿಕಲ್ಸ್, ಟಾಯ್‌ಲೆಟ್‌ವೇರ್, ಗೃಹೋಪಯೋಗಿ ಮತ್ತು ರಾಸಾಯನಿಕ ವಸ್ತುಗಳ ವಸ್ತುಗಳಿಗೆ ಬೇಕಾಗುವ ದೊಡ್ಡ ಮತ್ತು ಚಿಕ್ಕ ಜಾಡಿಗಳು. ಎಣ್ಣೆ ಉತ್ಪನ್ನಗಳಾದ ಸೀಮೆ ಎಣ್ಣೆ, ವನಸ್ಪತಿ, ರೀಫೈನ್ಡ್ ಎಣ್ಣೆ, ತಂಬಾಕು ಸಂಬಂಧಿ ಉತ್ಪನ್ನಗಳು ಇತ್ಯಾದಿ. ಬೆಂಗಳೂರು ಪ್ರದೇಶದ ಮಾರುಕಟ್ಟೆಯ ಸ್ವರೂಪವನ್ನು ತಿಳಿಸುತ್ತದೆ.

ವಸಾಹತು ಕಾಲಘಟ್ಟದಲ್ಲಿ ಪ್ರಾಥಮಿಕ ಉತ್ಪನ್ನಗಳಿಗಿಂತ ದ್ವಿತೀಯ ವಲಯದ ಉತ್ಪನ್ನಗಳು ಮಾರುಕಟ್ಟೆಯ ಮಾರಾಟದ ವಸ್ತುಗಳಾಗಿ ಕಂಡುಬಂದವು. ಇದರೊಂದಿಗೆ ಸೇವಾ ವಲಯದ ಅಂಗಡಿಗಳು ಬೆಂಗಳೂರು ಪೇಟೆ ಮತ್ತು ದಂಡು ಪ್ರದೇಶದಲ್ಲಿ ಕಾಣಸಿಕೊಂಡಿರುವುದನ್ನು ನಾವು ಅಂದಿನ ದಿನಗಳಲ್ಲಿ ಪ್ರಟಕವಾದ ಪುಸ್ತಕಗಳ ಜಾಹೀರಾತಿನಿಂದ ತಿಳಿಯಬಹುದಾಗಿದೆ.[೨೦] ೧೯ನೇ ಶತಮಾನದ ಉತ್ತರಾರ್ಧ ಮತ್ತು ೨೦ನೇ ಶತಮಾನದ ಪೂರ್ವಾರ್ಧದಲ್ಲಿ ಬೆಂಗಳೂರು ಪ್ರದೇಶದಲ್ಲಿ ಸ್ಥಾಪನೆಗೊಂಡಿದ್ದ ಕೈಗಾರಿಕೆಗಳ ಆಧಾರದ ಮೇಲೆ ಬೆಂಗಳೂರು ಪೇಟೆ ಮತ್ತು ದಂಡುಪ್ರದೇಶದ ಮಾರುಕಟ್ಟೆಗಳಲ್ಲಿ ಮಾರಾಟವಾಗುತ್ತಿದ್ದ ಉತ್ಪನ್ನಗಳನ್ನು ಗುರುತಿಸಬಹುದಾಗಿದೆ.

ಉತ್ಪನ್ನದಿಂದ ಉತ್ಪಾದನಾ ವರ್ತಕರು ಮತ್ತು ವಿನಿಮಯ ವರ್ತಕರಲ್ಲಾದ ಪರಿವರ್ತನೆಗಳನ್ನು ತಿಳಿಯಬಹುದು. ಪ್ರಾಥಮಿಕ ವಲಯದ ಪ್ರಮುಖ ಸಾಂಪ್ರಾದಯಿಕ ವರ್ತಕ ಸಮುದಾಯಗಳು ಕಣ್ಮರೆಗೊಂಡವು. ಉತ್ಪನ್ನಗಳ ಮಾರಾಟದ ಹಿನ್ನೆಲೆಯಲ್ಲಿ ೧೮೫೦ರ ಹೊತ್ತಿಗೆ ಮಾರ್ವಾಡಿ ಪೇಟೆ, ಸಿಂಧಿ ಪೇಟೆ,[೨೧] ದಾರ್ಜಿಪೇಟೆ[೨೨] ಇತ್ಯಾದಿ ಹೆಸರಿನ ಪೇಟೆ ಬೀದಿಗಳು ಬೆಂಗಳೂರು ಪೇಟೆಯಲ್ಲಿ ಕಾಣಿಸಿಕೊಂಡಿತ್ತು. ಇಂತಹ ಪೇಟೆ ಬೀದಿಗಳು ಬೆಂಗಳೂರು ಪ್ರದೇಶದ ಆರ್ಥಿಕ ವ್ಯವಸ್ಥೆಯಲ್ಲಿ ಹಿಡಿತವನ್ನು ಸಾಧಿಸಿದ ವರ್ತಕರು ಮತ್ತು ವರ್ತಕ ಸಮುದಾಯದಲ್ಲಾದ ಬದಲಾವಣೆಗಳನ್ನು ಸೂಕ್ಷ್ಮ ಗ್ರಹಿಕೆಯ ಮೂಲಕ ತಿಳಿಯಲು ಸಹಾಯಕವಾಗಿದೆ.

ಮಾರುಕಟ್ಟೆಯ ಉತ್ಪನ್ನಗಳಲ್ಲಿ ಆದ ಬದಲಾವಣೆಯು ಕೇವಲ ಮಾನವನ ಜೀವನ ಶೈಲಿಯಲ್ಲಿ ಮಾತ್ರ ಬದಲಾವಣೆಯನ್ನುಂಟು ಮಾಡದೇ ವ್ಯಾಪಾರ- ವ್ಯವಹಾರ ಮಾಡುತ್ತಿದ್ದ ವರ್ತಕ ಸಮುದಾಯಗಳಲ್ಲಿ ಮಹತ್ತರವಾದ ಬದಲಾವಣೆಯನ್ನುಂಟು ಮಾಡಿತು. ಈ ವಿಷಯವನ್ನು ೧೯೦೦ರ ದಶಕದಲ್ಲಿ ನಡೆದ ಬೆಂಗಳೂರು ವಣಿಕರ ಸಭೆಯಲ್ಲಿ ಕೆ. ಪಿ. ಪುಟ್ಟಣ್ಣ ಚೆಟ್ಟರು ಸ್ಥಳೀಯರ ಕೈಯಲ್ಲಿನ ವ್ಯಾಪಾರ ವ್ಯವಹಾರಗಳು ಪರಸ್ಥಳದವರ ಕೈಗೆ ಹೋಗುತ್ತಿರುವುದರ ಬಗ್ಗೆ ಆತಂಕ ವ್ಯಕ್ತಪಡಿಸಿದ್ದರು ಎಂದು ಚಂದ್ರಶೇಖರರವರು ತಮ್ಮ ವಲಸಿಗರ ಬೆಂಗಳೂರು ಎಂಬ ಲೇಖನದಲ್ಲಿ ಉಲ್ಲೇಖಿಸಿದ್ದಾರೆ. ೧೯೧೨ರ ಸಾಧ್ವಿ ಪತ್ರಿಕೆಯಲ್ಲಿ 'ಬೆಂಗಳೂರಿನ ಚಿಕ್ಕ ಪೇಟೆ, ದೊಡ್ಡ ಪೇಟೆ, ಮಂಡಿ ಪೇಟೆ ಮೊದಲಾದ ಪೇಟೆಗಳಲ್ಲಿ ಬಣಜಿಗ ಲಿಂಗಾಯತರು ತಮ್ಮ ಅಂಗಡಿಗಳನ್ನು-ಮಂಡಿಗಳನ್ನು ಮಾರ್ವಾಡಿಗರಿಗೆ ಮಾರುತ್ತಿದ್ದಾರೆ. ಗುಜರಿ-ಲೋಹದ ವ್ಯಾಪಾರ ಮುಸ್ಲಿಂ ಬೋಹ್ರ ಕೈಯಲ್ಲಿದೆ. ದಿನಸಿ ತೆಲುಗರ ಕೈಯಲ್ಲಿದೆ. ತರಕಾರಿ ವ್ಯಾಪಾರ ತಮಿಳರ ಕೈಗೆ ಹೋಗುತ್ತಿದೆ. ಮರ ಮುಟ್ಟುಗಳ ವ್ಯಾಪಾರ ಮಲೆಯಾಳಿಗಳು, ಮುಸ್ಲಿಂ ವರ್ತಕ ಸಮುದಾಯಗಳ ವಶಕ್ಕೆ ಹೋಗುತ್ತಿವೆ' ಎಂದು ವರದಿಯಾಗಿದೆ.[೨೩] ಈ ವಿಷಯಗಳು ಬದಲಾದ ಉತ್ಪನ್ನಗಳನ್ನು ಮಾರಾಟ ಮಾಡುವ ನಿಟ್ಟಿನಲ್ಲಿ ಆದ ಬದಲಾವಣೆಯನ್ನು ತಿಳಿಸುತ್ತದೆ. ಅದರೊಂದಿಗೆ ವರ್ತಕ ಸಮುದಾಯಗಳಲ್ಲಿ ಆದ ಸಂಘರ್ಷದ ಸೂಕ್ಷ್ಮತೆಯ ನೆಲೆಗಳು ಸಹ ಅರಿವಿಗೆ ಬರುತ್ತದೆ. ಇಲ್ಲಿಯ ತನಕ ವೀರ ಬಣಜಿಗರು ಪ್ರಾಥಮಿಕ ಮತ್ತು ಕೃಷಿಯನ್ನಾಧಾರಿಸಿದ ದ್ವಿತೀಯ ವಲಯದ ಉತ್ಪನ್ನಗಳನ್ನು ಮಾರಾಟ ಮಾಡುವ ಪ್ರಬಲ ವರ್ತಕ ಸಮುದಾಯವಾಗಿತ್ತು. ಇವರು ಸ್ಥಳೀಯ ಪ್ರಭುತ್ವದೊಂದಿಗೆ ಉತ್ತಮ ಸಂಬಂಧವನ್ನು ಹೊಂದಿದ್ದರು. ಆದರೆ ವಸಾಹತು ಕಾಲಘಟ್ಟದಲ್ಲಿ ಅದರಲ್ಲೂ ೨೦ನೇ ಶತಮಾನದ ಪೂರ್ವಾರ್ಧದಲ್ಲಿ ಕೈಗಾರಿಕೀಕರಣದ ಪ್ರಭಾವವು ಬೆಂಗಳೂರು ಪ್ರದೇಶದ ಮೇಲೆ ಬೀರಿದ ಪರಿಣಾಮವಾಗಿ ಉತ್ಪನ್ನಗಳಲ್ಲಿ ಆದ ಬದಲಾವಣೆಗಳು ದೇಶಿಯ ಮತ್ತು ವಿದೇಶಿಯ ಮಟ್ಟದ ವ್ಯಾಪಾರಿ ಜಾಲವನ್ನು ಸೃಷ್ಟಿಸಿರುವುದನ್ನು ಸ್ಪಷ್ಟವಾಗಿ ಗಮನಿಸಬಹುದಾಗಿದೆ. ಇದರ ಹಿನ್ನೆಲೆಯಲ್ಲಿ ಈಗಾಗಲೇ ಸಾಮ್ರಾಜ್ಯಶಾಹಿ ನೆಲೆಯ ವ್ಯಾಪಾರಿ ಸಮುದಾಯದ ಅಧೀನದಲ್ಲಿದ್ದ ಮತ್ತು ಗುರುತಿಸಿಕೊಂಡಿದ್ದ ಮಾರ್ವಾಡಿಗಳು, ಮುಸ್ಲಿಮರು, ಗುಜರಾತಿಗಳು, ತಮಿಳು ಮತ್ತು ತೆಲುಗು ಚೆಟ್ಟಿಗರ ವಶಕ್ಕೆ ಬೆಂಗಳೂರು ಪ್ರದೇಶದ ಮಾರುಕಟ್ಟೆಯ ವ್ಯಾಪಾರ-ವಾಣಿಜ್ಯ ಹೊರ ರಾಜ್ಯಗಳ ವರ್ತಕ ಸಮುದಾಯಗಳ ಅಧೀನಕ್ಕೆ ಬಂತೆಂಬುದು ಸ್ಪಷ್ಟವಾಗುತ್ತದೆ.

ಅದೇ ತೆರನಲ್ಲಿ ಉತ್ಪಾದನಾ ವರ್ತಕ ಸಮುದಾಯದಲ್ಲೂ ಉತ್ಪನ್ನದ ಬದಲಾವಣೆಗಳು ಮಹತ್ತರವಾದ ಪರಿವರ್ತನೆಯನ್ನುಂಟು ಮಾಡಿತು. ವಸಾಹತು ಕಾಲಘಟ್ಟದಲ್ಲಿ ದ್ವಿತೀಯ ವಲಯದ ಉತ್ಪನ್ನಗಳನ್ನು ಶ್ರಮದಿಂದ ತಯಾರಿಸುವುದಕ್ಕಿಂತ ಹೆಚ್ಚಾಗಿ ಯಂತ್ರದ ಸಹಾಯದಿಂದ

ಉತ್ಪಾದಿಸಲಾಗುತ್ತಿತ್ತು. ಇದರಿಂದಾಗಿ ಗಾಣಿಗರು, ಚಮ್ಮಾರರು, ಕಮ್ಮಾರರು, ಉಪ್ಪಾರರು, ದೇವಾಂಗರು ಸಂಘರ್ಷಕ್ಕೆ ಒಳಗಾಗ ಬೇಕಾಯಿತು. ಫಲವಾಗಿ ಉತ್ಪಾದನಾ ಸಮುದಾಯಗಳು ಮತ್ತು ವಿನಿಮಯ ವರ್ತಕ ಸಮುದಾಯಗಳು ಬದಲಾದ ಪರಿಸ್ಥಿತಿಗೆ ತಕ್ಕಂತೆ ತಮ್ಮನ್ನು ಬದಲಾವಣೆಗೆ ಒಳಪಡಿಸುವ ನಿಟ್ಟಿನಲ್ಲಿ ವರ್ತಕ ಸಂಘಗಳನ್ನು ರಚನೆ ಮಾಡಿಕೊಂಡರು. ಇದರ ಚರ್ಚೆಯನ್ನು ಹಿಂದಿನ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಒಟ್ಟಾರೆಯಾಗಿ, ಉತ್ಪನ್ನ, ಉತ್ಪಾದನಾ ಶಕ್ತಿ ಮತ್ತು ಅದರೊಂದಿಗೆ ಪ್ರಭುತ್ವದ ಅಂತರ್‌ಸಂಬಂಧದಿಂದ ವ್ಯಾಪಾರದ ಜಾಲವನ್ನು ಇನ್ನಷ್ಟು ಬೆಳೆಸಿತು. ಜೊತೆಗೆ ಬೆಂಗಳೂರು ಪ್ರದೇಶಕ್ಕೆ ವ್ಯಾಪಾರ–ವಾಣಿಜ್ಯದ ನೆಲೆಯಲ್ಲಿ ಬೇರೆ–ಬೇರೆ ಪ್ರದೇಶ, ರಾಜ್ಯ, ರಾಷ್ಟ್ರಗಳಿಂದ ಬಂದ ವರ್ತಕ ಸಮುದಾಯಗಳು, ಉತ್ಪಾದನಾ ಶಕ್ತಿಯಲ್ಲಿ ವೈವಿಧ್ಯತೆಯನ್ನು ಮೂಡಿಸಿದರು. ಇದು ಬೆಂಗಳೂರು ಪ್ರದೇಶದ ನಗರೀಕರಣದ ಪ್ರಕ್ರಿಯೆಯನ್ನು ಚುರುಕುಗೊಳಿಸಿತು.

### ೬.೧.೩ ನಿರ್ವಹಣ ಏಜೆನ್ಸಿ ಮತ್ತು ಏಜೆಂಟರು

೧೬ ರಿಂದ ೧೮ನೇ ಶತಮಾನವು ವಾಣಿಜ್ಯವಾದದ ಪ್ರಾರಂಭಿಕ ಅವಧಿಯಾಗಿತ್ತು. ಯುರೋಪಿನ ರಾಷ್ಟ್ರಗಳಲ್ಲಿ ಮುಕ್ತ ವ್ಯಾಪಾರದ ಪರಿಕಲ್ಪನೆಗಳ ಕಾಲಘಟ್ಟವಾಗಿತ್ತು. ಆದರೆ ಭಾರತಕ್ಕೆ ಸಂಬಂಧಿಸಿದಂತೆ ೧೮ನೇ ಶತಮಾನವು ಒಂದು ನಿರ್ಬಂಧಿತ ಆರ್ಥಿಕತೆಯಾಗಿತು. ಈ ನೀತಿಯನ್ನು ಬ್ರಿಟಿಶ್ ವರ್ತಕ ಸಮುದಾಯಗಳು ಭಾರತದಲ್ಲಿ ಅನುಸರಿಸಿದವು. ಈ ಅವಧಿಯಲ್ಲಿ ಜಗತ್ತಿನ ಆರ್ಥಿಕತೆಯು ಸಾಂಪ್ರದಾಯಿಕ ಅರ್ಥಶಾಸ್ತ್ರದ ಪ್ರತಿಪಾದಕನಾದ ಆಡಂ ಸ್ಮಿತ್‌ನ ವ್ಯಾಖ್ಯಾನದಂತೆ ಆರ್ಥಿಕತೆಯಲ್ಲಿ ಸಂಪತ್ತಿನ ಗಳಿಗೆ ಮತ್ತು ಅನುಭೋಗದ ಕಾರ್ಯಗಳಿಗೆ ಮಹತ್ವವಿತ್ತನು. ನಂತರದ ೧೮೦೦–೧೯೦೦ರ ಕಾಲಘಟ್ಟದಲ್ಲಿ ಉಗಮಿಸಿದ ನವಸಾಂಪ್ರದಾಯಿಕ ಪಂಥದ ರೂವಾರಿ ಮಾರ್ಷಲ್ ತನ್ನ ಸಿದ್ಧಾಂತದಲ್ಲಿ ಆರ್ಥಿಕತೆಯ ಕಾರ್ಯಗಳಾದ ಉತ್ಪಾದನೆ, ವಿತರಣೆ, ವಿನಿಮಯ, ಅನುಭೋಗ ಹೀಗೆ ಪ್ರತಿಯೊಂದು ಅಂಶಗಳು ವ್ಯವಸ್ಥಿತವಾಗಿ ನಡೆದರೆ ಮಾತ್ರ ಅದನ್ನು ಆರ್ಥಿಕ ಚಟುವಟಿಕೆಗಳು ಎಂದು ಕರೆದನು. ಕೈಗಾರಿಕಾ ಕ್ರಾಂತಿಯ ಪ್ರಭಾವಕ್ಕೆ ನವಸಂಪ್ರದಾಯ ಒಳಗಾಗಿತ್ತು ಎಂಬುದನ್ನು ಮರೆಯುವಂತಿಲ್ಲ. ಈ ಅವಧಿಯನ್ನು ಆರ್. ಸಿ. ದತ್‌ರು ಕೈಗಾರಿಕಾ ಬಂಡವಾಳ ಕಾಲವೆಂದು ಕರೆದಿದ್ದಾರೆ. ೧೯೦೦–೧೯೪೭ರ ಕಾಲಘಟ್ಟವನ್ನು ಹಣಕಾಸು ಬಂಡವಾಳ ಕಾಲವೆಂದು ಗುರುತಿಸುತ್ತಾರೆ. ಇದೇ ಅವಧಿಯಲ್ಲಿ ಕೈಗಾರಿಕಾ ಕ್ರಾಂತಿ, ಸಪ್ತವಾರ್ಷಿಕ ಕದನ, ಬ್ರಿಟನ್‌ನಲ್ಲಿನ ಕೈಗಾರಿಕಾ ಬಂಡವಾಳದ ಸಂಚಲನ ಮತ್ತು ತಂತ್ರಜ್ಞಾನದ ಬೆಳವಣಿಗೆಯಾಯಿತು. ಫಲವಾಗಿ, ಬ್ರಿಟಿಶ್ ಆರ್ಥಿಕ ಸಾಮ್ರಾಜ್ಯಶಾಹಿ ನೀತಿಯಿಂದ ಭಾರತದ ಸಾಂಪ್ರದಾಯಿಕ ಗೃಹ ಕೈಗಾರಿಕೆ ಮತ್ತು ಸಣ್ಣಕೈಗಾರಿಕೆಗಳು ಭಾರತದಲ್ಲಿ ಕಣ್ಮರೆಗೊಂಡವು.

ಆ ಸ್ಥಳದಲ್ಲಿ ವಿದೇಶಿ ವರ್ತಕ ಸಮುದಾಯಗಳು ಬೃಹತ್ ಕೈಗಾರಿಕೆಯನ್ನು ಸ್ಥಾಪಿಸುವಂತೆ ಪ್ರೇರೇಪಿಸಿತು. ಇಂತಹ ಬೆಳವಣಿಗೆಗಳು ಬೆಂಗಳೂರಿನಂತಹ ನಗರಗಳ ನಗರೀಕರಣದ ಪ್ರಕ್ರಿಯೆಯನ್ನು ಇನ್ನಷ್ಟು ಚುರುಕುಗೊಳಿಸಿತು.

ಇಂತಹ ಕೈಗಾರಿಕೆಗಳು ಬಹುತೇಕ ಕೂಡು ಬಂಡವಾಳದ ಹಿನ್ನೆಲೆಯಲ್ಲಿ ಸ್ಥಾಪನೆಯಾಗುತ್ತಿತ್ತು. ಭಾರತದ ಆರ್ಥಿಕತೆಯಲ್ಲಿ ಹೊಸ ಅಲೆ ಮೂಡಿತು. ಕೈಗಾರಿಕಾ ಬಂಡಳವಾಳಶಾಹಿ ವ್ಯವಸ್ಥೆಯಲ್ಲಿ ಮಧ್ಯವರ್ತಿಗಳ ಪಾತ್ರವು ಆರ್ಥಿಕ ಚಟುವಟಿಕೆಯ ಪ್ರತಿಯೊಂದು ಹಂತದಲ್ಲೂ ಕಾಣಿಸಿಕೊಂಡಿರುವುದನ್ನು ಗಮನಿಸಬಹುದಾಗಿದೆ. ಇವರ ಪಾತ್ರವು ಪ್ರತಿ ಹಂತದಲ್ಲೂ ಸಹ ಅಷ್ಟೇ ಮಹತ್ವದೆನಿಸಿತು. ಕೈಗಾರಿಕೆಯ ಸ್ಥಾಪಕನಾದ ಬಂಡವಾಳಗಾರನ ಜೊತೆಗೆ ವ್ಯವಸ್ಥಾಪಕರ ಗುಂಪು, ನಿರ್ವಹಣ ವ್ಯವಸ್ಥಾಪಕ, ಏಜೆಂಟ್, ಸೇಲಿಂಗ್ ಏಜೆಂಟ್, ನಿರ್ವಾಹನ ಏಜೆಂಟ್, ಡೀಲರ್ಸ್, ಡಿಸ್ಟ್ರಿಬ್ಯುಟರ್ಸ್ ಮೊದಲಾದ ಹೆಸರಿನ ಪರಿಕಲ್ಪನೆಗಳು ಉಗಮಿಸಿತು.[೨೪] ಈ ಪರಿಕಲ್ಪನೆಗಳ ಕೇಂದ್ರ ಕಾರ್ಯ ನಿರ್ವಾಹಕರು ವರ್ತಕರೇ ಆಗಿದ್ದರು. ಆದರೆ ಇವರು ವಸಾಹತು ಕಾಲಘಟ್ಟದ ಪೂರ್ವದಲ್ಲಿದ್ದ ಸಾಂಪ್ರದಾಯಿಕ ವರ್ತಕ ಸಮುದಾಯಗಳಾಗಿರದೆ ಹೊಸ ಶೈಕ್ಷಣಿಕ ವ್ಯವಸ್ಥೆಯ ಶಿಶುಗಳಾಗಿದ್ದ ವರ್ತಕ ಸಮುದಾಯವಾಗಿದ್ದರು ಎಂಬುದು ಗಮನಾರ್ಹ.

ಮಾರ್ವಾಡಿಗಳು, ಗುಜರಾತಿ ಸೇಟ್‌ಗಳು, ಮುಸ್ಲಿಂ ವರ್ತಕರು, ಆಂಗ್ಲೋ–ಇಂಡಿಯನ್ನರು, ಚೆಟ್ಟಿಯಾರ್‌ಗಳು, ಮೊದಲಿಯಾರ್ ಇತ್ಯಾದಿ ವರ್ತಕ ಸಮುದಾಯಗಳು ಸ್ಥಳೀಯ ಆರ್ಥಿಕತೆಯ ನಿಯಂತ್ರಕರಾಗಿ ಕಾರ್ಯ ನಿರ್ವಹಿಸತೊಡಗಿದರು. ಈ ಸ್ಥಳೀಯ ಪ್ರದೇಶದ ಆರ್ಥಿಕತೆಯ ನಿಯಂತ್ರಕರಾಗಿ ಸ್ಥಳೀಯ ವರ್ತಕರು ಕಂಡುಬಂದರೆ ಭಾರತದ ಇಡೀ ಆರ್ಥಿಕತೆಯ ನಿಯಂತ್ರಕರಾಗಿ ವಿದೇಶಿ ವರ್ತಕ ಸಮುದಾಯ ಅಂದರೆ ಬ್ರಿಟಿಶ್ ವರ್ತಕ ಸಮುದಾಯಗಳು ಕಾರ್ಯ ನಿರ್ವಹಿಸತೊಡಗಿದವು. ಕಾರಣ ವರ್ತಕರು ಬ್ಯಾಂಕರ್‌ಗಳಾಗಿದ್ದು ಬೃಹತ್ ಕೈಗಾರಿಕೆಗೆ ಬೇಕಾದಾಗ ಹಣಕಾಸಿನ ಸೌಲಭ್ಯವನ್ನು ಸಹ ನೀಡುತ್ತಿದ್ದರು. ಅದಲ್ಲದೆ, ಇವರಿಗೆ ಭಾರತದ ಎಲ್ಲಾ ಸ್ಥಳೀಯ ಸಂಪನ್ಮೂಲಗಳ ತಿಳುವಳಿಕೆ ಇತ್ತು. ಇದರಿಂದಾಗಿ ಬ್ರಿಟಿಶ್ ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿ ಪ್ರಭುತ್ವಕ್ಕೆ ಇಂತಹ ಸಮುದಾಯಗಳ ಅಗತ್ಯವು ಇತ್ತು. ಭಾರತದ ಆಡಳಿತವನ್ನು ನಿರ್ವಹಿಸುತ್ತಿದ್ದ ಬೋರ್ಡ್ ಆಫ್ ಡೈರೆಕ್ಟರ್ಸ್ ಮತ್ತು ಬೋರ್ಡ್ ಆಫ್ ಕೌನ್ಸಿಲ್ಸ್‌ನ ಸದಸ್ಯರು ಬಹುಮಂದಿ ವರ್ತಕರೇ ಆಗಿದ್ದರು ಎಂಬುದು ಎಲ್ಲರಿಗೂ ತಿಳಿದ ವಿಚಾರವೇ ಆಗಿದ್ದರು ಸಹ ಗಮನಿಸಬೇಕಾದ ಅಂಶವಾಗಿದೆ. ಆದ್ದರಿಂದಾಗಿ, ಬ್ರಿಟಿಶ್ ಆರ್ಥಿಕ ಸಾಮ್ರಾಜ್ಯಶಾಹಿ ನೀತಿಯ ಪರವಾಗಿಯೇ ಈ ವರ್ತಕ ಸಮುದಾಯಗಳು ಕಾರ್ಯ ನಿರ್ವಹಿಸುತ್ತಿದ್ದರು. ಕೈಗಾರಿಕೆಯ ಪ್ರತಿಯೊಂದು ಹಂತದಲ್ಲೂ ಅಂದರೆ ಬೃಹತ್ ಕೈಗಾರಿಕೆಗಳಿಗೆ ಕಚ್ಚಾ ವಸ್ತುಗಳನ್ನು ಪೂರೈಸುವ, ಕಾರ್ಮಿಕರನ್ನು ಪೂರೈಸುವ, ಉತ್ಪಾದನೆಗೆ

ಜಾಹೀರಾತು, ಸಾಕಣಿಕೆ, ವಿತರಣೆ, ವಿನಿಮಯ ಹೀಗೆ ಪ್ರತಿ ಹಂತದಲ್ಲೂ ತಮ್ಮ ಕೌಶಲ್ಯತೆಯಿಂದ ಕಾರ್ಯಚಟುವಟಿಕೆಯನ್ನು ಮಾಡಲಾರಂಭಿಸಿದರು. ಫಲವಾಗಿ, ಉತ್ಪಾದನೆಯಾದ ವಸ್ತುಗಳನ್ನು ದೇಶ–ವಿದೇಶಗಳಲ್ಲಿ ವ್ಯಾಪಕವಾಗಿ ವಿತರಿಸುವ ಕಾರ್ಯವು ಸುಲಭವಾಯಿತು. ಅದಷ್ಟೆ ಅಲ್ಲದೆ, ಮಾರುಕಟ್ಟೆಯ ವ್ಯವಸ್ಥೆಯಲ್ಲಿಯೂ ಮಹತ್ತರವಾದ ಬದಲಾವಣೆಗೆ ಒಳಗಾಗಬೇಕಾಯಿತು. ಇದರ ಹಿನ್ನೆಲೆಯಲ್ಲಿ ಸಾರಿಗೆ–ಸಂಪರ್ಕ, ಆರ್ಥಿಕ ವ್ಯವಹಾರಗಳ ಕ್ರಿಯೆ ಚುರುಕುಗೊಂಡು ನಗರೀಕರಣದ ಪ್ರಕ್ರಿಯೆಯನ್ನು ಇನ್ನಷ್ಟು ಚುರುಕುಗೊಳಿಸಿತು. ಇದರ ಪ್ರಭಾವವು ಭಾರತದ ಎಲ್ಲಾ ಸಣ್ಣ ಪುಟ್ಟ ಪ್ರದೇಶಗಳ ಮೇಲೆಯೂ ಬೀರಿತು. ಇದರ ಪ್ರಭಾವವೆಷ್ಟಿತ್ತೆಂದರೆ ಸಾಮಾನ್ಯ ಮನುಷ್ಯನ ಸಾಮಾಜಿಕ ಮತ್ತು ಆರ್ಥಿಕ ಜೀವನವನ್ನೇ ಬದಲಾಯಿಸುವಷ್ಟು ಪ್ರಭಾವವನ್ನು ಬೀರಿತು.

ಇದಕ್ಕೆ ಬೆಂಗಳೂರು ಪ್ರದೇಶವೇನೂ ಹೊರತಾಗಿರಲಿಲ್ಲ. ಬೆಂಗಳೂರಿನಲ್ಲಿ ಕೂಡು ಬಂಡವಾಳದ ಕೆಲವೊಂದು ಕೈಗಾರಿಕೆಗಳು ಸ್ಥಾಪನೆಗೊಂಡವು. ಕೈಗಾರಿಕೆಯಲ್ಲಿ ನಿರ್ಧರಿಸಲ್ಪಡುವ ಉತ್ಪಾದನೆ, ವಿತರಣೆ, ವಿನಿಮಯ ಈ ಎಲ್ಲಾ ಕಾರ್ಯಗಳನ್ನು ಮಧ್ಯವರ್ತಿಗಳು ನಿರ್ವಹಿಸುತ್ತಿದ್ದರು. ಬೃಹತ್ ಕೈಗಾರಿಕೆಗಳಲ್ಲಿ ಯಂತ್ರದ ಮೂಲಕ ನಿರ್ವಹಣೆಯನ್ನು ಮಾಡಲಾಗುತ್ತಿತ್ತು. ಬಂಡವಾಳಗಾರನು ಎಲ್ಲೋ ಇದ್ದು ಇನ್ನೊಂದು ಪ್ರದೇಶದಲ್ಲಿ ಕೈಗಾರಿಕೆಯು ಕಾರ್ಯನಿರ್ವಹಿಸುತ್ತಿತ್ತು. ಇಂತಹ ಸಂದರ್ಭದಲ್ಲಿ ಕೈಗಾರಿಗೆ ಬೇಕಾದ ಕಚ್ಚಾವಸ್ತುಗಳನ್ನು ಪೂರೈಸುವ ಮತ್ತು ಸಿದ್ದವಸ್ತುಗಳನ್ನು ವಿತರಣೆ, ವಿನಿಮಯವನ್ನು ಮಾಡುವ ಸಂಪೂರ್ಣ ಕಾರ್ಯವನ್ನು ವರ್ತಕ ಸಮುದಾಯಗಳು ನಿರ್ವಹಿಸುತ್ತಿದ್ದ ಅಂಶಗಳನ್ನು ನಾವು ವಸಾಹತು ಕಾಲಘಟ್ಟದ ಎರಡನೇ ಹಂತ ಮತ್ತು ಸಾಮ್ರಾಜ್ಯಶಾಹಿಯ ಮೊದಲ ಹಂತದಲ್ಲಿ ಕಾಣಬಹುದಾಗಿದೆ.

ಉದಾಹರಣೆಗೆ ಕ್ರಿಸ್ಟಲ್ ಅಂಡ್ ಕಂಪನಿಗೆ ಅಣಪ್ಪ ಸಿರೂರ್ ಮಧ್ಯವರ್ತಿಯಾಗಿ ಕಾರ್ಯ ನಿರ್ವಹಿಸುತ್ತಿದ್ದರು. ನಂತರದಲ್ಲಿ ಅವರು ಸಿರೂರ್ ಅಂಡ್ ಕಂಪನಿಯನ್ನು ಸ್ಥಾಪಿಸಿದರು. ಮುಂದೆ ಅದು ಬೆಂಗಳೂರು ಪ್ರದೇಶದಲ್ಲಿನ ಜವಳಿ ಉದ್ಯಮಗಳಿಗೆ ಕಚ್ಚಾ ಉತ್ಪನ್ನಗಳನ್ನು ಪೂರೈಸುವ ಒಂದು ದೊಡ್ಡ ಉದ್ಯಮವಾಗಿ ಬೆಳೆಯಿತು.[೨೫] ಎಸ್. ವಿ. ಯಾರ್ನ್ ಮರ್ಚೇಂಟ್ ಎಂದೇ ಜನಪ್ರಿಯಗೊಂಡಿದ್ದ ಶ್ರೀನಿವಾಸ ಶೆಟ್ಟಿರವರು ಎ. ಅಂಡ್ ಎಫ್. ಹಾರ್‌ವೇ ಲಿಮಿಟೆಡ್‌ಗೆ ಬೇಕಾದ ಕಚ್ಚಾ ಉತ್ಪನ್ನಗಳನ್ನು ಪೂರೈಸುತ್ತಿದ್ದ ಏಜೆಂಟ್‌ರಾಗಿದ್ದರು.[೨೬] ಶೇಷಗಿರಿ ರಾವ್ ಆಟೋಮೊಬೈಲ್ಸ್ ಡೀಲರ್ಸ್ ಮತ್ತು ಅಂದಿನ ಸಂದರ್ಭದಲ್ಲಿದ್ದ ಆಸ್ಟೀನ್ ಕಾರ್ ಕಂಪನಿಯ ಏಜೆಂಟಾಗಿ ಪ್ರಾಮುಖತ್ಯೆಯನ್ನು ಪಡೆದ ವಾಣಿಜ್ಯೋದ್ಯಮಿಯಾಗಿದ್ದರು.[೨೭] ಬಂಕಿಂಗ್‌ಹ್ಯಾಮ್ ಮತ್ತು ಕರ್ನಾಟಿಕ್ ಮಿಲ್, ದಿ ಬ್ಯಾಂಗಳೂರ್ ಉಲ್ಲನ್ ಕಾಟನ್ ಅಂಡ್ ಸಿಲ್ಕ್ ಮಿಲ್‌ಗಳಿಗೆ ರಾಮ್ ನಾರಾಯಣ ಚೇಲ್ಲಾರಾಮ್‌ರ **ರಾಮ್ ನಾರಾಯಣ್ ಗಿರಿದಾಸ್ ಅಂಡ್ ಕಂಪನಿ** ಮೂಲಕ ಸೋಲೆ ಸೇಲಿಂಗ್ ಏಜೆಂಟ್‌ರಾಗಿ

ಕಾರ್ಯನಿರ್ವಹಿಸುತ್ತಿದ್ದರು.[೨೮] ರಾಮಲಿಂಗಂ ಮೊದಲಿಯರ್ ಇಂಡಿಯನ್ ಶುಗರ್ ಅಂಡ್ ರಿಫೈಂಡ್ಸಿ ಲಿ.,ಗೆ ಮ್ಯಾನೆಜಿಂಗ್ ಏಜೆಂಟಾಗಿ ಮತ್ತು ದಿ ಸ್ಟೇರ್ಡೆಡ್ ಟೈಲ್ ಅಂಡ್ ಬ್ರಿಕ್ಸ್ ವರ್ಕ್ಸ್ ಲಿ.,ಗೆ ಮ್ಯಾನೆಜಿಂಗ್ ಡೈರೆಕ್ಟರ್‌ರಾಗಿ ಕಾರ್ಯ ನಿರ್ವಹಿಸುತ್ತಿದ್ದರು.[೨೯] ಹೀಗೆ ಹಲವು ಪ್ರಮುಖ ವರ್ತಕರು ಮತ್ತು ವರ್ತಕ ಸಮುದಾಯಗಳು ಬೆಂಗಳೂರು ಪ್ರದೇಶದಲ್ಲಿ ಸ್ಥಾಪಿತಗೊಂಡಿದ್ದ ವಿದೇಶಿಯ ಕೈಗಾರಿಕೆಗಳಿಗೆ ಬೇಕಾದ ವಸ್ತುಗಳನ್ನು ಪೂರೈಸುವ ಮತ್ತು ಸಿದ್ಧ ವಸ್ತುಗಳನ್ನು ಮಾರಾಟ ಮಾಡುವ ಒಂದು ದೊಡ್ಡ ಜಾಲವನ್ನು ಹೊಂದಿ ವಾಣಿಜ್ಯ-ವ್ಯಾಪಾರವನ್ನು ವೃದ್ಧಿಸಿತು. ಇದು ಪರೋಕ್ಷವಾಗಿ ಬೆಂಗಳೂರು ಪ್ರದೇಶದ ನಗರ ವ್ಯವಸ್ಥೆಯನ್ನು ವಿಸ್ತರಿಸಿತು.

### ೬.೨. ಕೈಗಾರಿಕೆಗಳು

ಕೈಗಾರಿಕೆಗಳು ಮಾನವನ ಜೀವನಶೈಲಿಯ ಪ್ರತಿಬಿಂಬಗಳು. ಕೈಗಾರಿಕೆ ಸ್ಥಾಪನೆಯು ಅಂದಿನ ಕಾಲದ ಅವಶ್ಯಕತೆಯ ಮೇಲೆ ಅವಲಂಭಿಸಿರುತ್ತದೆ. ಸಮಾಜದಲ್ಲಿ ಬೇಡಿಕೆಯಿರುವ ಉತ್ಪನ್ನಗಳ ಮೇಲೆ ಇವುಗಳ ಸ್ಥಾಪನೆ, ಸ್ವರೂಪ, ಬೆಳವಣಿಗೆಗಳು ನಿರ್ಧರಿತಗೊಂಡಿರುತ್ತದೆ. ವಸಾಹತು ಕಾಲವು ಕೈಗಾರಿಕೆಯ ಸ್ವರೂಪದಲ್ಲಿ ಮಹತ್ತರವಾದ ಬದಲಾವಣೆಯನ್ನು ತಂದಿತು. ವಿಜ್ಞಾನ ಮತ್ತು ತಂತ್ರಗಳ ಅವಿಷ್ಕಾರದಿಂದ ಮಾನವ ನಿರ್ಮಿತ ಉದ್ಯಮಗಳ ಬದಲಾಗಿ ಯಂತ್ರ ನಿರ್ಮಿತ ಉದ್ಯಮಗಳು ಸ್ಥಾಪನೆಗೊಂಡಿತ್ತು. ಇದರಿಂದಾಗಿ ಭಾರತೀಯ ಸಮಾಜದ ಸ್ತರವಿನ್ಯಾಸದಲ್ಲಿ ಏರುಪೇರುಗಳು ಉಂಟಾದವು. ಭಾರತೀಯ ಸಮಾಜವು ಶ್ರಮ ವಿಭಜನೆಯಿಂದಾಗಿ ಸಮಾಜವು ಶ್ರೇಣಿಕೃತವಾಗಿ ಜಾತಿ-ಉಪ ಜಾತಿಗಳಾಗಿದ್ದವು. ಆದರೆ ಕೈಗಾರಿಕೀರಣದಿಂದಾಗಿ ಮತ್ತೆ ಸಮಾಜವು ಉತ್ಪಾದನಾ ವರ್ಗಗಳನ್ನು ಜಾತಿಯನ್ನು ಹೊಗಲಾಡಿಸಿ ಒಂದಾಗಿಸುವಂತೆ ಮಾಡಿತು. ಇದರಿಂದಾಗಿ ವಸಾಹತು ಪೂರ್ವದಲ್ಲಿದ್ದ ಹಲವು ಉತ್ಪಾದನಾ ವರ್ಗ ಸಮುದಾಯಗಳು ಕಣ್ಮರೆಗೊಂಡು ತಮ್ಮನ್ನು ಪ್ರಬಲ ವರ್ಗಗಳೊಂದಿಗೆ ಸೇರಿಕೊಳ್ಳುವ ಅಥವಾ ಕೆಳವರ್ಗಗಳೊಂದಿಗೆ ಗುರುತಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ತೊಡಗಿಸಿ ಕೊಂಡವು. ಈ ತೆರನಾದ ಬದಲಾವಣೆಗಳನ್ನು ಕೈಗಾರಿಕೆಗಳು ಯಾಂತ್ರೀಕರಣಗೊಂಡುದರ ಹಿನ್ನೆಲೆಯಲ್ಲಿ ಕಾಣಬಹುದಾಗಿದೆ. ಈ ನಿಟ್ಟಿನಲ್ಲಿ ಬೆಂಗಳೂರು ಪ್ರದೇಶದಲ್ಲಿ ಸ್ಥಾಪನೆಗೊಂಡ ಕೈಗಾರಿಕೆಗಳು, ಅದರ ಸ್ವರೂಪ, ಕೈಗಾರಿಕೆಗಳ ನಿರ್ವಹಣೆಯಲ್ಲಿ ಪಾಲ್ಗೊಂಡ ವರ್ತಕ ಸಮುದಾಯ ಮತ್ತು ವಿನಿಮಯ ವರ್ತಕ ಸಮುದಾಯಗಳನ್ನು ಗಮನಿಸಲಾಗಿದೆ. ಇದರೊಂದಿಗೆ ವರ್ತಕ ಸಮುದಾಯಗಳ ಪ್ರವೃತ್ತಿಯ ವ್ಯತ್ಯಾಸಗಳು ಕಂಡುಬಂದವು. ಅವುಗಳ ಕುರಿತು ಇಲ್ಲಿ ಚರ್ಚಿಸಲಾಗಿದೆ.

ಟಿಪ್ಪುವಿನ ಕಾಲದಲ್ಲಿ ಜವಳಿ ಉದ್ಯಮ, ಚರ್ಮದ ಉದ್ಯಮ, ಕಬ್ಬಿಣದ ಉದ್ಯಮ, ಸಕ್ಕರೆ ಕೈಗಾರಿಕೆಗಳು ಬೆಂಗಳೂರು ಪ್ರದೇಶದಲ್ಲಿ ಕಂಡುಬರುವ ಪ್ರಮುಖ ಉದ್ಯಮಗಳಾಗಿವೆ. ದ್ವಿತೀಯ

ವಲಯದ ಕೈಗಾರಿಕೆಗಳು ಪ್ರಭುತ್ವದ ಅಧೀನದಲ್ಲಿತ್ತು. ಕೈಗಾರಿಕೆಯ ಉತ್ಪನ್ನಗಳ ಗುಣಮಟ್ಟವನ್ನು ಉತ್ತಮ ಪಡಿಸುವಲ್ಲಿ ಪ್ರಭುತ್ವವು ಅತೀವ ಆಸಕ್ತಿಯನ್ನು ಹೊಂದಿತ್ತು. ಆ ಹಿನ್ನೆಲೆಯಲ್ಲಿ ಹಿಪ್ಪುನೇರಳೆ, ಸಕ್ಕರೆ, ಕಬ್ಬಿಣದ ಕೈಗಾರಿಕೆಗಳಲ್ಲಿ ತರಬೇತಿಯನ್ನು ಪಡೆದ ಫ್ರೆಂಚ್, ಚೀನಿಯರನ್ನು ಕರೆಸಿ ಅವರ ಮಾರ್ಗದರ್ಶನದ ಅಡಿ ಈ ಉದ್ಯಮಗಳಲ್ಲಿ ಉತ್ಪನ್ನಗಳನ್ನು ಉತ್ಪಾದಿಸಲಾಗುತ್ತಿತ್ತು.[೩೦]

ಇವು ಮಾನವನ ಶ್ರಮಾಧಾರಿತವಾದ ಉದ್ಯಮಗಳಾಗಿದ್ದವು. ಇದರಿಂದಾಗಿ ಉತ್ಪಾದನ ಮತ್ತು ವಿನಿಮಯ ವರ್ತಕ ಸಮುದಾಯಗಳು ತಮ್ಮದೇ ಆದ ಸ್ಥಾನಮಾನಗಳನ್ನು ಹೊಂದಿದ್ದರು. ಅವರ ಸ್ಥಾನಮಾನಗಳು ಆ ವರ್ತಕ ಸಮುದಾಯಗಳು ತಯಾರಿಸುವ ಉತ್ಪನ್ನದ ಗುಣಮಟ್ಟದ ಮೇಲೆ ಅವಲಂಬಿಸಿತ್ತು. ವಿನಿಮಯ ವರ್ತಕ ಸಮುದಾಯಗಳಲ್ಲಿ ವೀರಬಣಜಿಗರು, ಕೋಮಟಿಗಳು, ನಗರ್ತರು ಮೊದಲಾದ ವರ್ತಕ ಸಮುದಾಯಗಳು ಕೃಷಿಯಾಧಾರಿತ ಉತ್ಪನ್ನಗಳ ಮಾರಾಟವನ್ನು ಬಹುತೇಕವಾಗಿ ತಮ್ಮ ಕೈಯಲ್ಲಿ ಕೇಂದ್ರಿಕೃತಗೊಳಿಸಿಕೊಂಡಿದ್ದರು. ಕೃಷಿಯೇತರ ಉತ್ಪನ್ನಗಳು ಅಂದರೆ ಕಬ್ಬಿಣದ ವಸ್ತುಗಳು, ಚರ್ಮದ ವಸ್ತುಗಳು, ಉತ್ತಮ ದರ್ಜೆಯ ಮಸ್ಲಿನ್, ಖಾರ್ಪೇಟ್, ರತ್ನಕಂಬಳಿ ಮೊದಲಾದ ಜವಳಿ ಉತ್ಪನ್ನಗಳು ಮುಸ್ಲಿಂ ವರ್ತಕರಾದ ಬೋಹ್ರ, ಚೀನ, ಅರಬ್ಬರು, ಪರ್ಷಿಯನ್, ಲಬ್ಬೆ ಮೊದಲಾದ ವಿನಿಮಯ ವರ್ತಕ ಸಮುದಾಯಗಳ ಕೈಯಲ್ಲಿ ಕೇಂದ್ರೀಕೃತಗೊಂಡಿತು. ಈ ವಿಚಾರಗಳನ್ನು ಆ ದೇಶಗಳೊಂದಿಗೆ ವಾಣಿಜ್ಯ ಹೊಂದಿದ್ದ ಸಂಬಂಧದಿಂದ ತಿಳಿಯಬಹುದು.[೩೧]

೧೮೫೦ರ ಹೊತ್ತಿಗೆ ಇಂಗ್ಲೆಡಿನ ಕೈಗಾರಿಕೆ ಸ್ವರೂಪದಲ್ಲಿ ತಂತ್ರಜ್ಞಾನದ ಬೆಳವಣಿಗೆಯು ಕಾಣಿಸಿಕೊಂಡಿತು. ಫಲವಾಗಿ ಬಂಡವಾಳದ ಸಂಚಯನಗೊಂಡು ವಾಣಿಜ್ಯವಾದ ಮುಂದಿನ ರೂಪವಾದ ಕೈಗಾರಿಕಾ ಬಂಡವಾಳದ ಪರಿಕಲ್ಪನೆ ಉಗಮಗೊಂಡಿತು. ಇದರಿಂದಾಗಿ ಬ್ರಿಟಿಶ್ ಪ್ರಭುತ್ವವು ತಮ್ಮ ಆಸಕ್ತಿಗೆ ಅನುಗುಣವಾಗಿ ವಸಾಹತು ದೇಶಗಳಲ್ಲಿ ಕೈಗಾರಿಕೆಗಳ ಸ್ಥಾಪನೆಗೆ ಅವಕಾಶವನ್ನು ಮಾಡಿಕೊಟ್ಟಿತು. ಸಾಮ್ರಾಜ್ಯಶಾಹಿ ಕಾಲದಲ್ಲಿ ಭಾರತದಲ್ಲಿ ಸ್ಥಾಪನೆಗೊಂಡ ಕೈಗಾರಿಕೆಗಳು ಸಿದ್ಧವಸ್ತುಗಳನ್ನು ಉತ್ಪಾದಿಸುವ ಕೈಗಾರಿಕೆಗಳಾಗಿರದೆ ಬ್ರಿಟನ್ ಕೈಗಾರಿಕೆಗೆ ಬೇಕಾದ ದ್ವಿತೀಯ ಮಟ್ಟದ ಉತ್ಪನ್ನಗಳನ್ನು ತಯಾರಿಸಿ ರಫ್ತು ಮಾಡುವ ಕೈಗಾರಿಕೆಗಳಾಗಿದ್ದವು. ಮೊದಲು ಸ್ಥಾಪನೆಗೊಂಡ ಉದ್ಯಮವೆಂದರೆ ಅದು ಜವಳಿ ಉದ್ಯಮಗಳಾಗಿದ್ದು ಅವು ಸಂಪೂರ್ಣವಾಗಿ ಬಟ್ಟೆಗಳನ್ನು ತಯಾರಿಸುವ ಕೈಗಾರಿಕೆ ಆಗಿರಲಿಲ್ಲ. ಬಟ್ಟೆಗಳನ್ನು ತಯಾರಿಸಲು ಬೇಕಾದ ನೂಲುಗಳನ್ನು ತಯಾರಿಸುವ ಉದ್ಯಮ, ಪೀಸ್ ಗೂಡ್ಸ್ ಉದ್ಯಮಗಳಾಗಿದ್ದವು. ಇಂತಹ ಕೈಗಾರಿಕೆಗಳನ್ನು ಸ್ಥಾಪಿಸುವ ಉದ್ದೇಶವನ್ನು ಗಮನಿಸುವುದಾದಲ್ಲಿ ಬ್ರಿಟನ್ನಿಗೆ ತಲುಪುತ್ತಿದ್ದ ಹತ್ತಿಗಳ ಕೊರತೆ ಮತ್ತು ಕಾಟನ್ ಬೂಬ್ ಅಮೆರಿಕಾದಲ್ಲಿ ಕಾಣಿಸಿಕೊಂಡ ನೆಲೆಯಲ್ಲಿ ಅದಕ್ಕೆ ಪರ್ಯಾಯವಾಗಿ ಜವಳಿ ಉದ್ಯಮಗಳನ್ನು ಸ್ಥಳೀಯವಾಗಿ ಸ್ಥಾಪಿಸಲು ಮುಂದಾದರು. ನೂಲನ್ನು ತೆಗೆಯುವ, ಪೀಸ್ ಗೂಡ್ಸ್ ತಯಾರಿಕೆಯ ಜವಳಿ ಗಿರಣಿಗಳು ಹೆಚ್ಚಾಗಿ

ಕಂಡುಬಂದವು. ಇನ್ನಿತರ ಕೈಗಾರಿಕೆಗಳ ಸ್ಥಾಪನೆ ಮತ್ತು ಸ್ವರೂಪವನ್ನು ನೋಡುವುದಾದರೆ ಸಾಮ್ರಾಜ್ಯಶಾಹಿ ನೀತಿಯನ್ನು ಭಾರತದಲ್ಲಿ ಭದ್ರಪಡಿಸುವ ನಿಟ್ಟಿನಲ್ಲಿ ಸ್ಥಾಪನೆಗೊಂಡ ಕೈಗಾರಿಕೆಗಳೇ ಹೆಚ್ಚು. ಅಂದರೆ ರೈಲು ನಿರ್ಮಾಣಕ್ಕೆ ಸಂಬಂಧಿಸಿದ ಕೈಗಾರಿಕೆ, ಕೃಷಿ ವಾಣಿಜ್ಯವಾದದ ಹಿನ್ನೆಲೆಯ ಉಪಕರಣಗಳನ್ನು ತಯಾರಿಸುವ ಕೈಗಾರಿಕೆಗಳು ಮತ್ತು ಸ್ಥಳೀಯವಾಗಿ ತಮಗೆ ಅಗತ್ಯವಿರುವ ವಸ್ತುಗಳನ್ನು ಪೂರೈಸುವ ನಿಟ್ಟಿನಲ್ಲಿ ಕೈಗಾರಿಕೆಗಳು ಬೆಂಗಳೂರು ಪ್ರದೇಶದಲ್ಲಿ ಸ್ಥಾಪನೆಗೊಂಡವು. ಇದು ಬೆಂಗಳೂರು ದಂಡು ಪ್ರದೇಶದ ವಿಸ್ತರಣೆ ಮತ್ತು ಪೇಟೆಯ ವಿಸ್ತರಣೆಯಿಂದಾಗಿ ಆಧುನಿಕ ಮನೆಗಳ ನಿರ್ಮಾಣ, ಒಳಚರಂಡಿಗಳ ಅಳವಡಿಕೆಯ ಹಿನ್ನೆಲೆಯಲ್ಲಿ ಮಂಗಳೂರು ಹೆಂಚುಗಳ ತಯಾರಿಕಾ ಕೈಗಾರಿಕೆ, ಟೀ ಮತ್ತು ಕಾಫಿ ಉದ್ಯಮಗಳು ಮೊದಲಾದ ಕೈಗಾರಿಕೆಗಳನ್ನು ಕಾಣಬಹುದಾಗಿದೆ.

ಪ್ರಥಮ ಮತ್ತು ದ್ವಿತೀಯ ಮಹಾಯುದ್ಧದ ನಂತರದಲ್ಲಿ ವಿವಿಧ ಬಗೆಗೆ ಕೈಗಾರಿಕೆಗಳ ಸ್ಥಾಪನೆಗೆ ಬ್ರಿಟಿಶ್ ಪ್ರಭುತ್ವ ಗಮನ ಹರಿಸಿತು. ತಮ್ಮ ಅಗತ್ಯಗಳಿಗೆ ಅನುಸಾರವಾಗಿ ಕೈಗಾರಿಕೆಗಳ ಸ್ಥಾಪನೆಗೆ ಅವಕಾಶವನ್ನು ಸಹ ನೀಡಿತು. ಈ ನಿಟ್ಟಿನಲ್ಲಿ ಮಿಷನರಿಗಳ ಪಾತ್ರವು ಮಹತ್ವದ್ದಾಗಿದೆ. ಕ್ರೈಸ್ತ ಮಿಷನರಿಗಳು ಇಂತಹ ಕೈಗಾರಿಕೆಗಳಲ್ಲಿ ಕಾರ್ಯನಿರ್ವಹಿಸುವ ಉತ್ಪಾದನಾ ವರ್ತಕ ಸಮುದಾಯಗಳಿಗೆ ತರಬೇತಿಗಳನ್ನು ನೀಡಿ ಅವರ ಕೌಶಲ್ಯತೆಯನ್ನು ಉತ್ತಮ ಪಡಿಸುವ ಕಾರ್ಯವನ್ನು ವಹಿಸಿಕೊಂಡಿತ್ತು. ಹಲವು ಕ್ರೈಸ್ತ ಮಿಷನರಿಗಳು ಇಂತಹ ಕೈಗಾರಿಕಾ ತರಬೇತು ಶಾಲೆಗಳನ್ನು ತೆರೆಯಿತು. ಜೊತೆಗೆ ಸ್ಥಳೀಯ ಉತ್ಪಾದನಾ–ವಿನಿಮಯ ವರ್ತಕ ಸಮುದಾಯಗಳಾದ ಗಾಣಿಗರು, ಮೊದಲಿಯಾರ್ ಸಮುದಾಯಗಳು ತಮ್ಮನ್ನು ಕಾಲಕ್ಕೆ ತಕ್ಕಂತೆ ಬದಲಾಯಿಸಿಕೊಳ್ಳುವ ಒತ್ತಡಕ್ಕೆ ಸಿಲುಕಿದವು. ಫಲವಾಗಿ ಸಂಘ–ಸಂಸ್ಥೆಗಳನ್ನು ಸ್ಥಾಪಿಸಿಕೊಂಡು ತಮ್ಮ ಸಮುದಾಯಗಳಿಗೆ ಕೈಗಾರಿಕಾ ತರಬೇತಿಗಳನ್ನು ನೀಡಲು ಮುಂದಾದವು. ಬ್ರಿಟಿಶರ ಕೈಗಾರಿಕೆಗಳಿಂದ ಸ್ಥಳೀಯ ಉತ್ಪಾದನಾ ವರ್ತಕ ಸಮುದಾಯಗಳ ನಾಶವನ್ನು ಹೊಂದಿದರೆ ಇನ್ನೊಂದೆಡೆ ಅವರ ಕೌಶಲ್ಯತೆಯನ್ನು ಉತ್ತಮ ಪಡಿಸಿಕೊಂಡು ಬೃಹತ್ ಯಂತ್ರ ನಿರ್ಮಿತ ಕೈಗಾರಿಕೆಗಳಲ್ಲಿ ಉಸ್ತುವಾರಿಯಾಗಿ ಅಥವಾ ಕಾರ್ಮಿಕರಾಗಿ ಕಾರ್ಯವನ್ನು ನಿರ್ವಹಿಸುವಂತೆ ಮಾಡಿತು. ಉತ್ಪಾದನ ವರ್ತಕ ಸಮುದಾಯಗಳು ಮತ್ತು ಕರಕುಶಲ ಕರ್ಮಿಗಳು ನಗರ ಪ್ರದೇಶಗಳಿಗೆ ವಲಸೆ ಬರುವ ಪ್ರವೃತ್ತಿಯನ್ನು ಸಹ ಹೆಚ್ಚಾಯಿತು. ಈ ತೆರನಾದ ಅಂಶಗಳು ನಗರೀಕರಣದ ಪ್ರಕ್ರಿಯೆಯನ್ನು ಚುರುಕುಗೊಳಿಸಿತು. ಇದು ಉತ್ಪಾದನಾ ವರ್ತಕ ಸಮುದಾಯಗಳಲ್ಲಿ ಆದ ಬದಲಾವಣೆಯನ್ನು ತಿಳಿಸುತ್ತದೆ.

ವಸಾಹತುಶಾಹಿ ಕಾಲದಲ್ಲಿ ಕೃಷಿ ವಾಣಿಜ್ಯವಾದದ ಹಿನ್ನೆಲೆಯಲ್ಲಿ ಪ್ರಬಲಗೊಂಡ ವಿನಿಮಯ ವರ್ತಕ ಸಮುದಾಯಗಳಲ್ಲಿ ಹಣ ಸಂಚಯನಗೊಂಡು ಬಂಡವಾಳ ರೂಪದಲ್ಲಿ ಕೇಂದ್ರಿತಗೊಂಡಿತು.

ಇದು ಕೂಡು ಬಂಡವಾಳದ ಸ್ವರೂಪದ ಹಲವು ಕೈಗಾರಿಕೆಗಳ ಸ್ಥಾಪನೆಗೆ ಅವಕಾಶವನ್ನು ಮಾಡಿ ಕೊಟ್ಟಿತ್ತು. ಯಂತ್ರಾಧಾರಿತ ದೊಡ್ಡ ಕೈಗಾರಿಕೆಗಳ ಸ್ಥಾಪನೆಯಲ್ಲಿ ತಮ್ಮ ಬಂಡವಾಳವನ್ನು ಹಾಕಿ ಲಾಭ ಪಡೆಯುವ ಪ್ರವೃತ್ತಿಯನ್ನು ಮೂಡಿಸಿತು. ಇದರೊಂದಿಗೆ ಇಂತಹ ಕೈಗಾರಿಕೆಗಳಿಗೆ ಬೇಕಾದ ಕಚ್ಚಾವಸ್ತುಗಳನ್ನು ಪೂರೈಸುವ ಮತ್ತು ತಯಾರಾದ ವಸ್ತುಗಳನ್ನು ರವಾನಿಸುವ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಇದರಿಂದಾಗಿ ವಿನಿಮಯ ವರ್ತಕ ಸಮುದಾಯಗಳು ಪ್ರವೃತ್ತಿಯಲ್ಲಿ ಮಧ್ಯವರ್ತಿಗಳ ರೂಪವನ್ನು ಪಡೆದರು. ಜೊತೆಗೆ ಇಂತಹ ಕೈಗಾರಿಕೆಗಳ ನಿರ್ವಹಣೆಯಲ್ಲಿಯೂ ಪ್ರಮುಖ ಪಾತ್ರ ವಹಿಸಿದರು.

ವಸಾಹತು ಮತ್ತು ಸಾಮ್ರಾಜ್ಯಶಾಹಿ ಕಾಲದಲ್ಲಿ ಸ್ಥಾಪನೆಗೊಂಡ ಬಹುಪಾಲು ಕೈಗಾರಿಕೆಗಳು ಕೂಡು ಬಂಡವಾಳ ಸ್ವರೂಪದ ಕೈಗಾರಿಕೆಗಳಾಗಿವೆ. ಫಲವಾಗಿ ಯಂತ್ರಾಧಾರಿತ ಕೈಗಾರಿಕೆಗಳ ಸ್ಥಾಪನೆಯಾದ ಕೈಗಾರಿಕೆಗಳ ನಿರ್ವಹಣೆಯು ಒಬ್ಬರ ಕೈಯಲ್ಲಿರದೇ ವಿವಿಧ ವರ್ತಕ ಸಮುದಾಯಗಳಿಗೆ ಸೇರಿದವರಿಂದ ಕೂಡಿತ್ತು. ಬಹುಪಾಲು ಯುರೋಪಿನ ವರ್ತಕರ ಕೈಯಲ್ಲಿತ್ತು. ಸ್ಥಳೀಯ ಪ್ರಬಲ ವಿನಿಮಯ ವರ್ತಕ ಸಮುದಾಯಗಳನ್ನು ಸಹ ಒಳಗೊಂಡಿದ್ದವು. ಕಾರಣ ಕೈಗಾರಿಕೆಗಳಿಗೆ ಬೇಕಾದ ಎಲ್ಲ ತರಹದ ಕಾರ್ಯಗಳನ್ನು ಮಾಡುವ ಮತ್ತು ಸ್ಥಳೀಯವಾಗಿ ತಿಳಿದಿದ್ದ ವರ್ತಕ ಸಮುದಾಯಗಳು ಇವರೇ ಆಗಿದ್ದರು. ಸ್ಥಳೀಯ ವರ್ತಕ ಸಮುದಾಯಗಳು ಸಹ ಯಂತ್ರಾಧಾರಿತ ಕೈಗಾರಿಕೆಗಳನ್ನು ಸ್ಥಾಪಿಸಿದರು. ಫಲವಾಗಿ ವಿನಿಮಯ ವರ್ತಕ ಸಮುದಾಯಗಳು ವಾಣಿಜ್ಯೋದ್ಯಮಿಗಳಾಗಿ ಪರಿವರ್ತನೆಗೊಂಡರು.

೧೮೭೩ರಲ್ಲಿ ಮಿ. ಹ್ಯಾಕಿನ್ಸ್ ಎಂಬುವವರು ಆಡಿಶನ್ ಆಂಡ್ ಕಂಪನಿಯನ್ನು ಮದ್ರಾಸಿನಲ್ಲಿ ಸ್ಥಾಪಿಸಿದರು. ಈ ಕಂಪನಿಯು ಒಂದು ಜನರಲ್ ಕಂಪನಿಯಾಗಿದ್ದು. ಪ್ರಾರಂಭದಲ್ಲಿ ಮುದ್ರಣ ಯಂತ್ರದ ಕಂಪನಿಯಾಗಿತ್ತು. ನಂತರ ಬೇಡಿಕೆ ಹೆಚ್ಚಿದಂತೆ ವಿಸ್ತೃತವಾಗಿ ಬೆಳೆಯತೊಡಗಿತು. ನಂತರದ ಅವಧಿಯಲ್ಲಿ ತಮ್ಮ ಮಕ್ಕಳನ್ನು ಒಳಗೊಂಡಂತೆ ಮುದ್ರಣ ಉದ್ಯಮಕ್ಕೆ ಸಂಬಂಧಿಸಿದ ಸ್ಥಾಯಿ ಉತ್ಪನ್ನಗಳ ತಯಾರಿಕೆಯಲ್ಲಿಯೂ ತಮ್ಮನ್ನು ತೊಡಗಿಸಿಕೊಂಡಿತು. ಫಲವಾಗಿ ವರ್ಣರಂಜಿತ ಕ್ಯಾಲೆಂಡರ್, ಲೇಖನಿ, ಶಾಯಿ ಮೊದಲಾದ ಉತ್ಪನ್ನಗಳ ತಯಾರಿಕೆಯನ್ನು ಮಾಡಲಾರಂಭಿಸಿತು. ೧೯೦೭ರ ವೇಳೆಗೆ ಇದಲ್ಲದೇ, ಕಾರ್, ವಾಚ್, ಅಲಂಕಾರಿಕ ಪಿಠೋಪಕರಣ, ವಸ್ತುಗಳ ಉತ್ಪಾದನೆಯಲ್ಲಿ ಸಹ ಆಸಕ್ತಿಯನ್ನು ವಹಿಸಿದ್ದರಿಂದಾಗಿ ಉದ್ಯಮದ ಶಾಖೆಗಳನ್ನು ಉದಕ ಮಂಡಲ ಮತ್ತು ಬೆಂಗಳೂರು ಪ್ರದೇಶದಲ್ಲಿಯೂ ಸಹ ಸ್ಥಾಪಿಸಲಾಯಿತು. ಕಾರಣ ಬೆಂಗಳೂರು ದಂಡು ಪ್ರದೇಶದಲ್ಲಿದ್ದ ಬ್ರಿಟಿಶ್ ಆಡಳಿತ ಕಛೇರಿ ಮತ್ತು ಸೈನಿಕ ನೆಲೆಗಳಿಗೆ ಬೇಕಾದ ಪಿಠೋಪಕರಣ ಗಳನ್ನು ಮತ್ತು ಸ್ಟೇಶನರಿ ವಸ್ತುಗಳನ್ನು ಉತ್ಪಾದಿಸುವುದಾಗಿತ್ತು.[೨೨]

ಇದೇ ಅವಧಿಯಲ್ಲಿ ಸ್ಥಾಪಿಸಲ್ಪಟ್ಟ ಇನ್ನೊಂದು ಪ್ರಮುಖ ಕೈಗಾರಿಕೆಯೆಂದರೆ ಎಣ್ಣೆ ಕೈಗಾರಿಕೆ ಬೆಸ್ಟ್ ಆಂಡ್ ಕಂಪನಿ. ಇದು ಸಹ ಒಂದು ಜನರಲ್ ಕಂಪನಿಯಾಗಿ ಸ್ಥಾಪನೆಗೊಂಡಿತ್ತು. ಇತರ ಕೈಗಾರಿಕೆಗಳಿಗೆ ಬೇಕಾದ ಎಣ್ಣೆಗಳನ್ನು ಸರಬರಾಜು ಮಾಡುವ ಕಂಪನಿಯಾಗಿ ಸ್ಥಾಪನೆಗೊಂಡಿತು. ಇದರ ಸಂಪರ್ಕದಲ್ಲಿ ಹಲವು ಕೈಗಾರಿಕೆಗಳಿದ್ದು. ಅದರಲ್ಲಿ ಮುಖ್ಯವಾಗಿ ಮೈಸೂರು ಗೋಲ್ಡ್ ಮೈನಿಂಗ್ ಕಂಪನಿಯು ಸಹ ಒಂದು. ಇದು ಸಹ ತನ್ನ ಶಾಖೆಯನ್ನು ಬೆಂಗಳೂರು ಪ್ರದೇಶದಲ್ಲಿ ಹೊಂದಿತ್ತು.

ಬಿನ್ನಿ ಆಂಡ್ ಕಂಪನಿ ಲಿಮಿಟೆಡ್ ಇದರ ಸಂಸ್ಥಾಪಕ ಬಿನ್ನಿ ಸೋದರರು. ಇವರು ಮೂಲತಃ ನಾವಿಕರು. ಕಲ್ಕತ್ತ ಮತ್ತು ಮದ್ರಾಸ್ ಬಂದರುಗಳಿಗೆ ಬರುವ ಎರಡು ಹಡಗುಗಳನ್ನು ಹೊಂದಿದ್ದರು. ಭಾರತದಲ್ಲಿ ಬ್ರಿಟಿಶರಿಗೆ ಬೇಕಾದ ವಸ್ತುಗಳನ್ನು ಹಡಗುಗಳ ಮೂಲಕ ರವಾನಿಸುವುದು ಇವರ ವ್ಯಾಪಾರವಾಗಿತ್ತು. ನಂತರದಲ್ಲಿ ಆರ್ಥಿಕವಾಗಿ ಸಬಲತೆಯನ್ನು ಪಡೆದ ನಂತರದಲ್ಲಿ ಬಿನ್ನಿ ಆಂಡ್ ಕಂಪನಿ ಲಿಮಿಟೆಡ್ ಎಂಬ ಉದ್ಯಮವನ್ನು ಮದ್ರಾಸಿನಲ್ಲಿ ಪ್ರಾರಂಭಿಸಿದರು. ಇದು ಒಂದು ಜನರಲ್ ಕಂಪನಿಯಾಗಿದ್ದು. ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದ ಕೈಗಾರಿಕೆಗಳಿಗೆ ಬಂಡವಾಳವನ್ನು ಹೂಡಿದರು. ಇದರಲ್ಲಿ ಪ್ರಾರಂಭದಲ್ಲಿ ಕಾಟನ್ ಜಿನ್ನಿಂಗ್, ಕಾಟನ್ ಪ್ರೆಸ್ಸಿಂಗ್, ಕಾಟನ್ ಯಾರ್ನ್‌ನ್ನು ತಯಾರಿಸುವ ಮತ್ತು ಅದಕ್ಕೆ ಪೂರಕವಾಗಿ ಸಂಬಂಧಿಸಿದ ಹತ್ತಿ ಉತ್ಪನ್ನಗಳನ್ನು ಉತ್ಪಾದಿಸಲಾಗುತಿತ್ತು. ನಂತರದಲ್ಲಿ ದಂಡು ಪ್ರದೇಶದ ಸೈನ್ಯದಳಕ್ಕೆ ಬೇಕಾದ ಕಾಟನ್ ಮತ್ತು ಉಲ್ಲನ್ ಜವಳಿ ಉತ್ಪನ್ನಗಳನ್ನು ತಯಾರಿಸಿ ಬ್ರಿಟಿಶ್ ಪ್ರಭುತ್ವಕ್ಕೆ ಪೂರೈಸುವ ಕಾರ್ಯದಲ್ಲಿ ಒಪ್ಪಂದ ಮೇರೆಗೆ ತೊಡಗಿಸಿಕೊಂಡಿತು.

ದಿ ಬೆಂಗಳೂರು ಉಲ್ಲನ್, ಕಾಟನ್ ಆಂಡ್ ಸಿಲ್ಕ್ ಮಿಲ್ಸ್ ಕಂಪನಿ, ಲಿ. ೧೮೭೯ರಲ್ಲಿ ಒಂದು ಖಾಸಗಿ ಕಂಪನಿಯಾಗಿ ಸ್ಥಾಪಿತಗೊಂಡಿತ್ತು. ಇದು ೧೮೮೮ರ ವರೆಗೆ ಮುಂದುವರೆದು ನಂತರ ಬಿನ್ನಿ ಮಿಲ್ ಆಂಡ್ ಕಂಪನಿಯಾಗಿ ಪರಿವರ್ತನೆಗೊಂಡಿತು. ಇದು ಯಂತ್ರಾಧಾರಿತವಾದ ಕೈಗಾರಿಕೆಯಾಗಿದೆ. ೧೯೦೯ರಲ್ಲಿ ವಿದ್ಯುತ್ ಚಾಲಿತ ಕೈಗಾರಿಕೆಯಾಗಿತ್ತು. ಕಾಲಕ್ಕೆ ತಕ್ಕಂತೆ ಯಂತ್ರಗಳಲ್ಲಿ ಬದಲಾವಣೆಯನ್ನು ಮಾಡುವ ಮೂಲಕ ಅಭಿವೃದ್ಧಿಯನ್ನು ಮಾಡಲಾಯಿತು. ಈ ಕೈಗಾರಿಕೆಯು ತಮ್ಮದೇ ಆದ ಕಮ್ಮಾರ ಶಾಲೆಯನ್ನು, ಮೂರು ಅಲಂಕಾರಿಕ ಮರದ ರಪ್ಪು, ಹತ್ತಿ ಬಟ್ಟೆಯನ್ನು ಮೃದುಮಾಡುವ ಪಂಜಿಂಕ್ ಯಂತ್ರಗಳನ್ನು ಮತ್ತು ಇನ್ನಿತರ ಸಾಧನಗಳನ್ನು ಸಹ ಹೊಂದಿತ್ತು. ೨೩,೦೨೪ ಹತ್ತಿ ಮತ್ತು ಉಲ್ಲನ್ ನೂಲುಗಳ ಕದರು ತಯಾರಿಸುವ ಮತ್ತು ೪೦ ಉಲ್ಲನ್ ಲೂಮ್‌ಗಳನ್ನು ತಯಾರಿಸುವ ಸಾಮರ್ಥ್ಯವನ್ನು ಹೊಂದಿತ್ತು. ಭಾರತದಲ್ಲಿಯೇ ಅತೀ ಉತ್ತಮ ದರ್ಜೆಯ ಜವಳಿ ಉದ್ಯಮವು ಇದಾಗಿತ್ತು. ಕಲ್ಕತ್ತದಲ್ಲಿ ಈ ಕಂಪನಿಯ ಉತ್ಪನ್ನಗಳಿಗೆ ಬೇಡಿಕೆ

ಹೆಚ್ಚಾಗಿತ್ತು. ೧೯೧೩ರಲ್ಲಿ ಒಂದು ಮಿಲಿಯಲ್ ಪೌಂಡ್ ತೂಕದ ಕಂಬಳಿಗಳನ್ನು ಬ್ರಿಟಿಶ್ ಪ್ರಭುತ್ವದೊಂದಿಗೆ ಒಪ್ಪಂದ ಮಾಡಿಕೊಂಡು ಸೈನ್ಯದಳಕ್ಕೆ ರಫ್ತು ಮಾಡಲಾಯಿತು.

ದಿ ಬೆಂಗಳೂರು ಬ್ರೆವರಿ ಕಂಪನಿಯನ್ನು ೧೮೮೯ರಲ್ಲಿ ಟಿ. ಲೆಟ್ಸ್‌ಮ್ಯಾನ್ ಸ್ಥಾಪಿಸಿದರು. ನಂತರದಲ್ಲಿ ವಿ ಗಂಗಾಧರ ಚೆಟ್ಟಿ ಆಂಡ್ ಕಂಪನಿಯ ಮತ್ತು ಎಚ್. ಟಿ. ಇಟ್ವ್ವ ಜೊತೆಗೂಡಿ ಜಂಟಿ ಕೈಗಾರಿಕೆಯಾಯಿತು. ಈ ಉದ್ಯಮವನ್ನು ೫ ಹೆಕ್ಟರ್ ಭೂ ಪ್ರದೇಶ ವಿಸ್ತಾರವಾದ ಆವರಣದಲ್ಲಿ ಸ್ಥಾಪಿಸಲಾಯಿತು. ಬೆಂಗಳೂರಿನ ದಂಡು ಪ್ರದೇಶದ ರಿಚ್ಮಂಡ್ ಟೌನಿನ ಬಳಿ ೧೨ ಹೆಕ್ಟರ್ ಭೂ ಪ್ರದೇಶದಲ್ಲಿ ಸ್ಥಾವರವನ್ನು ಸ್ಥಾಪಿಸಿ ಸಾರಾಯಿಯನ್ನು ಭಟ್ಟಿ ಇಳಿಸಲಾಗುತ್ತಿತ್ತು. ಬ್ರಿಟನ್ನಿನಿಂದ ತರಿಸಿದ ಮದ್ಯದ ಬಾಟಲು ಮತ್ತು ಲೇಬಲ್‌ಗಳನ್ನು ಬಳಸಿ ಪ್ಯಾಕ್ ಮಾಡಲಾಗುತ್ತಿತ್ತು. ಹೀಗೆ ತಯಾರಾದ ಮದ್ಯಗಳನ್ನು ಬ್ರಿಟಿಶ್ ದಂಡು ಪ್ರದೇಶಗಳಿಗೆ ಮತ್ತು ಆಡಳಿತ ಕ್ಷೇತ್ರಗಳಿದ್ದ ಕ್ಯಾಂಟಿನ್‌ಗಳಿಗೆ ರವಾನಿಸಲಾಗುತ್ತಿತ್ತು. ಉದಾಹರಣೆಗೆ, ಬಳ್ಳಾರಿಯು ದಂಡು ಪ್ರದೇಶವು ಬೆಂಗಳೂರು ಪ್ರದೇಶದಲ್ಲಿ ತಯಾರಿಸಿದ ಮದ್ಯಗಳಿಗೆ ಪ್ರಮುಖ ಗ್ರಾಹಕರನ್ನು ಹೊಂದಿದ್ದ ಪ್ರದೇಶವಾಗಿತ್ತು.[೩೩]

ವಸಾಹತು ಕಾಲದಲ್ಲಿ ಸಸ್ಯ ಉದ್ಯಮವು ಒಂದು ಬೃಹತ್ ಉದ್ಯಮವಾಗಿ ಬೆಳೆಯಿತು. ವಾಣಿಜ್ಯ ಬೆಳೆಗಳಾದ ಮೆಣಸು, ರಬ್ಬರ್, ಕಾಫಿ, ಟೀ, ಜೀರಿಗೆ, ಹತ್ತಿ, ರೇಷ್ಮೆ ಮುಂತಾದವುಗಳನ್ನು ಅತ್ಯಧಿಕವಾಗಿ ಬೆಳೆಯಲಾಗುತ್ತಿತ್ತು. ಇದರಲ್ಲಿ ಯುರೋಪಿನ ವರ್ತಕರು ಮತ್ತು ಸ್ಥಳೀಯ ವರ್ತಕರು ಸಹ ಆಸಕ್ತಿಯನ್ನು ಹೊಂದಿದ್ದರು. ಈ ಉದ್ಯಮವು ಕಂಪನಿಯ ಅನುಮತಿಯೊಂದಿಗೆ ಕಾರ್ಯ ನಿರ್ವಹಿಸುತ್ತಿತ್ತು. ದೊಡ್ಡ ಮಟ್ಟದ ಎಸ್ಟೇಟ್‌ಗಳು ಖಾಸಗಿ ವ್ಯಕ್ತಿಗಳ ಹಿಡಿತದಲ್ಲಿತ್ತು. ಇವರು ತಮ್ಮದೇ ಆದ ಸಂಘ–ಸಂಸ್ಥೆಗಳನ್ನು ರಚಿಸಿಕೊಂಡಿದ್ದರು. ಅಥವಾ ಸೆಂಟ್ರಲ್ ಅಸೋಸಿಯೇಷನ್‌ಗೆ ಸದಸ್ಯರಾಗಿದ್ದರು. ಟೀ ಮತ್ತು ರಬ್ಬರ್ ಪ್ಲಾಂಟೇಶನ್ ಕಂಪನಿಯ ಅಧೀನದಲ್ಲಿತ್ತು. ಯುನೈಟೆಡ್ ಪ್ಲಾಂಟರ್ಸ್ ಅಸೋಸಿಯೇಶನ್ ಆಫ್ ಸೌತ್ ಇಂಡಿಯದ ಕೇಂದ್ರ ಕಛೇರಿ ಮತ್ತು ಪ್ರಯೋಗಶಾಲೆಯನ್ನು ಬೆಂಗಳೂರಿನಲ್ಲಿ ೧೯೦೯ರಲ್ಲಿ ಮದ್ರಾಸ್ ಪ್ರೆಸ್ಸಿಡೆನ್ಸಿ ಪ್ರಭುತ್ವವು ಸ್ಥಾಪಿಸಿ ಅದರ ಆರ್. ಡಿ. ಆನ್ಸ್ಟೀಡ್ ರವರನ್ನು ಪ್ಲಾಂಟೇಶನ್ ತಜ್ಞರಾಗಿ ನೇಮಿಸಿತು. ಇದರ ಮುಖ್ಯ ಉದ್ದೇಶ ಪ್ರತಿ ವಾಣಿಜ್ಯ ಬೆಳೆಗಳನ್ನು ಬೆಳೆಯುವ ಜಿಲ್ಲೆಗಳಲ್ಲಿ ಪ್ರಯೋಗಾತ್ಮಕ ಘಟಕಗಳನ್ನು ತೆರೆದು ಕೃಷಿ ವಾಣಿಜ್ಯ ಉದ್ಯಮವನ್ನು ಬೆಳೆಸುವುದಾಗಿತ್ತು.[೩೪]

ಮೆಕಾನಿಕಲ್ ಉದ್ಯಮಗಳು ಗೌರ್ನಮೆಂಟ್ ಸೆಂಟ್ರಲ್ ಇಂಡಸ್ಟ್ರಿಯಲ್ ವರ್ಕ್‌ಶಾಪ್ ೧೮೯೭ರಲ್ಲಿ ಸ್ಥಾಪಿತಗೊಂಡ ಕೈಗಾರಿಕೆಯಾಗಿದೆ. ಇದರ ಸ್ಥಾಪನೆಯ ಮುಖ್ಯ ಉದ್ದೇಶ ಪ್ರಾರಂಭದಲ್ಲಿ ಸಕ್ಕರೆ, ಕಾಗದ, ಎಣ್ಣೆ ಮಿಲ್‌ಗಳಿಗೆ ಬೇಕಾದ ಎರಕ ಮತ್ತು ಟ್ಯಾಂಕ್‌ಗಳನ್ನು ಹಾಗೂ ಇನ್ನಿತರ ಉಪಕರಣಗಳನ್ನು

ಉತ್ಪಾದಿಸುವುದಾಗಿದ್ದವು. ಬೆಂಗಳೂರಿಗೆ ವಿದ್ಯುತ್ ಸರಬರಾಜುಗೊಂಡಾಗ ಕೈಗಾರಿಕೆಗಳು ವಿದ್ಯುತ್ ಯಂತ್ರಚಾಲಿತಗೊಂಡು ಇನ್ನಷ್ಟು ಕೈಗಾರಿಕೆಗಳು ಬೆಂಗಳೂರು ಪ್ರದೇಶದಲ್ಲಿ ಸ್ಥಾಪನೆಗೊಂಡವು. ಈ ಮೆಕಾನಿಕಲ್ ಕೈಗಾರಿಕೆಯು ಬೃಹತ್ ಕೈಗಾರಿಕೆಗಳಿಗೆ ಮತ್ತು ಪ್ರಧಾನವಾಗಿ ಲೋಕೋಪಯೋಗಿ ಇಲಾಖೆ ಮತ್ತು ವಿದ್ಯುತ್ ಇಲಾಖೆಗಳಿಗೆ ಟ್ಯಾಂಕ್ ಮತ್ತು ಫೋರ್ಜಿಂಗ್‌ಗಳನ್ನು ಅಗತ್ಯವಿದ್ದ ಬಿಡಿ ಭಾಗಗಳನ್ನು ಸರಬರಾಜು ಮಾಡುವ ಕಾರ್ಯವನ್ನು ಪ್ರಾರಂಭಿಸಿತು.[೩೫]

೧೯೦೫ರಲ್ಲಿ ಬೆಂಗಳೂರು ನಗರಕ್ಕೆ ವಿದ್ಯುತ್ ಸರಬರಾಜನ್ನು ಸಾರ್ವಜನಿಕ ಬಳಕೆಗೆ ಪೂರೈಕೆ ಮಾಡಲು ಪ್ರಭುತ್ವ ಮುಂದಾಯಿತು. ಫಲವಾಗಿ ೧೯೩೨ರಲ್ಲಿ ವಿದ್ಯುತ್ ಸಾಗಾಣಿಕೆಗೆ ಅಗತ್ಯವಾದ ಎಲ್.ಟಿ ಮತ್ತು ಎಚ್. ಟಿ ವಿದ್ಯುತ್ ಇನ್ಸುಲೇಟರ್‌ಗಳು, ಟ್ರಾನ್ಸ್‌ಫಾರ್ಮರ್‌ಗಳು, ಸ್ವಿಚ್‌ಗೇರ್ಸ್ ಮೊದಲಾದವುಗಳ ತಯಾರಿಕೆಗಾಗಿ ಬೇಡಿಕೆ ಹೆಚ್ಚಿತು. ಅದ್ದರಿಂದಾಗಿ ಬೆಂಗಳೂರಿನ ಮಲ್ಲೇಶ್ವರಂನಲ್ಲಿ ಗವರ್ನಮೆಂಟ್ ಪೋರ್ಸಿಲಿನ್ ಫ್ಯಾಕ್ಟರಿಯನ್ನು ಸ್ಥಾಪಿಸಲಾಯಿತು. ಇದರ ಮೂಲ ಬಂಡವಾಳ ೫.೫ ಲಕ್ಷ ರೂಪಾಯಿಯಾಗಿತ್ತು. ಈ ಕೈಗಾರಿಕೆಯನ್ನು ಇನ್ನಷ್ಟು ಬಲಗೊಳಿಸುವ ನಿಟ್ಟಿನಲ್ಲಿ ಜಪಾನಿನ ನಿಪ್ಪನ್ ಹೃಷಿಕೇಷ ಲಿ., ಆಫ್ ನಗೋವ ಸಂಸ್ಥೆಯ ಸಹಭಾಗಿತ್ವದಲ್ಲಿ ಹೈ ಟೆನ್ಷನ್ ಮತ್ತು ಲೋ ಟೆನ್ಷನ್ ವಿದ್ಯುತ್ ಇನ್ಸುಲೇಟರ್‌ಗಳನ್ನು ಮತ್ತು ಟ್ರಾನ್ಸ್‌ಫಾರ್ಮರ್ ಬುಷಿಂಗ್ ಮುಂತಾದ ಉಪಕರಣಗಳನ್ನು ತಯಾರಿಸಲು ಆರಂಭಿಸಿತು. ಬೆಂಗಳೂರು ಪ್ರದೇಶದ ನಗರೀಕರಣ ಮತ್ತ ಕೈಗಾರಿಕೀಕರಣದ ಪ್ರಕ್ರಿಯೆ ಇನ್ನಷ್ಟು ಚುರುಕುಗೊಂಡಾಗ ೧೯೩೪ರಲ್ಲಿ ಈ ಕೈಗಾರಿಕೆಯು ವಿದ್ಯುತ್ ಸಂಬಂಧಿ ಇನ್ನಿತರ ಉಪಕರಣಗಳಾದ ರೋಟರಿ ಮೆಷಿನರಿ, ಮೋಟರ್ ಜನರೇಟರ್ಸ್, ಎಲೆಕ್ಟ್ರಿಕಲ್ ಸ್ವಿಚ್‌ಗೇರ್ಸ್, ಟೆಲಿಫೋನ್ ಕಾಂಪೋನೆಂಟ್ಸ್‌ಗಳ ಜೊತೆಗಳ ಪ್ಲಾಸ್ಟಿಕ್ ಕವರ್ಡ್ ವೈರ್ಸ್, ಕೇಬಲ್ ಇತ್ಯಾದಿ ಉತ್ಪನ್ನಗಳನ್ನು ಉತ್ಪಾದಿಸಲು ಮುಂದಾಯಿತು.[೩೬]

ಇದೇ ಹಿನ್ನೆಲೆಯಲ್ಲಿ ೧೯೩೪ರಲ್ಲಿ ಆಮ್ಕೊ ಲಿಮಿಟೆಡ್ ಕೈಗಾರಿಕೆಯು ೯.೫ ಲಕ್ಷ ರೂಪಾಯಿಗಳ ಮೂಲ ಬಂಡವಾಳದೊಂದಿಗೆ ಆರಂಭವಾಯಿತು. ಈ ಕೈಗಾರಿಕೆಯು ಮೋಟರ್ ಕಾರ್, ಫಾರಂಲೈಟಿಂಗ್, ಟೆಲಿಗ್ರಾಫಿಕ್ ಆಪರೇಟಸ್, ರೇಡಿಯೋ ಮುಂತಾದ ಉಪಕರಣಗಳಿಗೆ ಬೇಕಾದ ವಿದ್ಯುತ್ ಬ್ಯಾಟರಿಗಳನ್ನು ಉತ್ಪಾದಿಸುವ ಉದ್ದೇಶದಿಂದ ಸ್ಥಾಪನೆಗೊಂಡಿತು. ಇದರ ಬೆನ್ನಲ್ಲೇ ೧೯೩೬ರಲ್ಲಿ ಪ್ರಭುತ್ವದ ಕೈಗಾರಿಕೆಯಾದ ದಿ ಮೈಸೂರು ಲ್ಯಾಂಪ್ಸ್ ಫ್ಯಾಕ್ಟರಿಯು ಯಶವಂತಪುರದ ಬಳಿ ೫ ಲಕ್ಷ ರೂಪಾಯಿ ಬಂಡವಾಳದೊಂದಿಗೆ ಸ್ಥಾಪನೆಗೊಂಡಿತು. ಈ ಕೈಗಾರಿಕೆಯು ವಿದ್ಯುತ್ ಇನ್‌ಕ್ಯಾಂಡೆಸೆಂಟ್ ಲ್ಯಾಂಪ್‌ಗಳನ್ನು ಉತ್ಪಾದಿಸುವ ಉದ್ದೇಶವನ್ನು ಹೊಂದಿತ್ತು.[೩೭]

ಚರ್ಮೋದ್ಯಮ ೧೯೦೮ರಲ್ಲಿ ಜಾಯಿಂಟ್ ಸ್ಟಾಕ್ ಕಂಪನಿಯಾಗಿ ದಿ ಮೈಸೂರ್ ಕ್ರೋಂ ಟ್ಯಾನಿಂಗ್ ಕಂಪನಿಯು ೪.೯೪ ಲಕ್ಷ ರೂಪಾಯಿಗಳ ಬಂಡವಾಳವನ್ನಿಟ್ಟು ಸ್ಥಾಪತಗೊಂಡಿತು. ಈ

ಕಂಪನಿಯಲ್ಲಿ ಚರ್ಮದ ಉತ್ಪನ್ನಗಳಾದ ಚರ್ಮದ ಪೆಟ್ಟಿಗೆ, ಉಡುಪು, ಚಪ್ಪಲಿ, ಷೂ, ದಿಂಬು, ರೈಲ್ವೆಗೆ ಬೇಕಾದ ಅಗತ್ಯದ ವಸ್ತುಗಳು ಮತ್ತು ದಿನನಿತ್ಯ ಬಳಕೆಯ ಫ್ಯಾನ್ಸಿ ಉತ್ಪನ್ನಗಳನ್ನು ತಯಾರಿಸಿ ಯುರೋಪ್, ಅಮೆರಿಕಾ ಮತ್ತು ಆಫ್ರಿಕಾ ದೇಶಗಳಿಗೆ ರಫ್ತು ಮಾಡುತ್ತಿತ್ತು. ಚರ್ಮೋದ್ಯಮಕ್ಕೆ ಸಂಬಂಧಿಸಿದಂತೆ ೧೯೪೭೦ರಲ್ಲಿ ದಿ ಸ್ಯೂಡ್ ಅಂಡ್ ಲೆದರ್ಸ್ ಲಿ. ಎಂಬ ಇನ್ನೊಂದು ಕಂಪನಿಯು ಸ್ಥಾಪನೆಗೊಂಡಿತು. ಅದರ ಬಂಡವಾಳವು ೨೨.೭೮ಲಕ್ಷ ರೂಪಾಯಿ ಹೂಡಿದ್ದ ಬೃಹತ್ ಕೈಗಾರಿಕೆ ಯಾಗಿದೆ.[೩೮]

ಒಟ್ಟಾರೆಯಾಗಿ ವಸಾಹತು ಕಾಲಘಟ್ಟದಲ್ಲಿ ಬೆಂಗಳೂರು ಪ್ರದೇಶದಲ್ಲಿ ಸ್ಥಾಪಿತಗೊಂಡ ಕೈಗಾರಿಕೆಗಳ ಸ್ಥಾಪನೆ, ನಿರ್ವಹಣೆ, ಅಭಿವೃದ್ಧಿ ಹೀಗೆ ಪ್ರತಿ ಹಂತದಲ್ಲಿಯೂ ಸಹ ವರ್ತಕ ಸಮುದಾಯಗಳ ಪಾತ್ರವನ್ನು ಕಾಣಬಹುದಾಗಿದೆ. ಮೈಸೂರು ಪ್ರಭುತ್ವದ ಅಡಿಯಲ್ಲಿ ಸ್ಥಾಪನೆಗೊಂಡ ಹಲವು ಕೈಗಾರಿಕೆಯಲ್ಲಿಯೂ ಸಹ ಬೆಂಗಳೂರು ವರ್ತಕ ಸಮುದಾಯಗಳ ಬಹುದೊಡ್ಡ ಪಾಲಿದೆ ಎಂಬ ವಿಚಾರವನ್ನು ನಿರ್ವಾಹಕರು, ಏಜೆಂಟರು ಎಂಬ ಶೀರ್ಷಿಕೆಯಡಿಯಲ್ಲಿ ಚರ್ಚಿಸಲಾಗಿದೆ.

### ೬.೩. ವ್ಯಾಪಾರಿ ಮಾರ್ಗಗಳು

ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸಂಪರ್ಕವನ್ನು ಕಲ್ಪಿಸಿಕೊಡುವುದೇ ಸಾರಿಗೆಯಾಗಿದೆ. ರಾಜಕೀಯ ವ್ಯವಸ್ಥೆ ಮತ್ತು ಆರ್ಥಿಕ ಸಂಪನ್ಮೂಲಗಳ ಲಭ್ಯತೆ ಹಾಗೂ ಉತ್ತಮ ಭೌಗೋಳಿಕ ಅಂಶಗಳು ಸಾರಿಗೆ ವ್ಯವಸ್ಥೆಯನ್ನು ಪ್ರಭಾವಿಸುತ್ತದೆ. ಹಾಗೆ, ಸಾರಿಗೆ ವ್ಯವಸ್ಥೆಯು ಒಂದು ಪ್ರದೇಶದ ಆರ್ಥಿಕತೆ ಮತ್ತು ಜನತೆಯ ರಾಜಕೀಯ ಮತ್ತು ಸಾಮಾಜಿಕ–ಸಾಂಸ್ಕೃತಿಕ ಅಂಶಗಳನ್ನು ಪ್ರಭಾವಿಸುತ್ತದೆ. ಹೀಗೆ ಒಂದಕ್ಕೊಂದು ಪೂರಕವಾಗಿದ್ದಾಗ ಮಾತ್ರ ದೇಶದ ಅಭಿವೃದ್ಧಿ ಸಾಧ್ಯ. ಒಂದು ದೇಶದ ಆರ್ಥಿಕತೆಯು ಹೆಚ್ಚಾಗಿ ವ್ಯಾಪಾರ–ವಾಣಿಜ್ಯದ ಮೇಲೆ ಅವಲಂಬಿಸಿರುತ್ತದೆ. ವ್ಯಾಪಾರ–ವಾಣಿಜ್ಯದ ಬೆನ್ನೆಲುಬು ಎಂದೇ ಸಾರಿಗೆ ಸಂಪರ್ಕವನ್ನು ಕರೆಯಲಾಗಿದೆ. ಸಾರಿಗೆ ವ್ಯವಸ್ಥೆ ಇಲ್ಲದಿದ್ದರೆ ವ್ಯಾಪಾರ ವ್ಯವಹಾರವು ಅಸಾಧ್ಯ. ಒಂದು ಪ್ರದೇಶದ ನಗರೀಕರಣದ ಪ್ರಕ್ರಿಯೆಯನ್ನು ಅಳೆಯುವ ಮಾನದಂಡಗಳಲ್ಲಿ ಸಾರಿಗೆ–ಸಂಪರ್ಕವು ಒಂದು ಪ್ರಮುಖ ಅಂಶವಾಗಿದೆ. ಸಂಕ್ಷಿಪ್ತವಾಗಿ ಹೇಳುವುದಾದರೆ ಒಂದು ದೇಶದ ಆರ್ಥಿಕತೆಯನ್ನು ನಿರ್ಣಯಿಸುವ ಅಂಶಗಳಲ್ಲಿ ಸಾರಿಗೆ ವ್ಯವಸ್ಥೆಯು ಒಂದಾಗಿದೆ. ಈ ಎಲ್ಲಾ ಅಂಶಗಳು ಸಾರಿಗೆ ಸಂಪರ್ಕದ ವ್ಯವಸ್ಥೆಯ ಮಹತ್ವವನ್ನು ತಿಳಿಸುತ್ತದೆ.

ಸಾರಿಗೆ ವ್ಯವಸ್ಥೆಯ ಸಂಕ್ರಮಣಕಾಲವೆಂದರೆ ಅದು ೧೭ನೇ ಮತ್ತು ೧೮ನೇ ಶತಮಾನವಾಗಿದೆ. ಈ ಅವಧಿಯಲ್ಲಿ ಕೈಗಾರಿಕೀಕರಣ ಮತ್ತು ವಿಜ್ಞಾನ–ತಂತ್ರಜ್ಞಾನದ ಆವಿಷ್ಕಾರಗಳು ಸಾರಿಗೆ ವ್ಯವಸ್ಥೆಯಲ್ಲಿ ಅಭೂತಪೂರ್ವ ಬದಲಾವಣೆಯನ್ನು ತಂದಿತು. ಇಡೀ ವಿಶ್ವದಲ್ಲೇ ರಾಜಕೀಯ, ಆರ್ಥಿಕ, ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಬದಲಾವಣೆಯ ಅಲೆಯನ್ನು ಎಬ್ಬಿಸಿತು. ಇದರ ಬೆನ್ನಲೇ ವಾಣಿಜ್ಯ–

ವ್ಯಾಪಾರದಲ್ಲಿಯೂ ಹೊಸ ಹೊಸ ನೀತಿ–ನಿಯಮಗಳಾದ ಬ್ಯಾಂಕಿಂಗ್ ವ್ಯವಸ್ಥೆ, ಮಾರುಕಟ್ಟೆಯ ಏಕಸ್ವಾಮ್ಯದ ಪರಿಕಲ್ಪನೆ, ವಿವಿಧ ಆರ್ಥಿಕ ಸಿದ್ಧಾಂತಗಳು ಮೊದಲಾದ ಪರಿಕಲ್ಪನೆ ಮತ್ತು ಸಿದ್ಧಾಂತಗಳು ಕಾಣಿಸತೊಡಗಿದವು.

ವಸಾಹತು ಕಾಲದಲ್ಲಿ ರಾಜಕೀಯ ಸ್ಥಿರತೆಯನ್ನು ಕಾಯ್ದುಕೊಳ್ಳುವ ಮತ್ತು ಮಿಲಿಟರಿ ಭದ್ರತೆಯನ್ನು ರೂಪಿಸುವ ಹಿನ್ನೆಲೆಯಲ್ಲಿ ಸಾರಿಗೆ–ಸಂಪರ್ಕ ರಚನೆಗೆ ಕಾರಣವಾದರೆ ಅದನ್ನು ರೂಪಿಸಿ, ಬೆಳೆಸಿ, ಅದರ ವ್ಯಾಪ್ತಿಯನ್ನು ವಿಸ್ತರಿಸಿ ವ್ಯವಸ್ಥಿತಗೊಳಿಸಿದ್ದು ಆರ್ಥಿಕ ಆಸಕ್ತಿಯೇ ಆಗಿತ್ತು. ಈ ತೆರನಾದ ಬೆಳವಣಿಗೆಗಳಿಗೆ ಭಾರತವನ್ನು ಒಳಗೊಂಡಂತೆ ಬೆಂಗಳೂರು ಪ್ರದೇಶವು ಹೊರತಾಗಿರಲಿಲ್ಲ. ಈ ಅಧ್ಯಾಯದಲ್ಲಿ ಬೆಂಗಳೂರು ಪ್ರದೇಶದ ಸಾರಿಗೆ ಸಂಪರ್ಕದ ಪ್ರಕ್ರಿಯೆಯಲ್ಲಿ ವರ್ತಕರ ಪಾತ್ರ., ವಸಾಹತು ಕಾಲಘಟ್ಟದಲ್ಲಿ ಸಾರಿಗೆ ಸಂಪರ್ಕದಲ್ಲಾದ ಬೆಳವಣಿಗೆ ಮತ್ತು ಬದಲಾವಣೆಗಳು, ಪ್ರಮುಖ ವ್ಯಾಪಾರಿ ಕೇಂದ್ರಗಳನ್ನು ಚರ್ಚಿಸುವ ಉದ್ದೇಶವನ್ನು ಹೊಂದಿದೆ. ವಸಾಹತು ಪೂರ್ವ ಕಾಲಘಟ್ಟದಲ್ಲಿ ಸಾರಿಗೆ ವ್ಯವಸ್ಥೆಯನ್ನು ತಿಳಿಯದೇ ವಸಾಹತು ಕಾಲದ ಸಾರಿಗೆ ಸಂಪರ್ಕದ ವ್ಯವಸ್ಥೆಯ ಬೆಳವಣಿಗೆ ಮತ್ತು ಬದಲಾವಣೆಗಳನ್ನು ಗುರುತಿಸುವುದು ಕಷ್ಟ. ಅದ್ದರಿಂದಾಗಿ ಹೈದರ್ ಮತ್ತು ಟಿಪ್ಪುವಿನ ಕಾಲದ ಸಾರಿಗೆ–ಸಂಪರ್ಕ ವ್ಯವಸ್ಥೆಯ ಬಗೆಗೆ ತಿಳಿಯುವುದು ಅಗತ್ಯವಾಗಿದೆ.

ಮೂಲತಃ ಬೆಂಗಳೂರು ಪ್ರದೇಶವು ಉತ್ತಮ ಸಾರಿಗೆಗೆ ಬೇಕಾದ ಭೌಗೋಳಿಕ ಲಕ್ಷಣವನ್ನು ಹೊಂದಿತ್ತು. ದಕ್ಷಿಣ ಭಾರತ ಮತ್ತು ಉತ್ತರ ಭಾರತದ ನಡುವಿನ ಸಂಪರ್ಕ ಕೇಂದ್ರವಾಗಿ ಬೆಂಗಳೂರು ಪ್ರದೇಶವಿದೆ. ದಕ್ಷಿಣ ಭಾರತದ ವಿವಿಧ ರಾಜ್ಯಗಳ ನಡುವೆ ಉತ್ತಮ ಸಂಪರ್ಕ ಜಾಲವನ್ನು ಭೌಗೋಳಿಕವಾಗಿ ಹೊಂದಿದೆ. ಈ ಅಂಶಗಳನ್ನು ಬೆಂಗಳೂರು ಕೋಟೆಯ ಬಾಗಿಲುಗಳ ಹೆಸರುಗಳು ಬೆಂಗಳೂರು ಪ್ರದೇಶದ ಸಾರಿಗೆ ಸಂಪರ್ಕದ ಬಗೆಗೆ ಬೆಳಕು ಚೆಲ್ಲುತ್ತದೆ. ಒಡೆಯರ ಕಾಲದಲ್ಲಿಯೇ ಈ ಮೇಲಿನ ಅಂಶಗಳನ್ನು ಗುರುತಿಸಬಹುದಾಗಿದೆ. ಉತ್ತಮ ಆಯಕಟ್ಟಿನ ಪ್ರದೇಶವಾಗಿದ್ದರಿಂದಾಗಿ ಹೈದರ್ ಮತ್ತು ಟಿಪ್ಪು ತಮ್ಮ ಆಡಳಿತಾವಧಿಯಲ್ಲಿ ಬೆಂಗಳೂರು ಪ್ರದೇಶವನ್ನು ಒಂದು ಸೈನಿಕ ದಂಡು ಪ್ರದೇಶವನ್ನಾಗಿ ಪರಿವರ್ತಿಸಿಕೊಂಡಿದ್ದರು. ಈ ಅವಧಿಯಲ್ಲಿ ಬೆಂಗಳೂರು ಒಂದು ಪ್ರಮುಖ ವಾಣಿಜ್ಯ ಕೇಂದ್ರವಾಗಿಯೂ ಬೆಳವಣಿಗೆಯನ್ನು ಹೊಂದಿತ್ತು. ಬುಕಾನನ್, ಮಾರ್ಕ್ಸ್ ವಿಲ್ಕ್ಸ್ ಮೊದಲಾದವರು ತಮ್ಮ ಗ್ರಂಥಗಳಲ್ಲಿ ಉಲ್ಲೇಖಿಸಿರುವಂತೆ ಬೆಂಗಳೂರು ಪ್ರದೇಶಗಳಿಗೆ ವಿವಿಧ ಪ್ರದೇಶಗಳಿಂದ ಬರುತ್ತಿದ್ದ ವರ್ತಕರು, ವಸ್ತುಗಳು ಹೊರ ರಾಜ್ಯಗಳ ಹಿನ್ನೆಲೆಯಲ್ಲಿ ಇದ್ದ ವ್ಯಾಪಾರಿ ಮಾರ್ಗಗಳನ್ನು ತಿಳಿಯಬಹುದಾಗಿದೆ. ಅದಷ್ಟೇ ಅಲ್ಲದೇ ಬೆಂಗಳೂರು ಪ್ರದೇಶದ ಸುತ್ತಮುತ್ತಲಿನ ವ್ಯಾಪಾರಿ ಕೇಂದ್ರಗಳು ಸಹ ಸಾರಿಗೆ ಸಂಪರ್ಕದ ಬಗೆಗೆ ಮಾಹಿತಿ ನೀಡುತ್ತದೆ. ಆದರೆ ಮೂರನೆಯ

ಆಂಗ್ಲೋ–ಮೈಸೂರು ಕದನದ ಸಂದರ್ಭದಲ್ಲಿ ಟಿಪ್ಪು ಹಲವು ಕೈಗಾರಿಕಾ ಪ್ರದೇಶಗಳನ್ನು ಮತ್ತು ಮಾರ್ಗವನ್ನು ಬ್ರಿಟಿಶರಿಗೆ ಪೂರಕವಾಗಬಾರದೆಂದು ನಾಶಪಡಿಸಿದನು. ಬುಕಾನನ್ ಬರುವ ವೇಳೆಗಾಗಲೇ ರಸ್ತೆ ಮಾರ್ಗಗಳು ದುರಸ್ತಿಗೆ ಒಳಗಾಗಿದ್ದ ವಿಚಾರವನ್ನು ತಿಳಿಸಿದ್ದಾನೆ. ಸಾರಿಗೆ ವ್ಯವಸ್ಥೆಯು ಮಳೆಗಾಲದಲ್ಲಿ ಸಂಚರಿಸಲು ಸೂಕ್ತವಾಗಿಲ್ಲವೆಂದು ಅದರಿಂದಾಗಿ ವರ್ತಕ ಸಮುದಾಯಗಳು ಮಳೆಗಾಲದ ಸಂದರ್ಭದಲ್ಲಿ ಹಲವು ತಿಂಗಳ ಕಾಲ ಆ ಪ್ರದೇಶದಲ್ಲಿ ತಂಗಿ ನಂತರ ಪ್ರಯಾಣವನ್ನು ಮಾಡುತ್ತಿದ್ದರು ಎಂದು ಹೇಳಿದ್ದಾನೆ.[೩೯]

### ರೈಲ್ವೆ ಮತ್ತು ರಸ್ತೆ ಸಾರಿಗೆ–ಸಂಪರ್ಕ

ವಸಾಹತು ಕಾಲಘಟ್ಟದ ಅತೀ ದೊಡ್ಡ ರೈಲ್ವೆ ವ್ಯವಸ್ಥೆಯನ್ನು ಹೊಂದಿದ ದೇಶವೆಂದರೆ ಅದು ಭಾರತ. ಜಗತ್ತಿನ ದಕ್ಷಿಣಭಾಗದಲ್ಲೇ ರೈಲು ಮಾರ್ಗದಲ್ಲಿ ಭಾರತ ನಾಲ್ಕನೆಯ ಸ್ಥಾನವನ್ನು ಪಡೆದ ದೇಶವಾಗಿ ಹೊರಹೊಮ್ಮಿತು. ೧೯೦೧ರ ವೇಳೆಗೆ ೨೪,೧೬೫ ಸಾವಿರ ಮೈಲುಗಳನ್ನು ಒಳಗೊಂಡ ರೈಲು ಮಾರ್ಗವಾಗಿತ್ತು. ಅದರಲ್ಲಿ ೧೮೩, ೯೮೮, ೦೦೦ ಪ್ರಯಾಣಿಕರನ್ನು ಸಾಗಿಸುವ ಮತ್ತು ೩೫೪,೯೦೨ ಸಾವಿರ ಕಾರ್ಮಿಕರಿಗೆ ಕೆಲಸವನ್ನು ನೀಡುವ ಬೃಹತ್ ಉದ್ಯಮವಾಗಿತ್ತು. ಭಾರತದ ರೈಲ್ವೆ ಇತಿಹಾಸವು ಪ್ರಾರಂಭವಾಗಿದ್ದು ಏಪ್ರಿಲ್ ೧೮೫೩ರಲ್ಲಿ, ಅಂದಿನಿಂದ ಇಂದಿನವರೆಗೆ ದೇಶದ ಬೆಳವಣಿಗೆಯಲ್ಲಿ ತನ್ನದೇ ಆದ ಮಹತ್ವದ ಪಾತ್ರವನ್ನು ವಹಿಸಿದೆ. ಇದರ ಸ್ಥಾಪನೆಯ ಸ್ವರೂಪವನ್ನು ಕಾಣುವುದಾದರೆ ಸಾರ್ವಜನಿಕ ಉಪಯೋಗದ ಮತ್ತು ದೇಶದ ಅಭಿವೃದ್ಧಿಯ ಉದ್ದೇಶಕ್ಕಿಂತ ಸ್ಥಳೀಯ ಸಂಪನ್ಮೂಲಗಳ ಸಮರ್ಪಕವಾಗಿ ಬಳಸಿಕೊಳ್ಳುವ ಉದ್ದೇಶವನ್ನು ವಸಾಹತುಶಾಹಿ ಪ್ರಭುತ್ವವು ಹೊಂದಿತ್ತು.[೪೦]

ಭಾರತದ ರೈಲ್ವೆ ಸಾರಿಗೆಯ ಬಗೆಗೆ ಮೊಟ್ಟಮೊದಲು ಮಾತುಕತೆ ಅಥವಾ ಚರ್ಚೆ ಪ್ರಾರಂಭವಾದದ್ದು ೧೮೩೧–೩೨ರಲ್ಲಿ ಇದಕ್ಕಿಂತ ಪೂರ್ವದಲ್ಲೆ ಇಂಗ್ಲೆಂಡಿನಲ್ಲಿ ರೈಲ್ವೆಗಳ ಪರಿಚಯವಾಗಿತ್ತು. ಭಾರತಕ್ಕೆ ರೈಲುಗಳನ್ನು ಪರಿಚಯವನ್ನು ಮಾಡುವ ಮುಖ್ಯ ಉದ್ದೇಶವು ಇಲ್ಲಿಯ ಕಚ್ಚಾ ವಸ್ತುಗಳನ್ನು ತಮ್ಮ ನಾಡಿಗೆ ರವಾನಿಸುವುದು ಮತ್ತು ಅಲ್ಲಿಯ ಸಿದ್ಧವಸ್ತುಗಳನ್ನು ಭಾರತಕ್ಕೆ ರವಾನಿಸುವ ಹಿನ್ನೆಲೆಯಲ್ಲಿ. ಇಂಡಿಯನ್ ಬೋರ್ಡಿನ ಅಧ್ಯಕ್ಷರಾಗಿದ್ದ ಸಾರ್ ಚಾಲ್ಸ್ ವುಡ್ಸ್ ೧೯ನೇ ಶತಮಾನದ ಪೂರ್ವದಲ್ಲಿ ಬೃಹತ್ ಪ್ರಮಾಣದಲ್ಲಿ ಕಚ್ಚಾ ಹತ್ತಿಗಳನ್ನು ಭಾರತದಿಂದ ರಫ್ತುನ್ನು ಮಾಡಲು ಸೂಕ್ತ ಸಾರಿಗೆ ವ್ಯವಸ್ಥೆಯ ಅವಶ್ಯಕತೆಯಿದೆ ಎಂದು ತಿಳಿಸಿದರು. ನಂತರ ೧೮೪೪ರಲ್ಲಿ ಮ್ಯಾಕ್ ಡೊನಾಲ್ಡ್ ಸ್ಟೆಫಿಸನ್ ಕಲ್ಕತ್ತದಿಂದ ಉತ್ತರ ವಾಯುವ್ಯ ಭಾರತವನ್ನು ಸಂಪರ್ಕಿಸುವ ರೈಲ್ವೆ ಸಾರಿಗೆಯ ಅಗತ್ಯತೆಯನ್ನು ಎತ್ತಿಹಿಡಿದರು. ಅದೇ ವರ್ಷ ಮ್ಯಾಂಚೆಸ್ಟರ್ ಮತ್ತು ಗ್ಲಗೌನ

ಛೇಂಬರ್ ಆಫ್ ಕಾಮರ್ಸ್‌ನಲ್ಲಿ ಅಲ್ಲಿಯ ವಾಣಿಜ್ಯೋದ್ಯಮಿಗಳು ರಫ್ತು ಮಾಡಲು ರೈಲ್ವೆಯ ಸಾರಿಗೆಯು ಬೇಕೆಂದು ಅಧಿಕೃತವಾಗಿ ಬೇಡಿಕೆಯನ್ನು ಬ್ರಿಟಿಶ್ ಪ್ರಭುತ್ವದ ಮುಂದಿಟ್ಟರು. ಈಗಾಗಲೇ ಬ್ರಿಟನ್ನಿನಲ್ಲಿ ವಾಣಿಜ್ಯವಾದದ ಎರಡನೆ ಹಂತವು ಮುಗಿದಿದ್ದು, ಬಂಡವಾಳದ ಸಂಚಯನ ಆರಂಭವಾಗಿತ್ತು. ಬಂಡವಾಳಗಾರರು ತಮ್ಮ ಬಂಡವಾಳವನ್ನು ಹೂಡಿಕೆ ಮಾಡಲು ಉತ್ತಮ ಕ್ಷೇತ್ರದ ಶೋಧನೆಯನ್ನು ಮಾಡುತ್ತಿದ್ದರು. ಆಗ ಲಾರ್ಡ್ ಡಾಲ್‌ಹೌಸಿ ಭಾರತದ ರೈಲ್ವೆ ಕ್ಷೇತ್ರವು ತಮ್ಮ ದೇಶದ ಬಂಡವಾಳಗಾರರು ಬಂಡವಾಳವನ್ನು ಹೂಡಲು ಉತ್ತಮ ಕ್ಷೇತ್ರವೆಂದು ಹೇಳಿದನು. ಇವೆಲ್ಲದರ ಜೊತೆಗೆ ವಸಾಹತು ಪ್ರಭುತ್ವದ ಆಡಳಿತದ ಉದ್ದೇಶದ ನೆಲೆಯಲ್ಲಿಯೂ ಯೋಚಿಸಿ ಬ್ರಿಟಿಶರು ರೈಲ್ವೆ ಸಾರಿಗೆಯನ್ನು ಭಾರತದಲ್ಲಿ ತರಲು ಚಿಂತಿಸಿದರು. ೧೮೪೮ರಲ್ಲಿ ಭಾರತದ ಗವರ್ನರ್ ಜನರಲ್‌ರಾಗಿದ್ದ ಲಾರ್ಡ್ ಹೇಸ್ಟಿಂಗ್ ತನ್ನ ಸಾಮ್ರಾಜ್ಯಶಾಹಿ ಪ್ರಭುತ್ವಕ್ಕೆ ಭಾರತದ ರೈಲ್ವೆ ಸಾರಿಗೆಯ ಅಗತ್ಯದ ಬಗ್ಗೆ ಒಂದು ಪತ್ರವನ್ನು ಬರೆದನು. ಇದೇ ವಿಚಾರಕ್ಕೆ ಒತ್ತನ್ನು ನೀಡುತ್ತಾ ಲಾರ್ಡ್ ಡಾಲ್‌ಹೌಸಿ ಹೇಳಿದಂತೆ "ತಮ್ಮ ವಸಾಹತು ಪ್ರದೇಶಗಳ ಮೇಲೆ ಆಡಳಿತವನ್ನು ಸರಳ ರೀತಿಯ ನಿರ್ವಹಣೆ ಮಾಡಲು ಮತ್ತು ಮಿಲಿಟರಿ ಹಿಡಿತವನ್ನು ಸಾಧಿಸಲು ಬ್ರಿಟಿಶ್ ಪ್ರಭುತ್ವಕ್ಕೆ ರೈಲ್ವೆ ಸಾರಿಗೆಯ ಅಗತ್ಯವಿದೆ". ಇದೇ ಸಂದರ್ಭದಲ್ಲಿ ೧೮೫೭ರ ದಂಗೆ ಸ್ಫೋಟಗೊಂಡಿತು. ಇದು ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿ ಪ್ರಭುತ್ವವನ್ನು ಭಾರತದ ರೈಲ್ವೆ ಸಾರಿಗೆಯ ಅಗತ್ಯತೆಯ ಬಗ್ಗೆ ಚಿಂತಿಸುವಂತೆ ಮಾಡಿತು. ಹಾಗೂ ರೈಲ್ವೆ ಸಾರಿಗೆ ಅಭಿವೃದ್ಧಿಯಲ್ಲಿ ಆಸಕ್ತಿ ವಹಿಸುವಂತೆ ಮಾಡಿತು.[೪೧]

೧೮೫೩ರ ಏಪ್ರಿಲ್ ೧೬ರಂದು ಬಾಂಬೆಯಿಂದ ಥಾಣೆಗೆ ೧೪ ಕೋಚ್‌ಗಳನ್ನು ಒಳಗೊಂಡ ರೈಲು ಸಂಚಾರವನ್ನು ಪ್ರಾರಂಭಿಸಿತು. ಇದರೊಂದಿಗೆ ಭಾರತದ ರೈಲು ಸಂಪರ್ಕದ ನೀಲಿ ನಕ್ಷೆಯನ್ನು ಲಾರ್ಡ್ ಡಾಲ್‌ಹೌಸಿ ವರದಿಯನ್ನು ಪ್ರಕಟಿಸುತ್ತಾ ಬ್ರಿಟನ್ನಿನ ಖಾಸಗಿ ಏಜೆನ್ಸಿಗಳಿಗೆ ಭಾರತದ ರೈಲ್ವೆ ನಿರ್ಮಾಣದ ಹಕ್ಕನ್ನು ನೀಡುವ ಅಂಶವನ್ನು ತಿಳಿಸಿದನು. ಇದರ ನೆಲೆಯಲ್ಲಿ ಬ್ರಿಟಿಶ್ ಈಸ್ಟ್ ಇಂಡಿಯ ಕಂಪನಿ ಮತ್ತು ಖಾಸಗಿ ಕಂಪನಿಯಾದ ಗ್ರೇಟ್ ಇಂಡಿಯನ್ ಪೆನೆನ್‌ಸುಲಾರ್ ರೈಲ್ವೆ ಕಂಪನಿ ಜೊತೆಗೂಡಿ ಭಾರತದ ರೈಲ್ವೆ ಕಾಮಗಾರಿಯನ್ನು ಕೈಗೆತ್ತಿಕೊಂಡಿತು. ಇದರಿಂದಾಗಿ ಭಾರತೀಯ ರೈಲ್ವೆ ಉದ್ಯಮ ಪ್ರಾರಂಭಗೊಂಡಿತು. ಈ ಉದ್ಯಮಕ್ಕೆ ಗ್ಯಾರಂಟಿ ಸ್ಕೀಮ್ ಆಧಾರದ ಮೇರೆಗೆ ಬ್ರಿಟನ್ನಿನ ಬಹುಸಂಖ್ಯಾತ ಬಂಡವಾಳಗಾರರು ತಮ್ಮ ಬಂಡವಾಳವನ್ನು ೪ ರಿಂದ ೫% ಶೇಕಡವಾರು ಲಾಭಾಂಶದ ಉದ್ದೇಶದಿಂದ ಹೂಡಿದರು. ಬ್ರಿಟನ್ನಿನ ಬಂಡವಾಳಗಾರರಿಗೆ ಲಾಭಾಂಶವನ್ನು ನೀಡುವುದಾಗಿ ಇಲ್ಲಿಯ ಭಾರತೀಯ ಪ್ರಭುತ್ವ ಭರವಸೆಯನ್ನು ಹೊಣೆಗಾರಿಗೆಯನ್ನು ಹೊತ್ತಿತ್ತು.

ಹೀಗೆ ಪ್ರಾರಂಭಗೊಂಡ ಭಾರತೀಯ ರೈಲ್ವೆ ಸಾರಿಗೆ ಕಾಮಗಾರಿಯನ್ನು ಒಟ್ಟು ಎಂಟು ಖಾಸಗಿ ಕಂಪನಿಗಳು ನಿರ್ವಹಿಸಲು ಮುಂದಾದವು. ಅವುಗಳೆಂದರೆ, ೧೮೫೩ರಲ್ಲಿ ಸ್ಥಾಪನೆಗೊಂಡ

ಈಸ್ಟ್ ಇಂಡಿಯನ್ ರೈಲ್ವೆ, ೧೮೫೩ರ ಗ್ರೇಟ್ ಇಂಡಿಯನ್ ಪೆನಿನ್‌ಸುಲಾ ರೈಲ್ವೆ, ೧೮೫೫ರ ಸಿಂದ್ ಪಂಜಾಬ್ ಆಫ್ ದೆಲ್ಲಿ ಕಂಪನಿ, ೧೮೫೭ರ ಈಸ್ಟ್ರನ್ ಬೆಂಗಾಲ್ ರೈಲ್ವೆ ಕಂಪನಿ, ೧೮೫೭ರ ಬಾಂಬೆ, ಬರೋಡಾ ಆ್ಯಂಡ್ ಸೆಂಟ್ರಲ್ ಇಂಡಿಯ ರೈಲ್ವೆ ಮತ್ತು ಮದ್ರಾಸ್ ರೈಲ್ವೆ ಗ್ಯಾರಂಟೆಡ್ ಕಂಪನಿಗಳು ಒಟ್ಟು ೫೦೦೦ ಮೈಲು ರೈಲ್ವೆ ಸಾರಿಗೆಯ ನಿರ್ಮಾಣದ ಕಾರ್ಯವನ್ನು ಭಾರತದಲ್ಲಿ ಕೈಗೆತ್ತಿಗೊಂಡಿತು. ಈ ಕಂಪನಿಗಳ ಮುಖ್ಯ ಉದ್ದೇಶವು ಈ ರೈಲು ಸಾರಿಗೆಯ ಮೂಲಕ ಭಾರತದಿಂದ ಕಚ್ಚಾ ಮಾಲುಗಳನ್ನು ತಮ್ಮ ದೇಶಕ್ಕೆ ರಫ್ತುನ್ನು ಮಾಡುವ ಹಿನ್ನೆಲೆಯಲ್ಲಿ ಕಚ್ಚಾ ವಸ್ತುಗಳ ತಯಾರಿಸುವ ಪ್ರದೇಶದಿಂದ ರೇವು ಪಟ್ಟಣಕ್ಕೆ ಸಾರಿಗೆ ಸಂಪರ್ಕವನ್ನು ಏರ್ಪಡಿಸುವುದಾಗಿತ್ತು.[೪೨]

ಬ್ರಿಟಿಶ್ ಸಾಮ್ರಾಜ್ಯಶಾಹಿ ನೀತಿಯ ಚರಿತ್ರೆಯಲ್ಲಿ ಬೆಂಗಳೂರು ಪ್ರದೇಶವು ಪ್ರಮುಖ ಕೇಂದ್ರವಾಗಿ ಕಾಣಿಸಿಕೊಂಡಿತ್ತು. ೧೮೫೭ರ ದಂಗೆಯ ನಂತರದಲ್ಲಿ. ಬ್ರಿಟಿಶ್ ಭಾರತೀಯ ಸೈನ್ಯವನ್ನು ಪುನರ್ ರಚಿಸುವ ಕಾರ್ಯವನ್ನು ಬ್ರಿಟಿಶ್ ಸಾಮ್ರಾಜ್ಯಶಾಹಿ ಪ್ರಭುತ್ವವು ಕೈಗೆತ್ತಿಗೊಂಡಿತ್ತು. ತಮ್ಮ ಬ್ರಿಟಿಶ್ ಪ್ರೆಸ್ಸಿಡೆನ್ಸಿ ಪ್ರದೇಶಗಳೊಂದಿಗೆ ಇನ್ನಿತರ ಪ್ರದೇಶದಲ್ಲಿದ್ದ ತಮ್ಮ ದಂಡು ಪ್ರದೇಶಗಳ ಸಂಪರ್ಕವನ್ನು ಏರ್ಪಡಿಸಿ ತಮ್ಮ ಆರ್ಥಿಕ ಸ್ಥಿರತೆಯನ್ನು ಭಾರತದಲ್ಲಿ ಉಳಿಸಿಕೊಳ್ಳುವ ನೆಲೆಯನ್ನು ಸೈನ್ಯದ ಭದ್ರತೆಯನ್ನು ಕಾಯ್ದುಕೊಳ್ಳಲು ರೈಲ್ವೇ ಸಂಪರ್ಕವನ್ನು ಇನಷ್ಟು ಶ್ರೀಘ್ರಗೊಳಿಸಲು ಪ್ರಾರಂಭಿಸಿತು. ಬೆಂಗಳೂರು ಪ್ರದೇಶದಲ್ಲಿದ್ದ ದಂಡು ಪ್ರದೇಶದಲ್ಲಿ ಈಗಾಗಲೇ ಬಂದು ನೆಲೆಸಿದ್ದ ಯುರೋಪಿನ ವರ್ತಕರಿಗೆ ಸಾರಿಗೆ ಸಂಪರ್ಕದ ಅಗತ್ಯವು ಸಹ ಇದರೊಂದಿಗೆ ಇತ್ತು. ಬೆಂಗಳೂರು ಪ್ರದೇಶಕ್ಕೆ ರೈಲ್ವೆ ಸಂಕರ್ಪವನ್ನು ಏರ್ಪಡಿಸಲು ಇನ್ನೊಂದು ಮುಖ್ಯ ಕಾರಣವೆಂದರೆ ಬೆಂಗಳೂರು ಪ್ರದೇಶವು ದಕ್ಷಿಣ ಭಾರತದ ಎಲ್ಲ ಪ್ರದೇಶಗಳನ್ನು ಸಂಪರ್ಕಿಸುವ ಒಂದು ಕೂಡು ಪ್ರದೇಶವಾಗಿದ್ದಿತು. ಬೆಂಗಳೂರು ಮೂಲಕ ಮದ್ರಾಸ್ ಮತ್ತು ಇನ್ನಿತರ ಬಂದರು ಪ್ರದೇಶಗಳಿಗೆ ಸರಕುಗಳನ್ನು ಸಾಗಾಟ ಮಾಡಲು ಬೆಂಗಳೂರು ಪ್ರದೇಶವು ಸೂಕ್ತವಾಗಿದ್ದರಿಂದಾಗಿ ಬ್ರಿಟಿಶ್ ಪ್ರಭುತ್ವ ಬೆಂಗಳೂರು ಪ್ರದೇಶದ ರೈಲ್ವೆ ಸಾರಿಗೆಯನ್ನು ರೂಪಿಸಿ, ಅಭಿವೃದ್ಧಿ ಮಾಡಲು ಮುಂದಾಯಿತು. ರೈಲ್ವೆ ಸಾರಿಗೆಯು ಸಂಪರ್ಕ ವ್ಯವಸ್ಥೆಯನ್ನು ಇನ್ನಷ್ಟು ವೃದ್ಧಿಪಡಿಸಿತು. ಫಲವಾಗಿ ರಸ್ತೆ ಸಾರಿಗೆ ಬೆಳವಣಿಗೆ, ಅಂಚೆ–ತಂತಿ ವ್ಯವಸ್ಥೆಯ ಪರಿಚಯ ದೊಂದಿಗೆ ಬೆಂಗಳೂರು ಪ್ರದೇಶವು ಇನ್ನಷ್ಟು ಮೂಲಭೂತ ಸೌಕರ್ಯಗಳನ್ನು ಅಭಿವೃದ್ಧಿಪಡಿಕೊಳ್ಳಲು ಕಾರಣವಾಯಿತು. ಇದರ ವೃದ್ಧಿಯು ದೊಡ್ಡ ಮಟ್ಟದ ಕಾರ್ಮಿಕ ವಲಯದ ಬೇಡಿಕೆಯನ್ನು ಸೃಷ್ಟಿಸಿತು. ಇದರ ಜೊತೆಗೆ ನಗರೀಕರಣದ ಪ್ರಕ್ರಿಯೆ ಮತ್ತು ವಲಸೆ ಚಟುವಟಿಕೆಗಳನ್ನು ಹೆಚ್ಚಿಸಿತು. ಇದು ಸಾಮಾಜಿಕ ಮತ್ತು ಸಾಂಸ್ಕೃತಿಕ ಬದಲಾವಣೆಗಳನ್ನು ಮತ್ತು ಇನ್ನಿತರ ಕ್ಷೇತ್ರಗಳಾದ ಶೈಕ್ಷಣಿಕ ವ್ಯವಸ್ಥೆ, ಕೈಗಾರಿಕೆಗಳ ಸ್ಥಾಪನೆ, ಆಡಳಿತದಲ್ಲಿ ಮಾರ್ಪಾಟುಗಳನ್ನು ಮೂಡಿಸಿದವು.

೧೮೦೫ರಲ್ಲಿ ಬೆಂಗಳೂರು ದಂಡುಪ್ರದೇಶವು ಸ್ಥಾಪನೆಗೊಂಡ ನಂತರದಲ್ಲಿ ರಸ್ತೆ ಸಾರಿಗೆ ಸಂಪರ್ಕದ ಮೂಲಕ ಸೈನ್ಯ ಶ್ರೀಘ್ರ ಕಾರ್ಯಾಚರಣೆಯನ್ನು ಮಾಡಲು ಸಾಧ್ಯವಾಗುತ್ತಿರಲಿಲ್ಲ.

ಜೊತೆಗೆ ಒಂದು ದಂಡು ಪ್ರದೇಶವು ಇನ್ನೊಂದು ಬ್ರಿಟಿಶ್ ದಂಡು ಪ್ರದೇಶಗಳೊಂದಿಗೆ ಸಂಪರ್ಕದ ಜಾಲವನ್ನು ರೂಪಿಸುವ ಅನಿವಾರ್ಯತೆಯು ೧೮೫೭ರ ದಂಗೆಯ ನಂತರ ಒತ್ತಡಗಳ ಸಂದರ್ಭಗಳನ್ನು ಸೃಷ್ಟಿಸಿತು. ಇದರಿಂದಾಗಿ ರಸ್ತೆ ಮತ್ತು ರೈಲ್ವೆ ಸಾರಿಗೆಯ ಕಾಮಗಾರಿಗೆ ಬ್ರಿಟಿಶ್ ಪ್ರಭುತ್ವ ಪ್ರಮುಖ್ಯತೆಯನ್ನು ನೀಡಿತು. ಇದರ ಮುಖ್ಯ ಉದ್ದೇಶ ಸಾಮ್ರಾಜ್ಯಶಾಹಿ ಪ್ರಭುತ್ವಕ್ಕೆ ದಕ್ಕೆಯಾಗದ ರೀತಿಯಲ್ಲಿ ಉತ್ತಮ ಆಡಳಿತ ನಿರ್ವಹಣೆ, ವ್ಯಾಪಾರದ ಗುರಿ ಮತ್ತು ಮಿಲಿಟರಿ ಭದ್ರತೆಯ ಹಿನ್ನೆಲೆಯಲ್ಲಿ ವಸಾಹತುಶಾಹಿ ಆಸಕ್ತಿಯನ್ನು ಇದರಲ್ಲಿ ಕಾಣಬಹುದಾಗಿದೆ. ಬೆಂಗಳೂರು ಪ್ರದೇಶಕ್ಕೆ ಸಂಬಂಧಿಸಿದಂತೆ ಎರಡು ರೈಲ್ವೆ ಸ್ಟೇಷನ್‌ಗಳನ್ನು ಬ್ರಿಟಿಶ್ ಪ್ರಭುತ್ವ ಸ್ಥಾಪಿಸಿತು. ಒಂದು ಬೆಂಗಳೂರು ಪೇಟೆಯಲ್ಲಿಯೂ ಇನ್ನೊಂದು ಬೆಂಗಳೂರು ದಂಡು ಪ್ರದೇಶದಲ್ಲಿ ಸ್ಥಾಪಿಸಿ. ದಕ್ಷಿಣ ಭಾರತದ ತಮ್ಮ ವಸಾಹತು ನೆಲೆಗಳಿಗೆ ಮತ್ತು ಕಚ್ಚಾ ವಸ್ತುಗಳು ದೊರೆಯುವ ಸ್ಥಳಗಳ ಮೂಲಕ ಹಾದು ಹೋಗುವ ರೀತಿಯಲ್ಲಿ ರೈಲ್ವೆ ಸಾರಿಗೆಯ ನೀಲಿನಕ್ಷೆಯನ್ನು ರೂಪಿಸಲಾಯಿತು.

ಭಾರತದ ರೈಲ್ವೆ ಸಾರಿಗೆ ಅಭಿವೃದ್ಧಿಯ ಹಿನ್ನೆಲೆಯ ವಸಾಹತುಶಾಹಿ ಪ್ರಭುತ್ವದ ಉದ್ದೇಶವನ್ನು ಮೂರು ಹಂತಗಳಲ್ಲಿ ಗುರುತಿಸಬಹುದಾಗಿದೆ. ಆರಂಭದಿಂದ ೧೮೫೦ರ ದಶಕದ ತನಕ ಇವರ ಉದ್ದೇಶವು ಕಚ್ಚಾ ವಸ್ತುಗಳನ್ನು ಮತ್ತು ಸಿದ್ಧ ವಸ್ತುಗಳನ್ನು ರವಾನಿಸುವುದಾಗಿತ್ತು. ೧೮೫೦ ರಿಂದ ೧೮೬೦ರ ದಶಕದಲ್ಲಿ ತಮ್ಮ ಆಡಳಿತ ಮತ್ತು ಮಿಲಿಟರಿ ಭದ್ರತೆಯನ್ನು ಕಾಯ್ದುಕೊಳ್ಳುವ ಉದ್ದೇಶದಿಂದ ರೈಲ್ವೆ ಸಾರಿಗೆಯ ಅಭಿವೃದ್ಧಿ ಪಡಿಸಿದರೆ, ೧೮೬೦ರ ನಂತರದ ದಶಕದಲ್ಲಿ ಅವರ ರೈಲ್ವೆ ಅಭಿವೃದ್ಧಿಯ ಮುಖ್ಯ ಉದ್ದೇಶವು ತನ್ನ ದೇಶದ ಬಂಡವಾಳದ ಸಂಚಯನವನ್ನು ಭಾರತದ ಉದ್ಯಮಗಳಲ್ಲಿ ಹೂಡಲು ಮತ್ತು ವಾಣಿಜ್ಯ-ವ್ಯಾಪಾರದ ಉದ್ದೇಶದ ಹಿನ್ನೆಲೆಯಲ್ಲಿ ರೈಲ್ವೆ ಸಾರಿಗೆ ಅಭಿವೃದ್ಧಿಯನ್ನು ಕಾಣಬಹುದಾಗಿದೆ.

ದಂಡು ಪ್ರದೇಶದಲ್ಲಿ ಯುರೋಪಿಯನ್ನರು ಅಧಿಕ ಸಂಖ್ಯೆಯಲ್ಲಿ ಬಂದು ನೆಲೆಸಲು ಆರಂಭಿಸಿ ದರು. ಇದರೊಂದಿಗೆ ಬೇರೆ ಬೇರೆ ರಾಜ್ಯಗಳಿಂದ ವ್ಯಾಪಾರ ಮತ್ತು ವಾಣಿಜ್ಯದ ನೆಲೆಯಲ್ಲಿ ಬೆಂಗಳೂರು ಪೇಟೆ ಮತ್ತು ಬೆಂಗಳೂರು ದಂಡು ಪ್ರದೇಶದಲ್ಲಿ ಜನರು ವಲಸೆ ಬರಲಾರಂಭಿಸಿದರು. ಯುರೋಪಿಯನ್ನರು ನೆಲೆಸಿದ್ದದರಿಂದಾಗಿ ಹೊಸ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವಂತೆ ಪ್ರೇರೇಪಿಸಿತು. ಇಲ್ಲಿಂದ ಸ್ಥಳೀಯ ಮತ್ತು ಪಾಶ್ಚಿಮಾತ್ಯ ಸಂಸ್ಕೃತಿಯ ಮುಖಾಮುಖಿಯ ನೆಲೆಯಲ್ಲಿ ಪಾಶ್ಚಿಮಾತ್ಯ ಶಿಕ್ಷಣವನ್ನು ಪಡೆಯವಂತೆ ಸ್ಥಳೀಯರಿಗೆ ಪ್ರೇರಣೆ ನೀಡಿತು. ಇದರಲ್ಲಿ ಕ್ರೈಸ್ತ ಮಿಷನರಿಗಳು ಸಹ ಪ್ರಮುಖ ಪಾತ್ರವನ್ನು ವಹಿಸಿದವು. ಇದರ ಪ್ರಾಥಮಿಕ ಉದ್ದೇಶ ಕ್ರೈಸ್ತ ಧರ್ಮದ ಪ್ರಚಾರದೊಂದಿಗೆ ಇಂಗ್ಲಿಶ್ ಶಿಕ್ಷಣವನ್ನು ಪ್ರಚಾರ ಮಾಡುವುದಾಗಿತ್ತು. ಇದು ಸಾಂಸ್ಕೃತಿಕ ಮೌಲ್ಯಗಳ ಸಮ್ಮಿಲನಕ್ಕೆ ಎಡೆಮಾಡಿಕೊಟ್ಟಿತು. ಬ್ರಿಟಿಶರು ಸಾರಿಗೆ ಸಂಪರ್ಕದ ಚಟುವಟಿಕೆಯ ಕಾರ್ಯಗಳನ್ನು ಬೆಂಗಳೂರು

ಪ್ರದೇಶದ ಒಳಗೆ ಮತ್ತು ಹೊರ ರಾಜ್ಯಗಳಿಗೂ ವಿಸ್ತರಿಸಿದ್ದದರಿಂದಾಗಿ ವಿವಿಧ ಜನ ಸಮುದಾಯಗಳ ಸಂಚಾರ ಪ್ರಕ್ರಿಯೆಯು ಚುರುಕುಗೊಂಡಿತು. ಅದರೊಂದಿಗೆ ವ್ಯಾಪಾರ ಚಟುವಟಿಕೆಗಳು ಇನ್ನಿತರ ಪಟ್ಟಣ ಮತ್ತು ನಗರಗಳೊಂದಿಗೆ ಸಂಪರ್ಕವೇರ್ಪಟ್ಟು ವಾಣಿಜ್ಯ ವೃದ್ಧಿಗೊಂಡಿತು. ಇದರ ಹಿನ್ನೆಲೆಯಲ್ಲಿ ರಸ್ತೆ ಸಾರಿಗೆಯ ಜಾಲವನ್ನು ಅಭಿವೃದ್ಧಿ ಪಡಿಸಲಾಯಿತು. ಇದು ಬೆಂಗಳೂರು ಪ್ರದೇಶದ ಸಣ್ಣ ನಗರ–ಪಟ್ಟಣಗಳಿಗೆ ಇನ್ನಷ್ಟು ವ್ಯವಸ್ಥಿತವಾದ ಸಾರಿಗೆ ವೃದ್ಧಿಸಿ ನಗರೀಕರಣದ ಪ್ರಕ್ರಿಯೆಯನ್ನು ಚುರುಕುಗೊಳಿಸಿತು.

೧೮೦೦ರಲ್ಲಿ ಸಮೀಕ್ಷೆ ನಡೆಸಿದ ಬುಕಾನನ್, ಬೆಂಗಳೂರಿಗೆ ಮದ್ರಾಸ್‌ನಿಂದ ಬರುವ ಮಾರ್ಗ ತಿಳಿಸುತ್ತಾ, ತಾನು ಮದ್ರಾಸ್, ಕಂಚೀವರಂ, ಅರ್ಕಾಟ್, ವೆಲ್ಲೂರು, ಪಾಲಿಗೊಂಡ, ಸತ್ತುಗಡಂ, ಪದ್ದ ನಾಯಕನ ದುರ್ಗ, ವೆಂಕಟಚೆರಿ, ಬೆದಮುಂಗೆಲುಮ್, ವಲೂರು, ಕಾಟ್ಕೊಲ್ಲಿ, ತೆಕುಲಮ್, ಬೆಂಗಳೂರು, ಶ್ರೀರಂಗಪಟ್ಟಣಗೆ ತೆರಳಿದನೆಂದು ಉಲ್ಲೇಖಿಸಿದ್ದಾನೆ. ಇದು ಅಂದಿನ ರಸ್ತೆ ಮಾರ್ಗವನ್ನು ತಿಳಿಸುತ್ತದೆ. ಅದರೊಂದಿಗೆ ಆ ಪ್ರದೇಶದ ಸಂಪತ್ತು ಮತ್ತು ಬೆಂಗಳೂರು ಪ್ರದೇಶದೊಂದಿಗೆ ಸಂಪರ್ಕವನ್ನು ಹೊಂದಿದ್ದ ಮಾರ್ಗಗಳ ಬಗೆಗೆ ಮಾಹಿತಿಯನ್ನು ನೀಡುತ್ತದೆ.[೪೩] ಇದು ಬೆಂಗಳೂರು ಪ್ರದೇಶಕ್ಕೆ ರೈಲ್ವೆ ಮಾರ್ಗ ಪರಿಚಯದ ಪೂರ್ವದಲ್ಲಿದ್ದ ಮಾರ್ಗವಾಗಿದೆ. ಈ ಮಾರ್ಗದ ಮೂಲಕ ಬ್ರಿಟಿಶ್ ಮತ್ತು ಫ್ರೆಂಚರು ತಮಗೆ ಬೇಕಾದ ಉತ್ಪನ್ನಗಳನ್ನು ತಮ್ಮ ಬಂದರುಗಳಿಗೆ ಸಾಗಿಸುತ್ತಿದ್ದರು ಎಂದು ತಿಳಿಯಬಹುದಾಗಿದೆ.

ಬೆಂಗಳೂರಿನಿಂದ ಕೆಂಗೇರಿ, ಬಿಡದಿ, ರಾಮನಗರ, ಚೆನ್ನಪಟ್ಟಣ, ಮದ್ದೂರು, ಮಂಡ್ಯ, ಶ್ರೀರಂಗಪಟ್ಟಣ. ಬುಕಾನನ್ ಶ್ರೀರಂಗಪಟ್ಟಣದಿಂದ ಬೆಂಗಳೂರಿಗೆ ಬರುವಾಗ ಆತ ಚೆನ್ನಪಟ್ಟಣ್ಣ, ಮದ್ದೂರು, ರಾಮಗಿರಿ, ಮಾಗಡಿ, ಸಾವನದುರ್ಗ, ಗಟ್ಟಿಪುರ, ತಾವರೆಕೆರೆ ಮೂಲಕ ಬೆಂಗಳೂರಿಗೆ ಬಂದನೆಂಬ ಅಂಶಗಳು ಬೆಂಗಳೂರು ಮತ್ತು ಅದರ ಸುತ್ತ–ಮುತ್ತಲಿನ ಪ್ರದೇಶದ ಮಹತ್ವವನ್ನು ತಿಳಿಸುತ್ತದೆ.[೪೪] ಇವನ ಸಮೀಕ್ಷೆಯ ಆಧಾರವನ್ನು ಇಟ್ಟುಕೊಂಡು ಬ್ರಿಟಿಶ್ ಪ್ರಭುತ್ವ ಮುಂದೆ ಸಾರಿಗೆ–ಸಂಪರ್ಕದ ರೂಪು ರೇಷೆಗಳನ್ನು ತಯಾರಿಸಿದರೆಂದು ತಿಳಿಯಬಹುದು. ಬ್ರಿಟಿಶರು ಬೆಂಗಳೂರಿಗೆ ಸಾರಿಗೆ–ಸಂಪರ್ಕದ ರೂಪು ರೇಷೆಯು ಬೆಂಗಳೂರಿನಿಂದ ಬಂದರು ಪ್ರದೇಶಕ್ಕೆ ಮತ್ತು ಬೆಂಗಳೂರು ಮತ್ತು ಅದರ ಸುತ್ತ–ಮುತ್ತಲಿನ ಸಂಪತ್ತು, ಅಲ್ಲಿ ಸಿಗುವ ಕಚ್ಚಾ ವಸ್ತುಗಳ ಆಧಾರದ ಮೇರೆಗೆ ರೈಲ್ವೆ ಮಾರ್ಗಗಳನ್ನು ರೂಪಿಸಿದರೆಂಬುದು ಗಮನರ್ಹವಾಗಿದೆ. ಬೆಂಗಳೂರು ಮತ್ತು ಹೊರ ರಾಜ್ಯಗಳಾದ ಮದ್ರಾಸ್ ಮತ್ತು ಪಾಂಡಿಚೇರಿ ರೇವು ಪಟ್ಟಣಕ್ಕೆ ರೈಲ್ವೆ ಸಾರಿಗೆ ಸಂಪರ್ಕವನ್ನು ಏರ್ಪಡಿಸಲಾಯಿತು. ಇದು ತ್ರಿಭುಜಾಕಾರದಲ್ಲಿ ಸಂಸ್ಕೃತಿಯ ಸಮ್ಮಿಲನದೊಂದಿಗೆ ಹಿಂದು ಹೊಸ ರೂಪದಲ್ಲಿ ದ್ವಿಭಾಷಿಯ

ಸಂಸ್ಕೃತಿಯು ಬೆಂಗಳೂರು ಪ್ರದೇಶದಲ್ಲಿ ಕಾಣಿಸತೊಡಗಿತು. ಈ ತೆರನಾದ ಬೆಳವಣಿಗೆಯನ್ನು ಬೆಂಗಳೂರು ಪ್ರದೇಶದಲ್ಲಿ ಬ್ರಿಟಿಶರ ಪೂರ್ವದಲ್ಲಿ ಕಾಣಲು ಸಾಧ್ಯವಿಲ್ಲ.

ವಸಾಹತು ಕಾಲವು ಸ್ಥಳೀಯರಿಗೆ, ಹೊರ ದೇಶಗಳಿಗೆ ಮತ್ತು ಹೊರ ರಾಜ್ಯಗಳಿಗೆ ಹೋಗಲು ಅವಕಾಶವನ್ನುಂಟು ಮಾಡಿಕೊಟ್ಟಿತ್ತು. ಇದರಿಂದಾಗಿ ಬೇರೆ ರಾಜ್ಯಗಳ ಮತ್ತು ದೇಶಗಳಲ್ಲಿನ ಸಂಸ್ಕೃತಿ, ಅಲ್ಲಿಯ ಆಚಾರ-ವಿಚಾರಗಳು ಇವರ ಮೇಲೆ ಪ್ರಭಾವಿಸಿತು. ಇದರಿಂದಾಗಿ ಕರಕುಶಲಕರ್ಮಿಗಳು ತಮ್ಮ ಕೌಶಲ್ಯತೆಯನ್ನು ಹೆಚ್ಚಿಸಿಕೊಳ್ಳಲು ಅವಕಾಶ ಉಂಟು ಮಾಡಿದವು. ಇನ್ನೊಂದೆಡೆ ವ್ಯಾಪಾರಿ ಸಮುದಾಯಗಳು ಸಹ ವಿವಿಧ ದೇಶಗಳಿಗೆ ಭೇಟಿನೀಡಿ ಅಲ್ಲಿಯ ಅಂತಾರಾಷ್ಟ್ರೀಯ ಮಾರುಕಟ್ಟೆಯ ವ್ಯವಸ್ಥೆಯ ವಿದ್ಯಮಾನಗಳನ್ನು ತಿಳಿದು ಅದನ್ನು ಸ್ಥಳೀಯ ಆರ್ಥಿಕ ಚಟುವಟಿಕೆಗಳಲ್ಲಿ ಅನುಸರಿಸ ತೊಡಗಿದವು. ಜೊತೆಗೆ ಪಾಶ್ಚಿಮಾತ್ಯ ನಗರ ಜೀವನದ ರುಚಿಯನ್ನು ಸವಿದು ಅದೇ ರೀತಿ ಜೀವನ ಶೈಲಿ ಮತ್ತು ಚಿಂತನೆಯನ್ನು ಮೈಗೂಡಿಸಿಕೊಂಡರು.[೪೫] ಇದರೊಂದಿಗೆ ತಮ್ಮ ಸ್ಥಳೀಯ ಆಡಳಿತ ಪ್ರದೇಶಗಳಲ್ಲಿ ನೈರ್ಮಲ್ಯತೆಗೆ ಹೆಚ್ಚಿನ ಆದ್ಯತೆಯನ್ನು ನೀಡಿ ಮೈಸೂರು ಪ್ರಭುತ್ವದ ಮುಂದೆ ತಮ್ಮ ಬೇಡಿಕೆಯನ್ನು ಇಡುತ್ತಾ ಬಂದರು. ಈ ತೆರನಾದ ಅಂಶಗಳು ಸ್ಥಳೀಯ ಆಡಳಿತದಲ್ಲಿ ಸ್ವಚ್ಛತೆ ಮತ್ತು ನೈರ್ಮಲ್ಯತೆಯ ಹಾಗೂ ಆಧುನಿಕ ಆಡಳಿತಾತ್ಮಕ ಬದಲಾವಣೆಯನ್ನು ತರಲು ಸಾಧ್ಯವಾಯಿತು. ಏಕೆಂದರೆ ಬಹುತೇಕ ಸ್ಥಳೀಯ ಆಡಳಿತದಲ್ಲಿ ಕಾರ್ಯವಹಿಸುತ್ತಿದ್ದ ವರ್ಗವು ಬೂರ್ಶ್ವಾ ಸಮುದಾಯಗಳಿಗೆ ಸೇರಿದವರು ಇಲ್ಲವೇ ವರ್ತಕ ಸಮುದಾಯಗಳಿಗೆ ಸೇರಿದವರಾಗಿದ್ದರು. ಇವೆಲ್ಲ ಅಂಶಗಳು ಬೆಂಗಳೂರು ಪ್ರದೇಶದಲ್ಲಿ ಒಂದು ಹೊಸ ಸಾಮಾಜಿಕ, ಆರ್ಥಿಕ ಸ್ಥಾನಪಲ್ಲಟಗಳೊಂದಿಗೆ ಮೇಲ್ಮಟ್ಟದ ವ್ಯವಸ್ಥೆಗೆ ಮತ್ತು ರಾಷ್ಟ್ರೀಯ ಏಕತೆಗೆ ಎಡೆಮಾಡಿದವು.

ಒಟ್ಟಾರೆಯಾಗಿ ರೈಲ್ವೆ ಸಾರಿಗೆಯನ್ನು ಬೆಂಗಳೂರು ಪ್ರದೇಶದಲ್ಲಿ ಪರಿಚಯಿಸಿದ್ದರಿಂದಾಗಿ ಆರ್ಥಿಕಾಭಿವೃದ್ಧಿಯ ಚಟುಚಟಿಕೆಗಳು ಹೆಚ್ಚಿದರೂ ಸಹ ಇಲ್ಲಿನ ತಲಾ ಆದಾಯವು ಕಡಿಮೆಯಾಗಿತ್ತು. ರೈಲ್ವೆ ಸಾರಿಗೆಯಿಂದಾಗಿ ವ್ಯಾಪಾರದ ವಿಸ್ತಾರವು ಹೆಚ್ಚಿತು. ಆದರೆ ಅದರ ಮೌಲ್ಯವು ರೈಲ್ವೆ ಮತ್ತು ರಸ್ತೆ ಸಾರಿಗೆಯಿಂದಾಗಿ ಕುಸಿಯಿತು. ಕಾರಣ ವಿವಿಧ ಪ್ರದೇಶಗಳಿಗೆ ಸಂಪರ್ಕವೇರ್ಪಟ್ಟು ವಸ್ತುವಿನ ಪೂರೈಕೆಯನ್ನು ಮತ್ತು ರಫ್ತನ್ನು ಸರಳಗೊಳಿಸಿತು. ಇದರಿಂದಾಗಿ ಅದರ ಮೌಲ್ಯವು ಕುಸಿಯಿತು. ವಸಾಹತು ಕಾಲದಲ್ಲಿ ರಫ್ತಾಗುತ್ತಿದ್ದ ವಸ್ತುಗಳು ಪ್ರಾಥಮಿಕ ಮಾದರಿಯ ಉತ್ಪನ್ನಗಳಾಗಿದ್ದವು ಎಂಬುದು ಗಮನಾರ್ಹ. ಅಂದರೆ ಪ್ರಾದೇಶಿಕವಾಗಿ ರಫ್ತಿನ ಪ್ರಮಾಣ ಹೆಚ್ಚಿದರೂ ಅದರ ಮೌಲ್ಯವನ್ನು ಕಡಿತಗೊಳಿಸಿತು. ಫಲವಾಗಿ ಬೆಂಗಳೂರು ಪ್ರದೇಶ ಆರ್ಥಿಕವಾಗಿ ವೃದ್ಧಿಸಿದಂತೆ ಕಂಡರೂ ಸಹ ಅದು ಕೇವಲ ತೋರ್ಪಡಿಕೆಯಾಗಿತ್ತು. ವಸಾಹತು ಕಾಲದಲ್ಲಿ ಕರಕುಶಲಕರ್ಮಿಗಳ ಉದ್ಯಮಗಳು ನಾಶ ಹೊಂದಿದವು. ಆದರೆ ಟಾಯಬ್ನಿಯವರ ಸಿದ್ಧಾಂತದಂತೆ ಒಂದರ ನಾಶವು ಇನ್ನೊಂದರ

ಬೆಳವಣಿಗೆಗೆ ಕಾರಣವಾಗುತ್ತದೆ ಎಂಬ ಸಿದ್ಧಾಂತವನ್ನು ಪ್ರಚುರ ಪಡಿಸಿದರು. ಈ ಸಿದ್ಧಾಂತದಂತೆ ಇಲ್ಲಿಯ ಕರಕುಶಲಕರ್ಮಿಗಳ ಉದ್ಯಮಗಳ ನಾಶವು ಒಂದು ಹೊಸ ತರಹದ ಕೌಶಲ್ಯತೆಯನ್ನು ಮೂಡಿಸಿಕೊಳ್ಳಲು ಕಾರಣವಾಯಿತು. ಈ ನಿಟ್ಟಿನಲ್ಲಿ ವಸಾಹತು ಪ್ರಭುತ್ವವು ತರಬೇತಿ ಕೇಂದ್ರಗಳನ್ನು ತೆರೆದವು. ಇದರಲ್ಲಿ ಕ್ರೈಸ್ತ ಮಿಷನರಿಗಳ ಪಾತ್ರವನ್ನು ಮರೆಯುವಂತಿಲ್ಲ. ಇಂದು ಮಾಧ್ಯಮಗಳು ಹೇಗೆ ಅಂತರಾಷ್ಟ್ರೀಯ ಉತ್ಪನ್ನಗಳ ಬಗೆಗೆ ಗ್ರಾಹಕರಲ್ಲಿ ಪ್ರಚಾರವನ್ನು ಕೈಗೊಳ್ಳುತ್ತದೆಯೋ ಅದೇ ತೆರನಲ್ಲಿ ಕ್ರೈಸ್ತ ಮಿಷನರಿಗಳು, ಸಾರಿಗೆ–ಸಂಪರ್ಕಗಳು ಅಂದು ವಸಾಹತುಶಾಹಿ ಪ್ರಭುತ್ವದ ವಸ್ತುಗಳ ಬಗೆಗೆ ಪೂರಕವಾಗಿ ಪ್ರಚಾರ ಕಾರ್ಯದಲ್ಲಿ ಪ್ರಮುಖ ಪಾತ್ರ ನಿರ್ವಹಿಸುತ್ತಿದ್ದವು ಎಂದರೆ ತಪ್ಪಾಗಲಾರದು.

**ಕೊನೆಟಿಪ್ಪಣಿಗಳು**

೧. ಸೂರ್ಯನಾಥ ಯು. ಕಾಮತ್(ಸಂ), ೧೯೯೦, **ಬೆಂಗಳೂರು ಜಿಲ್ಲಾ ಗ್ಯಾಸೆಟಿಯರ್**(ಆಂಗ್ಲ), ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು. ಪು.೩೩೬

೨. ಅದೇ, ಪು.೩೩೭

೩. ಅದೇ, ಪು.೩೩೭

೪. ಬಿ.ಸಿ. ವೀರಪ್ಪ, **ಬೆಂಗಳೂರು ನಗರದ ವೀರಶೈವ ಮಠಗಳು–ಒಂದು ಸಾಂಸ್ಕೃತಿಕ ಅಧ್ಯಯನ**, ೨೦೦೧, ಅಖಿಲ ಭಾರತ ಸಾಹಿತ್ಯ ಪರಿಷತ್ತು, ಮೈಸೂರು. ಪು.೨೪೫

೫. ಸೂರ್ಯನಾಥ ಯು. ಕಾಮತ್, **ಪೂರ್ವೋಕ್ತ**, ಪು.೩೩೭

೬ ಅದೇ, ಪು.೩೩೮

೭ ಅದೇ, ಪು.೩೩೮

೮. ಪಾಟೀಲ್ ಎಂ. ಬಿ.(ಲೇ), ಬೆಂಗಳೂರು ಬ್ಯಾಂಕಿಂಗ್ ಉದ್ಯಮದ ಆರಂಭ ಮತ್ತು ಬೆಳವಣಿಗೆ ೧೯೫೬ರವರಗೆ, ಆರ್. ಗೋಪಾಲ್ (ಪ್ರ. ಸಂ), **ಬೆಂಗಳೂರು ಜಿಲ್ಲೆಯ ಇತಿಹಾಸ ಮತ್ತು ಪುರಾತತ್ವ**, ೨೦೧೩, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು, ಪು.೩೬೪

೯. ಪಾಟೀಲ್ ಎಂ. ಬಿ.(ಲೇ), ಆಧುನಿಕ ಬ್ಯಾಂಕಿಂಗ್ ಇತಿಹಾಸ, ಎಲ್. ಎಸ್. ಶೇಷಗಿರಿ ರಾವ್(ಸಂ), **ಬೆಂಗಳೂರು ದರ್ಶನ**, ಸಂಪುಟ ೧, ೨೦೦೫, ಉದಯಭಾನು ಕಲಾಸಂಘ, ಬೆಂಗಳೂರು, ಪು.೩೯೭

೧೦. ಪಾಟೀಲ್ ಎಂ. ಬಿ., **ಪೂರ್ವೋಕ್ತ**, ಪು.೩೬೭

೧೧. ಅದೇ, ಪು.೩೯೭–೩೯೮

೧೨. ಸಿಲ್ವರ್ ಜುಬಿಲಿ ಸೌವೆನೀರ್, **ದಿ ಬ್ಯಾಂಕ್ ಆಫ್ ಮೈಸೂರು**, ಸೆಕೆಂಡ್ ಡಿಸೆಂಬರ್ ೧೯೨೬, ಬೆಂಗಳೂರು, ಪು.೨

೧೩. ಅದೇ, ಪು.೮೩

೧೪. ಅದೇ, ಪು.೬

೧೫. **ಎ.ಕ.೯ ಬೆಂಗಳೂರು ೧**, ಬೆಂಗಳೂರು (೧೬೨೮)

೧೬. ತುಳಸಿರಾಮ್ ನಾಯಕ್, **ಬೆಂಗಳೂರಿನ ಸಂಕ್ಷಿಪ್ತ ಇತಿಹಾಸ**, ೨೦೧೦, ಎಲ್ಐಪಿಐ ಮುದ್ರಣ, ಬೆಂಗಳೂರು, ಪು.೮೧

೧೭. ಉಷ್ಮ ನಾಜಿಯಾ, **ಆಂಟಿ–ಕಲೋನಿಯಲ್ ಸ್ಟ್ರಗಲ್ ಆಫ್ ಹೈದರ್ ಅಲಿ ಅಂಡ್ ಟಿಪು ಸುಲ್ತಾನ್**, ೨೦೦೯, ಮೈಸೂರು ವಿಶ್ವವಿದ್ಯಾಲಯ, ಮೈಸೂರು ಪು.೩೩

೧೮. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸ್ಥಳೀಯ ಹಿರಿಯ ವ್ಯಕ್ತಿಗಳಿಂದ ಸಂಗ್ರಹಿಸಿದ ಮಾಹಿತಿಯನ್ನು ಆಧರಿಸಿದೆ.

೧೯. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸ್ಥಳೀಯ ಹಿರಿಯ ವ್ಯಕ್ತಿಗಳಿಂದ ಸಂಗ್ರಹಿಸಿದ ಮಾಹಿತಿಯನ್ನು ಆಧರಿಸಿದೆ.

೨೦. **ಮೈಸೂರು ಛೇಂಬರ್ ಆಫ್ ಕಾಮರ್ಸ್‌ನ ಜಾಹಿರಾತಿನ ಪ್ರಕಟಣೆಯನ್ನಾಧರಿದೆ.**

೨೧. ಚಂದ್ರಮೌಳಿ ಕೆ., **ಪೂರ್ವೋಕ್ತ**, ಪು.೩೬೮

೨೨. ಕ್ಷೇತ್ರಕಾರ್ಯದಲ್ಲಿ ಪಡೆದ ಮಾಹಿತಿ. ಪೇಟೆ ಬೀದಿಯ ಹೆಸರನ್ನು ಆಧರಿಸಿದೆ.

೨೩. ರಾ. ನಂ. ಚಂದ್ರಶೇಖರ, ವಲಸಿಗರ ಬೆಂಗಳೂರು, ಆರ್. ಗೋಪಾಲ್(ಪ್ರಸಂ), **ಪೂರ್ವೋಕ್ತ**, ಪು–೫೨೨

೨೪. **ಮೈಸೂರು ಛೇಂಬರ್ ಆಫ್ ಕಾಮರ್ಸ್‌ನ ಸ್ಮರಣ ಸಂಚಿಕೆಯ ಜಾಹೀರಾತು ಪ್ರಕಟಣೆಯನ್ನು ಆಧಾರಿಸಿದೆ.**

೨೫. ಹೇಮಂತ್ ಶಿರೂರ್, ೨೦ ಮೇ ೨೦೧೩, **ಸಿಟಿಜನ್ ಮ್ಯಾಟರ್ಸ್**, ದಿ ಮ್ಯಾನ್ ಹೂ ಮ್ಯಾನೇಜ್ಡ್ ಬೆಂಗಳೂರ್ಸ್ ಫೇಮಸ್ ಮಿಲ್ಸ್.

೨೬. ಥಾಮಸ್ ಪೀಟರ್, **ಹು ಈಸ್ ಹು ಇನ್ ಮೈಸೂರು,** ಪು.೧೯

೨೭. ಅದೇ, ಪು.೧೦೧

೨೮. ಅದೇ, ಪು.೮೭

೨೯. ಅದೇ, ಪು.೮೬

೩೦. ನಂಜುಂಡಪ್ಪ ಕೆ. ಎಸ್.(ಲೇ), ಕ್ರಾಫ್ಟ್ ಪ್ರೊಡಕ್ಟ್ ಅಂಡ್ ಇಂಡಸ್ಟ್ರೀಯಲ್ ಡೆವಲಪ್‌ಮೆಂಟ್ ಅಂಡರ್ ಟಿಪ್ಪು, **ಸೆಮಿನಾರ್–ನ್ಯಾಷನಲ್ ಇಂಟಗ್ರೇಶನ್ ವಿತ್ ಸ್ಪೇಷನ್ ರೆಫರೆನ್ಸ್ ಟು ಟಿಪ್ಪು ಸುಲ್ತಾನ್**, ಸೆ–೧೯೮೯, ಮೈಸೂರು ಯೂನಿರ್ವಸಿಟಿ, ಮೈಸೂರು, ಪು.೯

೩೧. ಮೀರಾ ಸೆಬಾಸ್ಟಿಯನ್(ಲೇ), ಸ್ಟೇಟ್ ಕ್ಯಾಪಿಟಲಿಸಂ ಇನ್ ಮೈಸೂರು ಅಂಡರ್ ಟಪು ಸುಲ್ತಾನ್, **ಅದೇ,** ಪು.೯೬

೩೨. ಅರ್ನಾಲ್ಡ್ ರೈಟ್, **ಸದರ್ನ್ ಇಂಡಿಯಾ ಇಟ್ಸ್ ಹಿಸ್ಟರಿ, ಪೀಪಲ್, ಕಾಮರ್ಸ್ ಅಂಡ್ ಇಂಡಸ್ಟ್ರಿಯಲ್ ರಿಸೋರ್ಸಸ್,** ೧೯೧೪, ದಿ ಫಾರಿನ್ ಅಂಡ್ ಕಲೊನಿಯಲ್ ಕಂಪನಿ ಅಂಡ್ ಪಬ್ಲಿಷಿಂಗ್ ಕೋ., ಲಂಡನ್, ಪು.೧೩೩

೩೩. ಅದೇ, ಪು.೨೧೨

೩೪. ಅದೇ, ಪು.೨೧೯

೩೫. ಕೃಷ್ಣಮೂರ್ತಿ ಪಿ. ವಿ.(ಲೇ), ಉದ್ಯಮಗಳು, ೨೦೦೫, ಎಲ್. ಎಸ್. ಶೇಷಗಿರಿ ರಾವ್, **ಬೆಂಗಳೂರು ದರ್ಶನ,** ಉದಭಾನುಕಾಲ ಸಂಘ, ಬೆಂಗಳೂರು, ಪು.೧೬೨

೩೬. ಅದೇ, ಪು.೧೬೧

೩೭. ಅದೇ, ಪು.೧೬೩

೩೮. ಅದೇ, ಪು.೧೬೨

೩೯. ಬುಕಾನನ್, **ಪೂರ್ವೋಕ್ತ,** ಪು.೧೭

೪೦. ಐರಾನ್ ಜೆ. ಕೇರ್, **ಕಲೋನಿಯಲ್ ಇಂಡಿಯ, ಇಟ್ಸ್ ರೈಲ್ವೆಸ್ ಅಂಡ್ ದಿ ಕೆಲೋಮೆಟ್ರಿಸಿಯ್ಸ್,** ಜರ್ನಲ್ ಆಫ್ ಟ್ರಾನ್ಸ್‌ಫ್ರೋರ್ಟ್ ಹಿಸ್ಟರಿ ೩೫/೧, ಜೂ ೨೦೧೪ ಮ್ಯಾಂಚೆಸ್ಟರ್ ಯುನಿರ್ವಸಿಟಿ ಪ್ರೆಸ್, ಪು.೧೧೮

೪೧. ಗೌತಮ್ ಚಟರ್ಜಿ, **ಪಾಲಿಸಿಸ್ಸ್ ಅಂಡ್ ಪಾಲಿಟಿಕ್ಸ್ ಆಫ್ ಇಂಡಿಯನ್ ರೈಲ್ವೆಸ್** (೧೮೫೩–೧೯೪೭), ಪು.೬೬

೪೨. ಅದೇ, ಪು.೬೭

೪೩. ಬುಕಾನನ್, **ಪೂರ್ವೋಕ್ತ,** ಪು.೧

೪೪. ಅದೇ, ಪು.೬೦–೧೩೭

೪೫. ಭುಪಿನ್ದರ್ ಸಿಂಗ್, ಅಮನ್ದೀಪ್ ಕೌರ್, **ರೈಲ್ವೆ ಡೆವಲಪ್‌ಮೆಂಟ್ ಇನ್ ಕಲೋನಿಯಲ್ ಪಂಜಾಬ್: ಸೋಷಿಯಲ್ ಅಂಡ್ ಕಲ್ಚರಲ್ ಅಸ್ಸಿಮಿಲೇಶನ್,** ಜನವರಿ–ಮಾರ್ಚ ೨೦೧೫, ಇಟರ್‌ನ್ಯಾಷನಲ್ ಜರ್ನಲ್ ಆಫ್ ಸೋಷಿಯಲ್ ಸೈನ್ಸ್ ಆಂಡ್ ಹ್ಯುಮಾನಿಟಿಸ್ ರಿಸರ್ಚ್, ವಲ್ಯುಮ್ ೩, ಪು.೮೦–೮೪,

## ಅಧ್ಯಾಯ ಏಳು

# ವರ್ತಕ ಸಮುದಾಯಗಳ ಸಾಮಾಜಿಕ ಸಂಘಟನೆಗಳು ಮತ್ತು ಕೊಡುಗೆಗಳು

## ಅಧ್ಯಾಯ ಏಳು

# ವರ್ತಕ ಸಮುದಾಯಗಳ ಸಾಮಾಜಿಕ ಸಂಘಟನೆಗಳು ಮತ್ತು ಕೊಡುಗೆಗಳು

ಬೆಂಗಳೂರು ಪ್ರದೇಶದಲ್ಲಿ ನೆಲೆಸಿರುವ ಅನೇಕ ವರ್ತಕ ಸಮುದಾಯಗಳು ವ್ಯಾಪಾರದ ಜೊತೆಗೆ ಇನ್ನಿತರ ಚಟುವಟಿಕೆಗಳಾದ ಶೈಕ್ಷಣಿಕ ಕಾರ್ಯಗಳು, ಧಾರ್ಮಿಕ ಆಚರಣೆಗಳು ಹಾಗೂ ಸಾಂಸ್ಕೃತಿಕ ಚಟುವಟಿಕೆಗಳಿಂದಾಗಿ ಬೆಂಗಳೂರು ನಗರಕ್ಕೆ ಒಂದು ಹೊಸ ಆಯಾಮವನ್ನು ನೀಡುವುದರ ಜೊತೆಗೆ ನಗರ ಸಂಸ್ಕೃತಿಯೊಂದು ಬೆಳವಣಿಗೆ ಹೊಂದುವುದಕ್ಕೆ ಕಾರಣವಾದವು. ಈ ತೆರನಾದ ಅಂಶಗಳು ಇತಿಹಾಸದ ಪುಟಗಳಲ್ಲಿ ಹೊಸ ವಿಚಾರವಲ್ಲವೆಂದು ತಿಳಿದರೆ ತಪ್ಪಾಗುತ್ತದೆ. ಇಂದು ಅಂತಾರಾಷ್ಟ್ರೀಯಮಟ್ಟದಲ್ಲಿ ಕಾಸ್ಮೋಪೊಲಿಟನ್ ಮತ್ತು ಮೆಗಾಲೊಪೊಲಿಟನ್ ನಗರವಾಗಿ ಗುರುತಿಸಿಕೊಂಡಿರುವ ಪ್ರದೇಶಗಳಲ್ಲಿ ಬೆಂಗಳೂರು ಒಂದು. ಕಾಸ್ಮೋಪೊಲಿಟನ್ ಮತ್ತು ಮೆಗಾಲೊಪೊಲಿಟನ್ ನಗರದ ರೂಪವನ್ನು ಪಡೆಯುವ ನೆಲೆಯಲ್ಲಿ ಹತ್ತು ಹಲವು ಅಂಶಗಳು ಪೂರಕಾಂಶಗಳಾಗಿರುತ್ತವೆ. ಇದರ ಹಿನ್ನೆಲೆಯಲ್ಲಿ ವಿವಿಧ ವರ್ತಕ ಸಮುದಾಯಗಳ ಪಾತ್ರವು ಮಹತ್ವದ್ದಾಗಿದೆ.

ವರ್ತಕ ಸಮುದಾಯಗಳು ನಗರದಲ್ಲಿ ಪ್ರತ್ಯೇಕವಾಗಿ ಬೇರೆ ಬೇರೆ ಭಾಗಗಳಲ್ಲಿ ನೆಲೆಸಿದ್ದು, ನಗರದಲ್ಲಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಮಾಡಿದ ಪ್ರಯತ್ನದ ಫಲವಾಗಿ ಸಾಮಾಜಿಕ, ಧಾರ್ಮಿಕ ಸಂಘ-ಸಂಸ್ಥೆಗಳ ಹುಟ್ಟಿಗೆ ಮತ್ತು ಅದರ ಬೆಳವಣಿಗೆಗೆ ಪೂರಕವಾದ ವಾತಾವರಣವನ್ನು ಕಲ್ಪಿಸಿದವು. ಇದರೊಂದಿಗೆ ಅವರ ಸಾಮಾಜಿಕ-ಧಾರ್ಮಿಕ ಚಟುವಟಿಕೆಗಳು ಇನ್ನಿತರ ಸಮುದಾಯಗಳೊಂದಿಗೆ ಪರಸ್ಪರ ಸೌಹಾರ್ದಯುತವಾದ ಸಂಬಂಧ ಬೆಳೆಯಲು ಕಾರಣವಾದವು. ಇದು ನಗರದ ಬೆಳವಣಿಗೆಗೆ ಪೂರಕವಾಗಿ ಪರಿಣಮಿಸಿ ನಗರ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳಲು ಸಹಕಾರಿ ಯಾಯಿತು. ವರ್ತಕ ಸಮುದಾಯವು ಪಾರಂಪರಿಕವಾಗಿ ತಮ್ಮದೇ ಕುಲ ಕಸುಬಿನವ 'ರಾಗಿರುತ್ತಾರೆ. ತಮ್ಮ ಕಾರ್ಯ ವ್ಯಾಪ್ತಿಯನ್ನು ವಾಣಿಜ್ಯ-ವ್ಯಾಪಾರಕ್ಕೆ ಮಾತ್ರ ಸೀಮಿತಗೊಳಿಸದೆ ಸಂಘಗಳ

ಮೂಲಕ ಸಾಮಾಜಿಕ ಹಿತಾಸಕ್ತಿಯ ರಕ್ಷಣೆಯ ಹಿನ್ನೆಲೆಯಲ್ಲಿ ಪ್ರದೇಶದ ಅಭಿವೃದ್ಧಿಗೆ ತಮ್ಮದೇ ಆದ ಕೊಡುಗೆಯನ್ನು ಸಾಮಾಜಿಕ-ಧಾರ್ಮಿಕ ರಂಗದಲ್ಲಿ ನೀಡುವುದರ ಮೂಲಕ ನಗರದ ಅಭಿವೃದ್ಧಿಗೆ ಕಾರಣರಾಗಿರುವುದನ್ನು ಪ್ರಾಚೀನ ಕಾಲದಿಂದಲೂ ಕಾಣಬಹುದಾಗಿದೆ.

ಕ್ರಿ.ಶ.೧೮-೧೯ನೇ ಶತಮಾನವು ಆಧುನಿಕತೆಯ ಅಮಲು, ಕ್ಷಾಮ-ಬರಗಾಲ, ವಿಜ್ಞಾನ-ತಂತ್ರಜ್ಞಾನ ಬೆಳವಣಿಗೆಯ ಕಾಲಘಟ್ಟವಾಗಿತ್ತು. ಇದರ ಬೆನ್ನಲೇ ಬ್ರಿಟಿಶ್ ವಸಾಹತು ನೀತಿಗಳು ತಲತಲಾಂತರವಾಗಿ ಬಂದಿದ್ದ ವೃತ್ತಿಗೆ ಪೆಟ್ಟು ನೀಡಿದವು. ಅಂತಹ ಸಂದರ್ಭದಲ್ಲಿ ಜನರಿಗೆ ಹೊಸ ಸ್ಫೂರ್ತಿ ಹಾಗೂ ಸ್ಥೈರ್ಯವನ್ನು ನೀಡುವ ನಿಟ್ಟಿನಲ್ಲಿ ಆಧ್ಯಾತ್ಮಿಕ ನೆಲೆಯನ್ನು ಮೂಡಿಸಿ ಸಾಮಾಜಿಕವಾಗಿ, ಧಾರ್ಮಿಕವಾಗಿ, ಆರ್ಥಿಕವಾಗಿ ಮುನ್ನಡೆಸಲು ಪ್ರಯತ್ನಿಸಿದವು. ಫಲವಾಗಿ ಕೆಲವು ವರ್ತಕ ಸಮುದಾಯಗಳು ತಮ್ಮ ಸಮುದಾಯಕ್ಕೆ ಸಂಬಂಧಿಸಿದಂತೆ ಕೆಲವೊಂದು ಸಾಮಾಜಿಕ ಹಾಗೂ ಧಾರ್ಮಿಕ ಸಂಘ-ಸಂಸ್ಥೆಗಳನ್ನು ರಚಿಸಿ ಬಹುಮುಖಿ ಸೇವೆಯಲ್ಲಿ ತೊಡಗಿದವು. ಕೆಲವು ಶ್ರೀಮಂತ ವರ್ತಕರು ವ್ಯಕ್ತಿಗತವಾಗಿ ಒಂದು ಚಾರಿಟಿಯನ್ನು ಸ್ಥಾಪಿಸಿ, ಬಹುಮುಖಿ ಸೇವೆಯನ್ನು ಸಮಾಜಕ್ಕೆ ನೀಡಿದರು. ಹೀಗೆ ಸಂಘ-ಸಂಸ್ಥೆ ಇಲ್ಲವೇ ಚಾರಿಟಿಗಳನ್ನು ಒಂದೆಡೆ ಸ್ಥಾಪಿಸಿ ತಮ್ಮ ಕೊಡುಗೆಯನ್ನು ನೀಡಿದರೆ ಇನ್ನೊಂದೆಡೆ ಇವರೆಡು ಇಲ್ಲದೇ ವಿವಿಧ ವರ್ತಕ ಸಮುದಾಯಗಳ ವರ್ತಕರು ವೈಯಕ್ತಿಕವಾಗಿ ವಿಭಿನ್ನ ನೆಲೆಯಲ್ಲಿ ಕೊಡುಗೆಯನ್ನು ನೀಡಿದರು. ಇಂತಹ ಸೇವೆಗಳು ಮತ್ತು ಕೊಡುಗೆಗಳು ಕೇವಲ ತಮ್ಮ ವೃತ್ತಿ ಬಾಂಧವರಿಗೆ ಮಾತ್ರ ಸಿಮೀತವಾಗಿರಲಿಲ್ಲ. ಇನ್ನಿತರ ಧರ್ಮಿಯರು ಇದರ ಲಾಭವನ್ನು ಪಡೆದರು ಎಂಬುದು ವಿಶೇಷವೆನಿಸುತ್ತದೆ. ಅವುಗಳಲ್ಲಿ ಪ್ರಮುಖವಾದ ಕೆಲವನ್ನು ಮಾತ್ರ ವಿವರಿಸುವುದು ಈ ಅಧ್ಯಾಯದ ಉದ್ದೇಶವಾಗಿದೆ. ಅಧ್ಯಯನದ ದೃಷ್ಟಿಯಿಂದ ವರ್ತಕ ಸಮುದಾಯಗಳ ಸಾಂಸ್ಕೃತಿಕ ಕೊಡುಗೆಗಳನ್ನು ಆರೋಗ್ಯ, ಶಿಕ್ಷಣ, ಧಾರ್ಮಿಕ ಆಚರಣೆಗಳು ಮತ್ತು ಬಹುಮುಖಿ ಸೇವೆಗಳು ಎಂಬ ಉಪಶೀರ್ಷಿಕೆಯ ಅಡಿಯಲ್ಲಿ ವಿಭಾಗಿಸಿ ವರ್ತಕ ಸಮುದಾಯದ ವ್ಯಾಪಾರಿ ಧರ್ಮವನ್ನು ವಿವರಿಸಲು ಪ್ರಯತ್ನಿಸಲಾಗಿದೆ.

## ೭.೧. ಆರೋಗ್ಯ

ವಸಾಹತು ಕಾಲಘಟ್ಟದಲ್ಲಿ ಬೆಂಗಳೂರು ಪ್ರದೇಶದಲ್ಲಿ ನೆಲೆಸಿದ್ದ ಅನೇಕ ವರ್ತಕ ಸಮುದಾಯಗಳು ವ್ಯಾಪಾರದ ಜೊತೆಗೆ ಇನ್ನಿತರ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದರು. ಇದರಲ್ಲಿ ಮುಖ್ಯವಾಗಿ ಇವರು ಆರೋಗ್ಯಕ್ಕೆ ಸಂಬಂಧಿಸಿದಂತೆ ಅನೇಕ ಕಾರ್ಯಗಳನ್ನು ಮಾಡಿದರು. ತಮ್ಮ ವೃತ್ತಿಯ ಜೊತೆಗೆ ಅನೇಕ ಜನರು ಖಾಸಗಿ ಆಸ್ಪತ್ರೆಗಳನ್ನು ಸ್ಥಾಪಿಸಲು ಹಣಕಾಸಿನ ಸಹಕಾರ ಮತ್ತು ಸ್ಥಾಪಕರು ಸಹ ಆಗಿದ್ದರು. ೧೯ ಮತ್ತು ೨೦ನೇ ಶತಮಾನದಲ್ಲಿ ಅಂದರೆ ೧೮೬೦ರ ದಶಕದ ನಂತರ ಭೀಕರ

ಕ್ಷಾಮ ಮತ್ತು ಪ್ಲೇಗಿನ ಪ್ರಭಾವವು ಬೆಂಗಳೂರು ಪ್ರದೇಶದ ಮೇಲೆಯೂ ಬೀರಿತು. ವಸಾಹತು ಪ್ರಭುತ್ವವು ಪರಿಹಾರದ ಕಾರ್ಯಗಳನ್ನು ಅರೆ ಮನಸ್ಸಿನಿಂದ ಕೈಗೊಂಡಿದ್ದರು. ಅವರ ಅತೀವ ಆಸಕ್ತಿಯು ಸಾರಿಗೆ–ಸಂಪರ್ಕ, ಆಡಳಿತ, ಕಂದಾಯ ವ್ಯವಸ್ಥೆ, ನ್ಯಾಯಾಂಗ ವ್ಯವಸ್ಥೆ ಮೇಲಿತ್ತೇ ಹೊರತು ಆರೋಗ್ಯದ ಸುಧಾರಣೆಯಲ್ಲ.[೧] ಈ ವಿಚಾರ ಕಮೀಷನರ್ ಮತ್ತು ಭಾರತದ ಸೆಕ್ರೆಟರಿಗಳ ನಡುವಿನ ಪತ್ರ ವ್ಯವಹಾರದಿಂದ ತಿಳಿಯುತ್ತದೆ. ಈ ಹಿನ್ನೆಲೆಯಲ್ಲಿ ಜನ ಸಾಂದ್ರತೆ ಹೆಚ್ಚಾಗಿ ಬೆಂಗಳೂರು ದಂಡು ಪ್ರದೇಶದ ಸುತ್ತಮುತ್ತಲು ಮತ್ತು ಬೆಂಗಳೂರು ಪೇಟೆಯಲ್ಲಿ ಕೊಳಚೆ ಪ್ರದೇಶಗಳು ನಿರ್ಮಾಣಗೊಂಡವು.[೨] ಬ್ರಿಟಿಶ್ ಪ್ರಭುತ್ವದ ಆಸಕ್ತಿ ತಮ್ಮ ಹಿತಾಸಕ್ತಿಯ ಉದ್ದೇಶದಿಂದಾಗಿ ಪರಿಹಾರಿಕ ಕಾರ್ಯಗಳು ಸಮಂಜಸವಾಗಿ ಕಾರ್ಯನಿರ್ವಹಿಸಲು ಸಾಧ್ಯವಾಗಲಿಲ್ಲ. ಇಂತಹ ಸಂದರ್ಭದಲ್ಲಿ ಪ್ರಭುತ್ವದ ಧನಸಹಾಯವನ್ನೇ ನೋಡುತ್ತಾ ಕೂರದೆ, ಪ್ರಭುತ್ವದ ಜೊತೆ ಸೇರಿ ಸುಧಾರಣಾ ಕ್ರಮಗಳನ್ನು ಸ್ಥಳೀಯರಾದ ಶ್ರೀಮಂತ ವರ್ಗ ಮತ್ತು ವರ್ತಕ ಸಮುದಾಯದವರು ಪಬ್ಲಿಕ್ ಫಂಡ್ ಎಂಬ ಹೆಸರಿನಲ್ಲಿ ಹಣ ಸಂಗ್ರಹಿಸಿ ಬೆಂಗಳೂರಿನ ಪರಿಸರವನ್ನು ತಿಳಿಗೊಳಿಸಲು ಸಹಕರಿಸಿದರು.[೩] ಅಂದಿನ ಬೆಂಗಳೂರಿನಲ್ಲಿ ಯಾವುದೇ ಆಸ್ಪತ್ರೆಗಳು ಇರಲಿಲ್ಲ. ಆಸ್ಪತ್ರೆಗಳನ್ನು ಸ್ಥಾಪಿಸುವ ಅಥವಾ ಸ್ಥಾಪಿಸಲು ಧನಸಹಾಯವನ್ನು ವರ್ತಕ ಸಮುದಾಯಗಳು ನೀಡುವ ಮೂಲಕ ಬಡವರಿಗೆ ಸಹಾಯದ ಹಸ್ತವನ್ನು ತೋರಿದರು. ಇಂತಹ ಆಸ್ಪತ್ರೆಗಳಿಂದ ತಮ್ಮ ಸಮುದಾಯದವರು ಮಾತ್ರವಲ್ಲದೆ ಸಾರ್ವಜನಿಕರೂ ಅನುಕೂಲತೆಗಳನ್ನು ಪಡೆದುಕೊಂಡರು. ಈ ನಿಟ್ಟಿನಲ್ಲಿ ವಿವಿಧ ವೃತ್ತಿಗೆ ಸೇರಿದ ವರ್ತಕ ಸಮುದಾಯಗಳು ಬೆಂಗಳೂರು ಪ್ರದೇಶದಲ್ಲಿ ಆರೋಗ್ಯಕರ ವಾತಾವರಣವನ್ನು ಮೂಡಿಸಲು ಪ್ರಯತ್ನಿಸಿದವು.

ಬೆಂಗಳೂರಿನಲ್ಲಿ ಮೊದಲ ಬಾರಿಗೆ ೧೮೬೨ರಲ್ಲಿ ಪ್ಲೇಗು ತಲೆದೋರಿದಾಗ ಸತ್ತವರ ಸಂಖ್ಯೆ ಅಪಾರ. ವೈದ್ಯಕೀಯ ಸೌಲಭ್ಯಗಳು ಅಷ್ಟಾಗಿ ಇರದಿದ್ದ ಕಾರಣ ಅನಾಹುತ ಹೆಚ್ಚಿನ ಪ್ರಮಾಣದಲ್ಲಿ ತಲೆದೋರಿದ ಕಾಲಘಟ್ಟದಲ್ಲಿ ಅದಕ್ಕೆ ಹಲವು ವರ್ತಕರು ಸ್ಪಂದಿಸಿದ್ದನ್ನು ಇಲ್ಲಿ ಸ್ಮರಿಸಬಹುದು. ಬೆಂಗಳೂರು ನಗರದಲ್ಲಿ ಕೊಳಚೆಗುಂಡಿಗಳನ್ನೆಲ್ಲಾ ಮುಚ್ಚಿಸುವಂತೆ ಮುನಿಸಿಪಲ್ ಕಮಿಷನ್ ಸೂಚಿಸಿತ್ತು. ಆಗ ಬೆಂಗಳೂರು ಪೇಟೆಯ ಶೆಟ್ಟಿ ಯಜಮಾನರುಗಳ ಸಹಕಾರದಿಂದ ಪಟ್ಟಣದ ಒಳಭಾಗದ ಕೊಳಚೆಗುಂಡಿಗಳನ್ನು ಭರ್ತಿ ಮಾಡಿದರು. ಇದೇ ಸಂದರ್ಭದಲ್ಲಿ ಪ್ರಭುತ್ವದವರೂ ಸಹ ಬೆಂಗಳೂರು ನಗರದ ಕೋಟೆಯ ಹೊರಭಾಗದಲ್ಲಿದ್ದ ಕಂದಕಗಳನ್ನು ೧೮೬೪ರಲ್ಲಿ ಮುಚ್ಚಿದರು.[೪]

೧೮೭೬–೭೮ರಲ್ಲಿ ದಕ್ಷಿಣ ಭಾರತದಲ್ಲಿ ಧಾತು ಈಶ್ವರ ಕ್ಷಾಮವೆಂದೇ ಕರೆಯಲ್ಪಟ್ಟ ಭೀಕರ ಕ್ಷಾಮ ತಲೆದೋರಿತು. ಎರಡು ವರ್ಷಗಳ ಕಾಲದ ಈ ಕ್ಷಾಮದಲ್ಲಿ ಲೆಕ್ಕಕ್ಕೆ ಸಿಗದಷ್ಟು ಜನರು

ಸತ್ತರು. ಸಾವಿರಾರು ಜನರು ಕೆಲಸವನ್ನರಸಿಕೊಂಡು ಬೆಂಗಳೂರಿಗೆ ಬಂದಾಗ ಗಂಜಿಕೇಂದ್ರಗಳನ್ನು ಮತ್ತು ಇನ್ನಿತರ ಸೇವಾ ಕಾರ್ಯಗಳ ಕೇಂದ್ರಗಳನ್ನು ವರ್ತಕ ಸಮುದಾಯಗಳು ತೆರೆದು ಸಹಾಯಹಸ್ತ ನೀಡಿದವು. ಹೀಗೆ ಸೇವಾಕಾರ್ಯಗಳನ್ನು ನೀಡಿದ ವರ್ತಕರಲ್ಲಿ ವೀರಬಣಜಿಗ ವರ್ತಕ ಸಮುದಾಯ ದವರಾದ ಎಲೆ ಮಲ್ಲಪ್ಪಶೆಟ್ಟರು ಪ್ರಮುಖರು.[೫]

ಅದೇ ತೆರದಲ್ಲಿ ಗಾಣಿಗರ ಸಮುದಾಯಕ್ಕೆ ಸೇರಿದ ಜನೋಪಕಾರಿ ಎಂದೇ ಜನಪ್ರಿಯರಾದ ಶ್ರೀದೊಡ್ಡಣ್ಣ ಶೆಟ್ಟರು ತಮ್ಮ ಸಮುದಾಯದವರಿಗೆ ವೆಂಕಟಾಪುರ ಎಂಬ ಗ್ರಾಮದಲ್ಲಿ ನೂರಾರು ಗುಡಿಸಲುಗಳನ್ನು ನಿರ್ಮಿಸಿ ಪ್ಲೇಗ್‌ನ ಉಪದ್ರವಕ್ಕೆ ಸಿಲುಕಿದವರಿಗೆ ಸಹಕರಿಸಿದರು.[೬]

ಬೆಂಗಳೂರಿನಲ್ಲಿ ಆಸ್ಪತ್ರೆ ವಿರಳವಾಗಿದ್ದ ಸಂದರ್ಭದಲ್ಲಿ ಹೆಣ್ಣುಮಕ್ಕಳ ಹೆರಿಗೆ ಆಸ್ಪತ್ರೆಯನ್ನ ಕ್ರಿ.ಶ.೧೮೮೦ರಲ್ಲಿ ಮಲ್ಲಪ್ಪ ಶೆಟ್ಟರು ೩೫ ಸಾವಿರ ರೂಪಾಯಿಗಳನ್ನು ಕೊಟ್ಟು ಇಂದಿನ ಐ.ಜಿ.ಪಿ ಪೊಲೀಸ್ ಕಛೇರಿ ಇರುವ ನೃಪತುಂಗ ರಸ್ತೆಯಲ್ಲಿ ಆಸ್ಪತ್ರೆಯನ್ನು ನಿರ್ಮಿಸಿದರು. ನಂತರ ಇದನ್ನು ವಾಣಿವಿಲಾಸ ಆಸ್ಪತ್ರೆಗೆ ವರ್ಗಾಯಿಸಲಾಯಿತು. ಇಂದಿಗೂ ಅವರ ಹೆಸರು ಆಸ್ಪತ್ರೆಯ ಫಲಕದಲ್ಲಿ ಮೊದಲ ಸ್ಥಾನದಲ್ಲಿದೆ.[೭]

ದೇವಾಂಗ ಸಮುದಾಯದವರಾದ ಎಣ್ಣೆಗೆರೆ ಯಜಮಾನ್ ಆರ್. ವೆಂಕಟರಾಮಯ್ಯ ಅವರು ಮಕ್ಕಳ ಆರೋಗ್ಯವನ್ನು ಕಾಪಾಡುವ ನೆಲೆಯಲ್ಲಿ ಟೌನ್‌ಹಾಲ್ ಬಳಿ ಶಿಶು ಸಂರಕ್ಷಣಾ ಕೇಂದ್ರವನ್ನು ಸ್ಥಾಪಿಸಿದರು. ಆ ಕೇಂದ್ರವನ್ನು ಎಣ್ಣೆಗೆರೆ ಯಜಮಾನ್ ಆರ್. ವೆಂಕಟರಾಮಯ್ಯ ಹೊನ್ನಾದೇವಿ ಶಿಶು ಸಂರಕ್ಷಣಾ ಕೇಂದ್ರವೆಂದು ಕರೆಯಲಾಗಿದೆ. ಇಂದು ಇದು ಅಸ್ತಿತ್ವದಲ್ಲಿಲ್ಲ ಆದರೂ ಇದರ ಕಲ್ಲಿನ ನಾಮಫಲಕ ಟೌನ್‌ಹಾಲ್ ಬಳಿ ಇಂದಿಗೂ ಇದೆ.[೮] ನಂತರದ ಕಾಲದಲ್ಲಿ ಮೈಸೂರಿನ ಅರಸರಾದ ಜಯಚಾಮರಾಜ ಒಡೆಯರ್‌ರ ಕಾಲದಲ್ಲಿ ಇದೇ ಫಲಕವಿರುವ ಸ್ಥಳದಲ್ಲಿ ಧರ್ಮಪ್ರಕಾಶ ಎಂಬ ಬಿರುದನ್ನು ಹೊಂದಿದ ಎನ್. ದಾಸಪ್ಪನವರು ಹೆರಿಗೆ ಆಸ್ಪತ್ರೆಯನ್ನು ೧೯೪೦ರಲ್ಲಿ ತೆರೆದರು. ಇದು ಇಂದು ಟೌನ್‌ಹಾಲಿನ ಬಳಿ ಕಲ್ಲಿನ ಕಟ್ಟಡವಿದೆ. ಇದನ್ನು ಎನ್. ದಾಸಪ್ಪ ತಿರುಮಲಮ್ಮ ಮೆಟರ್ನಿಟಿ ಹೋಮ್ ಎಂದು ಕರೆಯಲಾಗಿದೆ.[೯]

ಮೊದಲಿಯಾರ್ ಸಮುದಾಯದವರಾದ ಟಿ. ಆರ್ಮುಗಮ್ ಮೊದಲಿಯಾರ್ ಅವರು ೧೯೨೦ರ ದಶಕದಲ್ಲಿ ಸೈಂಟ್ ಮಾರ್ಥಾಸ್ ಆಸ್ಪತ್ರೆಯಲ್ಲಿ ಬೆಂಗಳೂರಿನ ಮೊದಲ ನರ್ಸಿಂಗ್ ಸ್ಕೂಲ್ ಸ್ಥಾಪಿಸಲು ಶ್ರಮಿಸಿದರು.[೧೦] ಅದೇ ರೀತಿಯಲ್ಲಿ ಬಿ. ಪಿ. ಅಣ್ಣಾಸ್ವಾಮಿ ಮೊದಲಿಯಾರ್ ಫ್ರೇಸರ್ ಟೌನಿನಲ್ಲಿ ಧನ್ವಂತರಿ ಆಸ್ಪತ್ರೆಯನ್ನು ನಿರ್ಮಿಸಲು ೧೯೩೯ರಲ್ಲಿ ತಮ್ಮ ಸ್ಥಳದಲ್ಲಿ ಸ್ಥಳವಾಕಾಶವನ್ನು ನೀಡಿದರು.

ಅದಷ್ಟೆ ಅಲ್ಲದೆ ಆಸ್ಪತ್ರೆಯ ಸೇವೆಗೆ ಧನಸಹಾಯವನ್ನು ನೀಡಿದರು. ಇಂದಿಗೂ ಈ ಆಸ್ಪತ್ರೆಯು ಮೊದಲಿಯಾರ್ ಸಂಘದ ಅಧೀನದಲ್ಲಿ ಬಡವರಿಗೆ ಸೇವೆ ಸಲ್ಲಿಸುತ್ತಿದೆ.[೧೧]

ಮುಸ್ಲಿಂ ವರ್ತಕ ಸಮುದಾಯದವರಾದ ಆಗಾ ಅಬ್ದುಲ್ಲಾ ಸೇಟ್‌ರವರು ಸಾದತ್ ಡಿಸ್ಪೆನ್ಸರಿಯನ್ನು ೧೮೯೩ರಲ್ಲಿ ಸ್ಥಾಪಿಸಿದರು.[೧೨] ೧೯೨೫ರಲ್ಲಿ ಘೋಷಾ ಆಸ್ಪತ್ರೆಯನ್ನು ಸರ್ ಇಸ್ಮಾಯಿಲ್ ಸೇಟ್‌ರವರು ಶಿವಾಜಿನಗರದಲ್ಲಿ ಸ್ಥಾಪಿಸಿದರು. ಅದಷ್ಟೇ ಅಲ್ಲದೆ ಸರ್ ಇಸ್ಮಾಯಿಲ್ ಸೇಟ್‌ರವರು ಬೆಂಗಳೂರು ನಗರದ ಪ್ರಮುಖ ಆಸ್ಪತ್ರೆಗಳಾದ ಲೇಡಿ ಕರ್ಜನ್ ಆಸ್ಪತ್ರೆಗೆ ಗೇಟ್ ಮತ್ತು ತೈಲದಾನವನ್ನು ಮಾಡಿದರು. ಸೈಂಟ್ ಮಾರ್ಥಸ್ ಆಸ್ಪತ್ರೆಯ ಸುತ್ತಲು ಎತ್ತರವಾದ ಗೋಡೆಯನ್ನು ಕಟ್ಟಿಸಿಕೊಟ್ಟರು. ಬೆಂಗಳೂರು ಪ್ರದೇಶದ ಆಸ್ಪತ್ರೆಗಳಿಗಷ್ಟೇ ಅಲ್ಲದೇ ಸಿಮ್ಲಾ ಆಸ್ಪತ್ರೆಗಳಿಗೂ ದಾನವನ್ನು ನೀಡಿದರು.[೧೩]

ಹೀಗೆ ವಿವಿಧ ಸಮುದಾಯಗಳಿಗೆ ಸೇರಿದ ವರ್ತಕ ಸಮುದಾಯಗಳು ವರ್ತಕ ಧರ್ಮವನ್ನು ಪಾಲಿಸುತ್ತಾ, ಲಾಭಸಂಪಾದನೆಗೂ ಮಿತಿ ಮೇರೆಗಳುಂಟು ಎನ್ನುವ ತೆರದಲ್ಲಿ ಆರೋಗ್ಯ ಸೇವಾಕಾರ್ಯಗಳನ್ನು ನಿರ್ವಹಿಸುತ್ತಿದ್ದರು ಎಂಬುದಕ್ಕೆ ಈ ಮೇಲಿನ ವಿಚಾರಗಳು ಉತ್ತಮ ನಿದರ್ಶನ ಗಳಾಗಿದೆ. ವ್ಯಾಪಾರವಿಲ್ಲದೆ ಸಮಾಜವಿಲ್ಲ. ಅಂಗಡಿಯಿಲ್ಲದೆ ಊರಿಲ್ಲ. ಹೀಗೆ ವರ್ತಕರು ಸಮಾಜ ಜೀವನಕ್ಕೆ ಮೂಲ ಸಹಾಯಕರಲ್ಲೊಬ್ಬರೆಂಬುದು ತಿಳಿಯುತ್ತದೆ. ಅದರೊಂದಿಗೆ ಅವರು ಮಹತ್ವದ ಸ್ಥಾನವನ್ನು ಪಡೆಯುವ ಮೂಲಕ ಬೆಂಗಳೂರು ಪ್ರದೇಶದ ಅಭಿವೃದ್ಧಿಗೆ ಎಷ್ಟರ ಮಟ್ಟಿಗೆ ಶ್ರಮಿಸಿದು ಎನ್ನುವುದನ್ನು ತಿಳಿಸುತ್ತದೆ.

### ೭.೨ ಶಿಕ್ಷಣ ಮತ್ತು ಶೈಕ್ಷಣಿಕ ಕೊಡುಗೆಗಳು

ಬೆಂಗಳೂರು ಪ್ರದೇಶದಲ್ಲಿ ನೆಲೆಸಿರುವ ಅನೇಕ ವರ್ತಕ ಸಮುದಾಯಗಳು ವ್ಯಾಪಾರವನ್ನು ಪ್ರಧಾನ ವೃತ್ತಿಯನ್ನಾಗಿಸಿಕೊಂಡವರು. ಇವರು ವ್ಯಾಪಾರವನ್ನು ವೃದ್ಧಿಸುವ ನಿಟ್ಟಿನಲ್ಲಿ ಆಧುನಿಕ ಶಿಕ್ಷಣವನ್ನು ಪಡೆಯಲು ಗಮನ ಹರಿಸಿದವರಲ್ಲಿ ಮೊದಲಿಗರಾಗಿದ್ದಾರೆ.[೧೪] ಬದಲಾದ ವ್ಯವಸ್ಥೆಗೆ ತಕ್ಕಂತೆ ಸಾಂಪ್ರದಾಯಿಕ ವೃತ್ತಿಯಲ್ಲಿ ಹೊಸತನವನ್ನು ಮೂಡಿಸಲು ಇಂಗ್ಲಿಶ್ ಶಿಕ್ಷಣ ಮತ್ತು ವೃತ್ತಿಪರ ತರಬೇತಿಗಳನ್ನು ಪಡೆದು ಬ್ರಿಟಿಶ್ ಪ್ರಭುತ್ವದ ಮಧ್ಯವರ್ತಿಗಳಾಗಿ ಸ್ಥಳೀಯವಾಗಿ ಪ್ರಮುಖ ಪಾತ್ರವನ್ನು ವಹಿಸಿದರು. ತಮ್ಮ ಕುಲಬಾಂಧವರಿಗೆ ಮಾತ್ರವಲ್ಲದೇ ಇತರೆ ವರ್ಗಗಳಿಗೂ ಶಿಕ್ಷಣವನ್ನು ನೀಡಲು ಹಲವು ಶಿಕ್ಷಣ ಸಂಸ್ಥೆಗಳನ್ನು ಬೆಂಗಳೂರು ಪ್ರದೇಶದಲ್ಲಿ ತೆರೆದರು. ಶಿಕ್ಷಣ ಪಡೆಯುವ ನಿಟ್ಟಿನಲ್ಲಿ ಬೆಂಗಳೂರಿಗೆ ಬರುವ ಬಡ ವಿದ್ಯಾರ್ಥಿಗಳಿಗೆ ಬೆಂಗಳೂರು ಪ್ರದೇಶದಲ್ಲಿ ನೆಲೆಸಲು ಹಲವು ಹಾಸ್ಟೆಲ್‌ಗಳನ್ನು ಸ್ಥಾಪಿಸಲು ಹಣಕಾಸಿನ ಸಹಕಾರವನ್ನು ನೀಡಿರುವುದನ್ನು ಕಾಣಬಹುದಾಗಿದೆ.

ಅದಷ್ಟೇ ಅಲ್ಲದೇ ವಿದ್ಯಾರ್ಥಿವೇತನ ಮತ್ತು ಇನ್ನಿತರ ಸೌಲಭ್ಯಗಳನ್ನು ನೀಡಿದರೆಂಬುದು ಗಮನಾರ್ಹ ವಾಗಿದೆ. ಈ ತೆರನಾದ ಅಂಶಗಳು ವೃತ್ತಿಯಲ್ಲಿ ಕೌಶಲ್ಯತೆ ಅಭಿವೃದ್ಧಿಯ ಜೊತೆಗೆ ವೃತ್ತಿ ಪರಂಪರೆಯಲ್ಲಿ ಮಹತ್ತರವಾದ ಬದಲಾವಣೆಯನ್ನು ತಂದಿತ್ತು. ವ್ಯಾಪಾರಿಯ ಮಗ ವ್ಯಾಪಾರಿಯೇ ಆಗಬೇಕು ಎನ್ನುವ ನಿಯಮದಲ್ಲಿ ಬದಲಾವಣೆಯನ್ನು ತಂದು ಅವರವರ ಆಸಕ್ತಿಗೆ ಅನುಗುಣವಾಗಿ ಯಾವ ವೃತ್ತಿಯಲ್ಲಿ ತೊಡಗಬೇಕು ಎನ್ನುವುದನ್ನು ನಿರ್ಧರಿಸುವ ಸ್ವಾತಂತ್ರ್ಯವನ್ನು ಪಡೆದರು. ಈ ಪ್ರಕ್ರಿಯೆಯು ದೀರ್ಘ, ನಿಧಾನ ಮತ್ತು ವಿವಿಧ ಹಂತಗಳಿಂದ ವಿಚಾರಗಳಾಗಿದೆ. ಆಡಳಿತ ಕ್ಷೇತ್ರ ಮತ್ತು ಇನ್ನಿತರ ಕ್ಷೇತ್ರಗಳಲ್ಲಿ ತಮ್ಮ ಅಸ್ತಿತ್ವವನ್ನು ಗುರುತಿಸಿಕೊಳ್ಳುವ ಮತ್ತು ಅದರೊಂದಿಗೆ ತಮ್ಮ ವೃತ್ತಿಯಲ್ಲಿ ಹೊಸತನವನ್ನು ಮೂಡಿಸುವ ಮಹತ್ತರವಾದ ಕಾರ್ಯದಲ್ಲಿ ವರ್ತಕ ಸಮುದಾಯಗಳು ತೊಡಗಿಸಿಕೊಂಡವು.

ಇದರ ಹಿನ್ನೆಲೆಯಲ್ಲಿ ಬೆಂಗಳೂರು ಪ್ರದೇಶವು ಶೈಕ್ಷಣಿಕ ಕ್ಷೇತ್ರದಲ್ಲಿ ಅಭಿವೃದ್ಧಿ ಹೊಂದಿ ರಾಜ್ಯದಲ್ಲೇ ಉನ್ನತ ಸ್ಥಾನವನ್ನು ಪಡೆಯಲು ಸಾಧ್ಯವಾಯಿತು. ಇದರ ಬೆಂಗಳೂರಿನ ಪ್ರದೇಶದಲ್ಲಿ ಶಿಕ್ಷಣವನ್ನು ಪಡೆದ ಸಮುದಾಯಗಳನ್ನು (ಬೆಂಗಳೂರು ನಗರ ಮತ್ತು ಬೆಂಗಳೂರು ದಂಡು ಪ್ರದೇಶವನ್ನು ಆಧರಿಸಿ) ಗಮನಿಸುವಾಗ ಕ್ರೈಸ್ತರಲ್ಲಿ ಆಂಗ್ಲೋ-ಇಂಡಿಯನ್ ವರ್ತಕ ಸಮುದಾಯಗಳು ಪ್ರಮುಖವಾಗಿ ಇಂಗ್ಲಿಶ್ ಶಿಕ್ಷಣವನ್ನು ಪಡೆದ ಪ್ರಧಾನ ವರ್ಗವಾಗಿ ಕಂಡುಬರುತ್ತವೆ. ಅದೇ ತರಹ ಹಿಂದೂ ಸಮುದಾಯಗಳಲ್ಲಿ ಬ್ರಾಹ್ಮಣ ಮತ್ತು ಮಾದಿಗರನ್ನು ಕೈಬಿಟ್ಟು ಇಲ್ಲಿ ನೋಡುವುದಾದರೆ, ವೈಶ್ಯ ಸಮುದಾಯ ಅಥವಾ ವರ್ತಕ ಸಮುದಾಯವು ಪ್ರತಿ ಮೈಲಿಗೆ ೫೮೧ ಅಕ್ಷರಸ್ಥ ಪುರುಷರು ೧೯೧೧ರ ಜನಗಣತಿಯ ಪ್ರಕಾರ ಕಂಡುಬರುತ್ತಾರೆ.[೧೫] ಅದರಲ್ಲಿಯೂ ಪ್ರಮುಖವಾಗಿ ಪಂಚಾಲ, ನೇಯ್ಗೆ, ಲಿಂಗಾಯತ, ಬಣಜಿಗ, ಮರಾಠ ಮತ್ತು ಗಾಣಿಗ ವರ್ತಕ ಸಮುದಾಯಗಳು ಗಣನೀಯವಾಗಿ ಶಿಕ್ಷಣವನ್ನು ಪಡೆದ ಸಮುದಾಯವಾಗಿ ಕಂಡುಬರುತ್ತವೆ. ಅದರಂತೆ ಜೈನರು, ಮುಸ್ಲಿಂ, ಪಾರ್ಸಿ, ಬನಿಯಾ, ಮಾರ್ವಾಡಿ, ಯಹೂದಿ ಇನ್ನಿತರ ವರ್ತಕ ಸಮುದಾಯಗಳು ಗಣನೀಯವಾಗಿ ಇಂಗ್ಲಿಶ್ ಶಿಕ್ಷಣವನ್ನು ಪಡೆದ ಸಮುದಾಯಗಳಾಗಿ ೧೯೧೧ ಮತ್ತು ೧೯೨೧ರ ಜನಗಣತಿಯಲ್ಲಿ ಕಂಡುಬಂದಿರುವುದನ್ನು ಇಲ್ಲಿ ಪ್ರಮುಖವಾಗಿ ಗಮನಿಸಲಾಗಿದೆ. ಜನಗಣತಿಯ ವರದಿಯಲ್ಲಿ ಸ್ತ್ರೀಯರ ಸಂಖ್ಯೆ ತೀರ ಕಡಿಮೆಯಾಗಿ ಕಂಡುಬರುತ್ತದೆ. ಈ ವಿಚಾರಗಳನ್ನು ಕೋಷ್ಟಕದ ಮೂಲಕ ತಿಳಿಯಬಹುದಾಗಿದೆ.[೧೬]

| ಸಮುದಾಯವಾರು | ಪ್ರತಿ ಸಾವಿರಕ್ಕೆ ಇಂಗ್ಲಿಶ್ ಅಕ್ಷರಸ್ಥರ ಸಮುದಾಯಗಳು |
|---|---|
| ೧. ಹಿಂದೂ | ೮೦ |
| ಬ್ರಾಹ್ಮಣ | ೧೯೫ |
| ಕ್ಷತ್ರೀಯ | ೧೯೫ |
| ವೈಶ್ಯ(ವರ್ತಕ ಸಮುದಾಯ) | ೩೭ |
| ೨. ಮುಸ್ಲಿಂ | ೫೧ |
| ೩. ಕ್ರೈಸ್ತರು | ೬೫೬ |
| ಭಾರತೀಯ ಕ್ರೈಸ್ತರು | ೬೫೬ |
| ೪. ಜೈನರು | ೩೨ |

ಈ ಮೇಲಿನ ಕೋಷ್ಟಕದಲ್ಲಿ ಇರುವ ಅಂಕಿಅಂಶಗಳು ಪ್ರತಿ ಸಾವಿರಕ್ಕೆ ಆಧುನಿಕ ಶಿಕ್ಷಣ ಪಡೆದಿರುವವರು. ಇದರಲ್ಲಿ ಹಿಂದೂ ಧರ್ಮದೊಳಗೆ ಅಂದಿನ ಪ್ರಮುಖ ಸಮುದಾಯಗಳನ್ನು ನೀಡಲಾಗಿದೆ. ಅದರಲ್ಲಿ ಬ್ರಾಹ್ಮಣರು ೧೯೫, ಕ್ಷತ್ರಿಯರು ೧೧೫ ಮತ್ತು ವೈಶ್ಯರು ೩೭ ಇರುವುದನ್ನು ನೋಡಬಹುದು. ವೈಶ್ಯರು ಶಿಕ್ಷಣದಲ್ಲಿ ೧೯೧೧ರಲ್ಲಿ ಇತರ ಪ್ರಮುಖ ಸಮುದಾಯಗಳಿಗಿಂತ ತುಂಬಾ ಹಿಂದುಳಿದಿರುವುದು ಮೇಲ್ನೋಟಕ್ಕೆ ಸ್ಪಷ್ಟವಾಗಿದೆ. ನಂತರ ಮುಸ್ಲಿಂರು ೫೧, ಕ್ರೈಸ್ತರಲ್ಲಿ ಯುರೋಪಿಯನ್ನರು ೬೫೬, ಭಾರತೀಯ ಕ್ರೈಸ್ತರು ಅಂದರೆ ಆಂಗ್ಲೋ-ಇಂಡಿಯನ್ನರು ೩೬೪ ಮತ್ತು ಜೈನರು ೩೨ ಇರುವುದನ್ನು ಗಮನಿಸಬಹುದು. ಹಿಂದೂ ಧರ್ಮೀಯರನ್ನು ಒಟ್ಟಾಗಿ ಗಮನಿಸಿದಾಗ ೩೪೭ಜನ ಶಿಕ್ಷಣ ಪಡೆದಿದ್ದರು. ಅದರೆ ಉಳಿದ ಧರ್ಮಿಯರಿಗಿಂತ ಹೆಚ್ಚಿನ ಶಿಕ್ಷಣವನ್ನು ಪಡೆದಿದ್ದರು. ಆಂಗ್ಲೋ-ಇಂಡಿಯನ್(ಕ್ರೈಸ್ತ)ರನ್ನು ಈ ಪಟ್ಟಿಯಲ್ಲಿ ಇತರ ಧರ್ಮೀಯರೊಡನೆ ಸಮೀಕರಿಸುವುದು ಸರಿಯಾಗುವುದಿಲ್ಲ. ಇವರಿಗೆ ಆಳುವ ವರ್ಗದ ಸಂಪೂರ್ಣ ಸಹಕಾರ ಹೆಚ್ಚಾಗಿತ್ತು. ಉಳಿದಂತೆ ಹಿಂದೂ ಧರ್ಮೀಯರು ಇತರ ಧರ್ಮೀಯರಿಗಿಂತ ಶೈಕ್ಷಣಿಕವಾಗಿ ಹೆಚ್ಚು ಮುಂದೆ ಇರುವುದು ಕಂಡುಬರುತ್ತದೆ. ಹಿಂದೂ ಧರ್ಮೀಯರನ್ನು ವರ್ಣಾಶ್ರಮದ ಮೇರೆಗೆ ಸ್ಥೂಲವಾಗಿ ಮೂರು ಗುಂಪುಗಳಲ್ಲಿ ತೋರಿಸಲಾಗಿದೆ. ಇಲ್ಲಿ ವರ್ತಕ ಸಮುದಾಯಗಳು ಅಥವಾ ವೈಶ್ಯ ಎಂದಾಗ ಯಾವುದು ಎನ್ನುವುದು ಸ್ಪಷ್ಟವಾಗಿಲ್ಲ. ಅಲ್ಲದೆ ಶೂದ್ರ ಜಾತಿಗಳು ಮತ್ತು ಅಸ್ಪೃಶ್ಯ ಜಾತಿಗಳು ಇಲ್ಲಿಲ್ಲ. ಪ್ರತಿ ಸಾವಿರಕ್ಕೆ ಹಿಂದೂ ವರ್ತಕ ಸಮುದಾಯವು ೩೭ ಜನ ಅಕ್ಷರಸ್ಥರಾಗಿದ್ದರೆ, ಮುಸ್ಲಿಮರು (ಅರಬರು, ಲಬ್ಬೆ, ಮಾಪಿಳ್ಳೆ, ಮೆಮೋನ್, ಪಠಾಣರನ್ನು ಒಳಗೊಂಡಂತೆ) ೫೧, ಜೈನರು ೩೨ ಒಟ್ಟು ಜನಸಂಖ್ಯೆಯಲ್ಲಿ ಬ್ರಾಹ್ಮಣರ ಸಂಖ್ಯೆ ಕಡಿಮೆಯಿದ್ದು, ಅಲ್ಪಸಂಖ್ಯೆಯಲ್ಲಿ ಶಿಕ್ಷಣವನ್ನು

ಪಡೆದವರು ಶೇಕಡಾವಾರು ಹೆಚ್ಚಾಗಿ ಕಂಡುಬರುತ್ತದೆ. ಒಟ್ಟು ಸಂಖ್ಯೆಯಲ್ಲಿ ವರ್ತಕ ಸಮುದಾಯಗಳ ಪಾಲು ಹೆಚ್ಚಿದ್ದು, ಹೆಚ್ಚಿನ ಸಂಖ್ಯೆಯಲ್ಲಿ ಶಿಕ್ಷಣವನ್ನು ಪಡೆದರೂ ಸಹ ಕಡಿಮೆಯಾಗಿ ಕಂಡುಬರುತ್ತದೆ. ನಿಜವಾದ ಅರ್ಥದಲ್ಲಿ ಶಿಕ್ಷಣ ಪಡೆದವರ ಸಂಖ್ಯೆ ಹೆಚ್ಚಾಗಿದೆ. ಇದೇ ರೀತಿಯಲ್ಲಿ ಮುಸ್ಲಿಂ ಮತ್ತು ಜೈನರನ್ನು ಕಾಣಬಹುದಾಗಿದೆ.

ಬೆಂಗಳೂರು ಪ್ರದೇಶದಲ್ಲಿನ ೧೯೧೧ರ ಶೇಕಡಾವಾರು ಶಿಕ್ಷಣವನ್ನು ಪಡೆದ ವರ್ತಕ ಸಮುದಾಯಗಳನ್ನು ಈ ಕೆಳಗೆ ಕೊಟ್ಟಿರುವ ಕೊಷ್ಟಕದ ಮೂಲಕ ತಿಳಿಯಬಹುದಾಗಿದೆ. ಒಟ್ಟು ಮೈಸೂರು ಪ್ರದೇಶದಲ್ಲಿನ ಜನಸಂಖ್ಯೆಯಲ್ಲಿನ ಒಟ್ಟು ಶಿಕ್ಷಣವನ್ನು ಪಡೆದ ಸಮುದಾಯಗಳ ಆಧಾರದ ಮೇಲೆ ಈ ಕೋಷ್ಟಕವನ್ನು ಸಿದ್ಧಪಡಿಸಲಾಗಿದೆ. ಆ ಪ್ರಕಾರ ಮೊದಲಿಯಾರ್‌ರ ಸಂಖ್ಯೆಯು ಕಡಿಮೆಯಿದ್ದರೂ ಸಹ ಇಂಗ್ಲಿಶ್ ಶಿಕ್ಷಣವನ್ನು ಪಡೆಯುವಲ್ಲಿ ಪ್ರಮುಖರಾಗಿದ್ದಾರೆ. ಬ್ರಿಟಿಶ್ ಪ್ರಭುತ್ವ ಮತ್ತು ಮೊದಲಿಯಾರ್ ವರ್ತಕ ಸಮುದಾಯದ ಸಂಬಂಧವನ್ನು ಇದರ ಮೂಲಕ ತಿಳಿಯ ಬಹುದಾಗಿದೆ. ವಸಾಹತು ನೀತಿಯ ಪೂರಕವಾಗಿ ಕಾರ್ಯನಿರ್ವಹಿಸುತ್ತಿದ್ದ ಮೊದಲಿಯಾರ್ ಸಮುದಾಯ ದವರನ್ನು ವಸಾಹತು ನೀತಿ ಚಿಂತನೆಗಳು ಹೆಚ್ಚು ಪ್ರಭಾವಿಸಿದಂತೆ ಕಾಣುತ್ತದೆ. ಬಣಜಿಗರ ಸಂಖ್ಯೆಯು ಶಿಕ್ಷಣ ಪಡೆದ ಸಮುದಾಯಗಳಲ್ಲಿ ಹೆಚ್ಚಾಗಿ ಕಂಡರೂ ಸಹ ಅತ್ಯಲ್ಪವಾಗಿದೆ. ಕೋಮಟಿಗರ ಪಾಲು ಸ್ಥಳೀಯ ಶಿಕ್ಷಣದಲ್ಲಿ ಹೆಚ್ಚಾಗಿದ್ದು, ಇಂಗ್ಲಿಶ್ ಶಿಕ್ಷಣವನ್ನು ಪಡೆದವರ ಸಂಖ್ಯೆಯು ಕಡಿಮೆಯಾಗಿಯೇ ಕಾಣುತ್ತದೆ. ಹೀಗೆ ಪ್ರತಿಯೊಂದು ವರ್ತಕ ಸಮುದಾಯಗಳ ಶಿಕ್ಷಣವನ್ನು ಪಡೆದಿರುವ ಸಂಖ್ಯೆಯು ಕಡಿಮೆಯಿದ್ದರೂ ಸಹ ಇನ್ನಿತರ ಸಮುದಾಯಗಳಿಗಿಂತ ಹೆಚ್ಚಾಗಿತ್ತು ಎಂದು ತಿಳಿಯಬಹುದಾಗಿದೆ.

| ವರ್ತಕ ಸಮುದಾಯಗಳು | ಒಟ್ಟು ಜನಸಂಖ್ಯೆ | ಶಿಕ್ಷಣವನ್ನು ಪಡೆದವರ ಸಂಖ್ಯೆ | ಇಂಗ್ಲಿಶ್ ಶಿಕ್ಷಣವನ್ನು ಪಡೆದವರ ಸಂಖ್ಯೆ |
|---|---|---|---|
| ಕೊಮಟಿಗರು | ೯,೮೧೩ | ೪,೧೪೭ | ೨೦೧ |
| ಬಣಜಿಗರು | ೧೩೨,೯೫೫ | ೧೨,೪೯೮ | ೧,೨೧೧ |
| ನಗರ್ತರು | ೭,೭೮೨ | ೧,೯೨೭ | ೮೭ |
| ಪಂಚಾಲರು | ೧೨೮,೦೯೮ | ೧೫,೭೨೯ | ೧೩೪ |
| ತಿಗಳರು | ೬೯,೨೩೩ | ೧,೪೨೬ | ೧೧೪ |
| ವೈಶ್ಯರು | ೨೬,೪೯೭ | ೮,೨೮೦ | ೩೦೭ |
| ನೇಯ್ಗೆಯವರು | ೯೬,೪೬೬ | ೯,೪೦೧ | ೨೧೫ |
| ಮೊದಲಿಯಾರ್‌ರು | ೧೭,೮೯೮ | ೫,೩೨೯ | ೧,೬೦೪ |
| ಗಾಣಿಗರು | ೪೦,೪೬೯ | ೨,೨೬೪ | ೩೦ |




ಇಲ್ಲಿ ಇತರೆ ಎಂದಾಗ ಕೆಳಜಾತಿ ಮತ್ತು ಬ್ರಾಹ್ಮಣರು ಸೇರಿದ್ದಾರೆ. ಈ ಈರ್ವರ ಬಗೆಗೆ ಪ್ರತ್ಯೇಕ ಅಂಕಿ ಅಂಶಗಳು ಸದ್ಯಕ್ಕೆ ಲಭ್ಯವಿಲ್ಲ.[೧೭]

ಇಪ್ಪತ್ತನೆಯ ಶತಮಾನದಲ್ಲಿ ಆಧುನಿಕದ ಅಲೆಯು ಮೂಡಿದರೂ ಸಾಮಾಜಿಕ ವ್ಯವಸ್ಥೆ ಪ್ರಬಲವಾಗಿತ್ತು. ಆದ್ದರಿಂದಾಗಿ ತಮ್ಮ ತಮ್ಮ ಸಮುದಾಯದವರಿಗೆ ಶ್ರೀಮಂತರು, ಶ್ರೀಮಂತ ವರ್ತಕರು ತಮ್ಮ ಕುಲಬಾಂಧವರಿಗಾಗಿ ಹಲವು ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿದರು. ೧೮ನೇ ಶತಮಾನದಲ್ಲಿ ಸ್ಥಾಪಿತಗೊಂಡ ಶೈಕ್ಷಣಿಕ ಸಂಸ್ಥೆಗಳು ಪ್ರಾರಂಭದಲ್ಲಿ ತಮ್ಮ ಕುಲಬಾಂಧವರಿಗೆ ಮೊದಲ ಆದ್ಯತೆಯನ್ನು ನೀಡಿದವು. ಆದರೆ ನಂತರದ ಹಂತದಲ್ಲಿ ಎಲ್ಲ ಬಡ ಸಮುದಾಯಗಳು ಇದರ ಲಾಭವನ್ನು ಪಡೆದವು ಎಂಬ ವಿಚಾರದಲ್ಲಿ ಎರಡು ಮಾತಿಲ್ಲ. ಈ ನಿಟ್ಟಿನಲ್ಲಿ ಸ್ಥಾಪನೆಗೊಂಡ ಹಲವು ಶೈಕ್ಷಣಿಕ ಸಂಘ-ಸಂಸ್ಥೆಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಬೆಂಗಳೂರಿನಲ್ಲಿ ಪ್ರಬಲವಾಗಿ ೧೯-೨೦ನೇ ಶತಮಾನದಲ್ಲಿ ಕಂಡುಬರುವ ವರ್ತಕ ಸಮುದಾಯವೆಂದರೆ ಅದು ಬಣಜಿಗರು. ಮೇಲಿನ ಕೋಷ್ಠಕದಲ್ಲಿ ಕಾಣುವಂತೆ ಸ್ಥಳೀಯ ಶಿಕ್ಷಣವನ್ನು ಪಡೆಯುವ ಜೊತೆಗೆ ಕಾಲಕ್ಕೆ ತಕ್ಕಂತೆ ಇಂಗ್ಲಿಶ್ ಶಿಕ್ಷಣವನ್ನು ಪಡೆಯುವಲ್ಲಿ ಸಹ ಬಣಜಿಗರು ಹಿಂದೇಟು ಹಾಕಲಿಲ್ಲ. ವರ್ತಕ ಸಮುದಾಯದವರು ಸಹ ಶೈಕ್ಷಣಿಕ ಕ್ಷೇತ್ರಕ್ಕೆ ಅಪಾರ ಕೊಡುಗೆಗಳನ್ನು ನೀಡಿದ್ದಾರೆ. ಬಣಜಿಗ ಸಮುದಾಯಗಳಿಂದ ಸ್ಥಾಪಿಸಿ, ಪೋಷಿಸಲ್ಪಟ್ಟ ಮಠಗಳು ಧಾರ್ಮಿಕ ಕೇಂದ್ರವಾಗಿ ಮಾತ್ರ ಉಳಿಯದೆ ಶಿಕ್ಷಣದ ಕೇಂದ್ರವಾಗಿ ಕಾರ್ಯ ನಿರ್ವಹಿಸುತ್ತಿದ್ದವು. ವಿದ್ಯೆ, ಜ್ಞಾನ, ಮತ್ತು ಧರ್ಮಗಳ ಅಭ್ಯಾಸ ಹಾಗೂ ಪ್ರಸಾರದ ಕಾರ್ಯಗಳನ್ನು ನಡೆಸುವ ಕೇಂದ್ರಗಳಾದವು. ಇಂತಹ ಮಠಗಳ ನಿರ್ವಹಣೆಯ ಕಾರ್ಯಗಳಿಗೆ ವರ್ತಕ ಸಮುದಾಯಗಳು ಹಣಕಾಸಿನ ಸೌಲಭ್ಯಗಳನ್ನು ನೀಡುತ್ತಿದ್ದವು.

ಮಠಗಳು ಶಾಲೆ ಮತ್ತು ವಿದ್ಯಾರ್ಥಿ ನಿಲಯವಾಗಿಯೂ ಕಾರ್ಯವಹಿಸುತ್ತಿದ್ದವು. ಕೆಲವು ಮಠಗಳು ಶಾಲೆಗಳನ್ನು ಮಾತ್ರ ಹೊಂದಿದ್ದವು. ಈ ತೆರನಾದ ಎರಡು ಬಗೆಯ ಕಾರ್ಯವನ್ನು ನಿರ್ವಹಿಸುತ್ತಿದ್ದ ಬೆಂಗಳೂರು ಪ್ರದೇಶದ ಮಠಗಳು ಯಾವುವು? ಇಂಗ್ಲಿಶ್ ಶಿಕ್ಷಣದ ಶಾಲೆಗಳು ಸ್ಥಾಪನೆಯಾಗುವ ಮುಂಚೆಯೇ ಇವು ಸ್ಥಾಪನೆಯಾಗಿದ್ದು ಯಾವ ತೆರನಾದ ಶೈಕ್ಷಣಿಕ ಸೇವೆಯನ್ನು ನೀಡುತ್ತಿತ್ತು? ಎಂಬುದನ್ನು ಈ ಮೇಲಿನ ಕೋಷ್ಟಕದಿಂದ ಗುರುತಿಸಲಾಗಿದೆ.

ಧರ್ಮಶಾಲಾ ಮಠ ಹೆಸರೇ ತಿಳಿಸುವಂತೆ ಬೆಂಗಳೂರಿನ ಅತಿ ಪ್ರಾಚೀನವಾದ ಮಠವಾಗಿದ್ದು, ಧಾರ್ಮಿಕ ಶಿಕ್ಷಣವನ್ನು ನೀಡುತ್ತಿದ್ದ ಪ್ರಮುಖ ವಿದ್ಯಾ ಕೇಂದ್ರವಾಗಿತ್ತು. ಬಳೆಪೇಟೆಯ ಬಳಿ ಇರುವ ಕಲ್ಲುಮಠ ಇದನ್ನು ಕೂಲಿಮಠವೆಂದೂ ಕರೆಯಲಾಗಿದೆ. ಇಲ್ಲಿ ಗುರುಗಳನ್ನು (ಜಂಗಮರು) ಅಯ್ಯಗಳೆಂದು ಕರೆಯಲಾಗಿದ್ದು, ಮಠದ ಹಿಂಬದಿ ರಸ್ತೆಯನ್ನು ಜಂಗಮ ಮಾಸ್ತರಗಲ್ಲಿ ಎಂದು ೧೯೨೦ರಲ್ಲಿ ಕರೆಯುವುದು ರೂಢಿಯಲ್ಲಿತ್ತು. ಇವರ ಉದಾರ ಪೋಷಣೆಗೆ ಮೈಸೂರಿನ ಅರಸರಾದ ಮುಮ್ಮಡಿ ಕೃಷ್ಣರಾಜ ಒಡೆಯರು ಇನಾಂ(ದಾನ)ಗಳನ್ನು ನೀಡಿರುವುದನ್ನು ಮುಜರಾಯಿ ಇಲಾಖೆಯ ದಾಖಲೆಗಳು ಸ್ಪಷ್ಟಪಡಿಸುತ್ತವೆ.[೧೮] ಬೇಲಿಮಠ ಇದು ಬೆಂಗಳೂರು ಪ್ರದೇಶದ ಅತೀ ಪ್ರಾಚೀನ ಮಠಗಳಲ್ಲಿ ಒಂದಾಗಿದೆ. ಈ ಮಠವು ಸಹ ಶೈಕ್ಷಣಿಕ ಕೇಂದ್ರವಾಗಿತ್ತು. ಇದರ ನಿರ್ವಹಣೆಗೆ ಮುಮ್ಮಡಿ ಕೃಷ್ಣರಾಜ ಒಡೆಯರ್ ೧೮೨೫ರಲ್ಲಿ ಮಠದ ಕಾರ್ಯಗಳನ್ನು ಮೆಚ್ಚಿ ಹೊರಡಿಸುವ ನಿರೂಪದಲ್ಲಿ ಶಿಷ್ಯರು ಹಾಗೂ ವಟುಗಳು, ಗುರುಗಳೊಂದಿಗೆ ಇದ್ದು, ಜ್ಞಾನಾರ್ಜನೆ ಮಾಡುತ್ತಿದ್ದ ಅಂಶಗಳು ತಿಳಿದುಬರುತ್ತದೆ. ಇದೇ ಕಾರಣಕ್ಕಾಗಿ ಪ್ರಭುತ್ವ ಬೇಲಿಮಠಕ್ಕೆ ಇನಾಂ ನೀಡಿರುವ ವಿವರಗಳು ಸಿಗುತ್ತದೆ.[೧೯]

೧೯೨೫ರ ಹೊತ್ತಿಗೆ ಈ ಮಠದ ಶಾಲೆ ಮತ್ತು ವಿದ್ಯಾರ್ಥಿ ನಿಲಯವನ್ನು ನಿರ್ವಹಿಸುವುದಕ್ಕೆ ಒಂದು ಆಡಳಿತ ಮಂಡಳಿಯನ್ನು ರಚಿಸಿದ್ದು, ಅದರ ಅಧ್ಯಕ್ಷರು ಮತ್ತು ಸದಸ್ಯರು ನಗರದ ಪ್ರಮುಖ ವರ್ತಕರಾದ ಕೆ. ಪಿ. ಪುಟ್ಟಣ್ಣ ಚೆಟ್ಟರು, ದೇಶದ ಯಜಮಾನ್ ಬಸಪ್ಪ, ಶಂಕರಣ್ಣನವರ ಮಗ ಶಿವಪ್ಪ ಹಾಗೂ ತೂಬುಗೆರೆ ನಂಜಪ್ಪ ವಹಿಸಿಕೊಂಡಿದ್ದರು ಎಂಬ ವಿಚಾರಗಳು ಮಠಗಳ ಜ್ಞಾನಾರ್ಜನೆಯಲ್ಲಿ ವರ್ತಕರ ಪಾತ್ರದ ಮಹತ್ವವನ್ನು ತಿಳಿಸುತ್ತದೆ.[೨೦] ೧೯೪೦ರಲ್ಲಿ ಆಧುನಿಕತೆಗೆ ತಕ್ಕಂತೆ ಬೇಲಿಮಠದ ಶಾಲೆಯನ್ನು ಶ್ರೀ ಶಿವರುದ್ರಸ್ವಾಮಿ ವೇದ ಪಾಠಶಾಲಾವನ್ನು ಫ್ರೀ ಬೋರ್ಡಿಂಗ್ ಹೋಮ್ ಎಂದು ಮರುನಾಮಕರಣ ಮಾಡಲಾಯಿತು. ಹೀಗೆ ಬೇಲಿಮಠವು ಒಂದು ಶತಮಾನಕ್ಕಿಂತಲೂ ಹೆಚ್ಚಿನ ಕಾಲದವರೆಗೂ ಶಿಕ್ಷಣ ಸೇವೆಯನ್ನು ಸಲ್ಲಿಸುತ್ತಾ ಬಂದಿದೆ.

ಬೆಂಗಳೂರಿನ ಮಾಮೂಲುಪೇಟೆಯ ಜಂಗಮಮಠ ಅಥವಾ ಇಂದಿನ ಗಂಜಾಂಮಠ ಶಿಕ್ಷಣಕ್ಕೆ ಆದ್ಯತೆ ನೀಡಿತ್ತು. ಈ ಮಠದ ಮುಂದುವರೆದ ಶಾಖೆಯು ಗಾಂಧಿನಗರದ ತಿಪ್ಪಶೆಟ್ಟಿಮಠ

ಮತ್ತು ಜಂಗಮಮಠಕ್ಕೆ ಮಾಮೂಲುಪೇಟೆಯ ಪ್ರಮುಖ ವರ್ತಕರಾದ ಚನ್ನವೀರಶೆಟ್ಟರು ಮತ್ತು ಅವರ ಮಗ ದಿಗಂಬರಶೆಟ್ಟರು ೧೮೮೬ರ ಜುಲೈನಲ್ಲಿ ಮಠದ ಸ್ವಾಮಿಗಳಿಗೆ ಶಿವಾರ್ಪಿತವಾಗಿ ದಾನ ನೀಡಿದರು. ಅವರ ನೆರವಿನಿಂದ ಅದೇ ವರ್ಷ ಶ್ರೀ ಪ್ರಥಮಗಣ ಮನೋರಂಜಿತ ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಿದರು. ಹೀಗೆ ಯಶಸ್ವಿಯಾಗಿ ಬೆಳೆದ ಮಠದ ಶಾಲೆ ಮತ್ತು ವಿದ್ಯಾರ್ಥಿನಿಲಯವು ೧೯೬೫ರಲ್ಲಿ ನಿಂತುಹೋಯಿತು.[೨೧]

ಬೆಂಗಳೂರಿನ ಸರ್ಪಭೂಷಣ ಮಠವು ೧೮೯೪ರಲ್ಲಿ ಶ್ರೀ ಮದ್ವೀರಶೈವ ಸಂಸ್ಕೃತ ಧರ್ಮಪಾಠಶಾಲಾ ಎಂಬ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿತು. ಇದು ವಿದ್ಯಾರ್ಥಿ ನಿಲಯವನ್ನು ಸಹ ಹೊಂದಿತ್ತು. ೧೯೨೭ರಲ್ಲಿ ಶ್ರೀಸರ್ಪಭೂಷಣ ವೇದವಿದ್ಯಾ ಗುರುಕುಲವಾಸ ಎಂದು ಮರುನಾಮಕರಣ ಮಾಡಿದರು. ಈ ಪಾಠಶಾಲೆಯ ಪೋಷಕ ಸಮಿತಿಯ ಅಧ್ಯಕ್ಷರಾಗಿ ಪ್ರಬಲ ವರ್ತಕ ಸಮುದಾಯದ ವ್ಯಕ್ತಿಯಾದ ಕೆ. ಪಿ. ಪುಟ್ಟಣ್ಣಶೆಟ್ಟರು ವಹಿಸಿಕೊಂಡರು.[೨೨] ಇದರಿಂದಾಗಿ ಶಾಲೆಯ ಅಭಿವೃದ್ಧಿ ಕಾರ್ಯಗಳು ಚುರುಕುಗೊಂಡು ಬೆಳೆಯತೊಡಗಿತು.

ಮಹಾಂತರಮಠದ ಸಂಸ್ಕೃತ ಪಾಠಶಾಲೆಯು ೧೯೨೬ರಲ್ಲಿ ಚಿಕ್ಕಪೇಟೆಯ ಆರ್ಮುಗಂ ಮೊದಲಿಯಾರ್ ರಸ್ತೆಯ ವರ್ತಕರಾದ ಶಾಂತವೀರಪ್ಪ, ಎಸ್. ಬುಳ್ಳಪ್ಪನವರ ಅಪಾರ ಆರ್ಥಿಕ ನೆರವಿನಿಂದ ಆರಂಭಗೊಂಡಿತು. ದಾನಿಗಳು ನೀಡಿದ ಆಸ್ತಿಗಳ ನಿರ್ವಹಣೆ ಮತ್ತು ಪಾಠಶಾಲೆಯ ನಿರ್ವಹಣೆಗಾಗಿ ಒಂದು ಕಮಿಟಿ ರಚಿಸಲಾಯಿತು. ಇದರ ಸದಸ್ಯರುಗಳಾದ ಎಸ್. ಸಾವಂದಶೆಟ್ಟಿ, ದೇಶದ ಯಜಮಾನ್ ಗಂಗಣ್ಣ, ಗ್ರಂಥಿಗೆ ಅಂಗಡಿ ಗುರುಸಿದ್ದಪ್ಪ, ಮಂಡಿ ಎನ್. ರುದ್ರಯ್ಯ ಮೊದಲಾದವರು ವರ್ತಕ ಸಮುದಾಯದವರೆಂಬುದು ಗಮನಿಸಬೇಕಾದ ಅಂಶವಾಗಿದೆ.[೨೩] ಬೆಂಗಳೂರಿನ ಪ್ರಸಿದ್ಧ ವ್ಯಾಪಾರಿಯಿಂದ ಸ್ಥಾಪಿಸಲ್ಪಟ್ಟ ತಿಪ್ಪಶೆಟ್ಟಿಮಠವು ಸಹ ೨೦೦ವರ್ಷಗಳಿಂದ ವಿದ್ಯಾದಾನವನ್ನು ಮಾಡುತ್ತಿದೆ. ಶಾಲೆ, ವಿದ್ಯಾರ್ಥಿನಿಲಯ, ಗ್ರಂಥಾಲಯ, ಧಾರ್ಮಿಕ ಸಂಶೋಧನ ಕೇಂದ್ರವಾಗಿ ಇಂದು ಸಹ ಕಾರ್ಯ ನಿರ್ವಹಿಸುತ್ತಿದೆ.[೨೪]

ವಸಾಹತುಪೂರ್ವ ಮತ್ತು ವಸಾಹತು ಕಾಲಘಟ್ಟಗಳಲ್ಲಿ ಮಠಗಳ ಮೂಲಕ ವರ್ತಕ ಸಮುದಾಯಗಳು ತಮ್ಮ ಮತಬಾಂಧವರ ವಿದ್ಯಾರ್ಜನೆಗಾಗಿ ಅಪಾರ ಕೊಡುಗೆಯನ್ನು ಸಲ್ಲಿಸಿವೆ. ಬೆಂಗಳೂರು ಪ್ರದೇಶದಲ್ಲಿ ಇಂಗ್ಲಿಶ್ ಶಿಕ್ಷಣ ಮತ್ತು ಆಧುನಿಕತೆ ಹಾಗೂ ರಾಷ್ಟ್ರೀಯತೆಯ ಅಲೆ ಎದ್ದಾಗ ವರ್ತಕ ಸಮುದಾಯಗಳು ಈ ನಿಟ್ಟಿನಲ್ಲಿ ರಾಷ್ಟ್ರೀಯ ಶಿಕ್ಷಣವನ್ನು ನೀಡಲು ಸಂಸ್ಕೃತ ಮತ್ತು ವೇದಪಾಠಶಾಲಾಗಳನ್ನು ಮಠಗಳ ಮೂಲಕ ಸ್ಥಾಪಿಸಿ ಆ ಮೂಲಕ ವಿದ್ಯಾರ್ಜನೆಗೆ ಪ್ರೋತ್ಸಾಹಿಸಿರುವುದು ನೋಡಬಹುದಾಗಿದೆ. ಇಂತಹ ಮಠಗಳಲ್ಲಿ ಧರ್ಮಬೋಧನೆ, ಶಿವಯೋಗ,

ತರ್ಕ, ವೇದ, ವ್ಯಾಕರಣ, ಸಂಗೀತ, ಸಾಹಿತ್ಯ, ವೀರಶೈವ ತತ್ವ ಕುರಿತ ಕನ್ನಡ ಹಾಗೂ ಸಂಸ್ಕೃತಗಳನ್ನು ಬೋಧಿಸಲಾಗುತ್ತಿತ್ತು.[೨೫]

ಆಧುನಿಕ ಶಿಕ್ಷಣವಾದ ಇಂಗ್ಲಿಶ್ ಶಿಕ್ಷಣದ ಅರಿವು ಮೂಡಿ ಅದರ ಲಾಭವನ್ನು ಪಡೆಯಲು ಯತ್ನಿಸಿ ತಮ್ಮ ವೃತ್ತಿ ಬಾಂಧವರಿಗೆ ಇಂಗ್ಲಿಶ್ ಶಿಕ್ಷಣ ನೀಡುವ ಸಲುವಾಗಿ ಅನೇಕ ವರ್ತಕ ಸಮುದಾಯಗಳು ಶೈಕ್ಷಣಿಕ ಸಂಸ್ಥೆಗಳನ್ನು ಸ್ಥಾಪಿಸಿ ಮಹತ್ವದ ಕೊಡುಗೆಯನ್ನು ಸಹ ನೀಡಿದ್ದಾರೆ. ಅಂತಹ ಶಿಕ್ಷಣ ಸಂಸ್ಥೆಗಳನ್ನು ಕೆಳಗೆ ಚರ್ಚಿಸಲಾಗಿದೆ.

ಆ ನಿಟ್ಟಿನಲ್ಲಿ ೧೮–೧೯ನೇ ಶತಮಾನದಲ್ಲಿ ವಿದ್ಯಾ ದಾನಕ್ಕೆ ಸಹಕಾರಿಯಾಗಿ ನಗರದ ರೈಲ್ವೆ ನಿಲ್ದಾಣದ ಬಳಿ ಗುಬ್ಬಿ ತೋಟದಪ್ಪನವರು ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಿದರು. ಇದು ಕೇವಲ ಬಡ ವಿದ್ಯಾರ್ಥಿಗಳಿಗೆ ಮಾತ್ರ ನಿಲಯವಾಗಿರದೆ ಬೆಂಗಳೂರಿಗೆ ಬರುವ ಯಾತ್ರಿಗಳಿಗೂ ಉಚಿತ ವಸತಿ ನಿಲಯವಾಗಿ ಕಾರ್ಯ ನಿರ್ವಹಿಸುತ್ತಿತ್ತು. ಇಂದಿಗೂ ಸಹ ಈ ವಿದ್ಯಾರ್ಥಿ ನಿಲಯವು ಕಾರ್ಯ ನಿರ್ವಹಿಸುತ್ತಿದೆ. ಚಿಕ್ಕಪೇಟೆಯಲ್ಲಿ ಶ್ರೀಮತಿ ಟಿ.ಸಿ. ಗೌರಮ್ಮನವರು ೧೯೩೫ರಲ್ಲಿ ವೀರಶೈವ ಸ್ಟೂಡೆಂಟ್ಸ್ ಫ್ರೀ ಬೋರ್ಡಿಂಗ್ ಹೋಮ್, ೧೯೪೫ರಲ್ಲಿ ಬಸವನಗುಡಿಯ ಬಳಿ ಕೆ.ಪಿ. ಪುಟ್ಟಣ್ಣಚೆಟ್ಟಿರವರು ವೀರಶೈವ ಫ್ರೀ ಬೋರ್ಡಿಂಗ್ ಹೋಮ್ ಸ್ಥಾಪಿಸಿದರು.[೨೬]

ಇಂಗ್ಲಿಶ್ ಶಿಕ್ಷಣವನ್ನು ಹೆಚ್ಚಿನ ಸಂಖ್ಯೆಯಲ್ಲಿ ಪಡೆದ ವರ್ತಕ ಸಮುದಾಯದವರೆಂದರೆ ಅದು ಮೊದಲಿಯಾರ್ ವರ್ತಕ ಸಮುದಾಯವಾಗಿದೆ.[೨೭] ಇಂಗ್ಲಿಶ್ ಶಿಕ್ಷಣವನ್ನು ಪಡೆದು ವಸಾಹತು ನೀತಿಗೆ ಪೂರಕವಾಗಿ ಕಾರ್ಯ ನಿರ್ವಹಿಸಿದರು. ಅದರೊಂದಿಗೆ ತಮ್ಮ ವೃತ್ತಿ ಬಾಂಧವರನ್ನು ಮೇಲೆತ್ತುವ ಉದ್ದೇಶದಿಂದ ಮೊದಲಿಯಾರ್ ಸಮುದಾಯದವರು ವೈಯಕ್ತಿಕ ಕೊಡುಗೆಯನ್ನು ಶಿಕ್ಷಣ ಕ್ಷೇತ್ರಕ್ಕೆ ನೀಡಿದ್ದಾರೆ. ಅವರಲ್ಲಿ ಪ್ರಮುಖ ವ್ಯಕ್ತಿಗಳೆಂದರೆ ಅಣ್ಣಸ್ವಾಮಿ ಮೊದಲಿಯಾರ್(೧೮೪೮–೧೯೨೪). ಇವರ ಕಾಲಾವಧಿಯಲ್ಲಿ ಇವರಿಂದ ಸ್ಥಾಪಿತಗೊಂಡ ಚಾರಿಟೀಸ್ ಅನೇಕ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿ ಬಡ ವಿದ್ಯಾರ್ಥಿಗಳಿಗೆ ವಿದ್ಯಾರ್ಜನೆಯನ್ನು ಪಡೆಯಲು ಅವಕಾಶ ಕಲ್ಪಿಸಿದೆ.[೨೮] ಆರ್ಕಾಟ್ ನಾರಾಯಣಸ್ವಾಮಿ ಮೊದಲಿಯಾರ್( ೧೮೨೭–೧೯೧೦) ಶಿಕ್ಷಣ ಕ್ಷೇತ್ರಕ್ಕೆ ಇವರು ಅಪಾರ ಕೊಡುಗೆಯನ್ನು ನೀಡಿದ್ದಾರೆ. ೧೮೭೫ರಲ್ಲಿ ಅಲಸೂರಿನಲ್ಲಿ ಶಾಲೆಯನ್ನು ಸ್ಥಾಪಿಸಿದರು. ೧೮೮೬ರಲ್ಲಿ ಹುಡುಗಿಯರಿಗಾಗಿ ಶಾಲೆ ತೆರೆದರು. ೧೯೦೯ರಲ್ಲಿ ವಿದ್ಯಾರ್ಥಿ ನಿಲಯವನ್ನು ಸ್ಥಾಪಿಸಿದರು. ಅದಷ್ಟೇ ಅಲ್ಲದೆ, ಹುಡುಗರಿಗೆ ಉಚಿತ ಶಾಲೆ, ಟೆಕ್ನಿಕಲ್ ಸ್ಕೂಲ್ ಹೀಗೆ ಒಟ್ಟು ಇವರ ಚಾರಿಟೀಸಿನ ಅಧೀನದಲ್ಲಿ ೧೫ ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿದ್ದು ಇಂದಿಗೂ ಕೆಲವು ಸಂಸ್ಥೆಗಳ ಲಾಭವನ್ನು ಬಡ ವಿದ್ಯಾರ್ಥಿಗಳು ಪಡೆಯುತ್ತಿದ್ದಾರೆ. ಎ. ಎಸ್. ತಿರುವೇಂಗಡಸ್ವಾಮಿ ಮೊದಲಿಯಾರ್ ಗಾಂಧೀ ತತ್ವಗಳಿಂದ ಪ್ರೇರಿತರಾಗಿ ಕ್ವೀನ್ ರಸ್ತೆಯಲ್ಲಿ ಕಮಲಾಬಾಯಿ ಶಾಲೆಯನ್ನು ತೆರೆದರು.[೨೯]

ವೈಶ್ಯ ಸಮುದಾಯದ ವಿದ್ಯಾರ್ಥಿಗಳಿಗಾಗಿ ಬೆಂಗಳೂರಿನ ವಿದ್ಯಾರ್ಥಿನಿಲಯವನ್ನು ಭೂಪಾಲಮ್ ಸುಬ್ಬಯ್ಯ ಶೆಟ್ಟಿರವರು ಛತ್ರವನ್ನು ೧೯೧೦ರಲ್ಲಿ ನಾರಾಯಣಪಿಳ್ಳೆ ರಸ್ತೆಯಲ್ಲಿ ಸ್ಥಾಪಿಸಿದರು. ಅದೇ ರೀತಿ ಓಲೇಟಿ ರಾಮಚಂದ್ರರವರು ೧೯೩೭ರಲ್ಲಿ ವಿದ್ಯಾರ್ಥಿನಿಲಯವನ್ನು ವಿಶ್ವೇಶ್ವರಪುರದಲ್ಲಿ ಸ್ಥಾಪಿಸಿದರು. ಇಂದಿನ ಅವೆನ್ಯೂ ರಸ್ತೆಯಲ್ಲಿ ಚಿಂತಲಪಲ್ಲಿ ವೆಂಕಟರಾಮಶೆಟ್ಟಿರವರು ವಿದ್ಯಾರ್ಥಿನಿಲಯವನ್ನು ಸ್ಥಾಪಿಸಿದರು. ಶಂಕರಪುರದಲ್ಲಿ ಕರೂರ್ ಕೃಷ್ಣಮ್ಮ ಚಾರಿಟಿ ನಿಲಯ, ನಗರದ ಮುಖ್ಯಬೀದಿಯಲ್ಲಿ ಶಿವರಾಮಶೆಟ್ಟಿ ವೆಂಕಟಮ್ಮ ವಿದ್ಯಾರ್ಥಿ ನಿಲಯ, ನಗರದ ಮಾರ್ಕೆಟ್ ಬಳಿ ನರನಾರಾಯಣ ವಿದ್ಯಾರ್ಥಿ ನಿಲಯ, ಶ್ರೇಷಾದ್ರಿ ರಸ್ತೆಯ ಆರ್ಯ ವೈಶ್ಯ ಹಾಸ್ಟೆಲ್ ಇತ್ಯಾದಿ ವಿದ್ಯಾರ್ಥಿನಿಲಯಗಳನ್ನು ಬೆಂಗಳೂರು ನಗರದ ಪ್ರಮುಖ ಸ್ಥಳಗಳಲ್ಲಿ ಸ್ಥಾಪಿತವಾದವು. ಅದರ ಆಡಳಿತ ವ್ಯವಸ್ಥೆಯನ್ನು ಪೂರೈಸುತ್ತಾ ಕೆಲವು ವಿದ್ಯಾರ್ಥಿನಿಲಯಗಳು ಇಂದಿಗೂ ಸಹ ತಮ್ಮ ಗುರಿ ಸಾಧನೆಗಾಗಿ ಕಾರ್ಯ ಸಾಧನೆಯನ್ನು ಯಶಸ್ವಿಯಾಗಿ ನಿರ್ವಹಿಸುತ್ತಿರುವುದು ಗೌರವಾರ್ಹವಾಗಿದೆ.[೩೦] ೧೮೮೯ರಲ್ಲಿ ಸರ್ಕಾರದಿಂದ ನೋಂದಣಿಗೊಂಡ ಪೆದ್ದ ಪೇಟ ಆರ್ಯ ವೈಶ್ಯ ಮಂಡಲಿಯು ಹತ್ತು-ಹಲವು ಸಾರ್ವಜನಿಕ ಕಾರ್ಯಗಳನ್ನು ನಡೆಸಿಕೊಂಡು ಬಂದಿದೆ. ಜಾತಿ, ಮತ ತಾರತಮ್ಯವಿಲ್ಲದೇ ಸಂಸ್ಕೃತ ಪಾಠಶಾಲೆಯ ಮೂಲಕ ವಿದ್ಯಾ ದಾನ ಇತ್ಯಾದಿ ಸಮಾಜ ಸೇವಾ ಕಾರ್ಯಗಳನ್ನೂ ಮಾಡಿಕೊಂಡು ಬಂದಿದೆ. ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ಆರ್ಯವೈಶ್ಯ ಜನಾಂಗಕ್ಕೆ ವಿದ್ಯಾರ್ಥಿ ನಿಲಯದ ಸಂಪೂರ್ಣ ಜಾಗವನ್ನು ಬಳುವಳಿಯಾಗಿ ನೀಡಿದ್ದು ಶೇಷಾದ್ರಿ ರಸ್ತೆಯ ಬಡವಿದ್ಯಾರ್ಥಿ ಗಳಿಗೆ ವಿದ್ಯಾದಾನವನ್ನು ನೀಡಲು ಕಾರಣವಾಯಿತು. ಅಲ್ಲದೇ ವಿದ್ಯಾರ್ಥಿನಿಯರಿಗೆ ಓದಲು ಅಗತ್ಯವಾದ ಆರ್ಥಿಕ ನೆರವನ್ನು ಮತ್ತು ಪುಸ್ತಕ ಭಂಡಾರಗಳಿಗೆ ಉಪಯುಕ್ತ ಪುಸ್ತಕಗಳನ್ನು ಕೊಳ್ಳಲು ಧನ ಸಹಾಯ ನೀಡಲಾಗಿದೆ ಹಾಗೂ ಉನ್ನತ ವ್ಯಾಸಂಗಕ್ಕಾಗಿ ವಿದೇಶಗಳಿಗೆ ಹೋಗಲು ಅರ್ಹರಾದ ಆರ್ಯ ವೈಶ್ಯ ವಿದ್ಯಾರ್ಥಿಗಳಿಗೆ ಇಂದಿಗೂ ಸಹಕರಿಸುತ್ತಿದೆ.[೩೧]

ನಗರ್ತ ಸಮುದಾಯದವರು ಸಹ ಇದೇ ಗುರಿಯನ್ನಿಟ್ಟು ಬೆಂಗಳೂರು ನಗರದಲ್ಲಿ ಹಲವು ವಿದ್ಯಾರ್ಥಿ ನಿಲಯಗಳನ್ನು ಸ್ಥಾಪಿಸಿದರು. ಚಾಮರಾಜಪೇಟೆಯ ಬಿ. ಕೆ ಮರಿಯಪ್ಪನವರ ಸಾರ್ವಜನಿಕ ವಿದ್ಯಾರ್ಥಿನಿಲಯ ಇಂದಿಗೂ ಸಹ ಕಾರ್ಯ ನಿರ್ವಹಿಸುತ್ತಿದೆ.[೩೨] ಕೆಂಪೇಗೌಡ ಸರ್ಕಲ್‌ನ ಬಳಿ ಅಯೋಧ್ಯನಗರ ಶಿವಾಚಾರ್ಯ ವೈಶ್ಯ ವರ್ಧಕ ಸಂಘವನ್ನು ೧೯೩೨ರಲ್ಲಿ ನಗರ್ತ ಸಂಘವು ಸ್ಥಾಪಿಸಿತು.[೩೩] ಅದೇ ರೀತಿಯಲ್ಲಿ ನಗರ್ತಪೇಟೆಯ ಸಂಪಣ್ಣನವರ ೧೯೪೩ರಲ್ಲಿ ಸಂಪಣ್ಣ ಚಾರಿಟೀಸ್ ಹಾಸ್ಟೆಲ್ ಸಹ ಭೇದ ಭಾವವೆಣಿಸದೆ ಕಾರ್ಯನಿರ್ವಹಿಸುತ್ತಿದೆ.[೩೪]

ಗಾಣಿಗರ ಸಮುದಾಯದವರಾದ ದೊಡ್ಡಣ್ಣಶೆಟ್ಟರು ಮಾರ್ಕೆಟ್‌ನ ಬಳಿ ೧೯೦೫ರಲ್ಲಿ ಸ್ಥಾಪಿಸಿದ ದೊಡ್ಡಣ್ಣ ವಿದ್ಯಾರ್ಥಿನಿಲಯ, ಶಾಲೆಯು ಇಂದು ಕಾಲೇಜು ಹೊಂದಿದ್ದು ಇಂದಿಗೂ ಕಾರ್ಯ

ನಿತರವಾಗಿದೆ.[೩೫] ಜ್ಯೋತಿನಗರ ವೈಶ್ಯ ಶ್ರೀ ಜೆ.ಬಿ ಕೆಂಪಣ್ಣಶೆಟ್ಟರ ಧರ್ಮಸಂಸ್ಥೆಯು ಸತತವಾಗಿ ಈ ಕೆಳಕಂಡ ಧರ್ಮ ಕಾರ್ಯಗಳನ್ನು ನಡೆಸುತ್ತಾ ಬಂದಿರುವುದನ್ನು ಕಾಣಬಹುದಾಗಿದೆ.[೩೬]

* ವಿದ್ಯಾರ್ಥಿಗಳಿಗೆ ಮಾಸಿಕ ವಿದ್ಯಾರ್ಥಿ ವೇತನ
* ಎಲ್ಲಾ ವಿದ್ಯಾರ್ಥಿಗಳಿಗೂ ಪುಸ್ತಕಭತ್ಯೆ ಕೊಡಲಾಗುತ್ತದೆ.
* ಪ್ರತಿವರ್ಷ ವಾರ್ಷಿಕ ಸಮಾರಂಭದಲ್ಲಿ ವಿದ್ಯಾರ್ಥಿಗಳಿಗೆ ವಸ್ತ್ರ ಹಾಗೂ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದ ವಿದ್ಯಾರ್ಥಿಗಳಿಗೆ ಉತ್ತೇಜಕ ಬಹುಮಾನ ನೀಡಲಾಗುತ್ತಿದೆ.
* ಸಮುದಾಯದ ಅಶ್ತಕರಿಗೆ ಮಾಶಾಸನ ಮತ್ತು ವಸ್ತ್ರಗಳನ್ನು ನೀಡಲಾಗುತ್ತಿದೆ.
* ಮಹಿಳಾ ಪದವೀಧರರಿಗೆ ಗೌರವಧನ ಬಹುಮಾನ ನೀಡಲಾಗುತ್ತಿದೆ.
* ಡಾಕ್ಟರೇಟ್ ಪದವಿ ಪಡೆದ ಈ ಸಮುದಾಯದವರಿಗೆ ಸನ್ಮಾನ ಮಾಡಲಾಗುತ್ತಿದೆ.
* ಸಮುದಾಯದ ಗಣ್ಯವ್ಯಕ್ತಿಗಳಿಗೆ ಹಾಗೂ ವಿಶೇಷ ರೀತಿಯ ಸೇವೆ ಸಲ್ಲಿಸಿದವರಿಗೆ ಸನ್ಮಾನಿಸುವ ಕಾರ್ಯಕ್ರಮ ಸಹ ಹಮ್ಮಿಕೊಳ್ಳಲಾಗಿದೆ.

ಮರಾಠಾ ಸಮುದಾಯದವರು ೧೯೦೫ರಲ್ಲಿ ಸ್ಥಾಪಿಸಿರುವ ಬಿ. ವಿ. ಅಂಡ್ ಎಸ್. ಎಸ್. ಎಮ್. ಹಾಸ್ಟೆಲ್ ಮತ್ತು ಚಿಕ್ಕಪೇಟೆಯಲ್ಲಿರುವ ಭಾವಸಾರ ಕ್ಷತ್ರಿಯ ವಿದ್ಯಾರ್ಥಿನಿಲಯವನ್ನು ೧೯೨೫ರಲ್ಲಿ ಸ್ಥಾಪಿಸಿ ಬಡ ವಿದ್ಯಾರ್ಥಿಗಳಿಗೆ ವಸತಿ, ಊಟವನ್ನು ಒದಗಿಸುತ್ತಿದೆ.[೩೭]

ಗೊಲ್ಲರ ಸಮುದಾಯದವರು ನಗರ್ತಪೇಟೆಯ ರಸ್ತೆಯಲ್ಲಿ ೧೯೨೪ರಲ್ಲಿ ಸ್ಥಾಪಿಸಿರುವ ಯಾದವ ಸಂಘ ವಿದ್ಯಾರ್ಥಿನಿಲಯ ಉಚಿತ ಊಟ ಮತ್ತು ವಸತಿಯನ್ನು ಕಲ್ಪಿಸಿಕೊಡಲಾಗಿದೆ. ಇಂದಿಗೂ ಸಹ ಈ ಶೈಕ್ಷಣಿಕ ಸಂಘ ಸಂಸ್ಥೆಗಳು ಅದೇ ಹಾದಿಯಲ್ಲಿ ಮುಂದುವರಿಯುತ್ತಿವೆ.[೩೮]

ನೇಯ್ಗೆ ಸಮುದಾಯವು ಇದಕ್ಕೆ ಹೊರತು ಉಳಿದಿಲ್ಲ, ೧೯೨೪ರಲ್ಲಿ ದೇವಾಂಗ ಸಂಘದ ಹಾಸ್ಟೆಲ್, ೧೯೨೭ರಲ್ಲಿ ಮೈಸೂರು ಪದ್ಮಶಾಲಿ ಸಂಘ ಹಾಸ್ಟೆಲ್, ೧೯೨೮ರಲ್ಲಿ ಆಂಧ್ರ ದೇವಾಂಗ ಸಮುದಾಯದವರು ಆಂಧ್ರ ದೇವಾಂಗ ಸಂಘ ಹಾಸ್ಟೆಲ್‌ಗಳನ್ನು ಸ್ಥಾಪಿಸಿ ಶಿಕ್ಷಣ ಕ್ಷೇತ್ರಕ್ಕೆ ಕೊಡುಗೆಯನ್ನು ನೀಡಿದವು. ೧೯೦೬ರಲ್ಲಿ ವಿಶ್ವೇಶ್ವರಪುರದ ಒಕ್ಕಲಿಗರ ವಿದ್ಯಾರ್ಥಿನಿಲಯ ಸ್ಥಾಪನೆಯಾಯಿತು. ಆದರೆ ಇದು ಇಂದು ಅಸ್ತಿತ್ವದಲ್ಲಿ ಇಲ್ಲ. ಆದರೂ ಸಹ ಒಕ್ಕಲಿಗರ ಹಲವು ಶಿಕ್ಷಣ ಸಂಸ್ಥೆಗಳ ಸಮೂಹವು ಇಂದು ಬೆಂಗಳೂರು ನಗರದಲ್ಲಿ ಸ್ಥಾಪಿಸಲ್ಪಟ್ಟಿದ್ದು ಸಮಾಜಕ್ಕೆ ಮಹತ್ವದ ಕೊಡುಗೆಯನ್ನು ಸಲ್ಲಿಸುತ್ತಿದೆ.[೩೯]

ತಿಗಳರ ಸಮುದಾಯದ ಎಸ್. ಎಂ. ಮುನಿವೆಂಕಟಪ್ಪನವರು ಪೂರ್ಣಿಮ ಚಿತ್ರಮಂದಿರದ ಬಳಿ ೧೯೨೬ರಲ್ಲಿ ವಹ್ನಿ ಕುಲಕ್ಷತ್ರಿಯ ವಿದ್ಯಾರ್ಥಿನಿಲಯವನ್ನು ಸ್ಥಾಪಿಸಿದರು. ಇಂದು ಕೆ.ಟಿ.ಎಸ್.ವಿ ಶಿಕ್ಷಣ ಸಂಸ್ಥೆಯ ಸಮೂಹವು ಬೆಂಗಳೂರಿನ ವಿವಿಧ ಭಾಗಗಳಲ್ಲಿ ಬಡ ವಿದ್ಯಾರ್ಥಿಗಳಿಗೆ ವಿದ್ಯಾರ್ಜನೆಯನ್ನು ನೀಡುತ್ತಿದೆ.[೪೦] ಹೀಗೆ ವಿವಿಧ ವರ್ತಕ ಸಮುದಾಯಗಳು ಶಿಕ್ಷಣವನ್ನು ತಮ್ಮ ಕುಲಬಾಂಧವರಿಗಾಗಿ ಸ್ಥಾಪಿಸಿ ಅವರಲ್ಲಿ ಬದಲಾದ ಸಾಮಾಜಿಕ, ಆರ್ಥಿಕ ಕ್ಷೇತ್ರಕ್ಕೆ ತಕ್ಕಂತೆ ಮಾರ್ಪಾಡನ್ನುಂಟುಮಾಡುವ ಸಲುವಾಗಿ ಸ್ಥಳೀಯ ಮತ್ತು ಇಂಗ್ಲಿಶ್ ಶಿಕ್ಷಣವನ್ನು ನೀಡಲು ಪ್ರಯತ್ನಿಸಿದವು. ಫಲವಾಗಿ ಬದಲಾದ ಸನ್ನಿವೇಶಕ್ಕೆ ತಕ್ಕಂತೆ ಸಾರ್ವಜನಿಕ ಕ್ಷೇತ್ರಗಳಲ್ಲಿ ವೃತ್ತಿಯನ್ನು ಆರಿಸಿಕೊಳ್ಳಲು ಸಾಧ್ಯವಾಯಿತು.

ಕೆಲವು ವರ್ತಕ ಸಮುದಾಯಗಳು ಸಂಘ-ಸಂಸ್ಥೆಗಳನ್ನು ಸ್ಥಾಪಿಸುವ ಮೂಲಕ ವೃತ್ತಿಪರತೆಯಲ್ಲಿ ಕೌಶಲ್ಯತೆಯನ್ನು ಮೂಡಿಸುವ ಸಲುವಾಗಿ ವಿವಿಧ ವೃತ್ತಿಪರ ತರಬೇತಿಗಳಾದ ಡ್ರಾಯಿಂಗ್, ಪೇಯಿಂಟಿಂಗ್, ಮರಗೆಲಸ, ಬಟ್ಟೆ ಹೊಲಿಯುವುದು, ಬಟ್ಟೆ ನೆಯ್ಯುವುದು ಮುಂತಾದ ವೃತ್ತಿಪರ ಕೆಲಸಗಳನ್ನೂ ನೀಡಲು ಮುಂದಾದವು. ನಾರಾಯಣ ಮೊದಲಿಯಾರ್,[೪೧] ದೊಡ್ಡಣ್ಣ,[೪೨] ಕ್ರೈಸ್ತ ಮಿಷನರಿಗಳು, ಬ್ರಿಟಿಶ್ ಪ್ರಭುತ್ವ ಈ ಹಿನ್ನೆಲೆಯ ಕಾರ್ಯಕ್ರಮಗಳನ್ನು ಹಾಕಿಕೊಂಡು ಬೆಂಗಳೂರಿನ ವಿವಿಧ ಉತ್ಪಾದನಾ ವರ್ತಕ ಸಮುದಾಯಗಳಿಗೆ ಶಿಕ್ಷಣವನ್ನು ನೀಡಿದ್ದನ್ನು ಸ್ಮರಿಸಬಹುದಾಗಿದೆ. ಉದಾಹರಣೆಗೆ, ಬೆಂಗಳೂರು ಜೈಲಿನಲ್ಲಿದ್ದ ಕೈದಿಗಳಿಗೆ ತರಬೇತಿಯನ್ನು ನೀಡಿ ಅವರು ಉತ್ಪಾದಿಸುತ್ತಿದ್ದ ವಿವಿಧ ರೀತಿಯ ಕಂಬಳಿ, ಮರದ ವಸ್ತುಗಳು, ಜವಳಿ ಉತ್ಪನ್ನಗಳಿಗೆ ಯುರೋಪಿನಲ್ಲಿ ಬೇಡಿಕೆಯಿದ್ದವು ಎಂಬ ವಿಚಾರವು ವಸಾಹತು ಪ್ರಭುತ್ವ ಈ ನಿಟ್ಟಿನಲ್ಲಿ ಎಷ್ಟು ಗಮನಹರಿಸಿತ್ತು ಎಂಬ ವಿಚಾರ ತಿಳಿಯುತ್ತದೆ.[೪೩]

## ೭.೩. ಧಾರ್ಮಿಕ ನಂಬಿಕೆಗಳು ಹಾಗೂ ಆಚರಣೆಗಳು

ಹತ್ತು ಹಲವು ಪ್ರದೇಶಗಳಿಂದ ಜನರು ಹಲವು ಉದ್ದೇಶಗಳಿಂದ ವಲಸೆ ಬಂದು ನಗರಗಳಲ್ಲಿ ನಾನಾ ಕಾರಣಗಳಲ್ಲಿ ನೆಲೆ ನಿಂತು ತಾವು ನೆಲೆಸಿದ ಪ್ರದೇಶಗಳಲ್ಲಿ ತಮ್ಮದೇ ಆದ ಆಚರಣೆಗಳನ್ನು, ಆರಾಧನೆಗಳನ್ನು, ನಂಬಿಕೆ ಸಾಂಪ್ರದಾಯಗಳನ್ನು ಮುಂದುವರಿಸಿಕೊಂಡು ಬರುತ್ತಾರೆ. ಬಹುಮುಖಿ ಸಂಸ್ಕೃತಿಯಿಂದ ಕೂಡಿದ ನಗರಗಳಲ್ಲಿ ಜನಪದ ಪ್ರಕಾರದ ಗುಣಗಳಾದ ಪರಸ್ಪರ ಸಹಕಾರ, ನಡೆ-ನುಡಿ, ಹೊಂದಾಣಿಕೆ, ಸ್ವೀಕರಣ, ಸಂಸ್ಕೃತೀಕರಣ, ಪುನರುಜ್ಜೀವನ ಇನ್ನಿತರ ಪ್ರಕ್ರಿಯೆಗಳು ನಗರಕ್ಕೆ ತನ್ನದೇ ಆದ ಒಂದು ಹೊಸ ಸ್ವರೂಪವನ್ನು ನೀಡುತ್ತದೆ. ಇದಕ್ಕೆ ಬೆಂಗಳೂರು ಪ್ರದೇಶವೇನೂ ಹೊರತಲ್ಲ. ಇಂದು ಅಂತಾರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಿಕೊಂಡಿದ್ದರೂ ಸಹ ಹಳ್ಳಿಯ ಸ್ವರೂಪವನ್ನು

ಇಂದಿಗೂ ಉಳಿಸಿಕೊಂಡಿದೆ ಎಂದು ಜಾನಕಿ ನಾಯರ್ ಹೇಳಿಕೆಯಲ್ಲಿ ಎಷ್ಟು ಸತ್ಯವಿದೆ ಎಂದು ತಿಳಿಯುತ್ತದೆ.[೪೪] ಇದಕ್ಕೆ ಹಲವು ಅಂಶಗಳು ಪ್ರಮುಖ ಕಾರಣವಾಗಿರುತ್ತದೆ. ಅವುಗಳಲ್ಲಿ ಉತ್ಪಾದನಾ ಮತ್ತು ವಿನಿಮಯ ವರ್ತಕ ಸಮುದಾಯಗಳ ಪಾತ್ರವನ್ನು ಮರೆಯುವಂತಿಲ್ಲ. ಕಾರಣ ನಗರಗಳಲ್ಲಿ ಕಂಡುಬರುವ ಜನಪದ ಪ್ರಕಾರಗಳು ಉತ್ಪಾದನಾ ಸಂಬಂಧಿಯಾದುದು. ಉತ್ಪನ್ನಗಳನ್ನು ಗ್ರಾಹಕರಿಗೆ ತಲುಪಿಸುವುದಕ್ಕಾಗಿ ಉತ್ಪಾದಕರು ಹೂಡುವ ಅನೇಕ ತಂತ್ರಗಳಲ್ಲಿ ಜಾಹೀರಾತುಗಳು ಮುಖ್ಯವಾದವುಗಳು. ಇದರ ಹಿನ್ನೆಲೆಯಲ್ಲಿಯೇ ಜಾತ್ರೆ, ಧಾರ್ಮಿಕ ಆಚರಣೆಗಳು ರೂಢಿಗೆ ಬಂದವು ಎಂಬ ಸೂಕ್ಷ್ಮ ಗ್ರಹಿಕೆಯನ್ನು ತಳ್ಳಿಹಾಕುವಂತದ್ದಲ್ಲ. ಬೆಂಗಳೂರು ಪ್ರದೇಶದಲ್ಲಿ ನೆಲೆಸಿರುವ ಅನೇಕ ವರ್ತಕ ಸಮುದಾಯಗಳು ತಮ್ಮದೇ ಆದ ಧಾರ್ಮಿಕ ನಂಬಿಕೆ ಹಾಗೂ ಆಚರಣೆಗಳನ್ನು ಹೊಂದಿದ್ದಾರೆ. ವಲಸೆ ಬಂದ ವರ್ತಕರು ತಾವು ತಮ್ಮ ಸ್ಥಳಗಳಲ್ಲಿ ಆಚರಿಸುವ ಆಚರಣೆಗಳನ್ನೇ ಇಲ್ಲಿ ಆಚರಿಸುತ್ತಾರೆ. ಈ ಪ್ರದೇಶದಲ್ಲಿ ಅನೇಕ ಹೊಸ ಆಚರಣೆ ಮತ್ತು ನಂಬಿಕೆಗಳು ಆವರಿಸುವುದರಿಂದ ಹೊಸ ಸಂಸ್ಕೃತಿಯ ಉಗಮಕ್ಕೆ ಈ ವರ್ತಕ ಸಮುದಾಯಗಳು ಕಾರಣಗಳಾದವು.

### ಬೆಂಗಳೂರು ಕರಗ

ಕ್ರಿ. ಶ ೧೨ನೆಯ ಶತಮಾನಕ್ಕೂ ಹಿಂದೆಯೇ ತಮಿಳುನಾಡಿನಿಂದ ವಲಸೆ ಬಂದ ಉತ್ಪಾದನಾ ವರ್ತಕ ಸಮುದಾಯವೆಂದರೆ ತಿಗಳ ಸಮುದಾಯವಾಗಿದೆ. ಇವರು ತೋಟಗಾರಿಕೆಯಲ್ಲಿ ಹೆಸರುವಾಸಿಯಾಗಿರುವ ಸಮುದಾಯವಾಗಿದೆ. ತಿಗಳರು ಪ್ರತಿ ವರ್ಷ ಯುಗಾದಿಯ ನಂತರ ಬರುವ ಚೈತ್ರಮಾಸದ ಹುಣ್ಣಿಮೆಯಂದು ಆರಂಭವಾಗಿ ಬಿದಿಗೆಯಂದು ಕೊನೆಗೊಳ್ಳುವ ಕರಗ ಆಚರಣೆಗಳು ಹನ್ನೆರಡು ದಿನಗಳ ಕಾಲ ನಡೆಯುತ್ತವೆ. ಇದು ದ್ರಾವಿಡ ಜನಾಂಗದ ಬಳುವಳಿ. ಆದರೆ ಕಾಲಾಂತರದಲ್ಲಿ ಪುರೋಹಿತಶಾಹಿಯ ಪಾಲಾಗಿರುವುದನ್ನು ಗುರುತಿಸಬಹುದಾಗಿದೆ. ಕರಗ ಎಂದರೆ ಗಡಿಗೆ ಅಥವಾ ಕುಂಭ ಎಂದರ್ಥ. ಜನಪದರು ಆಚರಿಸುವ ಗ್ರಾಮದೇವತೆಗಳ ಸಂಸ್ಕೃತಿಯ ಬಹು ಮುಖ್ಯ ಲಕ್ಷಣಗಳಲ್ಲಿ ಒಂದಾಗಿದೆ. ಗ್ರಾಮೀಣ ಜನರು ಗ್ರಾಮದೇವತೆಯನ್ನು ಆಚರಿಸುವುದು ಸುಗ್ಗಿಯ ನಂತರದ ದಿನಗಳಲ್ಲಿಯೇ. ಅಂದರೆ ಸಮೃದ್ಧವಾದ ಫಸಲು ಕೈಗೂಡಿದುದರ ಆಶಯವಾಗಿದೆ. ಹಿಂದೆ ಮಾತೃದೇವತೆಗಳ ಸಮೃದ್ಧಿಯ ಹಬ್ಬಗಳನ್ನು ಸಮುದಾಯಗಳು ಸಂಭ್ರಮದಿಂದ ಆಚರಿಸುತ್ತಿದ್ದರೆಂದು ಡಿ. ಡಿ. ಕೊಸಾಂಬಿ ಉಲ್ಲೇಖಿಸುತ್ತಾರೆ.[೪೫] ಇಂತಹ ಹಬ್ಬಗಳಲ್ಲಿ ಗಡಿಗೆಯನ್ನು ಅಂದರೆ ಕಳಶವನ್ನು ಮಾತೃದೇವತೆಯ ಸಂಕೇತವಾಗಿ ಪೂಜಿಸುತ್ತಿದ್ದರೆಂದು ಕೊಸಾಂಬಿಯವರು ಮುಂದುವರಿದು ಹೇಳಿದ್ದಾರೆ. ಈ ಹಿನ್ನೆಲೆಯಲ್ಲಿ ತೋಟಗಾರಿಕೆಯನ್ನು ತಮ್ಮ ವೃತ್ತಿಯನ್ನಾಗಿಸಿ ಕೊಂಡಿರುವ ತಿಗಳರು ಕರಗಶಕ್ತಿಯನ್ನು ಆರಾಧಿಸುತ್ತಿದ್ದು ಸಮೃದ್ಧಿಯ ಕಾರಣದಿಂದಲೇ ಹೊರತು ಅನ್ಯ ಉದ್ದೇಶದಿಂದಲ್ಲ ಎಂಬುದು ಇದರಿಂದ ತಿಳಿಯುತ್ತದೆ. ರಾಜ್ಯ ಮಟ್ಟದಲ್ಲಿ ಬೆಂಗಳೂರು ಕರಗ

ಎಂದೇ ಪ್ರಸಿದ್ಧವಾಗಿದೆ. ಬೆಂಗಳೂರು ಪ್ರದೇಶದ ಕರಗವು ಇನ್ನಿತರ ಪ್ರದೇಶಗಳ ಉತ್ಸವಗಳಿಗಿಂತ ಭಿನ್ನವಾಗಿದೆ. ವಿವಿಧ ಧರ್ಮಗಳ ಸಮ್ಮಿಲನಗೊಂಡು ಬೆಂಗಳೂರು ಕರಗವನ್ನು ಆಚರಿಸಲಾಗುತ್ತಿರುವುದು ಬೆಂಗಳೂರು ಕರಗದ ವಿಶೇಷತೆ ಎಂದರೆ ತಪ್ಪಾಗಲಾರದು.

**ಕಾಮನ ಹಬ್ಬ**

ಬೆಂಗಳೂರಿನ ನಗರ್ತಪೇಟೆಯಲ್ಲಿರುವ ನಗರೇಶ್ವರ ದೇವಾಲಯವು ಶತಮಾನದಷ್ಟು ಹಳೆಯದು, ಕಳೆದ ಆರೇಳು ದಶಕಗಳಿಂದಲೂ ಕಾಮನಹಬ್ಬದಂದು ಕಾಮನನ್ನು ಅಂದರೆ ಮನ್ಮಥನನ್ನು ಪೂಜಿಸುವ ಪರಂಪರೆಯನ್ನು ಈ ನಗರೇಶ್ವರ ದೇವಾಲಯದಲ್ಲಿ ನಗರ್ತರು ಮತ್ತು ಜ್ಯೋತಿನಗರ ಪೇಟೆಯಲ್ಲಿ ಗಾಣಿಗ ಸಮುದಾಯದವರು ಜೊತೆಗೂಡಿ ಆಚರಿಸುತ್ತಾರೆ. ಕಾಮನ ಹಬ್ಬವನ್ನು ಹಲವಾರು ವಿಶೇಷ ಅಲಂಕಾರದಿಂದ ವೈಭವವಾಗಿ ಪೂಜಿಸಿ ಜಂಗೀವೇಷ ಕಾರ್ಯಕ್ರಮ ನಡೆಸುತ್ತಿದ್ದು ಅಖಿಲ ಕರ್ನಾಟಕ ಮಟ್ಟದಲ್ಲಿ ಬಹುಜನಪ್ರಿಯ ಹಬ್ಬವೆಂದು ಪ್ರಸಿದ್ಧಿಯಾಗಿದೆ. ಅಲ್ಲದೆ ಜಾನಪದ ಕಲೆಗಳಲ್ಲಿ ಒಂದಾದ ತುರಾಕಲ್ಕಿ ಶೈಲಿಯ ಪ್ರಸಿದ್ಧ ಲಾವಣಿಗಾರರು ಗಾಣಿಗರೆಂದು ತಿಳಿದುಬಂದಿದೆ.[೪೬] ಬೆಂಗಳೂರು ಪ್ರದೇಶಕ್ಕೆ ನಗರ್ತರು ಮತ್ತು ಗಾಣಿಗರು ಒಟ್ಟಾಗಿ ಬಂದರು ಎಂಬ ವಿಚಾರವನ್ನು ೧೮೯೭ರ ಜನಗಣತಿಯಲ್ಲಿ ವಿವರಿಸಲಾಗಿದೆ.[೪೭]

**ಬೆಂಗಳೂರು ಕಡಲೆಕಾಯಿ ಪರಿಷೆ**

ಕೃಷಿ ಪ್ರಧಾನ ಉತ್ಪನ್ನದ ಸಂಸ್ಕೃತಿಯ ಹಿನ್ನೆಲೆಯಲ್ಲಿ ಕಂಡುಬರುವ ವಿಶೇಷ ಆಚರಣೆ ಎಂದರೆ ಅದು ಬೆಂಗಳೂರಿನಲ್ಲಿ ಆಚರಿಸಲ್ಪಡುವ ಕಡಲೆಕಾಯಿ ಪರಿಷೆ. ಇದರ ಆಚರಣೆಯ ಆರಂಭಿಕ ಕಾಲ ಶತಮಾನಗಳ ಹಿಂದಿನದು. ಕಡಲೆಕಾಯಿ ಪರಿಷೆ ಅಥವಾ ದೊಡ್ಡ ಬಸವಣ್ಣನ ಜಾತ್ರೆ ನಡೆಯುವ ಸ್ಥಳವು ಸುಂಕೇನಹಳ್ಳಿ. ಇಂದು ಇದನ್ನು ಬಸವನಗುಡಿ ಎಂದು ಕರೆಯಲಾಗಿದೆ. ವಸಾಹತು ಕಾಲದಲ್ಲಿ ಹೊಲ ಬಯಲುಗಳ ಫಲವತ್ತಾದ ಪ್ರದೇಶವಾಗಿದ್ದು ವಾಣಿಜ್ಯ ಬೆಳೆಯಾದ ಕಡಲೆಕಾಯಿಯನ್ನು ವಿಶೇಷವಾಗಿ ಬೆಳೆಯುತ್ತಿದ್ದರು. ಆದರೆ ಬಸವಣ್ಣನ ಹಾವಳಿಯಿಂದ ಕಂಗೆಟ್ಟ ರೈತರು ಈ ಸಮಸ್ಯೆಯಿಂದ ಪಾರಾದರೆ ಬೆಳೆದ ಕಡಲೆಕಾಯಿಯಲ್ಲಿ ಒಂದು ಇಂತಿಷ್ಟು ಎಂದು ತಂದು ದೇವರಿಗೆ ಹರಿಕೆಯನ್ನು ಮಾಡಿದುದರ ಫಲವಾಗಿ ಸಮಸ್ಯೆಯಿಂದ ಹೊರಬಿದ್ದರು. ಅಂದಿನಿಂದ ಪ್ರತಿ ವರ್ಷ ರೈತರು ತಾವು ಬೆಳೆದ ಕಡಲೆಕಾಯಿಯನ್ನು ಈ ಸ್ಥಳದಲ್ಲಿರುವ ಗಣೇಶ ಮತ್ತು ಬಸವಣ್ಣನ ಗುಡಿಗೆ ತಂದು ಒಪ್ಪಿಸುವ ವಾಡಿಕೆ ಬೆಳೆಯಿತು. ಮುಂದೆ ಇದು ಪರಿಷೆಯಾಗಿ ರೂಪಾಂತರಗೊಂಡು ಜಾತ್ರೆಯನ್ನು ಬೆಂಗಳೂರಿನ ಸುತ್ತಮುತ್ತಲ ಊರಿನ ರೈತರು ತಾವು ಬೆಳೆದ ಕಡಲೆಕಾಯಿಯನ್ನು ರಾಶಿಗಟ್ಟಲೆ ತಂದು ಈ ಪರಿಷೆಯಲ್ಲಿ ಮಾರಾಟ ಮಾಡುವುದು ವಿಶೇಷವಾಗಿದೆ.

ಬರಗೂರು ರಾಮಚಂದ್ರಪ್ಪನವರು ತಿಳಿಸುವಂತೆ "ನಗರದಲ್ಲಿ ಆಧುನಿಕ ಉತ್ಪಾದನಾ ವಿಧಾನದ ಫಲಗಳಾದ ವಿವಿಧ ವಸ್ತುಗಳು ಪ್ರದರ್ಶನ ಪರಿಷೆಗಳು ನಡೆಯುತ್ತಿರುವಾಗ, ವ್ಯವಸಾಯೋತ್ಪಾನೆಯ ಫಲವಾದ ಕಡಲೆಕಾಯಿ ಪರಿಷೆ, ನಗರದ ಒಂದು ಗ್ರಾಮೀಣ ನೆನಪಾಗಿ ಕಾಣಿಸಿಕೊಳ್ಳುತ್ತದೆ."[೪೮] ಎಂಬ ಮಾತಿನಲ್ಲಿ ಸತ್ಯಾಂಶವಿದೆ.

### ಇನ್ನಿತರ ವರ್ತಕ ಸಮುದಾಯಗಳ ಧಾರ್ಮಿಕ ಸಂಸ್ಥೆಗಳು ಮತ್ತು ಕೊಡುಗೆ

ಬೆಂಗಳೂರು ಪ್ರದೇಶದಲ್ಲಿ ನೆಲೆಸಿರುವ ಅನೇಕ ವರ್ತಕ ಸಮುದಾಯಗಳಲ್ಲಿ ಪ್ರಮುಖರೆಂದರೆ ಗಾಣಿಗರು. ಇವರು ತಮ್ಮದೇ ಆದ ಧಾರ್ಮಿಕ ಆಚರಣೆಗಳನ್ನು ಆಚರಿಸುತ್ತಾರೆ. ಇವರು ಧಾರ್ಮಿಕ ಆಚರಣೆಯಲ್ಲಿ ನಂಬಿಕೆವುಳ್ಳವರಾಗಿದ್ದಾರೆ. ಜ್ಯೋತಿನಗರ ವೈಶ್ಯ ಶ್ರೀ ಜೆ. ಬಿ ಕೆಂಪಣ್ಣಶೆಟ್ಟರ ಧರ್ಮಸಂಸ್ಥೆ, ಶ್ರೀ ಲ. ನ. ಧರ್ಮಸಂಸ್ಥೆ, ಶ್ರೀಮತಿ ವೆಂಕಟಮ್ಮ ಶ್ರೀ ಚಿಕ್ಕತಿಮ್ಮರಾಯಪ್ಪನವರ ಧರ್ಮಸಂಸ್ಥೆ, ಶ್ರೀಮತಿ ಸಂಪಗಮ್ಮ ಧರ್ಮಸಂಸ್ಥೆ, ಯಜಮಾನ್ ಶ್ರೀ ನಂಜುಂಡಪ್ಪ ಧರ್ಮಸಂಸ್ಥೆ ಇತ್ಯಾದಿ ಹತ್ತು-ಹಲವು ಸಂಸ್ಥೆಗಳು ಇವೆ. ಬೆಂಗಳೂರು ಪ್ರದೇಶದ ಅತಿ ಪ್ರಾಚೀನ ದೇವಾಲಯಗಳಾದ ಶ್ರೀ ಜ್ಯೋತಿ ನಗರೇಶ್ವರಸ್ವಾಮಿ ಮತ್ತು ಶ್ರೀ ಚೆನ್ನಕೇಶವಸ್ವಾಮಿ, ಬನ್ನೇರುಘಟ್ಟದ ಶ್ರೀ ಚಂಪಕಧಾಮ ಸ್ವಾಮಿ, ವಸಂತಪುರದ ಶ್ರೀ ವಲ್ಲಭರಾಯಸ್ವಾಮಿ, ಬಳೇಪೇಟೆ ಶ್ರೀ ನರಸಿಂಹಸ್ವಾಮಿ, ಅವೆನ್ಯೂ ರಸ್ತೆ ಬಳಾಪುರಪೇಟೆಯ ಶ್ರೀ ರಂಗನಾಥಸ್ವಾಮಿ, ಜ್ಯೋತಿನಗರ ಪೇಟೆಯ ಶ್ರೀ ಜ್ಯೋತಿನಗರೇಶ್ವರಸ್ವಾಮಿ, ಶ್ರೀ ಚನ್ನಕೇಶವಸ್ವಾಮಿ ಮತ್ತು ಕೋಟೆ ಶ್ರೀ ವೆಂಕಟರಮಣಸ್ವಾಮಿ ದೇವಾಲಯಗಳಲ್ಲಿ ನಡೆಸುವ ಅಂಗಉತ್ಸವ, ಕಲ್ಯಾಣೋತ್ಸವ ಮತ್ತು ರಥೋತ್ಸವದ ಸಂದರ್ಭದಲ್ಲಿ ಗಾಣಿಗ ಸಮುದಾಯವರಿಂದ ಭಾಗವಂತಿಗೆ ಸೇವೆ ಸಹಿತ ಸಂತರ್ಪಣೆಯನ್ನು ಮಾಡಿಕೊಂಡು ಬಂದಿರುತ್ತಾರೆ. ದೇವಾಲಯಕ್ಕೆ ಬೇಕಾಗುವ ಎಣ್ಣೆ ಹಾಗೂ ಪ್ರತಿ ಮಾಸವು ಶ್ರೀ ಚನ್ನಕೇಶವಸ್ವಾಮಿ, ಶ್ರೀ ಜ್ಯೋತಿನಗರೇಶ್ವರಸ್ವಾಮಿ, ಶ್ರೀ ಲಕ್ಷ್ಮೀನಾರಾಯಣಸ್ವಾಮಿ ಮತ್ತು ಶ್ರೀ ಪ್ರಸನ್ನ ಆಂಜನೇಯಸ್ವಾಮಿ ದೇವಸ್ಥಾನದ ಅರ್ಚಕರಿಗೆ ಸಂಭಾವನೆ ಅಂದಿನಿಂದ ಇಂದಿನವರೆಗೂ ನೀಡಲಾಗುತ್ತಿದೆ.[೪೯]

ಬೆಂಗಳೂರು ಪ್ರದೇಶದಲ್ಲಿ ನೆಲೆಸಿರುವ ಮತ್ತೊಂದು ಪ್ರಮುಖ ಸಮುದಾಯವೆಂದರೆ ಶೆಟ್ಟಿಗಳು. ೧೮೮೯ರಲ್ಲಿ ಸರ್ಕಾರದಿಂದ ನೋಂದಣಿಗೊಂಡ ಪೆದ್ದ ಪೇಟ ಆರ್ಯ ವೈಶ್ಯ ಮಂಡಲಿಯು ಹತ್ತು-ಹಲವು ಧಾರ್ಮಿಕ ಸಂಸ್ಥೆಗಳನ್ನು ಸ್ಥಾಪಿಸಿ ಧಾರ್ಮಿಕ ಕೊಡುಗೆ ನೀಡುವುದರ ಜೊತೆಗೆ ನಗರದ ಪೇಟೆಗಳನ್ನು ಪ್ರಮುಖ ಆಚರಣೆಯನ್ನು ಮುಂದುವರಿಸಿಕೊಂಡು ಬರುತ್ತಿದೆ. ನಗರದ ಪೇಟೆಯಲ್ಲಿರುವ ಶ್ರೀ ಪ್ರಸನ್ನ ವೆಂಕಟರಮಣಸ್ವಾಮಿ ದೇವಸ್ಥಾನವನ್ನು ರಾಮಯ್ಯ ಶ್ರೇಷ್ಠಿ ಸ್ಥಾಪಿಸಿದ್ದು ದೇವಾಲಯದ ಅಕ್ಕ-ಪಕ್ಕದಲ್ಲಿ ಚಿಂತಲಪಲ್ಲಿ ವೆಂಕಟಮುನಯ್ಯ ಶ್ರೇಷ್ಠಿ ಶ್ರೀ ರಂಗನಾಥಸ್ವಾಮಿಯನ್ನೂ ಟಂಕಸಾಲ ಕೃಷ್ಣಯ್ಯ ಶ್ರೇಷ್ಠಿ ಶ್ರೀ ಕೃಷ್ಣದೇವರನ್ನೂ ಪೋಲೇಪಲ್ಲಿ ಚಂದ್ರಯ್ಯ ಶ್ರೇಷ್ಠಿ ಶ್ರೀರಾಮ, ಸೀತಾ, ಲಕ್ಷ್ಮಣ,

ಆಂಜನೇಯ ಹಾಗೂ ಗರುಡ ದೇವರುಗಳನ್ನೂ ಪ್ರತಿಷ್ಠಾಪನೆ ಮಾಡಿಸಿ ದೇವಸ್ಥಾನದ ಕೀರ್ತಿಯನ್ನು ಹೆಚ್ಚಿಸಿದರು. ಶ್ರೀ ಸಿದ್ದಿಕಟ್ಟೆ ಕನ್ನಿಕಾಪರಮೇಶ್ವರಿ ದೇವಸ್ಥಾನ, ಶ್ರೀ ಸೋಮೇಶ್ವರಸ್ವಾಮಿ ದೇವಸ್ಥಾನಗಳಿದ್ದು ಆರ್ಯ ವೈಶ್ಯ ಮಂಡಲಿಯು ಈ ದೇವಾಲಯದ ಆಡಳಿತವನ್ನು ವಹಿಸಿಕೊಂಡಿದೆ. ಜನರಿಗೆ ಆಧ್ಯಾತ್ಮಿಕ ಸ್ಫೂರ್ತಿಯನ್ನು ಮೂಡಿಸುವ ನಿಟ್ಟಿನಲ್ಲಿ ದೇವತಾ ಕೈಂಕರ್ಯದಲ್ಲಿನ ಅಪಾರ ಆಸಕ್ತಿಯನ್ನು ತೋರಿಸುತ್ತಾ ಪೂಜೆ-ಪುನಸ್ಕಾರ, ಉತ್ಸವಗಳಲ್ಲಿ ಅಂದಿನಿಂದ ಇಂದಿನವರೆಗೂ ಸಕ್ರಿಯವಾಗಿ ಭಾಗವಹಿಸುವ ಮೂಲಕ ಬೆಂಬಲಿಸಿಕೊಂಡು ಬರುತ್ತಿದೆ. ಇದೇ ನಿಟ್ಟಿನಲ್ಲಿ ವಿಶ್ವೇಶ್ವರಪುರಂ, ಅಕ್ಕಿಪೇಟೆ, ಮಲ್ಲೇಶ್ವರಂ, ವಿಜಯನಗರಗಳಲ್ಲಿ ಇನ್ನಿತರ ಶಾಖೆಗಳನ್ನು ಹೊಂದಿದೆ. ಬೆಂಗಳೂರು ಪ್ರದೇಶದಲ್ಲಿ ಜನರಿಗೆ ಆಧ್ಯಾತ್ಮಿಕ ಭಾವನೆಯನ್ನು ಮೂಡಿಸಿ ಸಾಮಾಜಿಕ ಮತ್ತು ಧಾರ್ಮಿಕ ಜೀವನದಲ್ಲಿ ಹೊಸ ಚೈತನ್ಯವನ್ನು ಮೂಡಿಸುವಲ್ಲಿ ಇವರ ಪಾತ್ರ ಮಹತ್ವದ್ದಾಗಿದೆ.[೫೦]

ಬೆಂಗಳೂರು ಪ್ರದೇಶದಲ್ಲಿ ನೆಲೆಸಿರುವ ಮತ್ತೊಂದು ಪ್ರಮುಖ ಸಮುದಾಯವೆಂದರೆ ವೀರಬಣಜಿಗರು. ಬೆಂಗಳೂರು ೧೯-೨೦ನೇ ಶತಮಾನದಲ್ಲಿ ಒಂದು ಪ್ರಮುಖ ವ್ಯಾಪಾರಿಕೇಂದ್ರ ವಾಗಿದ್ದು ಅಂದಿನ ಸಂದರ್ಭದಲ್ಲಿ ೭೪ಕ್ಕೂ ವೀರಶೈವ ಮಠಗಳು ನಗರ ಪ್ರದೇಶದ ಪ್ರಮುಖ ವ್ಯಾಪಾರಿ ಬೀದಿಗಳಲ್ಲಿ ಕಂಡುಬರುತ್ತದೆ. ಚಿಕ್ಕಪೇಟೆಯ ಮಹಾಂತರ ಮಠ, ದೊಡ್ಡಪೇಟೆಯ ಜಂಗಮಮಠ ಅಥವಾ ಮಾಳಿಗೆ ಮಠ(ಇಂದು ಅಸ್ತಿತ್ವದಲ್ಲಿಲ್ಲ), ಕಲಾಸಿಪಾಳ್ಯದ ಮರಿಸ್ವಾಮಿ ಮಠ(ಇಂದು ಅಸ್ತಿತ್ವದಲ್ಲಿಲ್ಲ), ಮನೆವಾರ್ತೆಪೇಟೆಯ ನಿರ್ವಾಣಮ್ಮನ ಮಠ(ಇಂದು ಅಸ್ತಿತ್ವದಲ್ಲಿಲ್ಲ),[೫೧] ಮಾಮೂಲುಪೇಟೆಯ ಗಂಜಾಂಮಠ,[೫೨] ಅರಳೇಪೇಟೆಯ ಚೌಕಿಮಠ, ಹನುಮಂತನಗರದ( ಗಾಂಧಿನಗರ) ತಿಪ್ಪಶೆಟ್ಟಿ ಮಠ, ಅಣ್ಣಿಪುರದ ಕೊಂಡಶೆಟ್ಟಿ ಮಠ, ಕೆಂಪಾಪುರದ ಗಂಗಶೆಟ್ಟಿ ಮಠ[೫೩] ಇತ್ಯಾದಿ ವೀರಶೈವ ಮಠಗಳ ಸ್ಥಾಪಕರು ಮತ್ತು ಪೋಷಕರು ಅಂದಿನ ಸಮಾಜದಲ್ಲಿದ್ದ ಪ್ರತಿಷ್ಠಿತ ವರ್ಗದವರೆನಿಸಿದ ವೀರಬಣಜಿಗರು.[೫೪] ಕಾರಣ ತಮ್ಮ ಧಾರ್ಮಿಕ ಆಚರಣೆಗಳಿಗಾಗಿ ಮಠ-ಮಾನ್ಯಗಳ ಸ್ಥಾಪನೆಗೆ ಅವಕಾಶವನ್ನುಂಟು ಮಾಡಿದವು. ವೀರಶೈವ ಮಠಗಳ ಆಡಳಿತವು ಬಹುತೇಕವಾಗಿ ಬೆಂಗಳೂರಿನ ಪೇಟೆಶೆಟ್ಟಿ ಯಜಮಾನರುಗಳ ಆಡಳಿತಕ್ಕೆ ಒಳಪಟ್ಟಿತ್ತು. ಅದರಲ್ಲೂ ಪ್ರಮುಖವಾಗಿ ದೊಡ್ಡಪೇಟೆ, ಮಾಮೂಲುಪೇಟೆ, ಅರಳೆಪೇಟೆಯ ಯಜಮಾನ್ ಶೆಟ್ಟಿಗಳು ಮಠಗಳ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದ್ದರು. ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ವಿಚಾರಗಳಿಗೆ ಸಂಪೂರ್ಣವಾಗಿ ಈ ಪೇಟೆ ಬೀದಿಗಳಲ್ಲಿ ನೆಲೆಸಿದ್ದ ವೀರಬಣಜಿಗ ವರ್ತಕ ಸಮುದಾಯಗಳ ಹಿಡಿತದಲ್ಲಿತೆಂದು ತಿಳಿಯುತ್ತದೆ. ಅದಕ್ಕೆ ಸಂಬಂಧಿಸಿದಂತೆ ಪ್ರಭುತ್ವ ಮತ್ತು ಪೇಟೆಶೆಟ್ಟಿಗಳ ಸಂವಾದ ದಾಖಲೆಗಳಿವೆ.[೫೫] ಉದಾಹರಣೆಗೆ ಮಹಾಂತರ ಮಠದ ಆಡಳಿತವು ೧೮೮೪ರಲ್ಲಿ ದೊಡ್ಡಪೇಟೆಯ ಯಜಮಾನ್ ಗುರುಬಸಪ್ಪಶೆಟ್ಟಿ, ಅರಳೆಪೇಟೆ ಯಜಮಾನ್ ರುದ್ರಪ್ಪ, ಮಾಮೂಲ್‌ಪೇಟೆಯ ಶೆಟ್ಟಿ

ಯಜಮಾನ್ ವೀರಭದ್ರಪ್ಪಶೆಟ್ಟಿ ಇತ್ಯಾದಿ ವರ್ತಕರ ಅಧೀನದಲ್ಲಿತ್ತು ಎಂಬುದನ್ನು ಕಡತ ಸ್ಪಷ್ಟಪಡಿಸುತ್ತದೆ. ಅದಷ್ಟೇ ಅಲ್ಲದೇ ತಿಪ್ಪಶೆಟ್ಟಿಮಠದ ಮಠಾಧಿಪತಿಯಾಗಿ ಸರ್ಪಭೂಷಣರನ್ನು ನೇಮಿಸುವ ಹಂತದಲ್ಲಿ ಭಕ್ತರಿಗೆ ಮತ್ತು ಈ ಪೇಟೆಯ ಯಜಮಾನರಿಗೆ ಉಂಟಾದ ಭಿನ್ನಾಭಿಪ್ರಾಯವು ತಲೆದೋರಿತು. ಮಠಾಧಿಪತಿಗಳ ನೇಮಕದ ವಿಚಾರವು ಅಂದಿನ ವರ್ತಕ ಸಮುದಾಯಗಳು ನಿರ್ಧರಿಸುತ್ತಿದ್ದರು ಎಂದು ತಿಳಿದುಬರುತ್ತದೆ.[೫೬] ನಂತರದ ಅವಧಿಯಲ್ಲಿ ಇದೇ ತೆರದ ಅಲ್ಲಿಯ ಸ್ಥಳೀಯ ವರ್ತಕರ ಅಧೀನದಲ್ಲಿ ಮಠಗಳ ಉಸ್ತುವಾರಿ ಕಾಲಕಾಲಕ್ಕೆ ಮುಂದುವರಿಯುತ್ತಿತ್ತು ಎಂಬ ಅಂಶಗಳು ಸ್ಪಷ್ಟವಾಗುತ್ತದೆ. ಬೆಂಗಳೂರಿನ ವೀರಬಣಜಿಗರು ಧನಿಕ ವರ್ತಕ ಸಮುದಾಯಗಳು ಬೆಂಗಳೂರು ಪೇಟೆಯಲ್ಲಿ ಮಾತ್ರವಲ್ಲದೇ ಬೆಂಗಳೂರಿನ ಸುತ್ತಮುತ್ತಲಿನ ಪ್ರದೇಶದಲ್ಲಿಯು ಹಲವು ಮಠಗಳ ಸ್ಥಾಪನೆಗೆ ಕಾರಣರಾಗಿರುವುದಲ್ಲದೆ, ಅವುಗಳಿಗೆ ದಾನ–ಧರ್ಮಗಳನ್ನು ಮಾಡಿರುವುದಕ್ಕೆ ಕಡತಗಳು ದೊರಕಿದೆ. ಉದಾಹರಣೆಗೆ, ಧಾರವಾಡ ಜಿಲ್ಲೆಯ ನರಗುಂದದಿಂದ ಅರಳೆಪೇಟೆಗೆ ಬಂದು ಅರಳೆ ವ್ಯಾಪಾರ–ವ್ಯವಹಾರವನ್ನು ನಿರ್ವಹಿಸುತ್ತಿದ್ದ ಡಮಾಮಿ ಮುದುಕಪ್ಪ ಧನಿಕ ವೀರಬಣಜಿಗ ವರ್ತಕ ಸಮುದಾಯಕ್ಕೆ ಸೇರಿದವರಾಗಿದ್ದನು. ನಂತರದ ದಿನಗಳಲ್ಲಿ ಬೆಂಗಳೂರಿನ ಅರಳೇಪೇಟೆಯಲ್ಲಿ ನೆಲೆನಿಂತು ಅಲ್ಲಿ ತೋಟದದೇವರಮಠವನ್ನು ೧೮೨೫ರಲ್ಲಿ ಕಟ್ಟಿಸಿದನು. ಅದರ ಸಮೀಪವೇ ಹೂದೋಟ, ಹಣ್ಣಿನ ಮರದ ತೋಪುಗಳನ್ನೂ ನಿರ್ಮಿಸಿ ಇಮ್ಮಡಿ ತೋಟದ ಸ್ವಾಮಿಗಳಿಗೆ ನೀಡಿದನು.[೫೭]

ಬೆಂಗಳೂರು ನಗರ ಮತ್ತು ಸುತ್ತಮುತ್ತಲಿನ ಮಠಗಳು ಬೆಂಗಳೂರು ಪ್ರದೇಶದಲ್ಲಿ ನೆಲೆಸಿದ್ದ ವೀರಬಣಜಿಗ ವರ್ತಕ ಸಮುದಾಯಗಳ ಧಾರ್ಮಿಕ ಚುಟುವಟಿಕೆಗಳ ಕೇಂದ್ರವಾಗಿ ಮಾತ್ರವಿರದೆ ರಾಜ್ಯದ ಮೂಲೆ ಮೂಲೆಗಳಿಂದ ಬೆಂಗಳೂರಿಗೆ ವ್ಯಾಪಾರಕ್ಕೆಂದು ಬರುತ್ತಿದ್ದ ವರ್ತಕರ ವಸತಿ ಮತ್ತು ದಾಸೋಹ ಸೌಕರ್ಯಗಳನ್ನು ನೀಡುವ ಕೇಂದ್ರವಾಗಿತ್ತು ಎಂಬುದು ಗಮನಾರ್ಹವಾಗಿದೆ. ಈ ಅಂಶವನ್ನು ತೋಟದ ದೇವರಮಠದ ೧೮೨೭ರ ದಾನ ಶಾಸನವೊಂದು ತಿಳಿಸುತ್ತದೆ. ಆ ಪ್ರಕಾರ, ಅರಳೆ ವರ್ತಕರು ತಮ್ಮ ವ್ಯಾಪಾರದಿಂದ ಬರುವ ಲಾಭದಲ್ಲಿ ಇಪ್ಪತ್ತನೇ ಒಂದು ಭಾಗವನ್ನು ನಿರಂತರವಾಗಿ ಮಠದ ದಾಸೋಹ ಸೇವೆಗೆ ನೀಡಬೇಕೆಂದು ಕರಾರಾಗಿತ್ತು.[೫೮] ಬೆಂಗಳೂರು ಪೇಟೆ ಮತ್ತು ಅದರ ಸುತ್ತಮುತ್ತಲಿನ ಮಠಗಳಿಗೆ ವೀರಬಣಜಿಗರು ಮಾತ್ರ ದಾನ–ಧರ್ಮಾಧಿ ಕಾರ್ಯಗಳನ್ನು ಮಾಡಿದರು ಎಂದರೆ ಅದು ತಪ್ಪು ಕಲ್ಪನೆಯಾಗುತ್ತದೆ. ಬೆಂಗಳೂರು ಪೇಟೆಯ ಇನ್ನಿತರ ವರ್ತಕ ಸಮುದಾಯಗಳು ಸಹ ದಾನಕೊಟ್ಟ ವಿಚಾರಗಳನ್ನು ಗಮನಿಸಬಹುದು.

ಎಲೆ ಮಲ್ಲಪ್ಪಶೆಟ್ಟರು ಬೆಂಗಳೂರು ಪೇಟೆಯಲ್ಲಿ ಹಲವು ಪ್ರಾಚೀನ ದೇವಾಲಯಗಳಾದ ದೊಡ್ಡ ಬಸವೇಶ್ವರ, ಗವಿಗಂಗಾಧರೇಶ್ವರ, ಪ್ರಳಯಕಾಲದ ರುದ್ರದೇವಾಲಯ, ಬೆಳ್ಳಿ ಬಸವೇಶ್ವರಗುಡಿ,

ಅಲಸೂರು ಸೋಮೇಶ್ವರ ಮತ್ತು ಕಾಡು ಮಲ್ಲೇಶ್ವರ ದೇವಾಲಯಗಳು ಮುಖ್ಯವಾಗಿದ್ದು, ಆ ದೇವಾಲಯಗಳ ಜೀರ್ಣೋದ್ದಾರಕ್ಕೆ ಸೇವೆ ಸಲ್ಲಿಸಿದ್ದಾರೆ.[೫೯]

ಹೀಗೆ ವಿವಿಧ ವೃತ್ತಿಗೆ ಸೇರಿದ ಉತ್ಪಾದನಾ ವರ್ತಕ ಸಮುದಾಯಗಳು ಮತ್ತು ವಿನಿಮಯ ವರ್ತಕ ಸಮುದಾಯಗಳು ಧಾರ್ಮಿಕ ಆಚರಣೆಗಳು ಮತ್ತು ಧಾರ್ಮಿಕ ಸಂಘ–ಸಂಸ್ಥೆಗಳಿಗೆ ಕೊಟ್ಟ ಕೊಡುಗೆಗಳು ಬೆಂಗಳೂರು ನಗರದ ಅಭಿವೃದ್ಧಿಗೆ ಕಾರಣವಾದವು. ಇಂತಹ ಧಾರ್ಮಿಕ ಸಂಸ್ಥೆಗಳು ಕೇವಲ ಧಾರ್ಮಿಕ ಕ್ಷೇತ್ರಕ್ಕೆ ಮಾತ್ರ ತನ್ನ ಕಾರ್ಯ ಚಟುವಟಿಕೆಯನ್ನು ಸೀಮಿತಗೊಳಿಸದೇ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಪ್ರಮುಖ ಪಾತ್ರವಹಿಸಿದವು. ಇದರಿಂದಾಗಿ ಪ್ರತಿಯೊಂದು ವರ್ತಕ ಸಮುದಾಯವು ವಸಾಹತುಕಾಲದಲ್ಲಿ ತಮ್ಮ ಅಸ್ತಿತ್ವದ ಪ್ರಶ್ನೆಯನ್ನು ಎತ್ತಿ, ಅದನ್ನು ಉಳಿಸಲು ಹೋರಾಟ ಮಾಡಲು ಮುಂದಾದರು ಎಂಬ ಅಂಶವನ್ನು ಸೂಕ್ಷ್ಮ ಗ್ರಹಿಕೆಗೆ ಒಳಪಡಿಸಿದಾಗ ಮಾತ್ರ ಗೋಚರಿಸುತ್ತದೆ.

## ೭.೪. ಸ್ವಾತಂತ್ರ್ಯ ಚಳವಳಿಯಲ್ಲಿ ವರ್ತಕರ ಪಾತ್ರ

ರಾಷ್ಟ್ರೀಯ ಹೋರಾಟಕ್ಕೂ ವರ್ತಕ ಸಮುದಾಯಗಳಿಗೂ ನಿಕಟವಾದ ಸಂಬಂಧವಿದೆ. ಆದರೆ ಇತಿಹಾಸದ ಸಂಶೋಧನೆಯ ಅಧ್ಯಯನದಲ್ಲಿ ಈ ಸಂಬಂಧ ಕಡೆಗಣಿಸಲ್ಪಟ್ಟ ಭಾಗವಾಗಿ ತೋರುತ್ತದೆ. ಪ್ರಮುಖವಾಗಿ ಸ್ವಾತಂತ್ರ್ಯ ಪೂರ್ವದಲ್ಲಿ ಈ ತೆರನಾದ ಅಧ್ಯಯನಗಳು ನಡೆದಿಲ್ಲ ಎಂಬುದು ಗಮನಾರ್ಹ. ಕೆಲವೊಂದು ಅಧ್ಯಯನಗಳು ಇದರ ಬಗೆಗೆ ಬೆಳಕನ್ನು ಚೆಲ್ಲುತ್ತದೆಯಾದರೂ, ಅದು ಅತ್ಯಲ್ಪ ಪ್ರಮಾಣ. ಬ್ರಿಟಿಶರ ಆಡಳಿತ ವೈಖರಿಯ ಬಗ್ಗೆ ಜನರಿಗೆ ಸುದ್ದಿ ಮುಟ್ಟಿಸಿ ಜನ ಸಂಘಟಿಸುವುದು ಕಷ್ಟದ ಕೆಲಸವಾಗಿತ್ತು. ಬ್ರಿಟಿಶರು ತಮ್ಮ ವಿರುದ್ದದ ಕಾರ್ಯದಲ್ಲಿ ಪಾಲ್ಗೊಂಡವರನ್ನು ಸೆರೆಮನೆಗೆ ತಳ್ಳುತ್ತಿದ್ದರು. ಇಂತಹ ಸಂದರ್ಭದಲ್ಲಿ ಜನರನ್ನು ಸಜ್ಜುಗೊಳಿಸಲು ಬರುವ ರಾಷ್ಟ್ರೀಯ ನಾಯಕರಿಗೆ ಊಟ, ವಸತಿ ಮತ್ತು ಇನ್ನಿತರ ಸೌಲಭ್ಯ ಸಹಕಾರವನ್ನು ನೀಡುತ್ತಿದ್ದವರು ಶ್ರೀಮಂತ ಪ್ರಬಲ ವರ್ತಕ ಸಮುದಾಯದವರಾಗಿದ್ದರು ಎಂಬುದು ಗಮನಿಸಬೇಕಾದ ಅಂಶ. ಈ ಹಿನ್ನೆಲೆಯಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ಬೆಂಗಳೂರಿನ ವರ್ತಕ ಸಮುದಾಯ, ಪೇಟೆಗಳು ಮತ್ತು ವರ್ತಕರ ದೇಶಪ್ರೇಮ, ಅವರ ಕೊಡುಗೆಗಳು ಹಾಗೂ ಮೈಸೂರಿನ ಪ್ರಭುತ್ವದ ಪ್ರತಿಕ್ರಿಯೆಯ ಕುರಿತು ಚರ್ಚಿಸಲು ಯತ್ನಿಸಲಾಗಿದೆ.

ರಾಷ್ಟ್ರೀಯ ಹೋರಾಟದಲ್ಲಿ ವರ್ತಕ ಸಮುದಾಯದವರ ಪಾತ್ರವನ್ನು ಚರ್ಚಿಸುವ ಪೂರ್ವದಲ್ಲಿ ಪ್ರಭುತ್ವ ಮತ್ತು ಈ ಸಮುದಾಯಗಳ ನಡುವಿನ ಸಂಬಂಧವನ್ನು ತಿಳಿಯುವುದು ಅಗತ್ಯವಾಗಿದೆ. ಪ್ರಾಚೀನ ಕಾಲದಿಂದಲೂ ಪ್ರಭುತ್ವ ಮತ್ತು ವರ್ತಕ ಸಮುದಾಯಗಳ ನಡುವೆ ಅವಿರತವಾದ

ಸಂಬಂಧವಿದೆ. ತಮ್ಮ ಆರ್ಥಿಕತೆಯನ್ನು ಬಲ ಪಡಿಸುವ ನಿಟ್ಟಿನಲ್ಲಿ ಇವೆರಡು ಪರಸ್ಪರ ಪೂರಕವಾಗಿ ಕಾರ್ಯ ನಿರ್ವಹಿಸಿರುವ ನಿದರ್ಶನಗಳನ್ನು ಇತಿಹಾಸದ ಪುಟಗಳಲ್ಲಿ ಕಾಣಬಹುದು. ಇದೇ ತೆರನಾದ ಸದೃಢ ಸಂಬಂಧವನ್ನು ಭಾರತವು ಬ್ರಿಟಿಶ್ ವರ್ತಕ ಕಂಪನಿಯ ವಸಹಾತುವಾಗಿ ಮಾರ್ಪಟ್ಟ ಸಂದರ್ಭದಲ್ಲಿಯೂ ಕಾಣಬಹುದು. ಭಾರತೀಯ ಶ್ರೀಮಂತ ಭೂಮಾಲೀಕರು ಮತ್ತು ವರ್ತಕ ಸಮುದಾಯವರಾದ ಪ್ರಬಲ ವರ್ಗಗಳಿಂದ ತಮ್ಮ ಆರ್ಥಿಕ ಕಾರ್ಯವೈಖರಿಗೆ ಬೆಂಬಲವನ್ನು ಪಡೆಯುವ ನಿಟ್ಟಿನಲ್ಲಿ ಅವರನ್ನು ಸ್ಥಳೀಯ ಆಡಳಿತ ಕಾರ್ಯಗಳಲ್ಲಿ ಭಾಗವಹಿಸುವಂತೆ ಸಂತೈಸುತ್ತಿತ್ತು. ಬ್ರಿಟಿಶರಿಗೆ ಬೆಂಬಲ ವ್ಯಕ್ತಪಡಿಸುವವರನ್ನು ಸ್ಥಳೀಯ ಕೇಂದ್ರಗಳಲ್ಲಿ ಅಧಿಕಾರಿಗಳಾಗಿ ಕೆಲವು ಜವಾಬ್ದಾರಿಗಳನ್ನು ವಹಿಸಲಾಗುತ್ತಿತ್ತು.[೬೦] ಆ ಮೂಲಕ ಭಾರತೀಯ ವರ್ತಕ ಸಮುದಾಯವು ಬ್ರಿಟಿಶ್ ಕಂಪನಿಗೆ ಮಧ್ಯವರ್ತಿಗಳಾಗಿ ಅವರ ಆಡಳಿತವನ್ನು ಮತ್ತು ಅವರಿಗೆ ಬೇಕಾದ ಸಾಮಗ್ರಿಗಳ ರಫ್ತಿಗೆ ಸಹಕರಿಸುತ್ತಿದ್ದರು. ಬ್ರಿಟಿಶರ ಆರ್ಥಿಕ ನೀತಿಗಳು ಭಾರತೀಯ ಸಮಾಜದಲ್ಲಿ ಒಂದು ಹೊಸ ದೇಶಿಯ ಮಧ್ಯಮ ವರ್ಗವನ್ನು ಸೃಷ್ಟಿಸಿತು. ಈ ಮಧ್ಯಮ ವರ್ತಕ ಸಮುದಾಯವು ಸಹ ಅವರ ಸ್ಥಳೀಯ ಪ್ರದೇಶಗಳಲ್ಲಿ ಸುವ್ಯವಸ್ಥೆ ಮತ್ತು ಆಡಳಿತವನ್ನು ನಿರ್ವಹಿಸುತ್ತಿತ್ತು. ಒಟ್ಟಾರೆಯಾಗಿ ನಾವು ತಿಳಿಯಬೇಕಾದ ಪ್ರಮುಖ ವಿಚಾರವೆಂದರೆ, ತಮ್ಮ ಆರ್ಥಿಕ ಚಟುವಟಿಕೆಗೆ ಅಡೆತಡೆಯಾಗದಂತೆ ಯಾವುದೇ ತೆರನಾದ ಪ್ರಭುತ್ವದೊಂದಿಗೂ ಹೊಂದಾಣಿಕೆಯ ಗುಣವು ವರ್ತಕ ಸಮುದಾಯದವರ ಮನೋಧರ್ಮ ಆಗಿದೆ.

೧೮೧೩ರ ಕಾಯ್ದೆಯಿಂದಾಗಿ ಭಾರತೀಯ ಉತ್ಪಾದಿತ ವರ್ತಕ ಸಮುದಾಯದವರ ಮೇಲೆ ಬಲವಾದ ಹೊಡೆತ ಬಿತ್ತು. ಮುಕ್ತ ವ್ಯಾಪಾರ ಮತ್ತು ಬ್ರಿಟನ್ನಿನ ಕೈಗಾರಿಕೆಗಳ ಉತ್ಪನ್ನಗಳನ್ನು ಎದುರಿಸುವ ಸಾಮರ್ಥ್ಯವನ್ನು ಸಾಂಪ್ರದಾಯಿಕ ಉತ್ಪನ್ನಗಳು ಕಳೆದುಕೊಂಡಿತ್ತು. ಇದೇ ತೆರನಾದ ಪೆಟ್ಟನ್ನು ಶ್ರೀಮಂತ ವರ್ತಕ ಸಮುದಾಯ ಮತ್ತು ಮಧ್ಯಮ ವರ್ಗದ ವಿನಿಮಯ ವರ್ತಕರು ಸಹ ಎದುರಿಸಬೇಕಾಯಿತು. ಕಾರಣ ವಿದೇಶಿ ಬಂಡವಾಳಗಾರರಿಗೆ ಬ್ರಿಟಿಶ್ ಸರ್ಕಾರ ಪ್ರಾಮುಖ್ಯತೆಯನ್ನು ನೀಡಿತ್ತು. ೧೯ನೇ ಶತಮಾನದ ಮಧ್ಯಭಾಗದ ಹೊತ್ತಿಗೆ ಈ ವರ್ತಕರು ದೇಶೀಯ ಮತ್ತು ವಿದೇಶಿಯರ ನಡುವಿನ ಸಂಪರ್ಕ ಕೊಂಡಿಯಾಗಿ ಕಾರ್ಯವೆಸಗಿದರು. ಬ್ರಿಟಿಶ್ ಕಂಪನಿಯ ಆಳ್ವಿಕೆ ಕೊನೆಯಾಗುವ ತನಕ ಶ್ರೀಮಂತ ವರ್ತಕರಾಗಿ ಕಾಣಿಸಿಕೊಂಡರು. ಆ ನಿಟ್ಟಿನಲ್ಲಿ ಇಂಗ್ಲಿಶ್ ಶಿಕ್ಷಣವನ್ನು ಪಡೆದರು. ಆಧುನಿಕ ಆರ್ಥಿಕತೆಯನ್ನು ಅರ್ಥಮಾಡಿಕೊಂಡು ಅಂತಾರಾಷ್ಟ್ರೀಯ ಮಾರುಕಟ್ಟೆಯ ಬದಲಾವಣೆಗೆ ಒಳಗಾಗಿದ್ದ ರಾಜಕೀಯ ಆರ್ಥಿಕವ್ಯವಸ್ಥೆಯೊಡನೆ ಹೊಂದಾಣಿಕೆ ಸಾಧಿಸಲು ಪ್ರಯತ್ನಿಸಿದರು. ಆದರೆ ಬ್ರಿಟಿಶ್ ಪ್ರಭುತ್ವದ ವ್ಯಾಪಾರ ನೀತಿ, ದರ, ತೆರಿಗೆ ಮತ್ತು ಸಂಚಾರ ನೀತಿಗಳು, ಕೈಗಾರಿಕೋದ್ಯಮಿ, ವರ್ತಕರ ಪರವಾಗಿಯೇ ಇತ್ತು. ಇದನ್ನು ನಿಧಾನ ಗತಿಯಲ್ಲಿ ಅರ್ಥ ಮಾಡಿಕೊಂಡ ಭಾರತೀಯ

ವರ್ತಕ ಸಮುದಾಯಗಳು ಭಾರತೀಯರ ವ್ಯಾಪಾರ ಮತ್ತು ಕೈಗಾರಿಕೆಗಳ ಅಭಿವೃದ್ಧಿಗೆ ರಾಷ್ಟ್ರೀಯ ಪ್ರಭುತ್ವ ಅಗತ್ಯವನ್ನು ಅರಿತುಕೊಂಡವು.[೬೧] ರಾಷ್ಟ್ರೀಯ ರಾಜಕೀಯ ಜಾಗೃತಿಯನ್ನು ಬೆಳೆಸುವಲ್ಲಿ ನಿಧಾನಗತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಪ್ರಭುತ್ವ ಅವರ ವ್ಯವಹಾರಗಳಿಗೆ ತಡೆಯಾಗಿದ್ದರೆ ಅದರ ವಿರುದ್ಧವಾಗಿ ಬೇರೊಂದು ಪ್ರಭುತ್ವಕ್ಕೆ ಸಹಕರಿಸುವುದನ್ನು ನಾವು ವಸಾಹತು ಪೂರ್ವದಲ್ಲಿಯೂ ಸಹ ಗಮನಿಸಬಹುದು.

೧೮೬೦ರ ದಶಕದಲ್ಲಿ ವರ್ತಕ ಸಮುದಾಯದವರ ಪ್ರಭಾವ ಕ್ರಮೇಣ ಕಡಿಮೆಗೊಂಡು ಆ ಸ್ಥಳವನ್ನು ವಿದ್ಯಾವಂತ ಸಮುದಾಯ ಆಕ್ರಮಿಸಿತು. ತಮ್ಮ ಪೂರ್ವಜರು ವ್ಯಾಪಾರ ಮತ್ತು ಜಮೀನಿನ ಮೇಲೆ ಹೊಂದಿದ್ದ ಕಾಳಜಿಯನ್ನು ಇವರು ಸಹ ಹೊಂದಿದ್ದರು. ಬ್ರಿಟಿಶ್ ಪ್ರಭುತ್ವದ ನೀತಿಯ ಬಗ್ಗೆ ಕಾಂಗ್ರೆಸ್‌ನಲ್ಲಿ ಚರ್ಚಿಸುತ್ತಿದ್ದ ವಿಚಾರಗಳು ತಾವು ಬಂದಿದ್ದ ಹಿನ್ನೆಲೆಗೆ ಸಂಬಂಧಿಸಿದ ವರ್ಗಗಳ ಸಮಸ್ಯೆಗಳೇ ಆಗಿದ್ದವು ಎಂಬುದು ಗಮನಿಸಬೇಕಾದ ಅಂಶವಾಗಿದೆ.[೬೨]

ಕಾಂಗ್ರೆಸ್ ರಾಷ್ಟ್ರೀಯ ಐಕ್ಯತಾ ಮನೋಭಾವವನ್ನು ಮತ್ತು ರಾಜಕೀಯ ಜಾಗೃತಿಯನ್ನು ಮೂಡಿಸುವ ಹಿನ್ನೆಲೆಯಲ್ಲಿ ಸ್ಥಾಪನೆಗೊಂಡಿತ್ತು. ಈ ನೆಲೆಯಲ್ಲಿ ೧೮೮೮ರ ಅಲಹಾಬಾದ್ ಅಧಿವೇಶನದಲ್ಲಿ ಭಾರತದ ಕೈಗಾರಿಕೆಯ ಪರಿಸ್ಥಿತಿಯನ್ನು ಮೇಲ್ವಿಚಾರಣೆಯನ್ನು ಮಾಡಬೇಕೆಂದು ಬೇಡಿಕೆಯನ್ನಿಟ್ಟರು. ಅದಲ್ಲದೆ, ಹತ್ತಿ ಬಟ್ಟೆಯ ಮೇಲಿನ ಅಬಕಾರಿ ಶುಲ್ಕವನ್ನು ತೆಗೆಯಬೇಕೆಂದರು. ಇದಾದ ನಂತರದ ಅಧಿವೇಶನಗಳಾದ ಲಕ್ನೋ(೧೮೯೯) ಮತ್ತು ಅಹಮದಾಬಾದ್(೧೯೦೨) ಹೀಗೆ ನಡೆದ ಅಧಿವೇಶನಗಳಲ್ಲಿ ಆರ್ಥಿಕತೆಯ ವಿಚಾರಗಳನ್ನು ಕೈಗೆತ್ತಿಕೊಂಡರು.[೬೩] ಕಾಂಗ್ರೆಸ್ಸಿನ ನೀತಿಗಳೆಲ್ಲವು ವ್ಯಾಪಾರ-ವಾಣಿಜ್ಯದ ಹಿನ್ನೆಲೆಯ ನೀತಿಗಳಾಗಿದ್ದವು ಎಂಬುದು ಗಮನಾರ್ಹ. ಆದರೂ ಸಹ ಜನಸಾಮಾನ್ಯರಿಗೆ ಕಾಂಗ್ರೆಸ್ಸಿನ ಉದ್ದೇಶಗಳು ತಲುಪುತ್ತಿರಲಿಲ್ಲ. ಇಂತಹ ಸಂದರ್ಭದಲ್ಲಿ ಕಾಂಗ್ರೆಸ್ಸಿಗೆ ನೆರವಾದವರು ಗಾಂಧಿ. ಇವರು ಪ್ರಬಲ ವರ್ತಕ ಸಮುದಾಯವಾದ ಗುಜರಾತಿ ಬನಿಯಾ ವರ್ಗದವರಾಗಿದ್ದರು. ಅಲ್ಲದೆ ಅವರ ಸಾತ್ವಿಕ ಸ್ವಭಾವಗಳಿಂದಾಗಿ ಭಾರತದ ಎಲ್ಲೆಡೆ ತಮ್ಮ ಜಾಲವನ್ನು ಹೊಂದಿದ್ದ ಮಾರ್ವಾಡಿ, ಜೈನ, ಗುಜರಾತಿ ವರ್ತಕ ಸಮುದಾಯದ ಅನೇಕರ ಬೆಂಬಲ ಪಡೆದರು.[೬೪] ಇದರ ಫಲವಾಗಿ ಭಾರತೀಯ ವರ್ತಕ ಸಮುದಾಯದವರಿಂದ ಗಾಂಧೀಜಿಯವರು ತಿಲಕ್ ಸ್ವರಾಜ್ಯ ಫಂಡಿನ ಹೆಸರಿನಲ್ಲಿ ಭಾರಿ ಮೊತ್ತ ಹಣವನ್ನು ಸಂಗ್ರಹಿಸಿದರು. ಕಾಂಗ್ರೆಸ್ಸಿಗೆ ಇದು ಆರ್ಥಿಕ ಭದ್ರತೆಯನ್ನು ನೀಡಿತು.[೬೫]

ಭಾರತದಾದ್ಯಂತ ಯಶಸ್ವಿಯಾಗಿ ಕಾಂಗ್ರೆಸ್ ತನ್ನ ಶಾಖೆಗಳನ್ನು ತೆರೆದು ರಾಷ್ಟ್ರಾಭಿಮಾನವನ್ನು ಮೂಡಿಸಲು ಅನೇಕ ಅಧಿವೇಶನಗಳನ್ನು ನಡೆಸಲು ಸಾಧ್ಯವಾಯಿತು. ಇದರಿಂದಾಗಿ ಕಾಂಗ್ರೆಸ್ ಒಂದು ರಾಷ್ಟ್ರೀಯ ಪಕ್ಷವಾಗಿ ಹೊರಹೊಮ್ಮಲು ಕಾರಣವಾಯಿತು. ಈ ರೀತಿಯ ಸಹಕಾರವನ್ನು

ವರ್ತಕ ಸಮುದಾಯಗಳು ವ್ಯಕ್ತಪಡಿಸಲು ಅವರ ವ್ಯಾಪಾರದ ಉದ್ದೇಶವೂ ಕಾರಣವಾಗಿತ್ತು. ಬ್ರಿಟಿಶ್ ಪ್ರಭುತ್ವ ತನ್ನ ತೆಕ್ಕೆಗೆ ಆರ್ಥಿಕತೆಯನ್ನು ತೆಗೆದುಕೊಳ್ಳುವ ಪ್ರಯತ್ನಗಳನ್ನು ಸದಾ ನಡೆಸುತ್ತಿದ್ದು, ಈ ಸಂದರ್ಭದಲ್ಲಿ ವರ್ತಕರಿಗೆ ಪರಕೀಯ ಮನೋಭಾವವನ್ನು ಮೂಡಿಸಿತು. ತಮ್ಮ ಪರವಾಗಿ ನಿಲುತ್ತಾರೆಂಬ ಭಾವನೆಯಿಂದ ವರ್ತಕರು ಕಾಂಗ್ರೆಸ್ ಮತ್ತು ಗಾಂಧಿಜಿಗೆ ನೆರವಾಗಿರಬಹುದು. ಈ ಅಂಶವೂ ವರ್ತಕರ ರಾಷ್ಟ್ರಭಿಮಾನವನ್ನು ತೋರಿಸುವುದರ ಜೊತೆಗೆ ಪರೋಕ್ಷವಾಗಿ ವರ್ತಕರ ಸಹಕಾರವು ಸ್ವಾತಂತ್ರ್ಯ ಚಳುಚವಳಿಯಲ್ಲಿ ಅವರ ಪ್ರಭಾವವನ್ನು ತೋರಿಸುತ್ತದೆ. ನಾವು ಮನಗಾಣ ಬೇಕಾದ ಅಂಶವೇನೆಂದರೆ ಸ್ವಾತಂತ್ರ್ಯ ಹೋರಾಟದಲ್ಲಿ ಈ ಸಮುದಾಯಗಳು ಕಾಣದ ಕೈಗಳ ರೀತಿಯಲ್ಲಿ ದುಡಿದಿವೆ.

ಬೆಂಗಳೂರು ಪ್ರದೇಶವು ಮೈಸೂರು ಪ್ರೆಸಿಡೆನ್ಸಿಯ ಅಧೀನದಲ್ಲಿ ಮತ್ತು ಬ್ರಿಟಿಶ್ ಅಧೀನದಲ್ಲಿದ್ದ ಬೆಂಗಳೂರು ದಂಡು ವಿಭಿನ್ನ ನೆಲೆಯನ್ನು ಹೊಂದಿತ್ತು. ಒಂದು ಸ್ಥಳೀಯರಿಂದ ಕೂಡಿದ ಬೆಂಗಳೂರು ಪೇಟೆ ಮತ್ತು ಬೆಂಗಳೂರಿನಲ್ಲಿಯೇ ಯುರೋಪಿನ ಸಂಸ್ಕೃತಿಯ ಛಾಪು ಮೂಡಿಸುವ ಬೆಂಗಳೂರು ದಂಡು. ಮಿಶ್ರ ಆಡಳಿತ ವ್ಯವಸ್ಥೆಯ ಅಧೀನದಲ್ಲಿದ್ದ ಈ ಪ್ರದೇಶವು ಸ್ವಾತಂತ್ರ್ಯ ಹೋರಾಟದ ಪೂರ್ವದಲ್ಲಿ ಮುಂಚೂಣಿಯ ಆಸಕ್ತಿಯನ್ನು ವಹಿಸಿರಲಿಲ್ಲ. ಕಾರಣ ಇದು ಒಳನಾಡಿನ ವ್ಯಾಪಾರದ ಕೇಂದ್ರವಾಗಿತ್ತು. ಆದರಿಂದಾಗಿ ಬ್ರಿಟಿಶ್ ಆಡಳಿತದ ಆರ್ಥಿಕ ನೀತಿಗಳ ನೇರವಾದ ಪರಿಣಾಮ ಬೆಂಗಳೂರು ಪ್ರದೇಶಕ್ಕೆ ಅಷ್ಟೇನೂ ಬೀರಲಿಲ್ಲ. ನಿಧಾನಗತಿಯಲ್ಲಿ ಹೋರಾಟದ ಮನಸ್ಥಿತಿಯನ್ನು ಇಲ್ಲಿಯ ಕೆಲವು ಜನ ಬೆಳಸಿಕೊಂಡರು. ಬೆಂಗಳೂರು ಪ್ರದೇಶದಲ್ಲಿರುವ ಬಹುಪಾಲು ವರ್ತಕರು ಸ್ಥಳೀಯ ನಿವಾಸಿಗಳಾಗಿರದೇ ಅನೇಕ  ಕಡೆಯಿಂದ ಬಂದು ನೆಲೆಸಿದವರಾಗಿದ್ದಾರೆ. ಇವರುಗಳು ಬೆಂಗಳೂರು ಪ್ರದೇಶಕ್ಕೆ ಬಂದು ನೆಲೆಸಿದಾಗ ವ್ಯಾಪಾರ ಪ್ರಕ್ರಿಯೆ ಸುಗಮವಾಗಿಯೇ ಸಾಗುತ್ತಿತ್ತು. ಪರಿಣಾಮವಾಗಿ ಇಲ್ಲಿಯ ವರ್ತಕರು ಅಷ್ಟೇನೂ ಸ್ವಾತಂತ್ರ್ಯ ಹೋರಾಟದಲ್ಲಿ ಆಸಕ್ತಿ ವಹಿಸುವ ಮನಸ್ಥಿತಿ ತೋರಲಿಲ್ಲ. ಕಾರಣ ಭಾರಿ ದೊಡ್ಡ ವಾಣಿಜ್ಯೋದ್ಯಮಿಗಳ ಸಮುದಾಯವು ಬ್ರಿಟಿಶ್‌ರಿಗೆ ಪೂರಕವಾಗಿ ಕಾರ್ಯನಿರತರಾಗಿದ್ದರು. ಸಣ್ಣ ವ್ಯಾಪಾರಿಗಳ ಸಮುದಾಯ ಮತ್ತು ಮಧ್ಯಮ ವರ್ತಕ ಸಮುದಾಯದವರು ಒಳನಾಡಿನ ವರ್ತಕರಾಗಿದ್ದು, ಇವರ ಮೇಲೆ ಯಾವ ಪ್ರಭಾವವೂ ಅಷ್ಟಾಗಿ ಬೀರುತ್ತಿರಲಿಲ್ಲ. ೧೯೧೦ ರಿಂದ ೧೯೩೦ ದಶಕಗಳಲ್ಲಿ ನಡೆದ ಮಹಾಯುದ್ಧದ ಪರಿಣಾಮವಾಗಿ ಆರ್ಥಿಕತೆಯಲ್ಲಿ ಕ್ಷೋಭೆ ಕಂಡಿತು. ಇದರ ಹಿನ್ನೆಲೆಯಲ್ಲಿ ಬ್ರಿಟಿಶರ ಆಡಳಿತದ ನೀತಿಗಳ ಬಿಸಿ ಇಲ್ಲಿಯ ವರ್ತಕರ ವ್ಯಾಪಾರದ ಮೇಲೆ ನಿಧಾನಗತಿಯಲ್ಲಿ ತಟ್ಟಿದಾಗ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸುವಂತೆ ಮಾಡಿತು. ಇನ್ನೊಂದೆಡೆ ವಾಣಿಜ್ಯೋದ್ಯಮಿಗಳು ಬ್ರಿಟಿಶ್ ವ್ಯಾಪಾರ ನೀತಿಯನ್ನು ವಿರೋಧಿಸಿ ದೇಶಿಯ ಕೈಗಾರಿಕೆಗಳನ್ನು ಸ್ಥಳೀಯ ಪ್ರಭುತ್ವದ ನೆರವಿನೊಂದಿಗೆ ಸ್ಥಾಪಿಸುವ ಮೂಲಕ ಸ್ವಾತಂತ್ರ್ಯ ಹೋರಾಟಕ್ಕೆ ಬೆಂಬಲ ನೀಡಿದವು.

ಸ್ವಾತಂತ್ರ್ಯ ಚಳುವಳಿಯ ಆರಂಭದಲ್ಲಿ ಹಂತದ ಸ್ವದೇಶಿ ಸ್ವರಾಜ್ಯ ಚಳುಚಳಿ ಮತ್ತು ೧೯೦೬ರಲ್ಲಿ ಕಾಂಗ್ರೆಸ್ ಮಾಡರೇಟ್ಸ್ ಮತ್ತು ಎಕ್ಸ್‌ಟ್ರೀಮಿಸ್ಟ್ಸ್ ಎಂದು ಇಬ್ಭಾಗವಾದ ಸಂದರ್ಭದ ಬಗೆಗಿನ ವಿಚಾರಗಳನ್ನು ಬೆಂಗಳೂರು ಪೇಟೆಯ ಕೆನೆ ಪದರದಲ್ಲಿದ್ದ ವಿದ್ವಾಂಸರುಗಳಾದ ಮೇಷ್ಟ್ರು ಎಂ. ವೆಂಕಟಪ್ಪಯ್ಯ, ಮೇಷ್ಟ್ರು ಎ. ನಾರಾಣಯ್ಯಂಗಾರ್, ವಿದ್ವಾನ್ ಬಾಲಸರಸ್ವತಿ, ವಿದ್ವಾನ್ ವೆಂಕಟಾಚಾರ್ಯರು, ಮಲ್ಲೇಶ್ವರದ ಪಟ್ಟಾಭಿರಾಮಯ್ಯರ್ ಮೊದಲಾದವರು ಹಿಂದೂ ಕಾಫಿ ಕ್ಲಬ್‌ನಲ್ಲಿ ಚರ್ಚಿಸುತ್ತಿದ್ದರು ಎಂಬ ಡಿ. ವಿ. ಗುಂಡಪ್ಪನವರ ಮಾತುಗಳು[೬೬] ಬೆಂಗಳೂರಿನ ಜನಸಾಮಾನ್ಯರಿಗೆ ಸ್ವದೇಶಿ ಚಳುವಳಿ ಮತ್ತು ಕಾಂಗ್ರೆಸ್‌ನ ಕಾರ್ಯವೈಖರಿಗಳು ತಲುಪುತ್ತಿರಲಿಲ್ಲ ಎಂಬುದು ವೇದ್ಯವಾಗುತ್ತದೆ. ಏಕೆಂದರೆ ರಾಷ್ಟ್ರೀಯ ಚಳುವಳಿಯ ವಿಚಾರಗಳು ಕೇವಲ ಬಿಡುವಿನ ಸಮಯದ ಮಾತುಗಳಾಗಿದ್ದವೆಯೇ ಹೊರತು ಒಮ್ಮತದ ನಿಲುವುಗಳಾಗಿರಲಿಲ್ಲ.

೧೯೧೫ರಲ್ಲಿ ಗಾಂಧೀಜಿಯವರು ಗೋಖಲೆಯವರ ಮಾರ್ಗದರ್ಶನದ ಅಡಿಯಲ್ಲಿ ಪ್ರವಾಸಕ್ಕೆಂದು ಬೆಂಗಳೂರಿಗೆ ಬಂದಿದ್ದಾಗ[೬೭] ಇಲ್ಲಿಯ ಸ್ಥಳೀಯ ಶ್ರೀಮಂತ ಮತ್ತು ವರ್ತಕರೊಂದಿಗೆ ಒಳನಾಟವಿರಿಸಿಕೊಂಡರು ಎಂದು ತಿಳಿಯಬಹುದಾಗಿದೆ. ಅಂದಿನ ಸಂದರ್ಭದಲ್ಲಿ ಬೆಂಗಳೂರು ಪೇಟೆಯಲ್ಲಿ ಯಾವುದೇ ದೊಡ್ಡ ಸಭಾಂಗಣವಿರಲಿಲ್ಲ. ಸ್ವಾತಂತ್ರ್ಯ ಹೋರಾಟದ ಸಭೆ–ಸಮಾರಂಭಗಳಿಗೆ ಮತ್ತು ಕಾಂಗ್ರೆಸ್ಸಿನ ರಾಜಕೀಯ ಚಟುವಟಿಕೆಗಳಿಗೆ ಉತ್ಪಾದಕ ವಿನಿಮಯ ವರ್ತಕರಲ್ಲಿಯೇ ಬೆಂಗಳೂರು ಪೇಟೆಯ ಪ್ರಮುಖ ವರ್ತಕರಾದ ದೊಡ್ಡಣ್ಣನವರು ದೊಡ್ಡಣ್ಣ ಹಾಲ್‌ನಲ್ಲಿ ಅವಕಾಶ ಮಾಡಿಕೊಡುತ್ತಿದ್ದರು. ಇಲ್ಲಿ ಕವಿ ರವೀಂದ್ರನಾಥ ಠಾಗೂರ್ ಮತ್ತು ಸರೋಜಿನಿ ನಾಯ್ಡುರವರಿಗೆ ಸನ್ಮಾನ ನೆರವೇರಿದ್ದು ಪ್ರಮುಖವಾಗಿದೆ.[೬೮] ಈ ಘಟನೆ ದೊಡ್ಡಣ್ಣನವರ ದೇಶಾಭಿಮಾನವನ್ನು ಸಂಕೇತಿಸುತ್ತದೆ.

ಕಾಂಗ್ರೆಸ್‌ನ ಧುರೀಣರು ಮತ್ತು ರಾಷ್ಟ್ರೀಯ ಹೋರಾಟಗಾರರಾದ ಬಾಲಗಂಗಾಧರ ತಿಲಕರು ಕ್ರಿ.ಶ ೧೯೨೦ರಲ್ಲಿ ನಿಧನರಾದರು. ತಿಲಕರ ರಾಷ್ಟ್ರಪ್ರೇಮದ ಕಾಳಜಿಯುಕ್ತ ಸಂದೇಶಗಳು ದೇಶದಾದ್ಯಂತ ಹರಡಿದವು. ಬೆಂಗಳೂರಿನ ಸ್ವಾತಂತ್ರ್ಯ ಹೋರಾಟದ ಆಸಕ್ತರು ಸಂತಾಪ ಆಚರಿಸಬೇಕೆಂಬ ಸಂದೇಶವನ್ನು ತಿಳಿಸಿದಾಗ ಬೆಂಗಳೂರು ಪೇಟೆಯ ಮುಖ್ಯ ವರ್ತಕರಾದ ಮಂಡಿ ಹರಿಯಣ್ಣನವರ ಮುಂದಾಳುತ್ವದಲ್ಲಿ ಎಲ್ಲಾ ವರ್ತಕ ಸಮುದಾಯದವರು ಸಹಕರಿಸುವ ನಿಟ್ಟಿನಲ್ಲಿ ವಾಣಿಜ್ಯ ಅಂಗಡಿ ಮುಂಗಟ್ಟುಗಳನ್ನು ಮುಚ್ಚಿ ತಿಲಕರಿಗೆ ಗೌರವ ಸಂತಾಪವನ್ನು ಸೂಚಿಸಿದರೆಂಬ ಮಾಹಿತಿ ಸಿಗುತ್ತದೆ.[೬೯]

ಸ್ವಾತಂತ್ರ್ಯ ಹೋರಾಟದಲ್ಲಿ ಬ್ರಿಟಿಶ್ ಆಡಳಿತ ನೀತಿಗಳ ಬಗೆಗೆ ಜನಸಾಮಾನ್ಯರಿಗೆ ಸುದ್ದಿಮುಟ್ಟಿಸಿ ಜನರನ್ನು ಸಂಘಟಿಸುವ ಕಾರ್ಯದಲ್ಲಿ ನಿರತರಾದ ಸ್ವಾತಂತ್ರ್ಯಹೋರಾಟಗಾರರಿಗೆ ಸ್ಫೂರ್ತಿಯ ನೆಲೆಯಾಗಿ ಅವರಿಗೆ ಎಲ್ಲಾ ರೀತಿಯ ಸಹಕಾರ, ಸಹಾಯ–ಸೌಲಭ್ಯಗಳನ್ನು ವರ್ತಕ ಸಮುದಾಯದವರು

ನೀಡುತ್ತಿದ್ದರು. ೧೯೨೦ರಲ್ಲಿ ಮಹಾತ್ಮಗಾಂಧಿಯವರು ಅಸಹಕಾರ ಚಳುವಳಿಯನ್ನು ಪ್ರಾರಂಭಿಸಿದಾಗ ಬೆಂಗಳೂರಿನಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಎನ್.ಎಸ್.ಹರ್ಡೀಕರ್, ಹೊಸಕೊಪ್ಪ ಕೃಷ್ಣರಾಯರು, ಟಿ. ಸುಬ್ರಹ್ಮಣ್ಯ ಮೊದಲಾದವರು ಕೆಲವು ರಚನಾತ್ಮಕ ಕಾರ್ಯಕ್ರಮಗಳನ್ನು ರೂಪಿಸಿ ಕೊಂಡಿದ್ದರು.[೨೦] ಅವುಗಳೆಂದರೆ:

೧. ಹಿಂದಿ ಭಾಷಾ ಪ್ರಚಾರ

೨. ಖಾದಿಗೆ ಪ್ರೋತ್ಸಾಹ

೩. ಸ್ವದೇಶಿವಸ್ತುಗಳಿಗೆ ಪುರಸ್ಕಾರ

೪. ಗ್ರಾಮೋದ್ಯೋಗಕ್ಕೆ ಪ್ರೋತ್ಸಾಹ

೫. ಪಾನ ನಿರೋಧ

೬. ಬ್ರಿಟಿಶ್ ವಸ್ತುಗಳ ಬಹಿಷ್ಕಾರ

೭. ಅಸ್ಪೃಶ್ಯತಾ ನಿವಾರಣೆ

೮. ಹಿಂದೂ–ಮುಸ್ಲಿಂ ಐಕ್ಯತೆ

೯. ಖಿಲಾಫತ್

ಅಂದಿನ ಸಂದರ್ಭದಲ್ಲಿ ಮೊದಲ ಬಾರಿಗೆ ಖಾದಿಯನ್ನು ತೊಡುವ ಮೂಲಕ ಬೆಂಗಳೂರಿನ ಜನರು ತಮ್ಮ ದೇಶಾಭಿಮಾನವನ್ನು ತೋರುವುದು ಒಂದು ಶೈಲಿಯಾಗಿ ಮಾರ್ಪಟ್ಟಿತ್ತು. ಇದೇ ನಿಟ್ಟಿನಲ್ಲಿ ಬೆಂಗಳೂರು ಪೇಟೆಯ ಪ್ರದೇಶದಲ್ಲಿ ಹಲವು ದೇಶಿಯ ಶೈಕ್ಷಣಿಕ ಸಂಸ್ಥೆಗಳನ್ನು ತೆರೆಯುವ ಪ್ರಯತ್ನಗಳು ನಡೆದವು.[೨೧]

ಮೌಲನಾ ಮಹಮ್ಮದ್ ಅಲಿಯವರು ಇದೇ ಸಂದರ್ಭದಲ್ಲಿ ಬೆನ್‌ಸನ್ ಟೌನ್‌ನಲ್ಲಿ ಒಂದು ಸಾರ್ವಜನಿಕ ಸಭೆಯನ್ನುದ್ದೇಶಿಸಿ ಮಾತನಾಡುತ್ತಾ ಖಾದಿ ಪ್ರಚಾರವನ್ನು ಕುರಿತು "ಬೆಂಗಳೂರಿನ ಚರಕದಿಂದ ಉತ್ಪಾದಿಸುವ ಖಾದಿಯ ಒಂದು ಎಳೆಯ ಬೆಂಕಿಯ ಕಿಡಿ ಇಡೀ ಮ್ಯಾಂಚೆಸ್ಟರ್‌ನ್ನು ಸುಟ್ಟು ಹಾಕುತ್ತದೆ" ಎಂದು ಹೇಳಿದರು. ಈ ತೆರೆನಾದ ಸಭೆ ಮತ್ತು ಸಮ್ಮೇಳನಗಳಿಂದ ಸ್ಪೂರ್ತಿ ಪಡೆದ ಹಲವು ಅಂಗಡಿಯ ವರ್ತಕರು ಇಂಗ್ಲೆಂಡಿನಿಂದ ರವಾನೆಯಾಗುತ್ತಿದ್ದ ಬಟ್ಟೆಯ ಉತ್ಪನ್ನಗಳನ್ನು ಮಾರಾಟ ಮಾಡುತ್ತಿದ್ದವರು ಭಾರಿ ರಾಶಿಯ ಬಟ್ಟೆಗಳನ್ನು ಬ್ಲಾಕ್‌ಪಲ್ಲಿಯ ಮೈದಾನಕ್ಕೆ ತಂದು ಸುಟ್ಟುಹಾಕಿದರು. ಡಿಕೆನ್‌ಸನ್ ರಸ್ತೆ ಈ ರೀತಿಯ ಚಟುವಟಿಕೆಗಳ ಕೇಂದ್ರವಾಗಿ ಮಾರ್ಪಟ್ಟಿತ್ತು. ಬೆಂಗಳೂರಿನ ಹಾಜೀ ಒಸ್ಮಾನ್ ಸೇಠ್ ಎಂಬ ಪ್ರಬಲ ಶ್ರೀಮಂತ ವರ್ತಕ ತಮ್ಮ ಲಕ್ಷಾಂತರ ರೂಪಾಯಿಯ ಆಸ್ತಿಯನ್ನು ಮಾರಾಟ ಮಾಡಿದರು. ಬಂದ ಹಣದಿಂದ ರಾಷ್ಟ್ರೀಯ ಶಾಲಾ–

ಕಾಲೇಜುಗಳನ್ನು ತೆರೆಯಲು, ಪತ್ರಿಕೆಗಳನ್ನು ಮುದ್ರಿಸಲು, ಖಿಲಾಫತ್ ಚಳುಚಳಿಯ ಅನುಚಾರರ ಕಾರ್ಯ ಚಟುಚಟಿಕೆಗಳಿಗೆ ಹಣವನ್ನು ಖರ್ಚು ಮಾಡಿದರು. ಖಿಲಾಫತ್ ಚಳುಚಳಿಯು ಬೆಂಗಳೂರಿನವರ ಮೇಲೆ ಅಷ್ಟಾಗಿ ಪ್ರಭಾವಿಸಲಿಲ್ಲ. ಕಾರಣ ರಾಷ್ಟ್ರೀಯ ನಾಯಕರಿಗೆ ಮೈಸೂರಿನ ಮಹಾರಾಜರನ್ನು ಸಂಕಷ್ಟಕ್ಕೆ ಸಿಲುಕಿಸುವುದು ಇಷ್ಟವಿರಲಿಲ್ಲ.[೨೨]

ನಂತರದ ದಿನಗಳಲ್ಲಿ ಬೆಂಗಳೂರು ಪ್ರದೇಶ ಸ್ವಾತಂತ್ರ್ಯ ಹೋರಾಟದಲ್ಲಿ ಮುಂಚೂಣಿಕೆಯನ್ನು ಪಡೆಯಲಾರಂಭಿಸಿತು. ೧೯೨೪ರಲ್ಲಿ ಮೊಟ್ಟ ಮೊದಲ ಬಾರಿಗೆ ಬೆಂಗಳೂರಿನಲ್ಲಿ ಸ್ವರಾಜ್ಯ ಪಕ್ಷದ ಶಾಖೆಯನ್ನು ಸ್ಥಾಪಿಸಲಾಯಿತು. ೧೯೨೭ರಲ್ಲಿ ಗಾಂಧೀಜಿಯವರು ಖಾದಿ ಪ್ರಚಾರಕ್ಕಾಗಿ ಇಲ್ಲಿಗೆ ಬಂದು, ನಂತರ ರಾಜ್ಯದ ಎಲ್ಲೆಡೆ ಪ್ರಚಾರವನ್ನು ಮಾಡಿದರು.[೨೩] ಗಾಂಧೀಜಿಯವರು ಕಾಂಗ್ರೆಸ್ಸಿನಿಂದ ಹೊರಗುಳಿದಾಗ ಚಳುವಳಿ ಗೌಣವಾಯಿತ್ತಲ್ಲದೆ ಆರ್ಥಿಕ ಸಂಕಷ್ಟಕ್ಕೆ ಕಾಂಗ್ರೆಸ್ ಸಿಲುಕಿತು. ಮೋತಿಲಾಲ್ ನೆಹರೂ ಗಾಂಧೀಜಿಯವರನ್ನು ಮತ್ತೆ ಕಾಂಗ್ರೆಸ್ಸಿನ ವಾಹಿನಿಗೆ ಬರಬೇಕೆಂದು ತಮ್ಮ ಅನಿಸಿಕೆಯನ್ನು ತಿಳಿಸಿದರು. ಕಾಂಗ್ರೆಸ್ಸಿನಲ್ಲಿ ಹಲವು ನಾಯಕರು ವ್ಯಾಪಾರಿ ಹಿನ್ನೆಲೆಯ ಕುಂಟುಂಬದಿಂದ ಬಂದಿದ್ದರು ಸಹ ಗಾಂಧೀಜಿಯವರಂತೆ ಎಲ್ಲರನ್ನು ಒಂದುಗೂಡಿಸುವ ಸಾಮರ್ಥ್ಯವಿರಲಿಲ್ಲ.[೨೪] ಗಾಂಧೀಜಿಯವರು ಕಾನೂನು ಭಂಗ ಚಳುಚಳಿಯನ್ನು ಪ್ರಾರಂಭಿಸಿದರು. ಫಲವಾಗಿ, ೧೯೩೦ರಲ್ಲಿ ಸ್ವಾತಂತ್ರ್ಯದ ಹೋರಾಟದ ಅಂಗವಾಗಿ ಸೊಲ್ಲಾಪುರದಲ್ಲಿ ಒಂದು ಚಳುಚಳಿಯನ್ನು ನಡೆಸಲಾಯಿತು. ಅದು ಹಿಂಸೆಗೆ ತಿರುಗಿದಾಗ ಸರ್ಕಾರ ಇದಕ್ಕೆ ಕಾರಣರಾದ ಮಲ್ಲಪ್ಪದನಶೆಟ್ಟಿ, ಶ್ರೀಕೃಷ್ಣ ಸರ್ದಾರ್, ಕುರ್ಬಾನ್ ಹುಸೇನ್, ಜಗನ್ನಾಥ ಸಿಂಧೆ ಮೊದಲಾದವರನ್ನು ಗಲ್ಲಿಗೇರಿಸಿತು. ಈ ಘಟನೆಯನ್ನು ಖಂಡಿಸಿ ಬೆಂಗಳೂರಿನಲ್ಲಿ ಹರತಾಳ ಸಂತಾಪ ಪ್ರದರ್ಶನವನ್ನು ಹಮ್ಮಿಕೊಳ್ಳಲಾಯಿತು.[೨೫]

೧೯೩೧ರಲ್ಲಿ ಕಾಂಗ್ರೆಸ್ ಅಧ್ಯಕ್ಷರಾದ ನೆಹರು, ಅವರ ಪತ್ನಿ ಕಮಲಾ ನೆಹರು ಮತ್ತು ಮಗಳು ಇಂದಿರಾ ಬೆಂಗಳೂರಿನ ಅರಳೆಪೇಟೆಯಲ್ಲಿ ತಂಗಿದರು.[೨೬] ನೆಹರೂರವರು ಧರ್ಮಾಂಬುಧಿ ಕೆರೆಯ ಮೈದಾನದಲ್ಲಿ ಧ್ವಜಾರೋಹಣ ಮಾಡಿದರು. ಆದರೆ ಧ್ವಜವನ್ನು ಯಾರೋ ಕಿತ್ತೆಸೆದರು. ಬೆಂಗಳೂರಿನವರ ವರ್ತನೆಯನ್ನು ನೆಹರೂ ಖಂಡಿಸಿದರು. ಇದಕ್ಕೆ ಗಾಂಧೀಜಿಯವರು ಮೈಸೂರು ಪ್ರಭುತ್ವ ಬ್ರಿಟಿಶ್ ಆಡಳಿತ ವೈಖರಿಯ ಬಗ್ಗೆ ಯಾವುದೇ ಪ್ರತಿರೋಧವನ್ನು ವ್ಯಕ್ತಪಡಿಸದಿದುದನ್ನು ಹಾಗೂ ಬೆಂಗಳೂರಿನ ಜನರ ಸ್ವಾತಂತ್ರ್ಯ ಹೋರಾಟದ ಅನಾಸಕ್ತಿಯ ಬಗ್ಗೆ ಪ್ರತಿಕ್ರಿಯಿಸುತ್ತಾ- ಧ್ವಜರಕ್ಷಣೆ ಮಾಡಲು ಅಸಮರ್ಥರಾದ ಜನರು ಸ್ವಾತಂತ್ರ್ಯ ಹೋರಾಟಕ್ಕೆ ಅರ್ಹರೆ? ಎಂದು ಟೀಕಿಸಿದರು.[೨೭] ೧೯೩೩ರಲ್ಲಿ ಮಹಾತ್ಮಗಾಂಧಿಯವರು ೨೧ದಿನಗಳ ಕಾಲ ಸತ್ಯಾಗ್ರಹ ಮಾಡಿದರು. ಈ ಅವಧಿಯಲ್ಲಿ ಬೆಂಗಳೂರಿನ ಮೆಜೆಸ್ಟಿಕ್ ಚಿತ್ರಮಂದಿರದಲ್ಲಿ ಮೈಸೂರು ಸ್ಟೇಟ್ ಪೀಪಲ್ಸ್

ಕಾನ್‌ಫರೆನ್ಸ್‌ನ್ನು ಕೆ.ಟಿ. ಸತ್ಯನಾರಾಯಣ ಶೆಟ್ಟರ ಅಧ್ಯಕ್ಷತೆಯಲ್ಲಿ ನಡೆಸಿದರು.[೭೮] ಇದರ ಉದ್ದೇಶ ಜನರಲ್ಲಿ ರಾಷ್ಟ್ರೀಯ ಜಾಗೃತಿಯನ್ನು ಮೂಡಿಸುವುದಾಗಿತ್ತು.

೧೯೩೪ರಲ್ಲಿ ಮಹಾತ್ಮಗಾಂಧೀಜಿಯವರು ಬೆಂಗಳೂರಿಗೆ ಭೇಟಿಯಿತ್ತಾಗ ಪಾಮಡಿ ಸುಬ್ಬರಾಮ ಶೆಟ್ಟರು ನ್ಯಾಷನಲ್ ಹೈಸ್ಕೂಲ್ ಮೈದಾನದಲ್ಲಿ ಬಹಿರಂಗ ಸಭೆಗೆ ಬೇಕಾದ ಸಕಲ ಸಿದ್ದತೆಯನ್ನು ಏರ್ಪಡಿಸಿದ್ದರು. ಹರಿಜನೋದ್ಧಾರದ ಬಗ್ಗೆ ತಿಳಿಯಲು ಸಾವಿರಾರು ಜನರು ಭಾಗವಹಿಸಿದರು.[೭೯] ಈ ರೀತಿಯ ಬಹಿರಂಗ ಸಭೆಗಳನ್ನು ನಡೆಸಬಾರದೆಂದು ಮೈಸೂರು ಪ್ರಭುತ್ವ ಆದೇಶವನ್ನು ಹೊರಡಿಸಿತು. ಹಾಗಿದ್ದಾಗಲೂ ಕೂಡ ೧೯೩೫ರಲ್ಲಿ ಕಾಂಗ್ರೆಸ್ ಮಹಾಸಂಸ್ಥೆಯ ಸುವರ್ಣ ಮಹೋತ್ಸವ ಬೆಂಗಳೂರಿನಲ್ಲಿ ಅದ್ದೂರಿಯಾಗಿ ವರ್ತಕ ಸಮುದಾಯದ ಕೆ. ಪಿ. ಪುಟ್ಟಣ್ಣ ಶೆಟ್ಟರ ಅಧ್ಯಕ್ಷತೆಯಲ್ಲಿ ನಡೆಯಿತು.[೮೦] ಇದಾದ ನಂತರ ಕಾಂಗ್ರೆಸ್‌ನ ಚುನಾವಣೆಯಲ್ಲಿ ಭಾಗವಹಿಸಲು ಪ್ರೋತ್ಸಾಹಿಸಲು ಒಂದು ಸಮಿತಿ ರಚಿಸಿತು. ಸಮಿತಿಯ ಸದಸ್ಯರಲ್ಲಿ ಪ್ರಬಲ ವರ್ತಕ ಸಮುದಾಯದವರಾದ ಬಿ.ಎನ್. ಗುಪ್ತ, ಕೆ.ಟಿ. ಸತ್ಯನಾರಾಯಣ ಶೆಟ್ಟಿ, ಸಂಪಿಗೆ ವೆಂಕಟಪತಯ್ಯ, ಎಚ್.ಕೆ. ವೀರಣ್ಣಗೌಡ ಮುಂತಾದವರು ನೇಮಕಗೊಂಡರು.[೮೧] ಆದರೆ ಚುನಾವಣಾ ಪ್ರಚಾರ ಕಾರ್ಯಕ್ರಮ ಪ್ರಾರಂಭಿಸಿದಾಗ ಮೈಸೂರು ಪ್ರಭುತ್ವ ಹಲವು ರೀತಿಯ ಅಡ್ಡಿಯನ್ನುಂಟು ಮಾಡಿದಲ್ಲದೆ ಪ್ರತಿಬಂಧಕಾಜ್ಞೆಯನ್ನು ಹಾಕಿತು.

ಬೆಂಗಳೂರಿನಲ್ಲಿ ಈ ತೆರನಾದ ಚಟುಚಟಿಕೆಗಳ ಬಗೆಗೆ ಕಾಂಗ್ರೆಸ್ಸಿನ ಧ್ವಜ ಮೈಸೂರು ರಾಜ್ಯದ ವಿರೋದಿಯಲ್ಲ. ಕಾಂಗ್ರೆಸ್ ರಾಷ್ಟ್ರೀಯ ಮಹಾಸಂಸ್ಥೆಯಾಗಿದೆ ಎಂಬುದನ್ನು ಮೈಸೂರು ಪ್ರಭುತ್ವಕ್ಕೆ ಅರ್ಥೈಸಿ ನೆಹರೂ ಈ ರೀತಿಯಾಗಿ ಪ್ರಶ್ನಿಸುತ್ತಾ "ಕಾಂಗ್ರೆಸ್ ಕಾರ್ಯಕರ್ತರಿಗೆ ಸಂಸ್ಥಾನಕ್ಕೆ ಬರಲು ಅವಕಾಶವಿದೆಯೋ ಇಲ್ಲವೋ, ಮೈಸೂರು ಪ್ರಭುತ್ವದ ಪ್ರದೇಶದಲ್ಲಿ ಕಾಂಗ್ರೆಸ್ ಸದಸ್ಯರು ಪ್ರಚಾರ ಮಾಡಲು, ಸಮಿತಿ ರಚಿಸಲು, ಕಾಂಗ್ರೆಸ್ಸಿನ ಧ್ವಜವನ್ನು ಹಾರಿಸಲು ಅವಕಾಶ ಇದೆಯೇ?" ಎಂದು ಹೇಳುತ್ತಾ ಸ್ಪಷ್ಟೀಕರಣ ನೀಡಬೇಕೆಂದು ಕೇಳಿಕೊಂಡರು. ಅದಕ್ಕೆ ಪ್ರತಿಕ್ರಿಯೆ ನೀಡುತ್ತಾ ಮಿರ್ಜಾ ಹೀಗೆ ನುಡಿದರು–"ಮೈಸೂರು ಪ್ರಭುತ್ವ ಕಾಂಗ್ರೆಸ್ಸಿನ ರಚನಾತ್ಮಕ ಕಾರ್ಯಗಳಿಗೆ ಸಂಪೂರ್ಣ ಬೆಂಬಲ ನೀಡುತ್ತದೆ. ಖಾದಿ ತಯಾರಿಕೆ, ರಸ್ತೆಗಳ ವಿಸ್ತರಣೆ, ಹರಿಜನೋದ್ಧರ ಕಾರ್ಯಗಳನ್ನು ತಮ್ಮ ಪ್ರಭುತ್ವದ ನೇತೃತ್ವದಲ್ಲಿ ಹಮ್ಮಿಕೊಳ್ಳಲಾಗಿದೆ. ಅದಕ್ಕೆ ಪೂರ್ಣ ಪ್ರಮಾಣದ ಬೆಂಬಲ ಸಹಕಾರ ನೀಡುತ್ತಿದೆ" ಎಂದರು.[೮೨]

ಗಾಂಧೀಜಿಯವರ ಕಾನೂನುಭಂಗ ಚಳುವಳಿಯ ಕರೆಗೆ ಭಾರತದೆಲ್ಲೆಡೆ ಬೆಂಬಲ ವ್ಯಕ್ತವಾಗುತ್ತಾ ವರ್ತಕರು, ಮಹಿಳೆಯರು, ಗೃಹಿಣಿಯರು, ಕಾರ್ಮಿಕರು ಹೀಗೆ ಎಲ್ಲಾ ವರ್ಗದವರು ಸಹ ಚಳುವಳಿ ಪಾಲ್ಗೊಳ್ಳತೊಡಗಿದರು. ಪರಿಣಾಮವಾಗಿ, ಹಲವು ಸ್ವಾತಂತ್ರ್ಯ ಹೋರಾಟಗಾರರನ್ನು ಪ್ರಭುತ್ವ

ಸೆರೆಹಿಡಿಯಿತು. ರಾಜ್ಯದ ಹೋರಾಟಗಾರರಲ್ಲಿ ಹಲವರು ಜೈಲು ಸೇರಿದರು. ಇವರಲ್ಲಿ ಪ್ರಹ್ಲಾದಶೆಟ್ಟಿ, ಉಗ್ರಪ್ಪ, ಹನುಮಂತಪ್ಪ, ಬಿ.ಕೃಷ್ಣಮೂರ್ತಿ ಮುಂತಾದವರು ಸೆರೆಮನೆಯಲ್ಲಿ ಮೃತರಾದರು.[೮೩] ಈ ಘಟನೆಯ ಪ್ರಮುಖ ಅಂಶವೆಂದರೆ ಈ ಹೊತ್ತಿಗಾಗಲೇ ವರ್ತಕರು ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡರೆಂಬುದನ್ನು ತಿಳಿಯಬಹುದಾಗಿದೆ. ಕಾರಣ ಬ್ರಿಟಿಶ್‌ರ ಆರ್ಥಿಕತೆಯ ಕಾರ್ಯವೈಖರಿಯು ಸಣ್ಣ ಮತ್ತು ಮಧ್ಯಮ ಉತ್ಪಾದಿತ ವರ್ತಕ ಸಮುದಾಯದ ಮತ್ತು ವಿನಿಮಯ ವರ್ತಕ ಸಮುದಾಯದವರ ವೃತ್ತಿ ಮೇಲೆ ಯಂತ್ರೋಪಕರಣದ ಉತ್ಪನ್ನಗಳು, ಬ್ರಿಟಿಶ್‌ರ ತೆರಿಗೆಗಳು ಬರೆಯನ್ನು ಹಾಕಿತ್ತು ಎಂಬುದು ಗಮನಿಸಬೇಕಾದ ಅಂಶ.

ಮಾರ್ವಾಡಿ ಮತ್ತು ಗುಜರಾತಿಯ ವರ್ತಕ ಸಮುದಾಯದವರು ಸ್ವಾತಂತ್ರ್ಯ ಹೋರಾಟದಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಕಾಂಗ್ರಸ್‌ನ ಪ್ರಮುಖ ವ್ಯಕ್ತಿಯಾದ ಕೆ.ಸಿ ರೆಡ್ಡಿಗೆ ಹೋರಾಟದಲ್ಲಿ ಬೆಂಬಲವಾಗಿ ನಿಂತವರು ಸೇಠ್ ವಿಜಯಚಂದ್ ಬಾಫ್ನಾ ಮತ್ತು ಅವರ ಹೆಂಡತಿ ಪಣಿಬಾಯಿ. ಇದೇ ಸಂದರ್ಭದಲ್ಲಿ ಹೋರಾಟದಲ್ಲಿ ಭಾಗವಹಿಸಿ ಬೆಂಗಳೂರಿನಲ್ಲಿದ್ದ ಚಿಕ್ಕಬಳ್ಳಾಪುರದ ಲೋಧಾ ಪರಿವಾರ ಜೈಲುವಾಸವನ್ನೂ ಅನುಭವಿಸಿತು. ಸ್ವಾತಂತ್ರ್ಯ ಹೋರಾಟದಲ್ಲಿ ಬ್ರಿಟಿಶ್‌ರ ಆಡಳಿತ ಕಾರ್ಯ ವೈಖರಿಯ ಬಗೆಗೆ ಪ್ರಚಾರ ಮಾಡಿ ಜನರನ್ನು ಬ್ರಿಟಿಶ್‌ರ ವಿರುದ್ಧ ಹೋರಾಟದಲ್ಲಿ ಸಂಘಟಿಸುವುದೇ ದೇಶದ್ರೋಹದ ಕೆಲಸ ಎಂದು ಭಾವಿಸುವ ಸಂದರ್ಭದಲ್ಲಿಯೂ ಸಹ ಜೋಧರಾಜ್‌ಜೀ ಸುರಾನಾ ಮತ್ತು ಶರಣ್‌ಜೀ ಸ್ವಾತಂತ್ರ್ಯ ಹೋರಾಟಗಾರರಿಗೆ ಹಲವು ರೀತಿಯ ಸಹಾಯ ನೀಡಿದ್ದರು. ಅದರಲ್ಲೂ ಪ್ರಮುಖ ವರ್ತಕರಾದ ಶಂಭೂಮಲ್ ಗಂಗೂರಾಮ್ ಪೇಡಿರವರು ಸ್ವಾತಂತ್ರ್ಯ ಹೋರಾಟದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ವಿಕ್ಟೋರಿಯಾ ರಸ್ತೆಯಲ್ಲಿರುವ ಅವರ ಬಂಗಲೆಯಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ಜನರನ್ನು ಸಜ್ಜುಗೊಳಿಸಲು ಬರುವ ರಾಷ್ಟ್ರೀಯ ನಾಯಕರಿಗೆ ಊಟ, ವಸತಿ ಇನ್ನಿತರ ಸೌಲಭ್ಯಗಳನ್ನು ನೀಡುತ್ತಿದ್ದರು. ಹೀಗೆ ಬೆಂಗಳೂರಿಗೆ ಬರುವ ರಾಷ್ಟ್ರೀಯ ನಾಯಕರನ್ನು ಕರೆತರುವುದು ಅವರಿಗೆ ಬೇಕಾದ ಎಲ್ಲಾ ರೀತಿ ಸಹಾಯ ಸಹಕಾರ ಬೆಂಬಲವನ್ನು ನೀಡಿ ರಾಷ್ಟ್ರೀಯ ಚಳುವಳಿಯಲ್ಲಿ ತಮ್ಮನ್ನು ತೊಡಗಿಕೊಂಡಿದ್ದ ಹಲವು ವರ್ತಕ ಸಮುದಾಯದವರನ್ನು ಕಾಣಬಹುದಾಗಿದೆ. ಮಹಾತ್ಮಾಗಾಂಧಿ ಪ್ರತಿ ಭಾರಿ ಬೆಂಗಳೂರಿಗೆ ಬಂದಿದ್ದಾಗಲೂ ಇಲ್ಲಿಯ ಪ್ರಮುಖ ವರ್ತಕರಾದ ಶಂಭೂಮಲ್ ಗಂಗೂರಾಮ್ ಪೇಡಿ, ಕಾಲೂರಾಮ ಶ್ರೀ ಶ್ರೀಮಾಲಿ, ಜಯನಾರಾಯಣ ವ್ಯಾಸ್ ಮೊದಲಾವರನ್ನು ಭೇಟಿ ಮಾಡುತ್ತಿದ್ದರೆಂಬುದು ವರ್ತಕರು ಸ್ವಾತಂತ್ರ್ಯ ಹೋರಾಟದಲ್ಲಿ ತೊಡಗಿಸಿಕೊಂಡಿದರೆಂಬುದನ್ನು ತಿಳಿಸುತ್ತದೆ.[೮೪]

ಹೀಗೆ ಸ್ವಾತಂತ್ರ್ಯ ಹೋರಾಟದ ಹಿನ್ನೆಲೆಯಲ್ಲಿ ವರ್ತಕ ಸಮುದಾಯಗಳು ತಮ್ಮದೇ ಆದ ರೀತಿಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿದ್ದಾರೆ. ವರ್ತಕ ಸಮುದಾಯದವರ ಪ್ರಮುಖ ಗುಣವೆಂದರೆ,

ಅವರ ಕೊಡುಗೆಯನ್ನು ಕಾಣದ ಕೈಯಾಗಿ ತಮ್ಮ ವ್ಯಾಪಾರವನ್ನು ಬದಿಗಟ್ಟಿ ರಾಷ್ಟ್ರೀಯ ಹೋರಾಟಕ್ಕೆ ಧುಮುಕಿದರು. ಈ ವರ್ತಕ ಸಮುದಾಯಗಳ ಬಗೆಗೆ ಐತಿಹಾಸಿಕ ಅಧ್ಯಯನಗಳು ಆಗಬೇಕಾಗಿದೆ.

## ೭.೫. ಬಹುತ್ವದ ಸೇವೆಗಳು

ಬೆಂಗಳೂರು ಪೇಟೆಯಲ್ಲಿದ್ದ ವೀರಶೈವ ಮಠಗಳು ಬಣಜಿಗರ ಧಾರ್ಮಿಕ ಕೇಂದ್ರ ಮಾತ್ರವಾಗಿರದೇ ಅವರ ಅಂತ್ಯಸಂಸ್ಕಾರದ ಕೇಂದ್ರವೂ ಆಗಿತ್ತು. ೧೮೬೭–೬೮ರ ವೇಳೆಗೆ ಬೆಂಗಳೂರು ರೈಲ್ವೆ ಕಾಮಗಾರಿ ಮತ್ತು ಬೆಂಗಳೂರು ಮುನಿಸಿಪಲ್ ಸರಹದ್ದಿನ ಬೆಳವಣಿಗೆಯಿಂದಾಗಿ ಮಠಗಳ ಆಸ್ತಿ–ಪಾಸ್ತಿಗಳನ್ನು ಪ್ರಭುತ್ವವು ವಶಪಡಿಸಿಕೊಂಡಾಗ ಪಟ್ಟಣದ ಮೂರು ಪೇಟೆಗಳ ಶೆಟ್ಟಿ ಯಜಮಾನರುಗಳ ನೇತೃತ್ವದಲ್ಲಿ ಬಣಜಿಗ ಸಮುದಾಯದವರೆಲ್ಲಾ ಸೇರಿ ೧೬೭೯ರಲ್ಲಿ ಪ್ರಭುತ್ವಕ್ಕೆ ಮನವಿಯನ್ನು ಸಲ್ಲಿಸಿದರು. ಅದರಲ್ಲಿ ನಮ್ಮ ಪೇಟೆಗಳಿಗೆ ಸರಹದ್ದಿನಲ್ಲಿದ್ದ ಏಳೆಂಟು ಮಠಗಳು ನಮ್ಮ ಜನಗಳ ಶವಗಳನ್ನು ದಫನ್ ಮಾಡಲು ಸಾಧ್ಯವಾಗುತ್ತಿಲ್ಲ. ಆದ್ದರಿಂದ ಬಣಜಿಗರ ಸಮುದಾಯಗಳ ಶವಸಂಸ್ಕಾರಕ್ಕೆ ತೊಂದರೆಯಾಗುತ್ತಿದೆ. ಪ್ರಭುತ್ವವು ಈ ಸಮಸ್ಯೆಗೆ ಶ್ರೀಘ್ರ ಪರಿಹಾರ ಕಾರ್ಯವನ್ನು ಕೈಗೊಳ್ಳಬೇಕೆಂದು ಕೇಳಿಕೊಂಡರು.[೮೫] ಅಂದರೆ ರೈಲ್ವೆಯ ನಿರ್ಮಾಣದ ಸಂದರ್ಭದಲ್ಲಿ ವರ್ತಕ ಸಮುದಾಯಗಳಿಗೆ ಸೇರಿದ ಹಲವು ಪ್ರದೇಶಗಳು ಮತ್ತು ಇವರಿಂದ ಮಠಗಳಿಗೆ ದಾನವಾಗಿ ನೀಡಲ್ಪಟ್ಟ ಭೂ ಪ್ರದೇಶಗಳು ಮತ್ತು ತೋಟಗಳು, ಕೃಷಿ ಪ್ರದೇಶಗಳು ಕಾಮಗಾರಿಯ ಹೆಸರಿನಲ್ಲಿ ಪ್ರಭುತ್ವ ಮತ್ತು ನಗರದ ಅಭಿವೃದ್ಧಿಗೆ ನೀಡಿದರೆಂದು ತಿಳಿಯಬಹುದಾಗಿದೆ.

೨೦ನೇ ಶತಮಾನದ ಪೂರ್ವಾರ್ಧದಲ್ಲಿ ನಗರದ ಸುಂಕೇನಹಳ್ಳಿಯಲ್ಲಿದ್ದ ಮೇಲಿನಮಠ ಮತ್ತು ಕೆಳಗಿನ ಮಠಗಳೆರಡೂ ಬೆಂಗಳೂರಿನ ಪ್ರಮುಖವಾದ ಅಂತ್ಯಸಂಸ್ಕಾರದ ಕೇಂದ್ರಗಳಾಗಿದ್ದವು. ೧೯೧೬ರಲ್ಲಿ ದೊಡ್ಡಪೇಟೆಯ ದೇಶದ ಸಿದ್ದಬಸಪ್ಪಶೆಟ್ಟಿಯವರಿಗೆ ಮುನಿಸಿಪಲ್ ಹೆಲ್ತ್ ಆಫೀಸಿನವರು ಒಂದು ನೋಟಿಸನ್ನು ಜಾರಿ ಮಾಡಿದರು. ಅದರಂತೆ ಬಸಪ್ಪಶೆಟ್ಟಿ ಮಠದ ಆವರಣಗಳಲ್ಲಿರುವ ಕಲ್ಯಾಣಿಗಳನ್ನು ಅಚ್ಚುಕಟ್ಟು ಮಾಡಿಸಿ ಸುತ್ತಲೂ ಪೌಳಿಗೋಡೆ ಹಾಕಿಸಿದರು ಮತ್ತು ಸಮಾಧಿ ಮಾಡುವ ರುದ್ರಭೂಮಿಯ ಸ್ಥಳಗಳನ್ನು ಅಚ್ಚುಕಟ್ಟಾಗಿ ಮಾಡಿಸಿದರು.[೮೬] ಬೆಂಗಳೂರು ಮುನಿಸಿಪಲ್ ಕಮಿಟಿಗಳು ಬೆಂಗಳೂರಿನ ನೈರ್ಮಲ್ಯತೆಯ ಕಾರ್ಯಗಳನ್ನು ತಾವು ಕೈಗೊಳ್ಳದೆ ಪೇಟೆಯ ಪ್ರಮುಖ ಶೆಟ್ಟಿಗಳ ಮೂಲಕ ಮಾಡಿಸುತ್ತಿದರು ಎಂಬುದು ಗಮನಿಸಬೇಕಾದ ಅಂಶವಾಗಿದೆ.

ಬೆಂಗಳೂರು ಪ್ರದೇಶಕ್ಕೆ ಸೇರಿದ ಹೊಸಕೋಟೆ ತಾಲೂಕು ಜೋಡಿವೀರನ ಹಳ್ಳಿಯಲ್ಲಿ ಎಲೆ ಮಲ್ಲಪ್ಪಶೆಟ್ಟರು ಕೆರೆಯನ್ನು ಕಟ್ಟಿದರು. ಮುಂದೆ ಹೆಸರುಘಟ್ಟ ಜಲಾಶಯದಲ್ಲಿ ನೀರಿಲ್ಲದೆ ಬೆಂಗಳೂರಿನಲ್ಲಿ ನೀರಿನ ಸಮಸ್ಯೆ ತಲೆದೋರಿದಾಗ ಇವರು ನಿರ್ಮಿಸಿದ ಕೆರೆಯಿಂದ ನೀರನ್ನು ಸರಬರಾಜು ಮಾಡಲಾಯಿತು. ಇದರಿಂದ ೧೫೦ ಎಕರೆ ಭೂಮಿಗೆ ನೀರಾವರಿ ಸೌಲಭ್ಯವನ್ನು

ಒದಗಿಸಲಾಯಿತು. ನಂತರದ ದಿನಗಳಲ್ಲಿ ತಿಪ್ಪಗೊಂಡನಹಳ್ಳಿ ಜಲಾಶಯ ನಿರ್ಮಿಸಿದರು ಸಹ ದ್ವಿತೀಯ ಮಹಾಯುದ್ಧದ ಸಂದರ್ಭದಲ್ಲಿ ಈ ಕೆರೆಯ ನೀರನ್ನೇ ಬಳಸಲಾಯಿತು. ಮುಂದೆ ಸುಮಾರು ೧೪ ವರ್ಷಗಳ ಕಾಲ ಉಪಯೋಗಿಸಿಕೊಂಡದಕ್ಕಾಗಿ ಮೈಸೂರು ಸರ್ಕಾರವು ಇವರ ಮನೆತನಕ್ಕೆ ಪರಿಹಾರ ಧನವನ್ನು ನೀಡಿತು.[೮೭]

ಪ್ರಥಮ ಮಹಾಯುದ್ದದ ಸಂದರ್ಭದಲ್ಲಿ ಪ್ರಸಿದ್ಧ ವರ್ತಕರಾದ ಸೈಯದ್ ಅಹಮದ್ ಅವರು ೧೩೫ ಹೊಸ ಸೈನಿಕರು ನೇಮಿಸಲು ಕಾರಣರಾದರು. ಯುದ್ಧದಲ್ಲಿ ಜಯವು ಮಿತ್ರಪಕ್ಷದ ಕಡೆಯಾದಾಗ ಹಳೇ ತರಗು ಪೇಟೆ ಗಾಣಿಗರ ಪೇಟೆ, ನಗರ್ತರಪೇಟೆಗಳಲ್ಲಿ ಪ್ರಸಿದ್ಧ ವ್ಯಾಪಾರಿಗಳಾದ್ದ ಮಂಡಿ ಹರಿಯಣ್ಣ, ಯಜಮಾನ್ ಬಸವಪ್ಪ ಮತ್ತು ಬಿ. ರಾಜಪ್ಪನವರು ಸೇರಿ ಆರು ಸಾವಿರಕ್ಕೂ ಹೆಚ್ಚು ಜನರಿಗೆ ಭಾರಿ ಭೋಜನವನ್ನು ಏರ್ಪಡಿಸಿದ್ದರು.[೮೮] ಮುನಿಸಿಪಲ್ ಕೌನ್ಸಿಲರ್‌ಗಳಾದ ಬಿ. ಉಸ್ಮಾನ್‌ಖಾನ್ ಅವರು ಗಾಣಿಗರ ಪೇಟೆಯಲ್ಲಿ ಸುಮಾರು ಎರಡು ಸಾವಿರ ಜನ ಮುಸ್ಲಿಮ್ ಬಡವರಿಗೆ ಅನ್ನದಾನವನ್ನು ಮಾಡಿದರು.[೮೯]

ಒಟ್ಟಾರೆಯಾಗಿ ಬೆಂಗಳೂರಿನಲ್ಲಿ ನೆಲೆಸಿದ ವರ್ತಕ ಸಮುದಾಯಗಳು ವ್ಯಾಪಾರವನ್ನೇ ಅವರ ಪ್ರಧಾನವಾದ ವೃತ್ತಿಯನ್ನಾಗಿ ನಂಬಿ ತಮ್ಮ ಕಾರ್ಯಚಟುವಟಿಕೆಗಳನ್ನು ಸೀಮಿತಗೊಳಿಸದೆ ಸಾಮಾಜಿಕ, ಧಾರ್ಮಿಕ, ರಾಷ್ಟ್ರೀಯ ಪ್ರಜ್ಞೆಯನ್ನು ಹೊಂದಿರುವುದನ್ನು ಕಾಣಬಹುದು. ಇದರ ಫಲವಾಗಿ ಬೆಂಗಳೂರು ಪ್ರದೇಶಕ್ಕೆ ಕಾಲ ಬದಲಾದಂತೆ ಒಂದು ಹೊಸ ಸ್ವರೂಪ ಮತ್ತು ಸಂಸ್ಕೃತಿಯನ್ನು ನೀಡುವುದರಲ್ಲಿ ಅವರ ಪಾತ್ರವನ್ನು ಈ ಮೇಲಿನ ವಿಚಾರಗಳಿಂದ ತಿಳಿಯಬಹುದಾಗಿದೆ. ಈ ತೆರನಾದ ವಿವಿಧ ಕ್ಷೇತ್ರಗಳ ಬಹುಮುಖಿ ಕಾರ್ಯಚಟುವಟಿಕೆಗಳು ಬೆಂಗಳೂರು ನಗರದ ವ್ಯಾಪ್ತಿ ಮತ್ತು ನಗರದ ಬೆಳವಣಿಗೆಗೆ ಪೂರಕ ವಾತಾವರಣವನ್ನು ಸೃಷ್ಟಿಸಿತು ಎಂದರೆ ತಪ್ಪಾಗಲಾರದು. ಇದರ ಬಗೆಗೆ ಇನ್ನೂ ಅಧ್ಯಯನಗಳು ನಡೆಯಬೇಕಾಗಿದೆ.

**ಕೊನೆಟಿಪ್ಪಣಿಗಳು**

೧. **ಲೆಟರ್ ಫ್ರಮ್ ಸೆಕ್ರೇಟರಿ ಟು ಗೌರ್ನಮೆಂಟ್ ಆಫ್ ಇಂಡಿಯಾ ನಂ. ೨೫ ಪಿ ಡಬ್ಲ್ಯೂ ಡಿ** (ಗೌರ್ನಮೆಂಟ್ ಆಫ್ ಇಂಡಿಯಾ) ಟು ದಿ ಕಮಿಷನರ್ ಆಫ್ ಮೈಸೂರು, ಕೆ ಎಸ್ ಎ ಬೆಂಗಳೂರು

೨. **ರಿಪೋರ್ಟ್ ಆಫ್ ದಿ ಇಂಡಿಯನ್ ಪ್ಲೇಗ್ ಕಮೀಷನ್**, ೧೮೯೮–೯೯, ವಾಲ್ಯೂಂ ೫, ಸಿವಿಲ್ ಅಂಡ್ ಮಿಲಿಟರಿ ಸ್ಟೇಶನ್, ಬ್ಯಾಂಗಲೂರ್, ಪುಟ–೨, ಕರ್ನಾಟಕ ರಾಜ್ಯ ಪತ್ರಾಗಾರ, ಬೆಂಗಳೂರು.

೩. ವಿಲಿಯಂ ಡಿಗ್ಬಿ, **ಫಾಮಿನ್ ಕ್ಯಾಂಪಜಿನ್ ಇನ್ ಸದರ್ನ್ ಇಂಡಿಯಾ** ೧೮೭೬–೧೮೭೮, ಸಂಪುಟ ೧, ೧೮೭೮, ಲಾಂಗ್‌ಮ್ಯಾನ್ ಗ್ರೀನ್ ಅಂಡ್ ಕೋ. ಪು.೪೧೬–೪೧೭

೪. ವೀರಪ್ಪ ಬಿ.ಸಿ., **ಬೆಂಗಳೂರು ನಗರದ ವೀರಶೈವ ಮಠಗಳು–ಒಂದು ಸಾಂಸ್ಕೃತಿಕ ಅಧ್ಯಯನ**, ೨೦೦೧, ಅಖಿಲ ಭಾರತ ಸಾಹಿತ್ಯ ಪರಿಷತ್ತು, ಮೈಸೂರು, ಪು.೨೪೬

೫. ಜಯಾ ರಾಜಶೇಖರ್, **ಎಲೆ ಮಲ್ಲಪ್ಪಶೆಟ್ಟರು**, ೧೯೮೭, ವೀರಶೈವ ಅಧ್ಯಯನ ಸಂಸ್ಥೆ, ಗದಗ, ಪು.೩೬–೩೭

೬. ಹಿರಿಯ ವಿದ್ಯಾರ್ಥಿಗಳು, **ಜನೋಪಕಾರಿ ದೊಡ್ಡಣಶೆಟ್ಟರವರ ಜೀವನ ಚರಿತ್ರೆ**, ೧೯೮೦, ಎಸ್. ಎಲ್. ಎನ್. ಧರ್ಮಸಂಸ್ಥೆ, ಬೆಂಗಳೂರು, ಪು.೮

೭. ಜಯಾ ರಾಜಶೇಖರ್, **ಪೂರ್ವೋಕ್ತ**, ಪು.೩೭

೮. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಈ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

೯. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಈ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

೧೦. ಚಂದ್ರಮೌಳಿ ಕೆ., **ಬೆಂಗಳೂರಿನ ನೋಟಗಳು**, ೨೦೦೨, ಪ್ರಸಮ್ ಬುಕ್ಸ್ ಪ್ರೈ.. ಲಿ, ಬೆಂಗಳೂರು, ಪು.೩೬

೧೧. ಅದೇ, ಪು.೩೭

೧೨. ಸುಶಿಲಾ ಜಿ. ಎಮ್., **ಅರ್ಬನೈಜೇಶನ್ ಇನ್ ಕಲೋನಿಯಲ್ ಮೈಸೂರು; ಎ ಸ್ಟಡಿ ಆಫ್ ಬ್ಯಾಂಗಲೂರ್**, ೨೦೦೬, ಯುನಿವರ್ಸಿಟಿ ಆಫ್ ಮೈಸೂರ್, ಮೈಸೂರು, ಪು.೧೬೫

೧೩. ಅದೇ, ಪು.೧೦೦

೧೪. ಚಂದ್ರಶೇಖರ್ ಎಸ್., **ದಕ್ಷಿಣ ಭಾರತ: ವಸಾಹತುಶಾಹಿ, ರಾಷ್ಟ್ರೀಯತೆ ಮತ್ತು ಸಂಘರ್ಷ**, ೨೦೦೦, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೫

೧೫. ೧೯೧೧ರ **ಜನಗಣತಿ ವರದಿ**, ಪು.೭

೧೬. ಅದೇ, ಪು.೭–೮

೧೭. ೧೯೧೧ರ **ಜನಗಣತಿ ವರದಿ**, ಪಾರ್ಟ್ ೨, ಪು.೭೪–೮೩

೧೮. ವೀರಪ್ಪ ಬಿ.ಸಿ., **ಪೂರ್ವೋಕ್ತ**, ಪು.೨೧೫

೧೯. ಅದೇ, ಪು.೨೧೫

೨೦. ಅದೇ, ಪು.೨೧೬

೨೧. ಅದೇ, ಪು.೨೧೭

೨೨. ಅದೇ, ಪು.೨೧೯

೨೩. ಅದೇ,ಪು.೨೨೧

೨೪. ಅದೇ, ಪು.೨೨೩

೨೫. ಅದೇ, ಪು.೨೨೨

೨೬. ಬಾಬು ಕೃಷ್ಣಮೂರ್ತಿ(ಲೇ), ೨೦೦೫, ಕುಟುಂಬ ವ್ಯವಸ್ಥೆ ಹಿನ್ನೆಲೆ, ಎಲ್. ಎಸ್. ಶೇಷಗಿರಿ ರಾವ್(ಸಂ), **ಬೆಂಗಳೂರು ದರ್ಶನ**, , ಉದಯಭಾನು ಕಲಾಸಂಘ, ಬೆಂಗಳೂರು, ಸಂಪುಟ–೧, ಪು.೭೯೮

೨೭. ೧೯೨೧ರ **ಜನಗಣತಿಯ** ವರದಿಯನ್ನು ಆಧಾರಿಸಿ.

೨೮. ಸೂರೇಶ್ ಮೂನ, **ಪೂರ್ವೋಕ್ತ**, ಪು.೩೨೨

೨೯. ಅದೇ, ಪು.೩೨೩

೩೦. ಶೇಷಗಿರಿ ರಾವ್ ಎಲ್. ಎಸ್., **ಪೂರ್ವೋಕ್ತ**, ಪು.೭೯೭

೩೧. **ಸ್ಮರಣ ಸಂಚಿಕೆ**, ೧೨೦ ವರ್ಷಗಳು ನಡೆದು ಬಂದ ಆರ್ಯ ವೈಶ್ಯ ಮಂಡಲಿ, ಬೆಂಗಳೂರು.

೩೨. ಸ್ವರ್ಣಗೌರಿ ಬಿ., **ನೆನೆ ನೆನೆ ಮನವೆ**, ೨೦೦೮, ಭಾಗ್ಯಲಕ್ಷ್ಮೀ ಪ್ರಕಾಶನ, ಬೆಂಗಳೂರು, ಪು.೪೬

೩೩. ಇಂದಿರಾ ಶಿವಣ್ಣ, **ಶಿವಾಚಾರ ನಗರ್ತರು**, ೨೦೦೯, ನಗರ್ತ ಮಹಿಳಾ ಸಂಘ, ಬೆಂಗಳೂರು, ಪು.೨೧೫

೩೪. **ಸ್ಮರಣ ಸಂಚಿಕೆ**, ಎಸ್. ಆರ್. ಎನ್. ಜಿ. ಸಂಪನ್ನಪ್ಪ ಧರ್ಮಸಂಸ್ಥೆಯ ಒಂದು ಪಕ್ಷಿನೋಟ, ಪು.೨

೩೫. ಕೃಷ್ಣಶೆಟ್ಟಿ ವಿ., **ಜನೋಪಕಾರಿ ಮಹಾದಾನಿ ಶ್ರೀ ದೊಡ್ಡಣ್ಣರ ಜೀವನ ಚರಿತ್ರೆ**, ೧೯೯೭, ಶ್ರೀ ಕೃಷ್ಣಪ್ಪ ಪ್ರಕಾಶನ, ಬೆಂಗಳೂರು. ಪು.೧೨

೩೬. **೯೦ನೇ ವಾರ್ಷಿಕ ಸಮಾರಂಭದ ಸ್ಮರಣ ಸಂಚಿಕೆ**, ಜ್ಯೋನಗರ ವೈಶ್ಯ ಶ್ರೀ ಜೆ. ಬಿ ಕೆಂಪಣ್ಣಶೆಟ್ಟರ ಧರ್ಮಸಂಸ್ಥೆ

೩೭. ಶೇಷಗಿರಿ ರಾವ್ ಎಲ್. ಎಸ್., **ಪೂರ್ವೋಕ್ತ**, ಪು.೭೯೮

೩೮. ಗುರುಲಿಂಗಯ್ಯ ಎಂ., **ಕರ್ನಾಟಕದ ಗೊಲ್ಲಸಮುದಾಯ**, ೨೦೦೫, ಶಕ್ತಿ ಪ್ರಿಂಟರ್ಸ್ ಅಂಡ್

ಪಬ್ಲಿಷರ್ಸ್, ಬೆಂಗಳೂರು, ಪು.೪೨

೩೯. ಶೇಷಗಿರಿ ರಾವ್ ಎಲ್. ಎಸ್., **ಪೂರ್ವೋಕ್ತ**, ಪು.೭೯೮

೪೦. ಅದೇ, ಪು.೭೯೭

೪೧. ಅದೇ, ಪು.೪೧

೪೨. ಕೃಷ್ಣಶೆಟ್ಟಿ ವಿ., **ಪೂರ್ವೋಕ್ತ**, ಪು.೧೩

೪೩. ಶೇಷಗಿರಿ ರಾವ್ ಎಲ್. ಎಸ್., **ಪೂರ್ವೋಕ್ತ**, ಪು.೪೧

೪೪. ಜಾನಕಿ ನಾಯರ್, **ದಿ ಪ್ರಾಮಿಸ್ ಆಫ್ ದಿ ಮೆಟ್ರೋಪಾಲಿಸ್–ಬ್ಯಾಂಗಲೂರ್ ಟ್ವೆಂಟ್ಯತ್ ಸೆಂಚುರಿ**, ೨೦೦೫, ಆಕ್ಸ್‌ಫರ್ಡ್ ಪ್ರೆಸ್, ನ್ಯೂದೆಲ್ಲಿ, ಪು.೩೬

೪೫. ಚಕ್ಕರೆ ಶಿವಶಂಕರ್, **ಬೆಂಗಳೂರು ಜಾನಪದ**, ೨೦೧೦, ಬೆಂಗಳೂರು ನಗರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಪು.೬೯

೪೬. **ಸ್ಮರಣ ಸಂಚಿಕೆ**, ಜೆ. ಬಿ ಕೆಂಪಣ್ಣಶೆಟ್ಟರ ಧರ್ಮಸಂಸ್ಥೆ, **ಪೂರ್ವೋಕ್ತ**

೪೭. ೧೯೭೭ರ **ಜನಗಣತಿಯ ವರದಿ**

೪೮. ಚಕ್ಕರೆ ಶಿವಶಂಕರ್, **ಪೂರ್ವೋಕ್ತ**, ಪು.೭೩

೪೯. ಸ್ಮರಣ ಸಂಚಿಕೆ, ಜೆ. ಬಿ ಕೆಂಪಣ್ಣಶೆಟ್ಟರ ಧರ್ಮಸಂಸ್ಥೆ, **ಪೂರ್ವೋಕ್ತ**.

೫೦. ಸ್ಮರಣ ಸಂಚಿಕೆ, ೧೨೦ **ವರ್ಷಗಳು ನಡೆದು ಬಂದ ಆರ್ಯ ವೈಶ್ಯ ಮಂಡಲಿ**, ಬೆಂಗಳೂರು.

೫೧. ವೀರಪ್ಪ ಬಿ.ಸಿ., **ಪೂರ್ವೋಕ್ತ**, ಪು.೮೬

೫೨. ಅದೇ, ಪು.೯

೫೩. ಅದೇ, ಪು.೧೫೫

೫೪. ಅದೇ, ಪು.೭೦

೫೫. ಅದೇ, ಪು.೭೪

೫೬. ಅದೇ, ಪು.೧೭೯

೫೭. ಅದೇ, ಪು.೧೬೦

೫೮. ಅದೇ, ಪು.೧೬೦

೫೯. ಜಯಾ ರಾಜಶೇಖರ್, **ಪೂರ್ವೋಕ್ತ**, ಪು.೩೪

೬೦. ಬಿಪನ್ ಚಂದ್ರ, **ಆಧುನಿಕ ಭಾರತದ ಇತಿಹಾಸ**, ೨೦೧೨, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು, ಪು.೨೦೫–೨೦೭

೬೧. ಅದೇ, ಪು.೨೧೯–೨೨೦

೬೨. ಚಂದ್ರಶೇಖರ್ ಎಸ್., **ಪೂರ್ವೋಕ್ತ**, ಪು.೩೪–೩೫

೬೩. ಕ್ಲೌಡ್ ಮಾರ್ಕೊವಿಟ್ಸ್, **ಮರ್ಚೆಂಟ್ಸ್, ಟ್ರೇಡರ್ಸ್, ಎಂಟರ್‌ಪ್ರಿನ್ನರ್ಸ್–ಇಂಡಿಯನ್ ಬಿಸ್ಸಿನೆಸ್ ಇನ್ ದಿ ಕಲೋನಿಯಲ್ ಇರಾ**, ೨೦೦೮, ಪಾರಮೆಂಟ್ ಬ್ಲಾಕ್, ರಾಣಿಖೆಟ್. ಪು.೪

೬೪. ಅದೇ, ಪು.೫

೬೫. ಅದೇ, ಪು.೬

೬೬. ಗುಂಡಪ್ಪ ಡಿ. ವಿ., **ಜ್ಞಾಪಕ ಚಿತ್ರಶಾಲೆ–೭ ಹೃದಯಸಂಪನ್ನರು**, ೨೦೦೮, ಕಾವ್ಯಾಲಯ ಪ್ರಕಾಶಕರು, ಮೈಸೂರು. ಪು.೫೦

೬೭. ಕರ್ನಾಟಕ ಹ್ಯಾಂಡ್ ಬುಕ್, ಗೆಜೆಟಿಯರ್, ಪು.೪೪

೬೮. ಕೃಷ್ಣಶೆಟ್ಟಿ ವಿ., **ಪೂರ್ವೋಕ್ತ**, ಪು.೧೧೭

೬೯. ಡಿ. ವಿ. ಜಿ, **ಪೂರ್ವೋಕ್ತ**, ಪು.೮೬

೭೦. ಸುಂದರರಾವ್ ಬ. ನ., **ಬೆಂಗಳೂರಿನ ಇತಿಹಾಸ**, ೨೦೧೧, ಅಂಕಿತ ಪ್ರಸ್ತಕ, ಬೆಂಗಳೂರು. ಪು.೫೪೨

೭೧. ಫಜಲ್ ಅಲಿ ಎಂ., **ಬೆಂಗಳೂರ್ ಥ್ರೂ ದಿ ಸೆಂಚುರೀಸ್**, ೧೯೭೦, ಹಿಸ್ಟೋರಿಕಲ್ ಪಬ್ಲಿಕೇಷನ್, ಬೆಂಗಳೂರು. ಪು.೧೯೮

೭೨. ಅದೇ, ಪು.೧೯

೭೩. ಸುಂದರರಾವ್ ಬ.ನ., **ಪೂರ್ವೋಕ್ತ**, ಪು.೫೪೨

೭೪. ಕ್ಲೌಡ್ ಮಾರ್ಕೊವಿಟ್ಸ್, **ಪೂರ್ವೋಕ್ತ**, ಪು.೬

೭೫. ಸುಂದರರಾವ್ ಬ.ನ., **ಪೂರ್ವೋಕ್ತ**, ಪು.೫೪೩

೭೬. ಚಂದ್ರಮೌಳಿ ಕೆ., **ಬೆಂಗಳೂರಿನ ನೋಟಗಳು**, ೨೦೦೨, ಪ್ರಿಸಮ್ ಪ್ರೈ. ಲಿ, ಬೆಂಗಳೂರು. ಪು.೩೬೮

೭೭. ಸುಂದರರಾವ್ ಬ.ನ., **ಪೂರ್ವೋಕ್ತ**, ಪು.೫೪೪

೭೮. ಅದೇ, ಪು.೫೪೫

೭೯. ಅದೇ, ಪು.೫೪೫

೮೦. ಅದೇ, ಪು.೫೪೬

೮೧. ಅದೇ, ಪು.೫೪೬

೮೨. ಅದೇ, ಪು.೫೪೯

೮೩. ಅದೇ, ಪು.೫೫೩

೮೪. ಚಂದ್ರಮೌಳಿ ಕೆ., **ಪೂರ್ವೋಕ್ತ**, ಪು.೩೬೮

೮೫. ವೀರಪ್ಪ ಬಿ.ಸಿ., **ಪೂರ್ವೋಕ್ತ**, ಪು.೨೫೧

೮೬. ಅದೇ, ಪು.೨೫೨

೮೭. ಜಯಾ ರಾಜಶೇಖರ್, **ಪೂರ್ವೋಕ್ತ**, ಪು.೩೬

೮೮. ವೇಮಗಲ್ ಸೋಮಶೇಖರ್, ಪ್ರಥಮ ಮಹಾಯುದ್ಧದಲ್ಲಿ ಬೆಂಗಳೂರಿನ ಪಾತ್ರ (೧೯೧೪–೧೯೧೮), **ಇತಿಹಾಸ ದರ್ಶನ**, ಸಂ–೧೨,೧೯೯೭, ಪು.೨೨೦

೮೯. ಅದೇ, ಪು.೨೨೧

## ಅಧ್ಯಾಯ ಎಂಟು

# ಸಮಾರೋಪ

ಇಡೀ ಜಗತ್ತು ಇಂದು ವಾಣಿಜ್ಯೋದ್ಯಮಿಗಳು, ಕೈಗಾರಿಕೋದ್ಯಮಿಗಳು ಹಾಗೂ ವರ್ತಕ ಸಮುದಾಯಗಳ ಕಾಲವಾಗಿದೆ. ಈ ಸಮುದಾಯಗಳನ್ನು ಸೆಳೆಯುವ ನಿಟ್ಟಿನಲ್ಲಿ ಪ್ರಭುತ್ವವು ಹಲವು ಯೋಜನೆಗಳನ್ನು ಹಾಗೂ ನೀತಿಗಳನ್ನು ರೂಪಿಸಿಕೊಳ್ಳುತ್ತಿದೆ. ಭಾರತದಲ್ಲೇ ಬೆಂಗಳೂರು ಇಂದು ಮೆಟ್ರೋಪಾಲಿಟನ್ ನಗರವಾಗಿ, ಕಾಸ್ಮೊಪಾಲಿಟನ್ ನಗರವಾಗಿ ಹೊರಹೊಮ್ಮಿದೆ. ಅಂತಾರಾಷ್ಟ್ರೀಯ ವಲಯದಲ್ಲಿ ಭಾರತದ ಸಿಲಿಕಾನ್ ವ್ಯಾಲಿ ಆಗಿಯು ಗುರುತಿಸಿಕೊಂಡಿದೆ. ಇಲ್ಲಿ ೨೦ ಮತ್ತು ೨೧ನೇ ಶತಮಾನದಲ್ಲಿ ಬೆಂಗಳೂರು ನಗರ ಪ್ರದೇಶದ ಆರ್ಥಿಕ ಬದುಕನ್ನು ಅವಲೋಕಿಸಲು ಪ್ರಯತ್ನಿಸಲಾಗಿದೆ. ಬೆಂಗಳೂರು ನಗರವು ೧೯೯೦ರ ದಶಕದಲ್ಲಿ ಎಲೆಕ್ಟ್ರಾನಿಕ್ ಮತ್ತು ಸಾಫ್ಟ್‌ವೇರ್ ತಂತ್ರಜ್ಞಾನದ ಸಂಶೋಧನೆ ಮತ್ತು ಅಭಿವೃದ್ಧಿಯ ಮೂಲಕ ಅಂತಾರಾಷ್ಟ್ರೀಯ ಮಟ್ಟದಲ್ಲಿ ಸಿಲಿಕಾನ್ ನಗರವಾಗಿ ಗುರುತಿಸಿಕೊಂಡಿತು. ಈ ಸಂದರ್ಭವು ಭಾರತದ ಆರ್ಥಿಕತೆ ಬೃಹತ್ ಸಮಸ್ಯೆಗಳನ್ನು ಮತ್ತು ಬದಲಾವಣೆಗೆ ಒಳಪಡುತ್ತಿದ್ದ ಕಾಲಘಟ್ಟ. ೧೯೯೨ರಲ್ಲಿ ಭಾರತವು ನೇರವಾಗಿ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣಕ್ಕೆ ತೆರೆದುಕೊಂಡಿತು. ಇದಕ್ಕಿಂತ ಸ್ವಲ್ಪ ಹಿಂದೆ ಅಂದರೆ ೨೫ ಡಿಸೆಂಬರ್ ೧೯೯೧ರಂದು ಯು.ಎಸ್.ಎಸ್.ಆರ್ ಪತನವಾಗಿತ್ತು ಎಂಬುದು ಗಮನಾರ್ಹ. ಪ್ರಸ್ತುತ ಸ್ವರೂಪದಲ್ಲಿ ಬಹುರಾಷ್ಟ್ರೀಯ ಕಂಪನಿಗಳ ಉಗಮವು ಎರಡನೇ ಮಹಾಯುದ್ಧದ ನಂತರದಲ್ಲೇ ಉಂಟಾದರೂ ಅದು ವಿಸ್ತಾರವಾಗಿ ಬೆಳೆದಿದ್ದು ೧೯೯೦ರ ದಶಕದಲ್ಲೇ ಎನ್ನಬಹುದು.

ಇಂದು ಬೆಂಗಳೂರು ನಗರವು ೧೪ನೇ ಪ್ರವಾಸಿ ಭಾರತೀಯ್ ದಿವಸ್‌ನ್ನು ೭ ರಿಂದ ೮ ಜನವರಿ ೨೦೧೭ರಲ್ಲಿ ಆಯೋಜಿಸಲು ಸಿದ್ಧತೆ ನಡೆಸುತ್ತಿದೆ. ಇದನ್ನು ಭಾರತ ಸರ್ಕಾರದ ವಿದೇಶಾಂಗ ವಿಭಾಗ ಮತ್ತು ಕರ್ನಾಟಕ ಸರ್ಕಾರದ ಬೃಹತ್ ಮತ್ತು ಮಧ್ಯಮ ಕೈಗಾರಿಕೆಯ ಸಚಿವರು ಹಾಗೂ ಐ.ಟಿ ಬಿ.ಟಿ ಮತ್ತು ಪ್ರವಾಸೋದ್ಯಮ ಸಚಿವರು ಜಂಟಿಯಾಗಿ ಆಯೋಜಿಸುತ್ತಿದ್ದಾರೆ. ಇಂದು ಕರ್ನಾಟಕದಲ್ಲಿ ನಡೆಯುತ್ತಿರುವ ಮೊದಲ ಪ್ರವಾಸಿ ಭಾರತೀಯ್ ದಿವಸ್ ಆಗಿದೆ. ಈ ಕಾರ್ಯಕ್ರಮದ

ಮುಖ್ಯ ಉದ್ದೇಶ ಅನಿವಾಸಿ ಭಾರತೀಯ ಮತ್ತು ವಿದೇಶಿ ಕಂಪನಿಗಳ ಹೂಡಿಕೆಯನ್ನು ರಾಜ್ಯದಲ್ಲಿ ಆಕರ್ಷಿಸುವುದು. ಈ ದಿಸೆಯಲ್ಲಿ 'ಕೆಲವು ದಶಕಗಳ ಹಿಂದೆ ಬೆಂಗಳೂರು ಮತ್ತು ಕರ್ನಾಟಕ ಭಾರತದಾಚೆಗೆ ಬಹಳಷ್ಟು ಮಟ್ಟಿಗೆ ಜನಪ್ರಿಯತೆಗೊಂಡಿರಲ್ಲಿಲ್ಲ. ಇನ್‌ಫೋಸಿಸ್, ವಿಪ್ರೊ ಮತ್ತು ಇನ್ನಿತರ ಸ್ಥಳೀಯ ಪ್ರವರ್ಧಮಾನ ಕಂಪನಿಗಳು ಉಂಟುಮಾಡಿದ ಐಟಿ ಕ್ರಾಂತಿಯು ಇಂದು ಬೆಂಗಳೂರು ನಗರ ಮತ್ತು ಕರ್ನಾಟಕವನ್ನು ಜಾಗತಿಕ ಭೂಪಟದಲ್ಲಿ ಮಿನುಗುವಂತೆ ಮಾಡಿದೆ. ಮತ್ತೊಂದು ಗಮನಾರ್ಹ ಸಂಗತಿ ಎಂದರೆ ಪ್ರಮುಖ ಸಂಶೋಧನೆ ಮತ್ತು ಅಭಿವೃದ್ಧಿ ಕೇಂದ್ರಗಳನ್ನು ಸ್ಥಾಪಿಸಲು ತಂತ್ರಜ್ಞಾನ ಪ್ರಾಮುಖ್ಯತೆಯ ಕಂಪನಿಗಳಿಗೆ ಬೆಂಗಳೂರು ಮತ್ತು ಕರ್ನಾಟಕ ಮೊದಲನೆಯ ಆಯ್ಕೆ ಸ್ಥಳವಾಗಿ ಪರಿಣಮಿಸಿದೆ. ಇದಕ್ಕೆ ಕಾರಣ ರಾಜ್ಯದಲ್ಲಿ ಲಭ್ಯವಿರುವ ಶ್ರೇಷ್ಠ ಮಾನವ ಪ್ರತಿಭೆ. ಹಾಗೆ ಕರ್ನಾಟಕ ಸರ್ಕಾರವು ಕೈಗಾರಿಕೆಗಳ ಬೆಳವಣಿಗೆಗಾಗಿ ಮತ್ತು ಉಜ್ವಲವಾದ ಪ್ರಗತಿಗಾಗಿ ಸೂಕ್ತ ಪರಿಸರ ಒದಗಿಸುವ ಮುಖೇನ ಬಂಡವಾಳದ ಹೂಡಿಕೆಯನ್ನು ಹೆಚ್ಚಿಸುವ ಪ್ರಯತ್ನ ಮಾಡಿರುವುದನ್ನು ಕಾಣಬಹುದು.

ಮಾನವ ಸಂಪನ್ಮೂಲ ಕ್ಷೇತ್ರದಲ್ಲಿ ಯೋಜಿತ ಬಂಡವಾಳ ಹೂಡುವದು, ಜಾಗತಿಕವಾಗಿ ಹೋಲಿಕೆಯಾಗುವಂತಹ ಸುಲಭ ಹಾಗೂ ಸರಾಗ ವ್ಯಾಪಾರ ವ್ಯವಹಾರ ಪರಿಸರ ನಿರ್ಮಾಣ ಸರ್ಕಾರದ ಗುರಿಯಾಗಿದೆ. ಇದಕ್ಕೆ ಪೂರಕವಾಗಿ ೨೦೧೬ರ ಫೆಬ್ರವರಿಯಲ್ಲಿ ಇನ್ವೆಸ್ಟ್ ಕರ್ನಾಟಕ ಎಂದು ಸಮಾವೇಶವನ್ನು ಯಶಸ್ವಿಯಾಗಿ ಬೆಂಗಳೂರಿನಲ್ಲಿ ಆಯೋಜಿಸಲಾಗಿತ್ತು. ಇದರ ಪರಿಣಾಮವಾಗಿ ಕರ್ನಾಟಕಕ್ಕೆ ೨೦೧೬ರ ಮೊದಲ ಆರು ತಿಂಗಳಲ್ಲಿ ಹೆಚ್ಚಿನ ಪಾಲು ಬಂಡವಾಳ ಹರಿದುಬಂದಿದೆ (ಶೇಕಡ ೩೮.೩೪). ಹಾಗೆಯೇ ಕಳೆದ ವರ್ಷದಲ್ಲಿ ವಿದೇಶಿ ನೇರ ಬಂಡವಾಳ ಹೂಡಿಕೆ ರೂಪದಲ್ಲಿ ಕರ್ನಾಟಕವು ಹೆಚ್ಚು ಅಮೆರಿಕನ್ ಡಾಲರ್‌ನ್ನು ಆಕರ್ಷಿಸಿದ್ದು, ಎಫ್‌ಡಿಐ ಆಕರ್ಷಿಸಿದ ರಾಜ್ಯಗಳ ಪೈಕಿ ೨ನೇ ಸ್ಥಾನದಲ್ಲಿದೆ. ಜರ್ಮನಿ, ಜಪಾನ್, ಫ್ರಾನ್ಸ್, ಸ್ವಿಟ್ಜರ್‌ಲ್ಯಾಂಡ್, ಕೆನಡ, ಇಸ್ರೆಲ, ಇಂಗ್ಲೆಂಡ್ ತಮ್ಮ ರಾಯಭಾರಿ ಕಛೇರಿಗಳನ್ನು ಬೆಂಗಳೂರಿನಲ್ಲಿ ಹೊಂದಿವೆ. ೧೯ ರಾಷ್ಟ್ರಗಳು ಗೌರವಾನ್ವಿತ ಕಾನ್‌ಸುಲಾರ್ ಜನರಲ್‌ಗಳನ್ನು ನೇಮಕ ಮಾಡಿವೆ. ಹಲವು ಟ್ರೇಡ್ ಕಮಿಷನರ್‌ಗಳು ತಮ್ಮ ಕಚೇರಿಯನ್ನು ಬೆಂಗಳೂರಿನಲ್ಲಿ ಹೊಂದಿದ್ದಾರೆ. ೬೫೦ಕ್ಕೂ ಹೆಚ್ಚು ಕಂಪನಿಗಳು ರಾಜ್ಯದ ವಿವಿಧ ವಲಯಗಳಲ್ಲಿ ಈಗಾಗಲೇ ಕಾರ್ಯಾಚರಣೆ ನಡೆಸುತ್ತಿದೆ. ಅದರಲ್ಲಿ ಸುಮಾರು ೨೫೦ಕ್ಕೂ ಹೆಚ್ಚು ದೊಡ್ಡ ದೊಡ್ಡ ಸಾಫ್ಟ್‌ವೇರ್ ಕಂಪನಿಗಳು ಬೆಂಗಳೂರಿನಲ್ಲಿಯೇ ಕಾರ್ಯನಿರ್ವಹಿಸುತ್ತಿವೆ. ಇನ್ಫೋಸಿಸ್, ವಿಪ್ರೊ ಮತ್ತು ಟಿಸಿಎಸ್ ನಂತಹ ಕಂಪನಿಗಳು ಪ್ರಧಾನ ಕಛೇರಿ ಹೊಂದಿವೆ. ಬಹುರಾಷ್ಟ್ರೀಯ ಕಂಪನಿಗಳಾದ ಐಬಿಎಮ್, ಇಂಟೆಲ್, ಟಯೋಟ, ವೊಲ್ವೊ ಮೊದಲಾದವುಗಳಿವೆ. ಕಾಲ್‌ಸೆಂಟರ್, ಬಿಪಿಓಗಳು ಭದ್ರವಾಗಿ ನೆಲೆಯೂರಿದೆ. ಉದ್ಯೋಗ ಮಾರುಕಟ್ಟೆ ಜಗತ್ತಿನೆಲ್ಲೆಡೆಯ ಪ್ರತಿಭಾವಂತರನ್ನು ಆಕರ್ಷಿಸುತ್ತಿದೆ. ಅಮೆರಿಕಾದ ಹಲವು ಕಂಪನಿಗಳು ತಮ್ಮ

ವ್ಯವಹಾರದ ಹೆಚ್ಚು ಭಾಗವನ್ನು ಬೆಂಗಳೂರಿಗೆ ಹೊರಗುತ್ತಿಗೆ ನೀಡಿವೆ. ಈ ಮೇಲಿನ ವಿಚಾರಗಳೆಲ್ಲವೂ ನೇರವಾಗಿ ಮತ್ತು ಪರೋಕ್ಷವಾಗಿ ಬೆಂಗಳೂರು ನಗರದ ನಗರೀಕರಣ ಬಿರುಸಾದ ವೇಗಕ್ಕೆ ಸಾಕ್ಷಿಯಾಗಿದೆ. ಮೇಲಿನ ಅಂಕಿ ಅಂಶಗಳ ಪ್ರಕಾರ ಕರ್ನಾಟಕದಲ್ಲಿರುವ ಕಂಪನಿಗಳಲ್ಲಿ ಶೇಕಡಾ ೩೮.೪೭ರಷ್ಟು ಕಂಪನಿಗಳು ಬೆಂಗಳೂರಿನಲ್ಲಿಯೇ ಇದೆ. ಇದಕ್ಕೆ ಬೆಂಗಳೂರು ವಸಾಹತುಶಾಹಿ ಆಳ್ವಿಕೆಯ ಸಂದರ್ಭದಲ್ಲಿ ನಗರಾಭಿವೃದ್ಧಿಯಲ್ಲಿ ಪಡೆದುಕೊಂಡ ವೇಗ ಹಾಗೂ ಜಾಗತಿಕವಾಗಿ ಗುರುತಿಸಿಕೊಂಡಿರುವುದು ಮುಖ್ಯ ಕಾರಣವಾಗಿದೆ.

ಬೆಂಗಳೂರು ೧೯೯೦ರ ದಶಕದ ನಂತರ ಅಗಾಧವಾಗಿ ಅತ್ಯಂತ ವೇಗವಾಗಿ ಬೆಳೆಯುತ್ತಿರುವ ನಗರ. ಯಾವುದೇ ನಗರ ಬೆಳೆದಂತೆಲ್ಲ ಅದರ ಸಮಸ್ಯೆಗಳೂ ಬೆಳೆಯುತ್ತಿರುತ್ತವೆ ಇದು ಬೆಂಗಳೂರಿಗೆ ಹೊರತೇನಲ್ಲ. ಇಂದು ಬೆಂಗಳೂರು ನಗರೀಕರಣದಿಂದ ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದೆ. ಮುಖ್ಯವಾಗಿ ಅತಿಯಾದ ಜನಸಂಖ್ಯೆ, ವಾಹನ ದಟ್ಟಣೆ, ವಾಯುಮಾಲಿನ್ಯ, ರಸ್ತೆ ನಿರ್ವಹಣೆ ಮತ್ತು ನಿರ್ಮಾಣ, ಕಸ ವಿಲೇವಾರಿ, ಕುಡಿಯುವ ನೀರು, ಮಳೆಗಾಲದಲ್ಲಿ ತಗ್ಗು ಪ್ರದೇಶಗಳಲ್ಲಿ ಪ್ರವಾಹ, ಜನ ಜೀವನ ಅತಿ ದುಬಾರಿಯಾಗಿರುವುದು ಮೊದಲಾದವು ಭೌಗೋಳಿಕ, ಪರಿಸರದ ನೆಲೆಯಲ್ಲಿ ಕಂಡುಬರುತ್ತವೆ. ಇದಲ್ಲದೆ ಮೇಲ್ನೋಟಕ್ಕೆ ಐಟಿ ಬಿಟಿ ಕಂಪನಿಗಳಿಂದ ಬೆಂಗಳೂರಿನ ಬೆಳವಣಿಗೆಗೆ ಪೂರಕವಾಗಿದೆ ಎನಿಸಿದರೂ ಇದರಿಂದ ಆಗಿರುವ ದುಷ್ಪರಿಣಾಮಗಳೇ ಹೆಚ್ಚು. ಐಟಿ ಉದ್ದಿಮೆಯೊಡನೆ ಕೊಳ್ಳುಬಾಕು ಸಂಸ್ಕೃತಿಯು ಕಾಲಿಟ್ಟಿದೆ. ಬ್ಯಾಂಕ್ ಕೊಡುವ ವಿವಿಧ ತರಹದ ಲೋನ್, ಕ್ರೆಡಿಟ್ ಕಾರ್ಡುಗಳ ಆಮಿಷಕ್ಕೆ ಬಹಳಷ್ಟು ಮಂದಿ ಐಟಿ ಉದ್ಯೋಗಿಗಳು ಬಲಿಯಾಗಿ ಸಾಲಗಾರರಾಗಿದ್ದಾರೆ, ಹಾಗೆ ದಿನಕ್ಕೆ ೧೦-೧೨ ಗಂಟೆ ದುಡಿಯ ಬೇಕು. ಇದು ಕಾರ್ಮಿಕ ನೀತಿಯ ಉಲ್ಲಂಘನೆ. ಜೊತೆಗೆ ಆರೋಗ್ಯದ ಮೇಲೆ ದುಷ್ಪರಿಣಾಮ ಬೀರುತ್ತಿದೆ. ಈ ಸಂಸ್ಕೃತಿ ಈ ವರ್ಗದಲ್ಲಿರುವವರಿಗಷ್ಟೇ ಸೀಮಿತವಾಗಿರುವುದು ಎಲ್ಲರನ್ನು ಪ್ರಭಾವಿಸುತ್ತಿದೆ. ಪರಿಣಾಮವಾಗಿ ಇಂದು ಬೆಂಗಳೂರು ಪಬ್ಬುಲೈವ್‌ಬ್ಯಾಂಡ್‌ಗಳ ನಗರ, ಅಪರಾಧಗಳ ನಗರ, ಕೊಳ್ಳುಬಾಕರ ನಗರ, ಹೊಂಡಗಳ ನಗರ, ಅತಿಕಲುಷಿತ ನಗರಿ ಇತ್ಯಾದಿ ಕುಖ್ಯಾತಿಯನ್ನು ಕಾಣಬಹುದು. ಇದು ವೇಗದ ನಗರೀಕರಣದಿಂದ ಉಂಟಾದ ನಗರದ ಸಂಕೀರ್ಣತೆ ಮತ್ತು ಸಮಸ್ಯೆಗಳ ಅನಾವರಣವೇ ಆಗಿದೆ.

ಬಹುರಾಷ್ಟ್ರೀಯ ಕಂಪನಿಗಳು ಕರ್ನಾಟಕ ಅಥವಾ ಬೆಂಗಳೂರಿನಲ್ಲಿ ಸ್ಥಾಪನೆಗೊಳ್ಳಲು ಹಲವಾರು ಬೇಡಿಕೆಗಳನ್ನು ಮೂಲ ಸೌಕರ್ಯದ ನೆಪದಲ್ಲಿ ಮುಂದಿಡುವುದು. ಜೊತೆಗೆ ಯಾವ ರಾಜ್ಯ ಸರ್ಕಾರ ಹೆಚ್ಚಿನ ರಿಯಾಯಿತಿ ನೀಡುವುದೋ ಅಲ್ಲಿಗೆ ಬಂಡವಾಳ ಹೂಡುವುದು. ಈ ಮೂಲಕ ಬಂಡವಾಳ ಹೂಡಿಕೆಗಾಗಿ ಸರ್ಕಾರಗಳನ್ನು ಪರೋಕ್ಷವಾಗಿ ಮತ್ತು ನೇರವಾಗಿ ಹೆದರಿಸುತ್ತಿವೆ ಎನ್ನಬಹುದು. ಉದಾಹರಣೆಗೆ., ಇನ್‌ಪೋಸಿಸ್ ಕಂಪನಿಯು ಕಳೆದ ದಶಕದಲ್ಲಿ ತಮಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಿಕೊಡಬೇಕೆಂಬ ಬೇಡಿಕೆಯ ಒತ್ತಡವನ್ನು ಪ್ರಭುತ್ವದ ಮೇಲೆ ಹೇರಿತು.

ಅದೇ ತೆರದಲ್ಲಿ ಬಹುರಾಷ್ಟ್ರೀಯ ಕಂಪನಿಗಳ ಉಗಮ ಎರಡನೇ ಮಹಾಯುದ್ಧದ ನಂತರ ಆರಂಭವಾಯಿತು. ಆದರೆ ಆರಂಭಿಕ ಹಂತದಲ್ಲಿ ಇದರ ಬೆಳವಣಿಗೆಯ ವೇಗ ನಿಧಾನಗತಿಯಾಗಿತ್ತು. ಇಂದು ಜಗತ್ತಿನಾದ್ಯಂತ ಹರಡಿ ಅತ್ಯಂತ ಪ್ರಮುಖ ಸ್ಥಾನವನ್ನು ಹೊಂದಿದೆ. ಜಗತ್ತಿನ ಉತ್ಪಾದನೆಯಲ್ಲಿ ಶೇಕಡಾ ೩೦%ರಷ್ಟನ್ನು ಈ ಬಹುರಾಷ್ಟ್ರೀಯ ಕಂಪನಿಗಳು ಉತ್ಪಾದಿಸುತ್ತಿವೆ. ಇದರಿಂದಾಗಿ ವಿಶ್ವ ಆರ್ಥಿಕತೆಯಲ್ಲಿ ಅವುಗಳ ಮಹತ್ವ ಹೆಚ್ಚಿದೆ. ಈ ಕಂಪನಿಗಳ ಒಟ್ಟು ಮಾರಾಟ ಎಲ್ಲ ಪ್ರಗತಿಶೀಲ ದೇಶಗಳ ಒಟ್ಟು ರಾಷ್ಟ್ರೀಯ ಉತ್ಪನ್ನಕ್ಕೆ ಸಮನಾಗಿದೆ. ಅಂದರೆ ಇದು ಅಸಾಧಾರಣ ಗಾತ್ರ ಮತ್ತು ವಿಸ್ತೃತ ಜಾಲವನ್ನು ಹೊಂದಿದ್ದು, ವಿವಿಧ ದೇಶಗಳ ಅಭಿವೃದ್ಧಿಯ ಚಟುವಟಿಕೆಗಳಲ್ಲಿ ಈ ಕಂಪನಿಗಳ ಪಾತ್ರವನ್ನು ಕಡೆಗಣಿಸದಂತಹ ಪರಿಸ್ಥಿತಿಯನ್ನು ನಿರ್ಮಿಸಿದೆ. ಈ ಕಂಪನಿಗಳೇ ಅಂತಾರಾಷ್ಟ್ರೀಯ ವ್ಯಾಪಾರ, ವಾಣಿಜ್ಯ ನೀತಿ, ವಿದೇಶಿ ವಿನಿಮಯ, ಸಂದಾಯ ಶುಲ್ಕ, ಅಭಿವೃದ್ಧಿಯ ಅಂತಾರಾಷ್ಟ್ರೀಯ ಅರ್ಥಶಾಸ್ತ್ರ ಮೊದಲಾದ ವಿಷಯಗಳೆಲ್ಲದರಲ್ಲಿಯೂ ಕಾರ್ಯನಿರ್ವಹಿಸುತ್ತಿದೆ. ಹಾಗೆ ಈ ಕಾರ್ಯನಿರ್ವಹಣೆಯು ಪ್ರಗತಿಶೀಲ ದೇಶಗಳಿಗೆ ಮೀಸಲಾಗಿದ್ದು, ಅವು ಇಂದು ಪ್ರಪಂಚದ ಬಹುತೇಕ ಅಭಿವೃದ್ಧಿ ಹೊಂದುತ್ತಿರುವ ದೇಶಗಳಿಗೆ ತಮ್ಮ ಜಾಲವನ್ನು ವಿಸ್ತರಿಸಿದೆ. ಈ ಕಂಪನಿಗಳು ಮತ್ತು ಆರ್ಥಿಕ ನೀತಿಯು ಅಭಿವೃದ್ಧಿ ಹೊಂದಿದ ದೇಶಗಳಿಗಷ್ಟೇ ಪೂರಕವಾಗಿರುವುದು. ಇದನ್ನು ನವ ವಸಾಹತುಶಾಹಿ ಯುಗವೆಂದು ಕರೆಯಲಾಗುವುದು. ಇಂದು ಜಗತ್ತಿನಾದ್ಯಂತ ಕಂಡುಬರುವ ಎಲ್ಲ ರಾಷ್ಟ್ರಗಳನ್ನು ಅಭಿವೃದ್ಧಿ ಹೊಂದಿದ ರಾಷ್ಟ್ರಗಳು, ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳು ಮತ್ತು ಅಭಿವೃದ್ಧಿ ಹೊಂದದ ರಾಷ್ಟ್ರಗಳು ಎಂದು ಗುರುತಿಸುವುದು ಸಾಮಾನ್ಯವಾದ ವಾಡಿಕೆಯಾಗಿದೆ. ಇವುಗಳ ಅಭಿವೃದ್ಧಿಯನ್ನು ಆ ರಾಷ್ಟ್ರದ ಆರ್ಥಿಕಾಂಶಗಳ ಮಾನದಂಡದಿಂದ ಅಳೆಯಲಾಗುತ್ತಿದೆ. ಈ ದಿಸೆಯಲ್ಲಿ ಆರ್ಥಿಕಾಭಿವೃದ್ಧಿಗೂ ಮತ್ತು ಚರಿತ್ರೆಯ ಘಟನಾವಳಿಗೂ ಹತ್ತಿರದ ಸಂಬಂಧವಿರುವುದನ್ನು ಗುರುತಿಸಬಹುದು. ಇಲ್ಲಿ ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳು ಎಂದು ಗುರುತಿಸಲ್ಪಟ್ಟಿರುವ ರಾಷ್ಟ್ರಗಳೆಲ್ಲವು ಇಂದಿನ ಬಂಡವಾಳಶಾಹಿ ರಾಷ್ಟ್ರಗಳು ಮತ್ತು ೧೭ ರಿಂದ ೨೦ನೇ ಶತಮಾನದ ಸಂದರ್ಭದಲ್ಲಿ ಒಂದಲ್ಲ ಒಂದು ರಾಷ್ಟ್ರವನ್ನು ವಸಾಹತುವನ್ನಾಗಿ ಹೊಂದಿದ್ದವು. ಹಾಗೆಯೇ ಇಂದು ಅಭಿವೃದ್ಧಿ ಹೊಂದುತ್ತಿರುವ ಅಥವಾ ಅಭಿವೃದ್ಧಿ ಹೊಂದದ ರಾಷ್ಟ್ರಗಳು ಎಂದು ಗುರುತಿಸಲ್ಪಡುವ ರಾಷ್ಟ್ರಗಳೆಲ್ಲವು ಮೇಲಿನ ರಾಷ್ಟ್ರಗಳ ಅಡಿಯಲ್ಲಿ ವಸಾಹತುಗಳಾಗಿದ್ದವು. ಸಾಮಾನ್ಯವಾಗಿ ಈ ರಾಷ್ಟ್ರಗಳೆಲ್ಲವು ಇಂದಿನ ಏಷ್ಯ, ಆಫ್ರಿಕ, ದಕ್ಷಿಣ ಅಮೆರಿಕ ಖಂಡಗಳಲ್ಲಿ ಕಂಡುಬರುತ್ತವೆ ಎಂಬುದು ಗಮನಾರ್ಹ. ಇದೆಲ್ಲವು ಆರ್ಥಿಕ ಅಭಿವೃದ್ಧಿ ಮತ್ತು ಚಾರಿತ್ರಿಕ ಪಲ್ಲಟಗಳಿಗೂ ನಡುವೆ ಇರುವ ಸಂಬಂಧಕ್ಕೆ ಸಾಕ್ಷಿಯಾಗಿವೆ. ಈ ನಿಟ್ಟಿನಲ್ಲಿ ವಸಾಹತು ಕಾಲವು ಆರ್ಥಿಕ ಕ್ಷೇತ್ರದಲ್ಲಿ ಉಂಟಾದ ಬದಲಾವಣೆಯ ಪರ್ವಕಾಲವಾಗಿದೆ. ಈ ಅವಧಿಯಲ್ಲಿ ವಸಾಹತುವಾಗಿ ಪರಿವರ್ತಿತವಾದ ರಾಷ್ಟ್ರ ಹಾಗೂ ವಸಾಹತುಗಳನ್ನು ಹೊಂದಿದ ರಾಷ್ಟ್ರಗಳೆರಡರಲ್ಲಿಯೂ ಆರ್ಥಿಕ ಮತ್ತು ರಾಜಕೀಯ ನೀತಿಗಳು ಅಲ್ಲಿನ ಸಮಾಜದ ಉತ್ಪಾದನಾ

ಶಕ್ತಿಗಳ ನಿಯಂತ್ರಣದೊಂದಿಗೆ, ಅವುಗಳನ್ನು ಹಲವು ಒತ್ತಡಕ್ಕೆ ಸಿಲುಕಿಸಿದ ಫಲವಾಗಿ ರೂಪುಗೊಂಡಿವೆ. ಈ ರೀತಿಯ ಪರಿಸ್ಥಿತಿಗಳು ಒಂದು ಹೊಸ ಬಗೆಯ ಆರ್ಥಿಕ ಸ್ಥಾನಪಲ್ಲಟ ಪ್ರಪಂಚದಾದ್ಯಂತ ರಾಜಕೀಯ, ಸಾಮಾಜಿಕ ಬದಲಾವಣೆಗೆ ಎಡೆಮಾಡಿತು. ಬೆಂಗಳೂರು ನಗರ ಪ್ರದೇಶದ ನಗರೀಕರಣವು ಈ ಹಂತದಲ್ಲಿಯೇ ಈ ಮೇಲಿನ ಎಲ್ಲ ಪ್ರಭಾವಗಳಿಂದ ರೂಪುಗೊಂಡಿತು.

ಬೆಂಗಳೂರು ಪ್ರದೇಶದಲ್ಲಿ ನಗರೀಕರಣದ ಪ್ರಕ್ರಿಯೆಯನ್ನು ಸಾಮಾನ್ಯವಾಗಿ ಬ್ರಿಟಿಶರ ಈಸ್ಟ್ ಇಂಡಿಯ ಕಂಪನಿಯ ಆಳ್ವಿಕೆಯೊಡನೆ ಗುರುತಿಸುವುದು ವಾಡಿಕೆಯಾಗಿದೆ. ೧೮೧೨ರ ಹೊತ್ತಿಗೆ ಇದು ಭಾರತದಲ್ಲಿದ್ದ ಐರೋಪ್ಯರ ನಡುವೆ ಪೆನ್ಷನರ್ಸ್ ಪ್ಯಾರಡೆ, ಸಿಟಿ ಆಫ್ ಗ್ರೀನ್, ಗಾರ್ಡನ್ ಸಿಟಿ ಮೊದಲಾದ ಹೆಸರುಗಳಿಂದ ಪ್ರಸಿದ್ಧವಾಗಿತ್ತು. ವಸಾಹತುಶಾಹಿಯ ಪ್ರಭಾವ ಮತ್ತು ಪರಿಣಾಮಗಳು ಭಾರತದಾದ್ಯಂತ ಕಂಡುಬಂದಂತೆ ಬೆಂಗಳೂರು ಪರಿಸರದಲ್ಲಿಯೂ ಮಹತ್ತರವಾದ ತಿರುವುಗಳಿಗೆ ಕಾರಣವಾಯಿತು. ವಸಾಹತು ಕಾಲವು ಬೆಂಗಳೂರು ಪ್ರದೇಶದ ನಗರೀಕರಣದಲ್ಲಿ ದೊಡ್ಡ ಮೈಲುಗಲ್ಲಾಯಿತು ಎನ್ನಬಹುದು. ವಸಾಹತು ಪೂರ್ವದಲ್ಲಿಯೇ ಬೆಂಗಳೂರು ಪ್ರದೇಶದಲ್ಲಿ ನಗರೀಕರಣ ಪ್ರಕ್ರಿಯೆಯನ್ನು ಗುರುತಿಸಬಹುದಾದರೂ ಈ ಕಾಲಘಟ್ಟ ಹಲವಾರು ವಿಶೇಷ ಲಕ್ಷಣಗಳನ್ನು ಹೊಂದಿದೆ. ವಸಾಹತು ಕಾಲದಲ್ಲಿ ನಗರೀಕರಣಕ್ಕೊಳಪಟ್ಟ ಎಲ್ಲ ಪ್ರದೇಶಗಳಲ್ಲಿಯೂ ಮುಖ್ಯವಾಗಿ ಕಂಡುಬರುವ ಲಕ್ಷಣಗಳೆಂದರೆ, ಆರ್ಥಿಕ ಅಂಶಗಳು, ಮುಖ್ಯವಾಗಿ ವ್ಯಾಪಾರ ವಾಣಿಜ್ಯದಲ್ಲಾದ ಬದಲಾವಣೆಗಳೇ ಆಗಿವೆ. ಹಾಗೆ ಪ್ರಸ್ತುತ ಬೆಂಗಳೂರು ನಗರದ ಎಲ್ಲ ಸಮಸ್ಯೆಗಳ, ಸಂಕೀರ್ಣತೆಯ ಮೂಲವನ್ನು ವಸಾಹತು ಕಾಲದಲ್ಲಿಯೇ ಕಾಣಬಹುದಾಗಿದೆ. ಅದ್ದರಿಂದಾಗಿ ಗತಕಾಲದಲ್ಲಾದ ಬದಲಾವಣೆಗಳನ್ನು ತಿಳಿಯದೆ ಪ್ರಸ್ತುತತೆಯನ್ನು ಅರಿಯಲು ಸಾಧ್ಯವಿಲ್ಲ. ಇಂದು ಅಂತಾರಾಷ್ಟ್ರೀಯ ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿರುವ ಜನಸಮುದಾಯಗಳು ವಸಾಹತು ಕಾಲದಲ್ಲಿ ಒಂದಲ್ಲಾ ಒಂದು ಉತ್ಪಾದನಾ–ವಿನಿಮಯ ವರ್ತಕ ಸಮುದಾಯಗಳಿಗೆ ಸೇರಿದವರು ಎಂಬ ವಿಚಾರವನ್ನು ತಳ್ಳಿಹಾಕುವಂತಿಲ್ಲ. ಅಂದು ಜಗತ್ತಿನ ವಿದ್ಯಮಾನಗಳಿಗೆ ಸ್ಪಂದಿಸಿದ ಕಾರಣವಾಗಿ ಇಂದು ಬೆಂಗಳೂರು ಅಂತಾರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಿಕೊಳ್ಳಲು ಸಾಧ್ಯವಾಗುತ್ತಿದೆ. ಇದು ಸೂಕ್ಷ್ಮಾವಲೋಕನಕ್ಕೆ ಒಳಪಡಿಸಿದಾಗ ಗೋಚರವಾಗುವ ವಿಚಾರವೇ ಸರಿ. ಈ ನಿಟ್ಟಿನಲ್ಲಿ ವಸಾಹತು ಕಾಲದ ಬೆಂಗಳೂರಿನ ನಗರ ವ್ಯವಸ್ಥೆ ಹಾಗೂ ವರ್ತಕ ಸಮುದಾಯಗಳ ಪಾತ್ರದ ಅಧ್ಯಯನಗಳ ಮಹತ್ವವೇನೆಂಬುದು ತಿಳಿಯುತ್ತದೆ.

ವಸಾಹತು ಕಾಲದಲ್ಲಿ ವ್ಯಾಪಾರ ವಾಣಿಜ್ಯ ಮತ್ತು ನಗರೀಕರಣ ಪ್ರಕ್ರಿಯೆ ಜೊತೆಜೊತೆಯಾಗಿಯೇ ಸಾಗಿತು. ೧೮ನೇ ಶತಮಾನದ ದ್ವಿತೀಯಾರ್ಧದಲ್ಲಿ ಉಂಟಾದ ರಾಜಕೀಯ ಪಲ್ಲಟದಲ್ಲಿ ಈಸ್ಟ್ ಇಂಡಿಯಾ ಕಂಪೆನಿಗೆ ಭಾರತದ ಭೂ ಭಾಗದ ಮೇಲೆ ಆಳ್ವಿಕೆ ನಡೆಸಲು ಅವಕಾಶ ದೊರೆಯಿತು.

ಈ ಪ್ರಕ್ರಿಯೆ ಮೈಸೂರು ರಾಜ್ಯದಲ್ಲಿ ೧೭೯೯ರ ಯುದ್ಧದಲ್ಲಿ ಟಿಪ್ಪುವಿನ ಮರಣದೊಂದಿಗೆ ಆರಂಭ ಗೊಂಡಿತು. ಕಂಪನಿಯು ಕ್ರಮೇಣ ವಾಣಿಜ್ಯದೊಡನೆ, ಕೈಗಾರಿಕೆಗಳಲ್ಲಿಯೂ ತೊಡಗಿಕೊಂಡಿತು. ಮುಖ್ಯವಾಗಿ ಇಂಡಿಗೊ, ಉಪ್ಪು, ಟೀ, ಕಲ್ಲಿದ್ದಲು, ಸೆಣಬು, ಹತ್ತಿ, ಕಬ್ಬಿಣ ಮತ್ತು ಉಕ್ಕು, ಜವಳಿ, ಸಕ್ಕರೆ, ಸಿಮೆಂಟ್, ಪೇಪರ್, ಕಡ್ಡಿ ಪೆಟ್ಟಿಗೆ ಮೊದಲಾದ ಕೈಗಾರಿಕೆಗಳು ಕಂಡುಬರುತ್ತವೆ. ಜೊತೆಗೆ ಸಾರಿಗೆ ಸಂಪರ್ಕದಲ್ಲಿ ರಸ್ತೆ, ರೈಲ್ವೆ, ಬಂದರು, ತಂತಿ, ವಿದ್ಯುತ್ ಹಾಗೂ ಆಧುನಿಕ ಬ್ಯಾಂಕಿಂಗ್ ವ್ಯವಸ್ಥೆ ಇನ್ನೂ ಹೆಚ್ಚಿನ ಅನುಕೂಲತೆಯನ್ನು ಸೃಷ್ಟಿಸಿತು. ಹಾಗೆ ೧೯ನೇ ಶತಮಾನದಲ್ಲಿ ಬ್ರಿಟನ್‌ನಲ್ಲಿ ಉಂಟಾದ ಕೈಗಾರಿಕಾ ಕ್ರಾಂತಿಯು ಕೃಷಿ, ಉತ್ಪಾದನೆ, ಗಣಿ, ಸಾರಿಗೆ ಮತ್ತು ತಂತ್ರಜ್ಞಾನದಲ್ಲಿ ಬೃಹತ್ ಬದಲಾವಣೆಗಳನ್ನು ತಂದಿತು. ಈ ಬದಲಾವಣೆಗಳು ಸಮಾಜೋ-ಆರ್ಥಿಕ ಸ್ಥಿತಿ ಮತ್ತು ಸಾಂಸ್ಕೃತಿಕತೆಯ ಮೇಲೆ ಗುರುತರವಾದ ಪ್ರಭಾವ ಬೀರಿತು. ಇದು ಬ್ರಿಟನ್‌ನಿಂದ ಕ್ರಮೇಣ ಎಲ್ಲೆಡೆ ಪಸರಿಸತೊಡಗಿತು. ವಸಾಹತುವಾಗಿ ಬದಲಾದ ರಾಷ್ಟ್ರಗಳನ್ನು ಕಚ್ಚಾ ವಸ್ತುಗಳ ಪೂರೈಕೆ ಮತ್ತು ಸಿದ್ಧವಸ್ತುಗಳ ಮಾರುಕಟ್ಟೆಯನ್ನಾಗಿ ಪರಿವರ್ತಿಸಿತು. ಈ ಸಂದರ್ಭದಲ್ಲಿ ಬೆಂಗಳೂರು ಪ್ರದೇಶದಲ್ಲಿ ಉಂಟಾದ ನಗರೀಕರಣ, ಅದಕ್ಕೆ ಪೂರಕವಾಗಿ ವರ್ತಕರು ಮತ್ತು ವರ್ತಕ ಸಮುದಾಯಗಳ ಕೊಡುಗೆಗಳನ್ನು ಆರ್ಥಿಕ ಚರಿತ್ರೆ ಮತ್ತು ನಗರ ಚರಿತ್ರೆಯ ನೆಲೆಯಲ್ಲಿ ಮಹಾಪ್ರಬಂಧದಲ್ಲಿ ಚರ್ಚಿಸಲಾಗಿದೆ. ಇಂದು ಹೊಸ ರೂಪದಲ್ಲಿ ಪ್ರವೇಶ ಪಡೆಯುತ್ತಿರುವ ಬಹುರಾಷ್ಟ್ರೀಯ ಕಂಪನಿಗಳು ಹಾಗೂ ಅವುಗಳ ಪ್ರಭಾವದಿಂದ ಉಂಟಾಗಿರುವ ಆರ್ಥಿಕತೆಯ ಹಿಡಿತಕ್ಕೆ ನಗರಕೇಂದ್ರಗಳು ಒಳಗಾಗಿವೆ. ಈಗಾಗಲೇ ಗಮನಿಸಿದಂತೆ ಬಹುರಾಷ್ಟ್ರೀಯ ಕಂಪನಿಗಳ ಮಾಲೀಕರು ಹಿಂದೆ ವಸಾಹತುಗಳನ್ನು ನಿರ್ಮಿಸಿಕೊಂಡಿದ್ದ ಭೂ ಭಾಗದವರೇ ಆಗಿದ್ದಾರೆ. ನೇರವಾಗಿ ಆಳ್ವಿಕೆಯಲ್ಲಿ ಪಾಲ್ಗೊಳ್ಳದೆ ಆರ್ಥಿಕತೆಯ ಮೂಲಕ ಸ್ಥಳೀಯ ಸರ್ಕಾರಗಳನ್ನು ನಿರ್ಮಿಸುವ ಹಾಗೂ ನಿಯಂತ್ರಿಸುವ ಶಕ್ತಿಯನ್ನು ಹೊಂದಿದ್ದಾರೆ. ಇದೆಲ್ಲವು ವಸಾಹತುಶಾಹಿಯ ಸ್ಥೂಲ ರೂಪದ ಅವಲೋಕನವಾಗಿದೆ.

## ಫಲಿತಗಳು

ಸ್ಥಳೀಯ ಮತ್ತು ವಿದೇಶಿ ವರ್ತಕ ಸಮುದಾಯಗಳ ಮೂಲಕ ಉಂಟಾಗಿರುವ ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಬದುಕಿನ ಬದಲಾವಣೆಯ ವಿವಿಧ ನೆಲೆಗಳನ್ನು ಒಂದೆಡೆ ಸೇರಿಸಿ ಜನಮುಖಿ ನೆಲೆಯಲ್ಲಿ ವಿಶ್ಲೇಷಿಸುವುದು ಈ ಅಧ್ಯಯನದ ಉದ್ದೇಶವಾಗಿತ್ತು. ಈ ಮೇಲಿನ ಆರು ಅಧ್ಯಾಯಗಳಲ್ಲಿ ಅವುಗಳನ್ನು ನೋಡಲಾಗಿದೆ. ವಲಸೆ ಬಂದ ವರ್ತಕ ಸಮುದಾಯಗಳು ಸ್ಥಳೀಯ ಜನಜೀವನದೊಂದಿಗೆ ಸೇರಿ ಮಿಶ್ರ ಸಾಮಾಜಿಕ-ಧಾರ್ಮಿಕ, ರೂಢಿಗಳೊಂದಿಗೆ ಜೀವನ ಪದ್ಧತಿಯನ್ನು ರೂಪಿಸಿಕೊಂಡಿವೆ. ಇದರಿಂದಾಗಿ ಬೆಂಗಳೂರು ಪ್ರದೇಶವು ಇಂದು ಸಹ ಭಾರತದಲ್ಲಿ ಶಾಂತಿ ಮತ್ತು ಉದಾರವಾದ ವಾತಾವರಣವನ್ನು ಸೃಷ್ಟಿಸಿ ಸ್ಥಳೀಯರಲ್ಲಿ ಸಹಕಾರ-ಸಹಬಾಳ್ವೆಯ

ಮನೋಭಾವವನ್ನು ಮೂಡಿಸಿದೆ. ಇದೆಲ್ಲವು ಬೆಂಗಳೂರನ್ನು ಕಾಸ್ಮೋಪಾಲಿಟನ್ ನಗರವಾಗಿ ರೂಪಿಸಿ ಅಂತಾರಾಷ್ಟ್ರೀಯ ಮಟ್ಟದಲ್ಲಿ ಗುರುತಿಸಿಕೊಳ್ಳುವಂತೆ ಮಾಡಿ ದೇಶ ಮತ್ತು ವಿದೇಶಗಳ ಜನರನ್ನು ಸೆಳೆಯುತ್ತಿದೆ ಎಂಬುದನ್ನು ಕಂಡುಕೊಳ್ಳಲಾಗಿದೆ.

ಈ ಅಧ್ಯಯನದಲ್ಲಿ ಚಾರಿತ್ರಿಕವಾದ ಘಟನೆಗಳನ್ನು ಬಿಡಿಬಿಡಿಯಾಗಿ ನೋಡದೆ ಸಮಗ್ರವಾಗಿ ನೋಡಲಾಗಿದೆ. ಹಲವು ರಾಜಮನೆತನಗಳ ಕಾಲದಲ್ಲಿ ಉಂಟಾದ ಆರ್ಥಿಕ ಬದಲಾವಣೆಗಳು ಅಂದರೆ ಅಂದು ಉಂಟಾದ ಕೃಷಿ, ಕೈಗಾರಿಕೆ, ನಗರಗಳು, ಸಂತೆ, ಪೇಟೆಗಳು, ಅಂದು ವಿಧಿಸಿದ ತೆರಿಗೆ–ಸುಂಕ, ಆಡಳಿತ ರೀತಿ, ನಿರ್ಮಿಸಿಕೊಂಡ ಸಾಮಾಜಿಕ, ಆರ್ಥಿಕ ಸಂಘಟನೆಗಳು ಮತ್ತು ಅವು ನಿರ್ವಹಿಸಿದ ಸಾಮಾಜಿಕ–ಆರ್ಥಿಕ ಪಾತ್ರಗಳನ್ನು ದಾಖಲಿಸಲಾಗಿದೆ. ರಾಜಪ್ರಭುತ್ವ ಮತ್ತು ವಸಾಹತುಶಾಹಿ ನೀತಿ ಹಾಗೂ ಸಾಮ್ರಾಜ್ಯಶಾಹಿ ನೀತಿಗಳಿಂದ ಸ್ಥಳೀಯ ಜನಸಮುದಾಯಗಳ ಸ್ತರ ವಿನ್ಯಾಸದಲ್ಲಿ ಕಾಲದಿಂದ ಕಾಲಕ್ಕೆ ಕಂಡುಬಂದ ಬದಲಾವಣೆಗಳನ್ನು ಗಮನಿಸಲಾಗಿದೆ. ಸ್ಥಳೀಯ ರಾಜಪ್ರಭುತ್ವದ ಕಾಲದಲ್ಲಾದ ಸ್ತರ ವಿನ್ಯಾಸದ ಬದಲಾವಣೆಗಿಂತ ವಸಾಹತುಶಾಹಿ ನೀತಿ ಮತ್ತು ಸಾಮ್ರಾಜ್ಯಶಾಹಿ ನೀತಿಗಳಿಂದ ಆದ ಬದಲಾವಣೆಯ ವೇಗವು ಕ್ಷಿಪ್ರವಾಗಿತ್ತು. ಇದು ಇಡಿ ವ್ಯವಸ್ಥೆಯನ್ನೆ ಬದಲಾಯಿಸಿತು. ಈ ಸಂದರ್ಭಗಳಲ್ಲಿ ಮುಖ್ಯವಾಗಿ ಹಲವು ವ್ಯಾಪಾರಿ ಸಮುದಾಯಗಳ ಸ್ಥಾನ ಪಲ್ಲಟ ದೊಡ್ಡ ಮಟ್ಟದಲ್ಲಿ ಕಂಡುಬರುತ್ತದೆ. ಉದಾಹರಣೆಗೆ, ಕೆಂಪೇಗೌಡನ ಕಾಲದಲ್ಲಿ ಸ್ಥಾನಮೂಲ ಬಣಜಿಗರು ಕೃಷಿ ಆಧಾರಿತ ವ್ಯಾಪಾರಿಗಳಾಗಿದ್ದು ಪ್ರಮುಖ ಸ್ಥಾನ ಹೊಂದಿದ್ದರು. ಮುಂದೆ ಟಿಪ್ಪು ಕಾಲದಲ್ಲಿ ಜವಳಿ ಉದ್ಯಮ ಪ್ರಾಮುಖ್ಯತೆ ಪಡೆಯಿತು. ಈ ಸಂದರ್ಭದಲ್ಲಿ ಬಣಜಿಗರು ಪ್ರಾಮುಖ್ಯತೆಯನ್ನು ಪಡೆಯುವರು. ಆ ನಂತರ ವಸಾಹತು ಕಾಲದಲ್ಲಿ ಗುಜರಾತಿಗಳು, ಮಾರ್ವಾಡಿಗಳು, ಮಾಪಿಲ್ಲಾ, ಬೋರ ಮೊದಲಾದ ಹೊರ ರಾಜ್ಯದ ವಾಣಿಜ್ಯೋದ್ಯಮಿಗಳು ಪ್ರಾಮುಖ್ಯತೆ ಪಡೆಯುತ್ತಾರೆ. ಹಾಗೆ ಅಲ್ಲಿಯವರೆಗೂ ಇದ್ದ ಸ್ಥಳೀಯ ವ್ಯಾಪಾರಿಗಳ ಪ್ರಾಮುಖ್ಯತೆ ಕಡಿಮೆ ಆಗಿರುವುದನ್ನು ಗುರುತಿಸಲಾಗಿದೆ.

ಇಂದು ಅಂತಾರಾಷ್ಟ್ರೀಯ ವ್ಯಾಪಾರವು ಜಗತ್ತಿನಾದ್ಯಂತ ನಾಗಾಲೋಟದಲ್ಲಿ ಸಾಗುತ್ತಿದೆ. ಈ ಪ್ರಕ್ರಿಯೆಯಲ್ಲಿ ಇಡೀ ವಿಶ್ವವೇ ಒಂದು ಹಳ್ಳಿಯ ರೂಪದಲ್ಲಿರುವಂತೆ ಕಂಡುಬರುತ್ತಿದೆ. ಇವು ಆರ್ಥಿಕ ಕ್ಷೇತ್ರದಲ್ಲಿ ಮಹತ್ತರವಾದ ಬದಲಾವಣೆಗಳನ್ನು ತಂದವು. ಈ ದಿಸೆಯಲ್ಲಿ ಪ್ರಾದೇಶೀಕವಾಗಿ ಕಂಡುಬರುವ ಬದಲಾವಣೆಗಳು ವಸಾಹತು ಕಾಲದೊಂದಿಗೆ ಸಂಬಂಧ ಹೊಂದಿರುವುದನ್ನು ಗುರುತಿಸಬಹುದು. ವಸಾಹತು ಕಾಲದಲ್ಲಿ ಉತ್ಪಾದನಾ ವರ್ಗ ಮತ್ತು ವಿನಿಮಯ ವರ್ತಕರಲ್ಲಾದ ಬದಲಾವಣೆಗಳಿಂದಾಗಿ ಆರ್ಥಿಕ ಕ್ಷೇತ್ರದಲ್ಲಿ ಸ್ಥಾನಪಲ್ಲಟಗಳು ಕಂಡುಬಂದವು. ಆ ಸಂದರ್ಭದಲ್ಲಿ

ಪ್ರಾಮುಖ್ಯತೆ ಕಳೆದುಕೊಂಡ ಪ್ರತಿ ಸಮುದಾಯಗಳು ಇಂದು ಅಭಿವೃದ್ಧಿಗಾಗಿ ಹೋರಾಡುತ್ತಿವೆ. ಆ ನಿಟ್ಟಿನಲ್ಲಿ ತಮ್ಮ ಸಮುದಾಯಗಳನ್ನು ಹಿಂದುಳಿದ ಸಮುದಾಯವಾಗಿ ಗುರುತಿಸಿ ಮೀಸಲಾತಿ ಪಟ್ಟಿಯಲ್ಲಿ ಸೇರಿಸಬೇಕೆಂದು ಕೋರುತ್ತಿವೆ ಮತ್ತು ಒತ್ತಾಯಿಸುತ್ತಿವೆ. ಉದಾಹರಣೆಗೆ, ವಸಾಹತು ಕಾಲದಲ್ಲಿ ಪ್ರಮುಖ ಉತ್ಪಾದನಾ ಸಮುದಾಯಗಳಾದ ಕುರುಬ, ತಿಗಳ, ಕುರುವಿನ ಶೆಟ್ಟಿ, ದೇವಾಂಗ ಮೊದಲಾದ ಸಮುದಾಯಗಳನ್ನು ಗುರುತಿಸಬಹುದು.

ವಸಾಹತು ಕಾಲದಲ್ಲಿ ಕಾಣಿಸಿದ ಕೆಲವು ಉತ್ಪಾದನಾ ವರ್ತಕ ಸಮುದಾಯಗಳು ವಸಾಹತು ನೀತಿಯಿಂದಾಗಿ ಸಮಾಜದ ಮುಖ್ಯವಾಹಿನಿಯಿಂದ ಕಣ್ಮರೆಗೊಂಡಿರುವುದನ್ನು ಗುರುತಿಸಬಹುದು. ಬುಕಾನಿನ್ ಸಮೀಕ್ಷೆಯಲ್ಲಿ ಕಾಣಸಿಗುವ ಉತ್ಪಾದನಾ ವರ್ತಕ ಸಮುದಾಯಗಳಲ್ಲಿ ಉಲ್ಲೇಖಿಸಿರುವ ಸಮುದಾಯಗಳಾದ ನೀಲಿಗರು, ರಂಗಿಗರು, ಸ್ಥಾನ ಬಣಜಿಗರು, ಗೋಣಿಗರು ಇತ್ಯಾದಿ ಸಮುದಾಯಗಳು ಮೊದಲ ಜನಗಣತಿಯ ಪಟ್ಟಿಯಲ್ಲಿ ಕಾಣಿಸಿಗುತ್ತಾರೆ. ಆದರೆ ನಂತರದ ಜನಗಣತಿಯಲ್ಲಿ ಈ ವರ್ತಕ ಸಮುದಾಯಗಳ ಉಲ್ಲೇಖವೇ ಇಲ್ಲವಾಗಿದೆ. ಅಂದರೆ ಆ ಕಾಲಕ್ಕೆ ತಮ್ಮ ಸಮಾಜದ ಮುಖ್ಯವಾಹಿನಿಯಿಂದ ಹಿಂದೆ ಸರಿದು ತಮ್ಮನ್ನು ಇನ್ನೊಂದು ಪ್ರಬಲ ಸಮುದಾಯಗಳೊಂದಿಗೆ ಸೇರಿಸಿಕೊಂಡಿರುವ ಸಾಧ್ಯತೆಗಳಿವೆ. ಇದು ಅತ್ಯಂತ ಗಮನಾರ್ಹವಾಗಿದೆ. ಇದು ನಮಗೆ ಅಂದಿನ ಸಾಮಾಜಿಕತೆ ಸ್ವರೂಪ ಹಾಗೂ ಆರ್ಥಿಕತೆಯಲ್ಲಿ ಉಂಟಾದ ಸ್ಥಾನಪಲ್ಲಟಗಳ ಮೇಲೆ ಬೆಳಕು ಚೆಲ್ಲುತ್ತದೆ. ಈ ಸಂದರ್ಭದ ಪ್ರಭುತ್ವ ಮತ್ತು ಉತ್ಪಾದಕ ವರ್ಗದ ನಡುವಿನ ಮುಖಾಮುಖಿಗೆ ಉದಾಹರಣೆಯಾಗಿವೆ. ಕೆಲವು ಸಂದರ್ಭದಲ್ಲಿ ನೆಲೆ ಕಳೆದುಕೊಂಡ ಉತ್ಪಾದಕ ವರ್ಗವು ಹಳೆಯ ಪ್ರಭುತ್ವದೊಡನೆ ಉತ್ತಮ ಸಂಬಂಧ ಹೊಂದಿದ್ದನ್ನು ಗುರುತಿಸಲಾಗಿದೆ. ಉದಾಹರಣೆಗೆ, ಬಣಜಿಗರು.

ವಸಾಹತು ಕಾಲದಲ್ಲಿ ಸೃಷ್ಟಿಸಲ್ಪಟ್ಟ ಆಧುನಿಕ ಅಥವಾ ಆಧುನೀಕರಣ ಎಂಬ ಪಾಶ್ಚಿಮಾತ್ಯ ಸಂಸ್ಕೃತಿಯ ವಿಚಾರಗಳ ಹೇರಿಕೆಯು ಅಂದಿನಿಂದ ಇಂದಿನವರೆಗೂ ಮುಂದುವರೆದಿರುವುದನ್ನು ನೋಡಬಹುದು. ಈ ಸಂದರ್ಭದಲ್ಲಿ ವಸಾಹತುಶಾಹಿ ಬೌದ್ಧಿಕ ವಲಯದ ಪ್ರಭಾವಕ್ಕೆ ಒಳಗಾದ ಭಾರತೀಯ ಸಮುದಾಯವು ಇಂದು ಸಹ ಯುರೋಪಿಯನ ಉತ್ಪನ್ನಗಳ ಕೊಂಡುಕೊಳ್ಳುವ ದೊಡ್ಡ ಗ್ರಾಹಕ ಸಮಾಜವನ್ನಾಗಿ ಮಾರ್ಪಡಿಸಿದೆ. ಇಂದಿಗೂ ಯುರೋಪಿಯನ ಉತ್ಪನ್ನಗಳೆಂದರೆ ಒಂದು ತೆರನಾದ ಘನತೆ–ಗೌರವದ ಸಂಕೇತ ಮತ್ತು ಗುಣಮಟ್ಟದ ವಸ್ತುಗಳು ಎಂದು ಪರಿಗಣಿಸಲ್ಪಡುತ್ತಿದೆ. ಅದಷ್ಟೇ ಅಲ್ಲದೆ, ವಾಣಿಜ್ಯವಾದದ ಕಾಲದಲ್ಲಿ ರೂಪುಗೊಂಡ ವಿವಿಧ ತಾತ್ವಿಕ ನೆಲೆ, ಸೈದ್ಧಾಂತಿಕ ವಿಚಾರಗಳ ವಿವಿಧ ಮಜಲುಗಳಿಂದಾಗಿ ಇಂದು ಇಡೀ ಸಮಾಜೋ–ಆರ್ಥಿಕ, ಧಾರ್ಮಿಕ ರಂಗಗಳಲ್ಲೆಲ್ಲ

ಸಹ ವಾಣಿಜ್ಯೀಕರಣಗೊಂಡಿದೆ. ಇದು ಪ್ರತಿ ಹಂತದಲ್ಲಿ ವ್ಯವಹಾರಿಕ ದೃಷ್ಟಿಯಿಂದ ನೋಡುವಂತೆ ಮಾಡಿದೆ. ಯಾಂತ್ರಿಕ ಜೀವನದ ಮನೋಭಾವವನ್ನು ಜನರಲ್ಲಿ ಮೂಡಿಸಿದೆ. ಇದೆಲ್ಲವು ಇಡೀ ಜಗತ್ತೇ ವಾಣಿಜ್ಯೀಕರಣಗೊಳ್ಳುತ್ತಿರುವುದಕ್ಕೆ ಉದಾಹರಣೆಯಾಗಿದೆ. ಬೆಂಗಳೂರು ನಗರ ಪ್ರದೇಶವನ್ನು ಈ ಪ್ರಕ್ರಿಯೆಗೆ ಒಂದು ಉತ್ತಮ ಉದಾಹರಣೆಯಾಗಿ ಗುರುತಿಸಲಾಗಿದೆ.

ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿ ನೀತಿಗಳು ೨೦ನೇ ಶತಮಾನದ ಮೊದಲಾರ್ಧದ ಕೊನೆಗೆ ನೇರ ಪ್ರಭಾವವನ್ನು ಬೀರುವ ಸಾಮರ್ಥ್ಯವನ್ನು ಕಳೆದುಕೊಂಡವು. ಆದರೆ ಆ ಸಂದರ್ಭದಲ್ಲಿ ನಗರೀಕರಣದ ಪ್ರಕ್ರಿಯೆಯಿಂದ ರೂಪುಗೊಂಡ ಪ್ರದೇಶಗಳು ಇಂದು ಹಲವು ಸಮಸ್ಯೆಗಳ ಕೇಂದ್ರವಾಗಿ ಹೊರಹೊಮ್ಮುತ್ತಿವೆ. ಬ್ರಿಟಿಶರ ಕಾಲದಲ್ಲಿ ರೂಪುಗೊಂಡ ನಗರ ಪ್ರದೇಶದಲ್ಲಿ ನಾಲ್ಕು ಭಾಗಗಳನ್ನು ಗುರುತಿಸಬಹುದು. ಒಂದನೆಯದಾಗಿ ಯುರೋಪಿನ್ನರ ನೆಲೆ. ಎರಡನೆಯದು ಅವರ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀಮಂತ ಭಾರತೀಯರ ವಾಸಸ್ಥಾನ. ಮೂರನೆಯದು ಯುರೋಪಿಯನ್ನರ ಅಡಿ ಸೇವೆಯನ್ನು ಸಲ್ಲಿಸುತ್ತಿದ್ದ ಕೆಳವರ್ಗದ ಭಾರತೀಯರು ನೆಲೆಸುತ್ತಿದ್ದ ಪ್ರದೇಶ ಮತ್ತು ನಗರ ಅಭಿವೃದ್ಧಿ ನೆಲೆಯಲ್ಲಿ ಉದ್ಯೋಗ ಅರಸಿ ಬಂದ ಕೂಲಿಗಳನ್ನು ನಾಲ್ಕನೆಯ ಭಾಗದಲ್ಲಿ ಮುಖ್ಯವಾಗಿ ಕಾಣಬಹುದು. ಈ ದಿಸೆಯಲ್ಲಿ ಬೆಂಗಳೂರು ಪ್ರದೇಶದ ಬ್ಲಾಕ್‌ಪಲ್ಲಿ ಎಂಬ ಕೂಲಿ ಕಾರ್ಮಿಕರನ್ನು ಗುರುತಿಸಬಹುದಾಗಿದೆ. ಈ ಭಾಗದಲ್ಲಿದ್ದ ಜನರು ವಸಾಹತು ಸಂದರ್ಭದಲ್ಲಿ ಮೂಲಭೂತ ಸೌಲಭ್ಯಗಳ ಅಭಿವೃದ್ಧಿ ಕಾರ್ಯಗಳಿಗಾಗಿ ವಲಸೆ ಬಂದ ಕೂಲಿ ಕಾರ್ಮಿಕರು. ಇದರಿಂದಾಗಿ ಒಂದೇ ನಗರ ಪ್ರದೇಶದಲ್ಲಿ ಒಂದು ಭಾಗವು ವ್ಯವಸ್ಥಿತವಾಗಿ ರೂಪುಗೊಂಡಿದ್ದರೆ, ಇನ್ನೊಂದು ಭಾಗವು ಕೊಳಚೆ ಪ್ರದೇಶವಾಗಿ ರೂಪಗೊಂಡು ಮೂಲಭೂತ ಸೌಲಭ್ಯಗಳಿಂದ ವಂಚಿತಗೊಂಡಿತ್ತು. ಇಂದಿಗೂ ಸಹ ಅಂತಹ ಪ್ರದೇಶಗಳು ಬೆಂಗಳೂರಿನ ಪೇಟೆ ಮತ್ತು ಬೆಂಗಳೂರು ದಂಡು ಪ್ರದೇಶದ ಸುತ್ತ-ಮುತ್ತಲಿನಲ್ಲಿ ಕಾಣಸಿಗುತ್ತವೆ. ಇದು ಸಾಮಾನ್ಯವಾಗಿ ವಸಾಹತು ಕಾಲದಲ್ಲಿ ನಿರ್ಮಾಣಗೊಂಡ ಪ್ರಮುಖವಾದ ಎಲ್ಲಾ ನಗರಗಳಲ್ಲಿಯೂ ಕಾಣಸಿಗುವ ಲಕ್ಷಣವಾಗಿದೆ. ಉದಾಹರಣೆಗೆ, ಮದ್ರಾಸ್, ಕಲ್ಕತ್ತ, ಮುಂಬೈ ಪ್ರದೇಶಗಳಲ್ಲಿ ಬಹುತೇಕವಾಗಿ ಇಂತಹ ಕೊಳಚೆ ಪ್ರದೇಶಗಳು ರೈಲ್ವೆ ನಿಲ್ದಾಣ ಮತ್ತು ಬಸ್ ನಿಲ್ದಾಣಗಳ ಸಮೀಪದಲ್ಲಿ ನಿರ್ಮಾಣಗೊಂಡಿವೆ. ಇದನ್ನು ಬೆಂಗಳೂರಿನಲ್ಲಿಯೂ ಗುರುತಿಸಲಾಗಿದೆ.

ವಸಾಹತು ಕಾಲದಲ್ಲಿ ಉಂಟಾದ ಆರ್ಥಿಕ ಮತ್ತು ಸಾಂಸ್ಕೃತಿಕ ಪಲ್ಲಟಗಳಿಂದಾಗಿ ಅನೇಕ ಉತ್ಪಾದಕ ಮತ್ತು ವಿನಿಮಯ ವರ್ತಕ ಸಮುದಾಯಗಳು ಬೇರೆ ಸಮುದಾಯಗಳೊಂದಿಗೆ ಗುರುತಿಸಿಕೊಳ್ಳುವ ಅಥವಾ ಹೆಸರನ್ನು ಬದಲಾಯಿಸಿಕೊಳ್ಳುವ ಪ್ರಕ್ರಿಯೆಯನ್ನು ಕಾಣಬಹುದು. ಈ ದಿಸೆಯಲ್ಲಿ ಬೆಂಗಳೂರು ಪ್ರದೇಶದಲ್ಲಿ ಕೋಮಟಿಗಳು ವೈಶ್ಯರಾಗಿ. ಹೊಲೆಯ ಮತ್ತು ಮಾದಿಗರು

ಆದಿ ಕರ್ನಾಟಕರಾಗಿ, ಲಂಬಾಣಿಗಳು ಬಂಜಾರರಾಗಿ, ಬೆಸ್ತರು ಗಂಗಕುಲದವರಾಗಿ, ಪಾಂಚಾಲರು ವಿಶ್ವಕರ್ಮರಾಗಿ ಮತ್ತು ಗೊಲ್ಲರು ಯಾದವರಾಗಿ ಗುರುತಿಸಿಕೊಳ್ಳುವುದನ್ನು ಗಮನಿಸಲಾಗಿದೆ. ಇದು ಮೇಲ್ನೋಟಕ್ಕೆ ಜನಗಣತಿಯಲ್ಲಿ ಕಂಡುಬಂದ ಅಂಶಗಳು. ಜನಗಣತಿಯಲ್ಲಿ ಗುರುತಿಸಲಾಗದೇ ಈ ರೀತಿ ತಮ್ಮ ಮತ್ತೊಂದು ಸಮುದಾಯದೊಡನೆ ಗುರುತಿಸಿಕೊಂಡ ಅಥವಾ ಹೆಸರು ಬದಲಿಸಿಕೊಂಡ ಹಲವಾರು ಸಮುದಾಯಗಳು ಇರುವ ಸಾಧ್ಯತೆ ಇದೆ. ಈ ದಿಕ್ಕಿನಲ್ಲಿ ಇನ್ನೂ ಹೆಚ್ಚಿನ ಅಧ್ಯಯನ ನಡೆಯಬೇಕಾಗಿದೆ.

ವಸಾಹತು ಕಾಲದಲ್ಲಿ ನಿರ್ಮಾಣಗೊಂಡ ಸಾರಿಗೆ-ಸಂಪರ್ಕದ ಸೌಲಭ್ಯವು ಭಾರತದ ಮೂಲೆ ಮೂಲೆಗಳಿಗೂ ಪ್ರವೇಶಿಸಿ ಸಣ್ಣ ಸಣ್ಣ ಗ್ರಾಮಗಳನ್ನು ನಗರೀಕರಣದ ಪ್ರಕ್ರಿಯೆಯಲ್ಲಿ ಪಾಲ್ಗೊಳ್ಳುವಂತೆ ಮಾಡಿದವು. ಇದರ ಪ್ರಭಾವಕ್ಕೆ ಒಳಗಾದ ಪ್ರದೇಶಗಳಲ್ಲಿ ಐರೋಪ್ಯ ಉತ್ಪನ್ನಗಳು ಮತ್ತು ಅವರ ಸಂಸ್ಕೃತಿಯನ್ನು ಮೂಲೆ ಮೂಲೆಗೆ ತಲುಪಿಸಿತು. ಹಾಗೆ ಸಾರಿಗೆ-ಸಂಪರ್ಕದಿಂದ ಆ ಪ್ರದೇಶಗಳು ಬ್ರಿಟಿಶರಿಗೆ ಕಚ್ಚಾ ಮಾಲುಗಳನ್ನು ಪೂರೈಸುವ ಮತ್ತು ಅವರ ಸಿದ್ಧವಸ್ತುಗಳನ್ನು ಕೊಂಡುಕೊಳ್ಳುವ ಕೇಂದ್ರವಾಗಿ ಬೆಳೆಯಲಾರಂಭಿಸಿದವು. ಇದರ ಫಲವಾಗಿ, ಗ್ರಾಮಗಳು ನಗರ ವ್ಯವಸ್ಥೆಯ ನೆಲೆಯಲ್ಲಿ ಕಾರ್ಯ ನಿರ್ವಹಿಸ ತೊಡಗಿದವು. ಇಂತಹ ಪೇಟೆ-ಪಟ್ಟಣ ಮತ್ತು ನಗರಗಳು ಆರ್ಥಿಕಾಭಿವೃದ್ಧಿಯ ಸಂಕೇತವಾಗುವುದರ ಜೊತೆಗೆ ಸಾಂಸ್ಕೃತಿಕ ಪಲ್ಲಟಗಳಿಗೂ ಕಾರಣವಾದವು. ಇದು ಸ್ಥಳೀಯ ಕರಕುಶಲಕರ್ಮಿಗಳು ಮತ್ತು ಉತ್ಪಾದನಾ ವರ್ತಕ ಸಮುದಾಯಗಳ ಸಾಂಪ್ರದಾಯಿಕ ವೃತ್ತಿಗಳೊಡನೆ ಸಂಘರ್ಷಕ್ಕೆ ಇಳಿಯಿತು. ಇದರಿಂದಾಗಿ ಹಲವು ಸಮುದಾಯಗಳು ತಮ್ಮ ಪಾರಂಪರಿಕ ವೃತ್ತಿಯನ್ನು ಬಿಟ್ಟು ನಗರ ಪ್ರದೇಶಗಳಿಗೆ ವಲಸೆ ಬಂದವು. ಈ ಸಮುದಾಯಗಳು ನಗರ ಪ್ರದೇಶದಲ್ಲಿ ಕಾರ್ಮಿಕರಾಗಿ ಬದಲಾದವು. ಈ ಅಂಶವನ್ನು ಮಹಾಪ್ರಬಂಧದಲ್ಲಿ ಗುರುತಿಸಲಾಗಿದೆ.

ಸಾರಿಗೆ-ಸಂಪರ್ಕ ಮತ್ತು ವಸಾಹತು ಆರ್ಥಿಕ ನೀತಿಯಿಂದಾಗಿ ವಲಸೆ ಪ್ರವೃತ್ತಿಯು ಹೆಚ್ಚಾಗಿದ್ದನ್ನು ಗುರುತಿಸಬಹುದು. ಇದರ ಪರಿಣಾಮವಾಗಿ ನಗರ ಪ್ರದೇಶಗಳಲ್ಲಿ ಜನಸಂಖ್ಯೆಯು ಹೆಚ್ಚಾಗಿ ಜನಸಾಂದ್ರತೆಯ ಫಲವಾಗಿ ನಗರಗಳು ವ್ಯವಸ್ಥಿತವಾಗಿ ರೂಪಗೊಳ್ಳದೇ ಅದರ ವ್ಯಾಪ್ತಿಯು ವಿಸ್ತಾರವಾಗತೊಡಗಿತು. ವಸಾಹತು ಕಾಲಘಟ್ಟದಲ್ಲಿ ನಗರೀಕರಣದ ಕ್ಷಿಪ್ರ ಪ್ರಕ್ರಿಯೆಯಲ್ಲಿ ಬೆಳೆದ ಪ್ರದೇಶಗಳು ಇಂದಿಗೂ ಹಲವು ಸಮಸ್ಯೆಗಳ ಗೂಡಾಗಿ ಪರಿಣಮಿಸಿದೆ. ಜೊತೆಗೆ ಹಲವು ಮೂಲಭೂತ ಸಮಸ್ಯೆಗಳಿಂದ ನರಳುತ್ತಿದೆ. ಅಂತಹ ನಗರಗಳಿಗೆ ಇಂದಿಗೂ ಪರಿಹಾರವನ್ನು ಪ್ರಭುತ್ವ ಮತ್ತು ಜನ ಸಮುದಾಯಗಳು ಕಂಡುಕೊಳ್ಳಲು ಸಾಧ್ಯವಾಗುತ್ತಿಲ್ಲ. ಕೊಳಗೇರಿಗಳು ವ್ಯವಸ್ಥಿತ ಅಭಿವೃದ್ಧಿ ಯೋಜನೆಗಳಿಲ್ಲದೆ ಅವ್ಯವಸ್ಥೆಯ ಆಗರಗಳಾಗಿವೆ.

ಪ್ರಾಚೀನ ಮತ್ತು ಮಧ್ಯಕಾಲಿನ ಸಂದರ್ಭದಲ್ಲಿದ್ದ ಪ್ರಬಲ ವರ್ತಕ ಸಮುದಾಯಗಳ ಸಂಘ-ಸಂಸ್ಥೆಗಳು ವಸಾಹತು ಕಾಲಘಟ್ಟದಲ್ಲಿ ಕಣ್ಮರೆಗೊಂಡವು. ವಸಾಹತುಶಾಹಿ ಆರ್ಥಿಕ ನೀತಿಗಳು ಮತ್ತು ಮುಕ್ತ ವ್ಯಾಪಾರ ನೀತಿಗಳು ಸ್ಥಳೀಯ ಉತ್ಪಾದನ ಮತ್ತು ವಿನಿಮಯ ವರ್ತಕರು ಅಂತಾರಾಷ್ಟ್ರೀಯ ಮಾರುಕಟ್ಟೆಯನ್ನು ಪ್ರವೇಶಿಸದಂತೆ ಮಾಡಿದವು. ಒಂದು ವೇಳೆ ಪ್ರವೇಶಿಸಿದರೂ ಅದು ಬ್ರಿಟಿಶ್ ಪ್ರಭುತ್ವದ ಅಧೀನದಲ್ಲಿ ಇರುವಂತೆ ನೋಡಿಕೊಳ್ಳಲಾಗುತ್ತಿತ್ತು. ಈ ರೀತಿಯ ವ್ಯವಸ್ಥೆಯಿಂದಾಗಿ ಭಾರತೀಯ ವರ್ತಕ ಸಮುದಾಯಗಳು ಆರ್ಥಿಕ-ರಾಜಕೀಯ ಸಂಘಟನೆಯಾಗಿ ರೂಪುಗೊಳ್ಳುವುದನ್ನು ಪರೋಕ್ಷವಾಗಿ ತಡೆಯಿತು. ಇದೆಲ್ಲದರ ಫಲವಾಗಿ ವಸಾಹತು ಕಾಲದಲ್ಲಿ ಕಂಡುಬಂದಿರುವ ಉತ್ಪಾದನ ಮತ್ತು ವಿನಿಮಯ ವರ್ತಕ ಸಂಘ-ಸಂಸ್ಥೆಗಳು ಸಾಮಾಜಿಕ ಮತ್ತು ಧಾರ್ಮಿಕ ನೆಲೆಯ ಸಂಘಟನೆಯ ಸ್ವರೂಪವನ್ನು ಹೊಂದಿರುವ ಸಂಘಗಳಾಗಿ ಹೊರಹೊಮ್ಮಿದವು.

ಈ ಅವಧಿಯಲ್ಲಿ ವರ್ತಕ ಸಮುದಾಯಗಳ ಸಂಘ-ಸಂಸ್ಥೆಗಳು ತಮ್ಮ ವೃತ್ತಿ ಬಾಂಧವರನ್ನು ಸಂಘಟಿಸುವ ಮತ್ತು ಅವರನ್ನು ಹೊಸ ಮಾರಕಟ್ಟೆಗೆ ಸಜ್ಜುಗೊಳಿಸುವ ಕಾರ್ಯದಲ್ಲಿಯೇ ನಿರತರಾದರು. ಈ ವೇಳೆಗಾಗಲೇ ಅಂದರೆ, ೧೮೭೦ರ ಹೊತ್ತಿಗೆ ಬ್ರಿಟಿಶ್ ಸಾಮ್ರಾಜ್ಯಶಾಹಿ ಪ್ರಭುತ್ವ ಜಗತ್ತಿನ ಬಹುಪಾಲು ರಾಷ್ಟ್ರಗಳನ್ನು ತನ್ನ ಅಧೀನಕ್ಕೆ ತೆಗೆದುಕೊಂಡಿತ್ತು. ಪ್ರಬಲ ನೌಕಾ ಪಡೆ ಮತ್ತು ಸೈನಿಕ ಪಡೆಗಳ ಸಹಾಯದಿಂದ ಜಗತ್ತಿನ ಮಾರುಕಟ್ಟೆಯನ್ನು ಕೇಂದ್ರೀಕರಿಸಿಕೊಂಡಿತ್ತು. ಅಲ್ಲೂ ಸಹ ಭಾರತೀಯ ವರ್ತಕ ಸಮುದಾಯಗಳು ಜಗತ್ತಿನ ಮಾರುಕಟ್ಟೆಯನ್ನು ಪ್ರವೇಶಿಸುವ ಮತ್ತು ಪಾಲ್ಗೊಳ್ಳುವ ಅವಕಾಶದಿಂದ ವಂಚಿತಗೊಂಡವು. ವಸಾಹತು ಕಾಲದಲ್ಲಿ ಜಗತ್ತಿನ ಮಾರುಕಟ್ಟೆಯನ್ನು ಪ್ರವೇಶಿಸಿದ ಕೆಲವು ಭಾರತೀಯ ವರ್ತಕ ಸಮುದಾಯಗಳು ಬ್ರಿಟಿಶ್ ವರ್ತಕ ಸಮುದಾಯಗಳಿಗೆ ಪೂರಕವಾಗಿ ಕಾರ್ಯನಿರ್ವಹಿಸುತ್ತಿದ್ದ ವರ್ತಕ ಸಮುದಾಯಗಳೇ ಹೊರತು ಯುರೋಪಿನ ಪ್ರಬಲ ವರ್ತಕ ಸಮುದಾಯಗಳಿಗೆ ಪ್ರತಿಸ್ಪರ್ಧಿಗಳಾಗಿರಲಿಲ್ಲ ಎಂಬುದು ಗಮನರ್ಹವಾಗಿದೆ. ವಸಾಹತು ಕಾಲದಲ್ಲಿ ಮೂಡಿಬಂದ ನಗರೀಕರಣ ಮತ್ತು ಕೈಗಾರಿಕೀಕರಣ ಪ್ರಕ್ರಿಯೆಗಳು ಉತ್ಪಾದನಾ ಮತ್ತು ವಿನಿಮಯ ವರ್ತಕ ಸಮುದಾಯಗಳಲ್ಲಿ ಉದ್ಯಮಶೀಲ ಕೌಶ್ಯಲತೆಯನ್ನು ಮೂಡಿಸಿಕೊಳ್ಳುವಂತೆ ಮಾಡಿತು. ಆದರೂ ಸಹ ಜಗತ್ತಿನ ಮಾರುಕಟ್ಟೆಯನ್ನು ಎದುರಿಸುವಲ್ಲಿ ಪ್ರತಿಸ್ಪರ್ಧಿಸಲು ಸಾಧ್ಯವಾಗಲಿಲ್ಲ.

ಸಾರಿಗೆ-ಸಂಪರ್ಕ, ಪಾಶ್ಚಿಮಾತ್ಯ ಶಿಕ್ಷಣ ಮತ್ತು ಆಡಳಿತ ವ್ಯವಸ್ಥೆಯಿಂದಾಗಿ ಹಲವು ಉತ್ಪಾದನಾ ಹಾಗೂ ವಿನಿಮಯ ವರ್ತಕ ಸಮುದಾಯಗಳು ಕಾಲಾಂತರದಲ್ಲಿ ಭಾರತದ ಪ್ರಭುತ್ವದ ಆಡಳಿತ ಮತ್ತು ಇನ್ನಿತರ ಕ್ಷೇತ್ರಗಳಲ್ಲಿ ಕಾರ್ಯನಿರ್ವಸಲು ಆರಂಭಿಸಿದವು. ಇದರ ಫಲವಾಗಿ ಭಾರತದ ವಂಶಪಾರಂಪರಿಕವಾಗಿ ಬರುತ್ತಿದ್ದ ವೃತ್ತಿ ಪರಂಪರೆಯ ಪ್ರವೃತ್ತಿ ಕ್ರಮೇಣ ಕಡಿಮೆಗೊಳ್ಳುವ ಪ್ರಕ್ರಿಯೆಯನ್ನು ಕಾಣಬಹುದಾಗಿದೆ. ಇಂದು ಜಾತಿ ಆಧಾರಿತ ವೃತ್ತಿಗಳು ಬಹುತೇಕವಾಗಿ ಕಣ್ಮರೆಗೊಂಡಿರುವುದಕ್ಕೆ

ವಸಾಹತುಶಾಹಿ ಮತ್ತು ಸಾಮ್ರಾಜ್ಯಶಾಹಿ ಆರ್ಥಿಕ ನೀತಿಗಳು ಮತ್ತು ಕೈಗಾರಿಕಾ ಯಾಂತ್ರೀಕರಣವೇ ಪ್ರಮುಖ ಕಾರಣವಾಗಿ ಕಂಡುಬರುತ್ತದೆ.

ಆರ್ನಾಲ್ಡ್ ಟಾಯ್ನಬಿ ಅವರ ಸವಾಲು ಮತ್ತು ಜವಾಬು ಸಿದ್ಧಾಂತದ ಮಾದರಿಯನ್ನು ವಸಾಹತುಶಾಹಿ ಕಾಲಘಟ್ಟಕ್ಕೆ ಅನ್ವಯಿಸಿ ನೋಡುವುದಾದರೆ, ವಸಾಹತು ಮತ್ತು ಸಾಮ್ರಾಜ್ಯಶಾಹಿ ಪ್ರಭುತ್ವ ಹೇರಿದ ಆರ್ಥಿಕ ನೀತಿಗಳು ಹಾಕಿದ ಸವಾಲುಗಳಿಗೆ ಜವಾಬಾಗಿ ಸ್ಥಳೀಯ ಉತ್ಪಾದನಾ–ವಿನಿಮಯ ವರ್ತಕ ಸಮುದಾಯಗಳು ಜಾಗತೀಕ ಮಾರುಕಟ್ಟೆಯ ಮಟ್ಟದಲ್ಲಿ ಉದ್ಯಮಶೀಲತೆಯ ಗುಣವನ್ನು ಅಳವಡಿಸಿಕೊಳ್ಳಲು ಪ್ರಯತ್ನಿಸಿದವು. ಈ ಪ್ರಕ್ರಿಯೆಯು ಏರುಮುಖದಲ್ಲಿ ಕಾಣಸಿಕೊಳ್ಳಲಿಲ್ಲವಾದರೂ ಸಹ ಬದಲಾವಣೆಯ ಅಲೆಯನ್ನು ಎದುರಿಸಲು ಉತ್ಪಾದಿತ ಮತ್ತು ವಿನಿಮಯ ವರ್ತಕ ಸಮುದಾಯಗಳು ಪ್ರಯತ್ನ ಮಾಡಿದ್ದನ್ನು ಕಾಣಬಹುದಾಗಿದೆ. ಉದಾಹರಣೆಗೆ, ಶೈಕ್ಷಣಿಕ ನೀತಿಗೆ ವರ್ತಕ ಸಮುದಾಯಗಳು ಕೊಟ್ಟ ಪ್ರಾಮುಖ್ಯತೆ. ಬೆಂಗಳೂರು ಪ್ರದೇಶದಲ್ಲಿ ಈ ದಿಸೆಯಲ್ಲಿ ಬಣಜಿಗರು, ಮುದಲಿಯಾರ್ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಹೊಸ ಶಿಕ್ಷಣ ಪದ್ಧತಿಯ ಪ್ರಸಾರಕ್ಕಾಗಿ ಕಾರ್ಯ ನಿರ್ವಹಿಸಿದ್ದನ್ನು ಗುರುತಿಸಲಾಗಿದೆ. ಅಲ್ಲದೆ ಉಳಿದ ಹಲವು ಸಮುದಾಯಗಳು ಈ ದಿಸೆಯಲ್ಲಿ ಕಾರ್ಯ ನಿರ್ವಹಿಸಿರುವುದನ್ನು ಗಮನಿಸಲಾಗಿದ್ದು ಅಧ್ಯಾಯ ಏಳರಲ್ಲಿ ವಿಸ್ತಾರವಾಗಿ ಚರ್ಚಿಸಲಾಗಿದೆ.

ಆರ್ಥಿಕ ನೀತಿಯನ್ನು ಸೂಕ್ಷ್ಮವಾಗಿ ಅಧ್ಯಯನ ನಡೆಸಿದಾಗ ವ್ಯಾಪಾರಿ ಕಂಪನಿಗಳ ಒಡೆಯರು ಯಾರು, ಆಡಳಿತ ಅಧಿಕಾರಿಗಳು ಯಾರು ಹಾಗೂ ಬ್ರಿಟನ್‌ನ ಸಂಸತ್ತಿನಲ್ಲಿದ್ದ ಬಲಿಷ್ಠ ಎಲೈಟ್‌ಗಳು ಯಾರನ್ನು ಒಳಗೊಂಡಿತ್ತು ಎನ್ನುವ ಮಹತ್ವದ ಪ್ರಶ್ನೆಗಳಿಗೆ ಉತ್ತರವಾಗಿ ಈ ಎಲ್ಲ ವರ್ಗಗಳು ವರ್ತಕರೇ ಆಗಿರುವುದನ್ನು ನೋಡಬಹುದು. ಇದರೊಂದಿಗೆ ಸ್ಥಳೀಯ ಆಡಳಿತ ವರ್ಗದಲ್ಲಿ ಕಂಡುಬರುವ ಪ್ರಮುಖರು ಸಹ ವರ್ತಕರಾಗಿದ್ದದ್ದನ್ನು ಗುರುತಿಸಬಹುದಾಗಿದೆ. ಹಾಗಾಗಿ ನಗರೀಕರಣ ಪ್ರಕ್ರಿಯೆಯಲ್ಲಿ ಪ್ರಮುಖ ಪಾತ್ರ ವಹಿಸಿದ್ದು ಒಂದಲ್ಲ ಮತ್ತೊಂದು ರೂಪದಲ್ಲಿ ವರ್ತಕ ಸಮುದಾಯವೇ ಆಗಿದೆ ಎನ್ನುವ ಅಂಶವನ್ನು ಕಂಡುಕೊಳ್ಳಲಾಗಿದೆ.

ಶ್ರಮ ವಿಭಜನೆ ಶ್ರೇಣಿ ವ್ಯವಸ್ಥೆಯಲ್ಲಿ ಕಂಡುಬರುತ್ತಿದ್ದದ್ದು ಬ್ರಿಟಿಷರ ಆಗಮನದ ನಂತರದಲ್ಲಿ ಆ ವ್ಯವಸ್ಥೆ ಕ್ರಮೇಣ ಒಂದಕ್ಕೊಂದು ಸೇರ್ಪಡೆಯಾಗಿ ಆ ವ್ಯವಸ್ಥೆ ಹಂತ ಹಂತವಾಗಿ ಶಿಥಿಲಗೊಳ್ಳಲಾರಂಭಿಸಿತು. ನಂತರವೂ ಈ ಪ್ರಕ್ರಿಯೆ ಮುಂದುವರೆಯಿತು. ಉದಾಹರಣೆಗೆ ಕೋಮಟಿಗರು ವೈಶ್ಯರಾಗಿ, ಮಾದಿಗ ಮತ್ತು ಹೊಲೆಯ ಇಬ್ಬರೂ ಆದಿ ಕರ್ನಾಟಕ ಎಂದು ಗುರುತಿಸಿಕೊಂಡಿರುವುದು.

ಉತ್ಪನ್ನ ಮತ್ತು ಉತ್ಪಾದನಾ ವಿಧಾನ ಯಾವುದೇ ಸಮಾಜದಲ್ಲಿ ಮಹತ್ತರವಾದ ಬದಲಾವಣೆಯನ್ನು ತರುತ್ತದೆ. ಇದು ಶ್ರೇಣಿ ವ್ಯವಸ್ಥೆಯನ್ನು ಸಡಿಲಗೊಳಿಸಿ, ಆ ಮೂಲಕ ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕ ಸ್ತರಗಳಲ್ಲಿ ಅಗಾಧವಾದ ಬದಲಾವಣೆಯನ್ನು ಉಂಟು ಮಾಡಿತು. ಇಂಗ್ಲೆಂಡಿನಲ್ಲಿ ಉಂಟಾದ ಕೈಗಾರಿಕೀಕರಣದ ಪರಿಣಾಮ ಬೆಂಗಳೂರಿನಂಥ ದೂರದ ಪ್ರದೇಶದಲ್ಲಿಯೂ ಇಂತಹ ಬದಲಾವಣೆಗಳನ್ನು ತಂದಿತು. ಈ ದಿಸೆಯಲ್ಲಿ ಉತ್ಪಾದನಾ ವಿಧಾನದಲ್ಲಾದ ಬದಲಾವಣೆಯ ಕುರಿತಂತೆ ಇನ್ನೂ ಹೆಚ್ಚಿನ ಅಧ್ಯಯನದ ಅಗತ್ಯವಿದೆ.

ಬೆಂಗಳೂರು ಪ್ರದೇಶದಲ್ಲಿ ಸ್ವಾತಂತ್ರ್ಯ ಚಳುವಳಿಯು ೧೯೦೫ರ ಸ್ವದೇಶಿ ಹೋರಾಟದೊಂದಿಗೆ ಕಂಡುಬರುತ್ತದೆ. ಈ ಸಂದರ್ಭದಲ್ಲಿ ರಾಷ್ಟ್ರೀಯ ಹೋರಾಟದಲ್ಲಿ ಕಾಣಿಸಿಕೊಂಡ ಮತ್ತು ಆ ಸಂದರ್ಭದಲ್ಲಿ ಉಗಮಗೊಂಡ ರಾಷ್ಟ್ರೀಯ ಶಾಲಾ ಕಾಲೇಜುಗಳ ನಿರ್ಮಾಣದಲ್ಲಿಯೂ ವರ್ತಕರ ಪಾತ್ರ ದೊಡ್ಡದಾಗಿರುವುದನ್ನು ಗುರುತಿಸಬಹುದು. ಉದಾಹರಣೆಗೆ, ಬೆಂಗಳೂರಿನ ನ್ಯಾಷನಲ್ ಕಾಲೇಜಿನ ನಿರ್ಮಾಪಕರಲ್ಲಿ ದೊಡ್ಡಣ್ಣ ಶೆಟ್ಟಿಯು ಒಬ್ಬರಾಗಿದ್ದಾರೆ. ಅಲ್ಲದೇ ಸಭೆ ಸಮಾರಂಭಗಳು, ರಾಷ್ಟ್ರೀಯ ನಾಯಕರನ್ನು ಆಹ್ವಾನಿಸಿರುವುದು ಹಾಗೂ ಅವರೊಂದಿಗೆ ಒಡನಾಟವನ್ನು ಹೊಂದಿದ್ದವರು ವರ್ತಕ ಸಮುದಾಯದವರೇ ಆಗಿದ್ದರು. ಉದಾಹರಣೆಗೆ, ಗಾಂಧೀಜಿ ೧೯೧೫ ಮತ್ತು ೧೯೨೭ರಲ್ಲಿ ಬೆಂಗಳೂರಿಗೆ ಭೇಟಿ ಕೊಟ್ಟಾಗ ಇಲ್ಲಿನ ಗುಜರಾತಿ ವರ್ತಕ ಸಮುದಾಯ ಅವರನ್ನು ಎದುರುಗೊಂಡಿತು. ವರ್ತಕ ಸಮುದಾಯ ಸ್ವಾತಂತ್ರ್ಯ ಹೋರಾಟದಲ್ಲಿ ಗುರುತಿಸಿಕೊಂಡ ಬಗೆಯನ್ನು ಮಹಾಪ್ರಬಂಧದಲ್ಲಿ ಕಂಡುಕೊಳ್ಳಲಾಗಿದೆ.

ಸಾಮಾನ್ಯವಾಗಿ ಬೆಂಗಳೂರು ನಗರದ ಬೆಳವಣಿಗೆಯನ್ನು ವಸಾಹತು ಕಾಲ ಅಥವಾ ಹೆಚ್ಚೆಂದರೆ ಕೆಂಪೇಗೌಡನೊಂದಿಗೆ ಗುರುತಿಸುವುದು ಸಾಮಾನ್ಯವಾಗಿದೆ. ಆದರೆ ಅದಕ್ಕಿಂತ ಪೂರ್ವದಲ್ಲಿಯೇ ವ್ಯಾಪಾರ–ವಾಣಿಜ್ಯದ ಹಿನ್ನೆಲೆಯನ್ನು ಹೊಂದಿದ್ದನ್ನು ಸುಧೀರ್ಘವಾಗಿ ಎರಡನೇ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಈ ನಿಟ್ಟಿನಲ್ಲಿ ಶಾಸನಗಳು ಮತ್ತು ನಡೆದಿರುವಂತಹ ಉತ್ಖನನಗಳನ್ನು ಮರು ಅಧ್ಯಯನಕ್ಕೆ ಒಳಪಡಿಸುವ ಅಗತ್ಯವಿದೆ.

ಬೆಂಗಳೂರು ಆರಂಭದ ಹಂತದಲ್ಲಿ ಒಂದು ಸಣ್ಣ ಪಾಳೆಯಪಟ್ಟದ ಮಾರುಕಟ್ಟೆ ಮತ್ತು ರಾಜಧಾನಿಯಾಗಿ ಹೊರಹೊಮ್ಮಿತು. ಮೈಸೂರು ಒಡೆಯರ ಆಳ್ವಿಕೆ, ಮುಂದೆ ಹೈದರಾಲಿ ಮತ್ತು ಟಿಪ್ಪುವಿನ ಆಳ್ವಿಕೆಯಲ್ಲಿ ಇದು ರಾಜಧಾನಿಯ ಸ್ಥಾನವನ್ನು ಕಳೆದುಕೊಂಡಿತು. ಆದರೆ ಪ್ರಮುಖವಾದ ಮಾರುಕಟ್ಟೆ ಕೇಂದ್ರವಾಗಿ ಮುಂದುವರಿಯಿತು.

ವಸಾಹತುಶಾಹಿ ಆಳ್ವಿಕೆಯಲ್ಲಿ ಬೆಂಗಳೂರಿನ ನಗರೀಕರಣ ಹಾಗೂ ಕೈಗಾರಿಕೀಕರಣ ಪ್ರಕ್ರಿಯೆಗಳು ಚುರುಕುಗೊಂಡು ಅದೊಂದು ಕಾಸ್ಮೋಪಾಲಿಟನ್ ಸ್ವರೂಪವನ್ನು ಪಡೆದುಕೊಳ್ಳಲಾರಂಭಿಸಿತು. ದಂಡುಪ್ರದೇಶವಾಗಿ ಮಿಲಿಟರಿ ಹಾಗೂ ಆಡಳಿತ ದೃಷ್ಟಿಯಿಂದಲೂ ಮಹತ್ವವನ್ನು ಪಡೆದುಕೊಂಡಿತು. ವಸಾಹತೋತ್ತರ ಸಂದರ್ಭದಲ್ಲಿ ಮತ್ತೆ ರಾಜಧಾನಿ ಕೇಂದ್ರವಾಗಿ ಬೆಳೆದು ಸಿಲಿಕಾನ್ ಸಿಟಿ ಎನ್ನುವ ಹೆಗ್ಗಳಿಕೆಗೂ ಪ್ರಾಪ್ತವಾಯಿತು. ಬೆಂಗಳೂರು ನಗರದ ಅಭಿವೃದ್ಧಿಯ ವೇಗ ಅಥವಾ ಅತಿರೇಕದ ನಗರೀಕರಣ ಸೃಷ್ಟಿಸಿರುವ ಹೊಸ ಸಮಸ್ಯೆಗಳ ಹಾಗೂ ಅಭಿವೃದ್ಧಿ ಮಾದರಿಗಳ ಬೇರುಗಳನ್ನು ವಸಾಹತುಶಾಹಿ ಸಂದರ್ಭದಲ್ಲಿ ಹುಡುಕುವ ಪ್ರಯತ್ನವನ್ನು ಮಹಾಪ್ರಬಂಧದಲ್ಲಿ ಮಾಡಲಾಗಿದೆ.

# ಅನುಬಂಧಗಳು

೧. ಪರಾಮರ್ಶನ ಗ್ರಂಥಗಳು

೨. ಪತ್ರಗಳು

೩. ನಕಾಶೆಗಳು

೪. ಛಾಯಾಚಿತ್ರಗಳು

## ಅನುಬಂಧ ಒಂದು

# ಪರಾಮರ್ಶನ ಗ್ರಂಥಗಳು

### ಪ್ರಾಥಮಿಕ ಆಕರಗಳು


೧. ಅಡ್ಮಿನಿಸ್ಟ್ರೇಷನ್ ರಿಪೋರ್ಟ್ ಆಫ್ ಬೆಂಗಳೂರು ಸಿಟಿ ಮುನಿಸಿಪಾಲಿಟಿ ೧೮೯೦–೧೯೮೫

೨. ಇಂಡಸ್ಟ್ರೀಯಲ್ಸ್ ಆಂಡ್ ಕಾಮರ್ಸ್ ಫೈಲ್ ನಂ.೮,೧೯೧೬ (ರಾ.ಪ.ಇ)

೩. ಇಂಡಸ್ಟ್ರೀಯಲ್ಸ್ ಆಂಡ್ ಕಾಮರ್ಸ್ ಫೈಲ್ ನಂ.೩೭, ೧೯೧೬ (ರಾ.ಪ.ಇ)

೪. ಇಂಡಸ್ಟ್ರೀಯಲ್ಸ್ ಆಂಡ್ ಕಾಮರ್ಸ್ ಫೈಲ್ ನಂ.೧೬೨, ೧೯೧೭ (ರಾ.ಪ.ಇ)

೫. ಇಂಡಸ್ಟ್ರೀಯಲ್ಸ್ ಆಂಡ್ ಕಾಮರ್ಸ್ ಫೈಲ್ ನಂ.೬೮, ೧೯೧೮ (ರಾ.ಪ.ಇ)

೬. ಇಂಡಸ್ಟ್ರೀಯಲ್ಸ್ ಆಂಡ್ ಕಾಮರ್ಸ್ ಫೈಲ್ ನಂ.೩೫, ೧೯೧೯ (ರಾ.ಪ.ಇ)

೭. ಇಂಡಸ್ಟ್ರೀಯಲ್ಸ್ ಆಂಡ್ ಕಾಮರ್ಸ್ ಫೈಲ್ ನಂ.೩೯, ೧೯೨೦ (ರಾ.ಪ.ಇ)

೮. ಕಂಪರೇಟಿವ್ ಆನ್ಯುವಲ್ ಅಕೌಂಟ್ ಆಫ್ ದಿ ಬೆಂಗಳೂರು ಸಿವಿಲ್ ಅಂಡ್ ಮಿಲಿಟರಿ ಸ್ಟೇಷನ್ ಮುನಿಸಿಪಾಲಿಟಿ ೧೯೨೯–೩೦ ಟು ೧೯೩೦–೧೯೩೧.

೯. ತ್ಯಾಗರಾಜ ಅಯ್ಯರ್ ವಿ. ಆರ್., ಮೈಸೂರ್ ಸೆನ್ಸಸ್, ೧೯೧೧, ಪ್ರೈಟ್ಟ್ ಅಟ್ ಗೌರ್ನಮೆಂಟ್ ಪ್ರೆಸ್, ೧೯೧೩, ಬೆಂಗಳೂರು.

೧೦. ಥಾಮಸ್ ಪಿಟರ್, ಹು ಈಸ್ ಹು ಇನ್ ಮೈಸೂರು ಸ್ಟೇಟ್, ಹು ಈಸ್ ಹು ಪಬ್ಲಿಕೇಷನ್ (ಇಂಡಿಯಾ) ಲಿ. ಬಾಂಬೆ

೧೧. ನರಸಿಮ್ಮಿಯೆಂಗರ್ ವಿ. ಎನ್., ಸೆನ್ಸಸ್ ಆಫ್ ಇಂಡಿಯಾ, ೧೮೯೧, ಮೈಸೂರ್ ಪಾರ್ಟ್ ೧, ೧೮೯೩, ಗೌರ್ನಮೆಂಟ್ ಪ್ರೆಸ್, ಬೆಂಗಳೂರು.

೧೨. ನಾರಾಯಣರಾವ್ ಪಿ. ಎಸ್., ದಿ ಬೆಂಗಳೂರು ಮುನಿಸಿಪಲ್ ಕಾರ್ಪೋರೇಶನ್ ಪ್ರಾಬ್ಲೆಮ್ಸ್ ಅಂಡ್ ಫೈನಾನ್ಸಸ್, ೧೯೭೦, ದಿ ಕಾರ್ಪೋರೇಶನ್ ಆಫ್ ದಿ ಸಿಟಿ ಆಫ್ ಬೆಂಗಳೂರು.

೧೩. ಫರೋಹ್ ಅಂಡ್ ಕೋ, ಎ ಗೆಜೆಟಿಯರ್ ಆಫ್ ಸದರ್ನ್ ಇಂಡಿಯಾ, ೧೮೫೫, ಫರೋಹ್ ಅಂಡ್ ಕೋ, ಅಥೀನಿಯಮ್ ಪ್ರೆಸ್, ಮದ್ರಾಸ್.

೧೪. ಪ್ರೊಸೀಡಿಂಗ್ಸ್ ಆ ದಿ ಮೈಸೂರ್ ರೆಪ್ರೆಸೆಂಟೆಟಿವ್ ಅಸೆಂಬ್ಲಿ ದಸರ ಸೆಶನ್, ಅಕ್ಟೋಬರ್, ೧೯೨೪

೧೫. ಪ್ರೈವೈಟ್ ಪೇಪರ್ಸ್ ಕಲೆಕ್ಷನ್ಸ್

೧೬. ಬೆಂಗಳೂರು ಸಿಟಿ ಮುನಿಸಿಪಲ್ ಹ್ಯಾಂಡ್ ಬುಕ್, ೧೯೨೧.

೧೭. ಮ್ಯಾನ್ಯುವಲ್ ಆಫ್ ಇಂಪಾರ್ಟೆಂಟ್ ಆರ್ಡರ್ಸ್, ಸೀರಿಸ್ ೨, ಅಗ್ರಿಕಲ್ಚರಲ್ ಡಿಪಾರ್ಟ್ಮೆಂಟ್, ೧೯೧೭, ಬೆಂಗಳೂರು.

೧೮. ಮ್ಯಾನ್ಯುವಲ್ ಆಫ್ ಇಂಪಾರ್ಟೆಂಟ್ ಆರ್ಡರ್ಸ್, ಮ್ಯಾನ್ಯುವಲ್ ಆಫ್ ಇಂಪಾರ್ಟೆಂಟ್, ಸೀರಿಸ್ ೨, ಅಗ್ರಿಕಲ್ಚರಲ್ ಡಿಪಾರ್ಟ್ಮೆಂಟ್, ೧೯೧೭, ಬೆಂಗಳೂರು

೧೯. ಮೇಜರ್ ಎ. ಡಬ್ಲ್ಯೂ. ಸಿ. ಲಿಂಡ್ಸೆ, ಸಪ್ಲಿಮೆಂಟ್ ಆಫ್ ಮೈಸೂರ್ ಜನರಲ್ ಸೆನ್ಸಸ್, ೧೮೭೧, ಗೌರ್ನಮೆಂಟ್ ಪ್ರೆಸ್, ೧೯೭೫, ಬೆಂಗಳೂರು.

೨೦. ಮುನಿಸಿಪಲ್ ಕಮಿಷನ್ ಸಿವಿಲ್ ಅಂಡ್ ಮಿಲಿಟರಿ ಸ್ಟೇಷನ್, ಬ್ಯಾಂಗಲೋರ್ ಅಡ್ಮಿನಿಸ್ಟ್ರೇಷನ್ ರಿಪೋರ್ಟ್ ೧೯೩೦–೧೯೩೧

೨೧. ರಿಪೋರ್ಟ್ ಆಫ್ ದಿ ಅಡ್ಮಿನಿಸ್ಟ್ರೇಷನ್ ಆಫ್ ಮೈಸೂರ್ ೧೮೭೪–೭೫, ಮೈಸೂರ್ ಗೌರ್ನಮೆಂಟ್ ಪ್ರೆಸ್, ಬೆಂಗಳೂರು.

೨೨. ರಿಪೋರ್ಟ್ ಆಫ್ ದಿ ಅಡ್ಮಿನಿಸ್ಟ್ರೇಷನ್ ಆಫ್ ಮೈಸೂರ್ ೧೮೭೬–೭೭, ಮೈಸೂರ್ ಗೌರ್ನಮೆಂಟ್ ಪ್ರೆಸ್, ಬೆಂಗಳೂರು.

೨೩. ರಿಪೋರ್ಟ್ ಆಫ್ ದಿ ಅಡ್ಮಿನಿಸ್ಟ್ರೇಷನ್ ಆಫ್ ಮೈಸೂರ್ ೧೮೭೭–೭೮, ಮೈಸೂರ್ ಗೌರ್ನಮೆಂಟ್ ಪ್ರೆಸ್, ಬೆಂಗಳೂರು.

೨೪. ರಿಪೋರ್ಟ್ ಆಫ್ ದಿ ಅಡ್ಮಿನಿಸ್ಟ್ರೇಷನ್ ಆಫ್ ಮೈಸೂರ್ ೧೮೮೬–೧೯೦೬, ಮೈಸೂರ್ ಗೌರ್ನಮೆಂಟ್ ಪ್ರೆಸ್, ಬೆಂಗಳೂರು.

